॥ ಶ್ರೀ ಭಗವಾನ್ ಧನ್ವಂತರಿಃ ॥

ಶುದ್ಧಾಯುರ್ವೇದ ಪಾಠಕ್ರಮದಂತೆ ಸಂಗ್ರಹಿಸಿ
ರಚಿತವಾದ

# ಶಾರೀರ ವಿಜ್ಞಾನ



ಧನತ್ರಯೋದಶಿ
೨೪—೧೦—೧೯೫೪



ಬೆಲೆ: ಆರು ರೂಪಾಯಿ

— ಲೇಖಕರು —
ವೆ. ನಾ. ಜೋಶಿ
ಆಯುರ್ವೇದಾಚಾರ್ಯ ಸಿರಸಿ

— ಪ್ರಕಾಶಕ
ವೈದ್ಯಗುರು ಡಾ. ಅ. ಹಲಸೀಕರ
ಮು. ಮ. ನಂ. ೧೮೫೦, ಆತ್ರೇಯಾಸದನ, ಹುಬ್ಬಳ್ಳಿ

— ಮುದ್ರಕರು —
ಎಸ್. ಎಸ್. ಕಾರಂತ
ಆಶಾ ಪ್ರೆಸ್
ರಾಧಾಕೃಷ್ಣಗಲ್ಲಿ, ಹುಬ್ಬಳ್ಳಿ

# ನಿವೇದನಮ್

॥೧॥

ಮಹರ್ಷಿಭಿರ್ಲೋಕಹಿತೈಕತತ್ಪರೈಃ ॥
ಗೂಢಾತಿಸೂಕ್ಷ್ಮಂ ನರದೇಹತತ್ತ್ವಂ ॥
'ದಿವ್ಯೇನದೃಷ್ಟ್ಯಾ" ಪರಿಕರ್ತ್ಯನಿಶ್ಚಿತಂ ॥
ಮಯಾತದುಕ್ತಂ ಪರಿಗೃಹ್ಯಭಾಷಯಾ ॥೧॥

॥೨॥

ಋಷಿವಾಣೀ ಪ್ರಭಾವಃ :-

ಸರಸಾಸತ್ಯಭೂಯಿಷ್ಠಾ ಸರ್ವಸಾರಸಮನ್ವಿತಾ ॥
ಸಂಕಲ್ಪೇನೈವಮನಸಾಸಿದ್ಧಾವಾಣೀತಪಸ್ವಿನಾಂ ॥೨॥

॥೩॥

ನಿರರ್ಗಲಗತಿರ್ವಾಚಾಂ ಸುಶ್ರುತಾದಿಮಹಾತ್ಮನಾಂ ॥
ಪ್ರತಿಭಾಭಾಸುರಾತತ್ರವಿವಿಧಾರ್ಥಪ್ರಕಾಶಿನೀ ॥
ವಾಗ್ಭಟೋಽಪಿಸುಧಾತುಲ್ಯಾಂ ಪೂರ್ವಸಿದ್ಧಾಂ ಸರಸ್ವತೀಂ ॥
ವಿಸ್ತಾರ್ಯತಂತ್ರಂಪ್ರೋವಾಚ ಮಂತ್ರವದ್ಯೋಜಯೇದಿತಿ॥೩॥

॥೪॥

ಸ್ವಕ್ರಮ :-

ಆಯುರ್ವೇದಮತಂತ್ಯಕ್ತ್ವಾನಕಿಂಚಿದಪಿವರ್ಣ್ಯತೇ ॥
ವಿಸ್ತಾರಿತಂ ವಿಶೇಷೇಣಧ್ವನಿತಂ ಋಷಿಭಾಷಿತೈಃ ॥೪॥

॥೫॥

ಶಾರೀರೇಪ್ರಮಾಣಾಧಿಗಮಃ —

ಲಬ್ಧ್ವಾ ಸು.ವಾ.ಚಮ್. ಶಾರೀರೇಪ್ರಮಾಣಮಧಿಗಮ್ಯತೇ ।
ಸುವಾಚವಂತೋಜಾನೀಯುಃ ಗುಣದೋಷವಿಪರ್ಯಯಂ॥೫॥

॥೬॥

ದೋಷದರ್ಶನೇಸುಜ್ಞೇಷು ಪ್ರಾರ್ಥನಾ ॥

ಸಂಪ್ರಾರ್ಥಯೇವಿಬುಧವಿಶೇಷಬುದ್ಧೀನ್ ॥
ಸಂವಿಕ್ಷ್ಯದೋಷ ಸ್ಖಲಿತಂ ಮದೀಯಂ ॥
ಸಂದರ್ಶಯಂತುನಿತರಾಂ ನಹಿತತ್ರರೋಷಃ ॥
ಸಮ್ಮಾರ್ಜನಂ ಋಷಿವರ್ಯೈಃ ಪ್ರಥಮೋಪದಿಷ್ಟಂ ॥ ೬॥

॥೧॥ ವಿಷಯನಿವೇದನಂ ಗದ್ಯಾತ್ಮಕಮೇವಾಸ್ತ್ವಿತಿವಿಚಾರ್ಯಮಾಣೇಸತಿ, ಅತರ್ಕಿತಾಗಮನಂ ಪದ್ಯಸ್ಯಾಸ್ಯ॥ ಪಿಲಿಖ್ಯಾಽಪಠಮ್, ಹಂತ! "ದಿವ್ಯೇನದೃಷ್ಟ್ಯಾ" ಇತಿಪದಂ ವ್ಯಾಕರಣವಿರುದ್ಧಂ ಸ್ಯಾತ್, ಕಿಂತುಪರಿವರ್ತನೇಽಸಮರ್ಥೋಽಸ್ಯಾಸಮ್; ಏತದಾಲೋಕ್ಯಅಚಿಂತಯಮ್॥ ಮಹರ್ಷೀಣಾಮಲೌಕಿಕದೃಷ್ಟಿಂ ಧ್ವನಯಿತಮೇವಸ್ಯಾದಲೌಕಿಕಪದಾವೇಶನಮಿತಿ॥ "ಸುದಿವ್ಯದೃಷ್ಟ್ಯಾ" ಶೋಭಿನಯಾದಿವ್ಯದೃಷ್ಟ್ಯಾ (ಹಿತಕಾರಿಣ್ಯಾ) ಇತಿಪದಂ ನಿವೇಶನೇಽವಿರುದ್ಧಂ, ತಥಾಪಿಥ್ಥಂ ಕರ್ತುಂ ನಶಕ್ನೋಮಿ ॥ ಭಿನ್ನರುಚಿರ್ಹಿಲೋಕಃ, ಸಹೃದಯೈರ್ಭವದ್ಭಿಃ ಯಥಾಮತಿಯೇನೇಷ್ಟಂ ತೇನಯುಜ್ಯತಾಂ॥

॥೫॥ "ಸು. ವಾ. ಚಂ" ಇತಿಪದಂ ಸುಶ್ರುತವಾಗ್ಭಟಚರಕಾಣಾಮಾದ್ಯಕ್ಷರಗ್ರಹಣೇನಸಮುದಿತಂ॥ ಸುಶ್ರುತವಾಗ್ಭಟಚರಕಾಃ ಗೃಹ್ಯಂತೇ, ಆದ್ಯಕ್ಷರಶ್ಲೇಷವಿನ್ಯಾಸಪದೇನ; ಸಮ್ಯಕ್‌ವಿಚಾರಸರಣ್ಯಾನಿರ್ಣೀತಂ ವಾ ಸುಷ್ಠುವಾಕ್‌ಯಥಾಸ್ಯಾತ್ತಥಾಸುವಾಚಮ್॥

॥ ಇತಿಶಮ್ ॥

# ವಾಚಕರಲ್ಲಿ ಅರಿಕೆ

ಆಯುರ್ವೇದ "**ಶಾರೀರವಿಜ್ಞಾನವು**" ವಿದ್ಯಾರ್ಥಿಗಳ ಅಭ್ಯಾಸಕ್ರಮಕ್ಕನುಗುಣವಾಗಿ, ಶುದ್ಧಾಯುರ್ವೇದಮಂಡಲಿಯವರು ನಿರ್ಣಯಿಸಿದ ವಿಷಯಾನುಸಾರವಾಗಿಯೇ ರಚಿಸಲ್ಪಟ್ಟಿರುತ್ತದೆ. ಸುಶ್ರುತ ಚರಕ ವಾಗ್ಭಟ ಗ್ರಂಥಗಳ ಅಭಿಪ್ರಾಯವನ್ನೇ ಮುಖ್ಯವಾಗಿಟ್ಟುಕೊಂಡು ತಂತ್ರಾಂತರ ಮತಗಳನ್ನೂ ಅಲ್ಲಲ್ಲಿ ವಿವರಿಸಲಾಗಿದೆ. ವಿಷಯಗಳು ಸಂಶಯ ನಿರಾಸವಾಗುವಂತೆಯೂ ಸಂದಿಗ್ಧವಾಗದಂತೆಯೂ ವಿಶದವಾಗಿ ನಿರೂಪಿತವಾಗಿವೆ. ವಿಷಯ ಬಹಳೇ ಕ್ಲಿಷ್ಟವಾಗಿರುವದರಿಂದ ಎಷ್ಟೇ ಜಾಗ್ರತೆ ವಹಿಸಿದರೂ "**ಗಚ್ಛತಃ ಸ್ಖಲನಂ ಕ್ವಾಪಿ**" ಎನ್ನುವಂತೇ ಅಜ್ಞಾತ ದೋಷವುಂಟಾಗಿದ್ದರೆ ಸುಜ್ಞ ವೈದ್ಯರು ನಿವಾರಿಸಬೇಕಾಗಿ ಬೇಡಿಕೆ. ಬಹು ಪರಿಶ್ರಮದಿಂದ ಪ್ರಯತ್ನಪೂರ್ವಕವಾಗಿ ಭಾಷಾ ಶೈಲಿಯು ಸುಲಭವಾಗುವಂತೆ ವಿವರಿಸಲಾಗಿದೆ ಇದರ ಪ್ರಯೋಜನವನ್ನು ವಿದ್ಯಾರ್ಥಿಗಳೂ ವಾಚಕರೂ ಪಡೆದರೆ ಶ್ರಮವು ಸಫಲವಾದಂತಾಯಿತು. ಸರ್ವರಿಗೂ ವೇದ್ಯವಾಗಲೆಂದು ಸರಳತೆಯನ್ನನುಸರಿಸಿಯೇ ವಿವರಿಸಲಾಗಿದೆ. **ಗ್ರಂಥ ಪರಿಸಮಾಪ್ತಿ ವಿಷಯದಲ್ಲೆಂದರೆ:—** ಆತ್ರೇಯಸದನ ವಿದ್ಯಾಲಯದ ಮುಖ್ಯಾಧ್ಯಾಪಕರೂ ನನ್ನ ವಿದ್ಯಾಭ್ಯಾಸದಿಂದಲೂ ಅನೇಕ ರೀತಿಯಿಂದ ಸಹಾಯ ಮಾಡಿದ ಮತ್ತು ಮಾಡುತ್ತಲೂ ಇರುವ ಗುರುಗಳಾದ ಶ್ರೀಮಾನ್ ಹಲಸೀಕರರ ಗ್ರಂಥೋಚಿತ ಸೂಕ್ತ ಮುನ್ನುಡಿಯಿಂದ ಭೂಷಿತವಾಗಿ ಪರಿಪೂರ್ಣವಾಗಿರುತ್ತದೆ. ಇನ್ನೂ ನನ್ನ ಅನೇಕ ಮಿತ್ರರೂ ವಿದ್ಯಾಲಯ ಅಧ್ಯಾಪಕರಾದ ಶ್ರೀಮಾನ್ ಶ್ರೀಪಾದಭಟ್ಟ ಜಡೆ ವ ವಿದ್ಯಾರ್ಥಿಗಳೂ ತುಂಬಾ ಸಹಕರಿಸಿದ್ದಾರೆ.

ಆಶಾ ಪ್ರೆಸ್ಸಿನ ಶ್ರೀಮಾನ್ ಎಸ್. ಎಸ್. ಕಾರಂತರು ಅಂದವಾಗುವಂತೆ ಚನ್ನಾಗಿ ಸಕಾಲದಲ್ಲಿ ಮುದ್ರಿಸಿ ಕೊಟ್ಟಿದ್ದಾರೆ. ಇವರೆಲ್ಲರ ಸಹಕಾರದಿಂದಾಗಿ ಈ ಕೃತಿಯು ಕಾರ್ಯತಃ ಬಂದು ಪ್ರಕಾಶಿತವಾಗಿರುತ್ತದೆ.

ಸಹಾಯಕರೆಲ್ಲರಿಗೂ ನನ್ನ ಕೃತಜ್ಞತಾರ್ಪಣೆಯು

ಆಯುರ್ವೇದಾಚಾರ್ಯ, **ವೆ. ನಾ. ಜೋಶಿ**

# ಮುನ್ನುಡಿ

ಆಯುರ್ವೇದ "ಶಾರೀರ ವಿಜ್ಞಾನ" ವೆಂಬ ಈ ಗ್ರಂಥದಲ್ಲಿ ಸುಶ್ರುತಾಚಾರ್ಯರ ಶಾರೀರವು ವಿವರಿಸಲ್ಪಟ್ಟಿರುತ್ತದೆ. ಚರಕ, ವಾಗ್ಭಟ, ಶಾರ್ಙಧರ, ಅನ್ಯ ತಂತ್ರಾಂತರ ಮತವೂಸಹ ಸಂದರ್ಭಾನುಸಾರ ಗ್ರಹೀತವಾಗಿವೆ.

ಸ್ಥೂಲಕ್ಕೆ ಕಾರಣವಾದ ಪ್ರಕೃತ್ಯಾದಿ ಸಿದ್ಧಾಂತಗಳಲ್ಲಿ ತಾರ್ಕಿಕ ನೈಯ್ಯಾಯಿಕರು ಸಾಂಖ್ಯರು ವೇದಾಂತಿಗಳು ಧಾರ್ಮಿಕದಾರ್ಶನಿಕರು, ಹೆಮ್ಮೆಯಿಂದ ಹೇಳುವ ತತ್ವ ಸಮನ್ವಯಗಳು ಇದರಲ್ಲಿ ಸಹೇತುಕವಾಗಿ ಸಮಾವೇಶವಾಗಿರುತ್ತವೆ ಭಾರತೀಯ ಸರ್ವದರ್ಶನ ಶಾಸ್ತ್ರಗಳಲ್ಲಿಯ ಶಾರೀರ ತತ್ವಗಳು ನಿರೂಪಿಸಲ್ಪಟ್ಟಿವೆ. ಚಿಕಿತ್ಸೆಗೆ ಯೋಗ್ಯವಾದ ದೇಹದ ಅಂಗವಿಭಾಗ ಕ್ರಿಯಾ ಸ್ವರೂಪಾದಿಗಳಂತೂ ಶಲ್ಯ ತಂತ್ರವಾಗಿರುವದರಿಂದ, ಬಹು ವಿಧ ವಿಮರ್ಶಾಯುತ ವಿವರಣೆ ಇರುತ್ತದೆಂದು ಹೇಳುವ ಕಾರಣವೇ ಇಲ್ಲ. ಹೀಗಿರುವದರಿಂದ ಶರೀರ ಜ್ಞಾನ ಪ್ರಯೋಜನವು ಸ್ಥೂಲ ಮತ್ತು ಸೂಕ್ಷ್ಮಾತ್ಮಕವಾಗಿರುವದೆಂದು ತಿಳಿದು ಬರುತ್ತದೆ. ಇದನ್ನೇ ಆಯುರ್ವೇದ ಮಹರ್ಷಿಗಳು ಹೀಗೆ ಹೇಳಿದ್ದಾರೆ **"ವಿಜ್ಞಾನಾರ್ಥಂ ಶರೀರಸ್ಯಭಿಷಜಾಂ ಯೋಗಿನಾಮಪಿ".**

ಇದರಿಂದ ರೋಗ ಚಿಕಿತ್ಸಕರಾದ ವೈದ್ಯರಿಗೂ ಯೋಗಿಗಳಿಗೂ ಸಮನ್ವಯವಾದ ಶಾರೀರತತ್ವಗಳು ಪ್ರೋಕ್ತವಾಗಿವೆಯೆಂದು ಹೇಳಿದಂತಾಯಿತು ಅದು ಸೂರ್ಯ ಚಂದ್ರರಷ್ಟೇ ಸತ್ಯಸಿದ್ಧಾಂತವಾದರೂ ಗಮನಿಸಲು ಬರುವಂತಿಲ್ಲ. ಅನುಮಾನಗ್ರಾಹ್ಯ ವಿಷಯವಾಗಿರುತ್ತದೆ. ಹೇಗಂದರೆ ಚೇತನೆಯು ಹೊರಟುಹೋದಮೇಲೆ ಕೇವಲ ಜಡವಾದ ಮಲಿನವಾಗಹತ್ತುವ ಸ್ಥೂಲವೊಂದೇ ಉಳಿಯುವದರಿಂದ, ದೇಹದಲ್ಲಿ ಮಹತ್ವವಾದ ಕಾರಣಶಕ್ತಿ ಅಥವಾ ಪ್ರೇರಕವು ಅದೆಯೆನ್ನುವದು ಅನುಮಾನಗೋಚರ ಸತ್ಯವಾಗಿದೆ. ಇದು ಚೈತನ್ಯ ಆತ್ಮನ ಅಸ್ತಿತ್ವದ ಬಗ್ಗೆ ನಿಶ್ಚಯ ಸಿದ್ಧಾಂತವಾದರೂ, ಅವನನ್ನು ಹೊಂದಲು ಅಥವಾ ತಿಳಿಯಲು ಮಾರ್ಗದರ್ಶನವು ಬೇರೆ ಇದ್ದೇ ಇದೆ ಅದೂ ಸಹ ಶಾಸ್ತ್ರಾಂಗತ್ವೇನ ಇಲ್ಲಿ ಮನೋಹರ ಸತ್ಯ ಸಿದ್ಧಾಂತವು ದರ್ಶಿತವಾಗಿದೆ.

ಆಯುರ್ವೇದದ ತಿಳಿಯಬೇಕಾದ ಮೂಲವು ಸಹೇತುಕ ಸಯುಕ್ತಿಕ ವಾಗಿ ಇಲ್ಲಿದೆ. ಅದು ವಿಶ್ವದಿಂದ ವ್ಯಕ್ತಿಗೂ, ಕಾರಣದಿಂದ ಕಾರ್ಯಕ್ಕೂ ಇಳಿದಿದೆ. ಅಥವಾ ಅಂತಃಕರಣದಿಂದಬಾಹ್ಯವಾದ ಸ್ಥೂಲಕ್ಕೂ, ಇಡಿಯಿಂದ ಬಿಡಿಗೂ ಹರಿದುಬಂದಿದೆ. ಇಲ್ಲವೇ ಪೂರ್ಣದಿಂದ ಅಂಶಕ್ಕೂ, ವ್ಯಾಪಾರದಿಂದ ರಚನೆಗೂ ಪಸರಿಸಿದೆ. ಈ ತತ್ವದಗುಂಟ ಹೋದಾಗಲೇ, ವ್ಯಕ್ತಿಯಿಂದ ವಿಶ್ವ ವನ್ನೂ ಕಾರ್ಯದಿಂದ ಕಾರಣವನ್ನೂ, ಬಾಹ್ಯದಿಂದ ಅಂತಃಕರಣವನ್ನೂ, ಬಿಡಿ ಯಿಂದ ಇಡಿಯನ್ನೂ, ರಚನೆಯಿಂದ ವ್ಯಾಪಾರವನ್ನೂ, ಅರಿಯಲ ಹದಾಗಿದೆ. ಈ ಸಿದ್ಧಾಂತವು ಯಾವ ಶಾಸ್ತ್ರಕ್ಕೂ ವ್ಯವಹಾರಕ್ಕೂ ವಿರೋಧವನ್ನುಂಟು ಮಾಡುವದಿಲ್ಲವಷ್ಟೇ ಅಲ್ಲ ಎಲ್ಲವುಗಳ ಮೂಲವೂ ಏಳಿಗೆಯೂ ಇಲ್ಲೇ ಅಡಕ ವಾಗಿದೆ. ಇದೇ "**ಶಾರೀರ ವಿಜ್ಞಾನದ**" ಅಂತಿಮ ಅಥವಾ ಆರ್ಯರ ಪ್ರಯೋಜನವಾಗಿರುವದು. ಇದನ್ನೇ ಯೋಗಿಗಳು ಅರಿಯುವ ಶಾರೀರ ವೆಂದು ಸುಶ್ರುತಾಚಾರ್ಯರು ವಿವರಿಸಿದ್ದಾರೆ. ವೈದ್ಯರು ಮತ್ತು ಯೋಗಿ ಗಳು ಅನುಸರಿಸಲು ಯೋಗ್ಯವಾದ ಶಾರೀರ ವಿಷಯ ಹೇಗೆಂಬುವದು ಓದಿ ತಿಳಿದಾಗಲೇ ಅವರವರ ಇಷ್ಟದಂತೇ ಸ್ಪಷ್ಟವಾಗಿಯೇ ಇದೆ

ಸಕಲಶಾಸ್ತ್ರಗಳಲ್ಲಿ ಪಾರಂಗತೆಯನ್ನುಹೊಂದಿ ವೈದ್ಯ (ಜ್ಞಾನಿ) ಯಾಗ ಬೇಕಾದರೆ, ೧೨ ವರ್ಷಗಳಾದರೂ ಬೇಕೆಂದು ಈ ಶಾರೀರ ವಿಷಯವನ್ನು ಓದಿ ಮನನಮಾಡಿದುದಾದರೆ ಇದರ ಪ್ರೌಢಿಮೆಯಿಂದ ತಿಳಿದುಬರುವಂತಿದೆ. ಸಾಂಪ್ರತ ಆಚಾರ್ಯರ ಪ್ರಸ್ಥಾನತ್ರಯೀ ವೇದೋಪ ವೇದಗಳ ತಿರುಳು ಈ ಶಾರೀರ ವಿಜ್ಞಾನದಲ್ಲಿದೆಯೆಂದು ಪುನಃ ಪುನಃ ಹೇಳದಿರಲಾರೆ. ತಾತ್ಪರ್ಯ ವೇನೆಂದರೆ ತ್ರಿಗುಣ ತ್ರಿದೋಷಗಳಂತೇ, ಕಾರಣ ಕಾರ್ಯ ವ್ಯಾಪಕವಾಗಿರುವ ಜ್ಞಾನವಾಗಬೇಕಾದರೆ ಇದರ ಅಧ್ಯಯನವು ಅವಶ್ಯವಾಗಿದೆ. ಮತ್ತು ಈ ಗ್ರಂಥವು ಅಧ್ಯಯನಕ್ಕೆ ಬೆಳಕನ್ನುಂಟುಮಾಡದಿರಲಾರದೆನ್ನುವದು ಸಹಜ ವಾಗಿದೆ.

ನನ್ನ ಶಿಷ್ಯ ಶ್ರೀ ವೆ. ಸಾ. ಜೋಶಿ, ಆಯುರ್ವೇದಾಚಾರ್ಯ ಇವರು ನಿಷ್ಠಾವಂತ ಶುದ್ಧಾಯುರ್ವೇದ ಸೇವಕರೂ ಸಂಸ್ಕೃತ ಭಾಷಾ ಪಂಡಿತರೂ ಶಾಸ್ತ್ರತತ್ವವೇತ್ತರೂ ಆಗಿರುವರು. ಇವರ ಸ್ವಾಧ್ಯಾಯ ಜ್ಞಾನಯಜ್ಞವಾದ

ಸಶಾಸ್ತ್ರೀಯತತ್ವಸಮನ್ವಯತೆಯನ್ನೊಳಗೊಂಡ "ಶಾರೀರವಿಜ್ಞಾನ"ವೆಂಬ ಕೃತಿಯು ಇದಾಗಿರುತ್ತದೆ. ಶಾರೀರ ವಿಜ್ಞಾನವು ಶಿಕ್ಷಣ ಕಾರ್ಯದಲ್ಲಿ ತುಂಬಾ ಸಹಾಯಕವಾಗಲೆಂದು ಹಾರೈಸಿ, ಇವರಿಂದ ಇತೋಽಪ್ಯಧಿಕವಾಗಿ ಆಯುರ್ವೇದಪ್ರಸಾರಸೇವೆಮಾಡಿಸಲೆಂದು ಧನ್ವಂತರಿಯಲ್ಲಿ ಪ್ರಾರ್ಥಿಸುತ್ತೇವೆ.

## ಸಾಂಪ್ರತಿಕ

ಕರ್ನಾಟಕದಲ್ಲಿ ಆಯುರ್ವೇದ ಆರ್ಷಗ್ರಂಥಗಳ ಮುದ್ರಣ ಈವರೆಗೂ ಆಗಿಲ್ಲ. ಸುಶ್ರುತ ವಾಗ್ಭಟ ಚರಕ ಗ್ರಂಥಗಳು ಸಶಾಸ್ತ್ರಸಟೀಕವಾಗಿ ಮುದ್ರಿಸಲ್ಪಟ್ಟಿಲ್ಲ ಈ ಗ್ರಂಥಗಳ ವಿಸ್ತಾರತೆಯಿಂದಾಗಿ ಗ್ರಂಥ ಪ್ರಕಟ ಣೆಯು ಬಹಳ ಖರ್ಚಿನದಾಗಿದೆ. ಸಂಕ್ಷಿಪ್ತವಾಗಿ ಮುದ್ರಿಸಿದರೆ ಅಧ್ಯಯನಕ್ಕೆ ಸುಗಮವಾಗಲಾರದು.

ಕರ್ನಾಟಕದಲ್ಲಿ ವೈದ್ಯರ ಸಂಖ್ಯೆಯೇನು ಕಡಿಮೆಯಿಲ್ಲ. ಕನ್ನಡ ಗ್ರಂಥಗಳನ್ನೇ ಅನುಸರಿಸುವ ಸಾಮಾನ್ಯತಃ ಎರಡುಸಾವಿರಕ್ಕೆ ಮಿಕ್ಕುವೈದ್ಯರಿ ದ್ದಾರೆ. ಇವರು ಚಿಕಿತ್ಸಕರಾಗಿಯೇ ಇದ್ದಾರೆ ಆರ್ಷ ಗ್ರಂಥಗಳ ಅಧ್ಯಯನ ಅಧ್ಯಾಪನದತ್ತ ಅವರು ಸಾಕಷ್ಟು ಲಕ್ಷ್ಯವಹಿಸಿಲ್ಲವೆಂದು ಸ್ಪಷ್ಟಪಡಿಸಲು ವ್ಯಸನವಾಗುತ್ತದೆ. ಗ್ರಂಥಗಳನ್ನಾಗಲೀ ಮಾಸಪತ್ರಿಕೆಗಳನ್ನಾಗಲಿ, ಓದಿ ತಿಳಿದು ಅಧ್ಯಯನ ಅಧ್ಯಾಪನ ಮಾಡುವ ಕಾರ್ಯವಂತೂ ನಿಂತೇ ಹೋಗಿದೆ. ಇದನ್ನುಕಂಡು ಕರ್ನಾಟಕ ಆಯುರ್ವೇದ ಮಂಡಲವು ವಾಗ್ಭಟ, ಮಾಧವನಿದಾನ, ಶಾರ್ಙಧರಸಂಹಿತೆ, ವ್ಯವಹಾರಾಯುರ್ವೇದ, ಮದನಪಾಲ ನಿಘಂಟು, ರಸಚಂಡಾಂಶು, ಸ್ತ್ರೀಶಿಶುಸಂಗೋಪನ, ಅಮೃತಾನುಭವವೈದ್ಯಕ, ವೈದ್ಯಜೀವನ, ಮಾನಸಿಕಚಿಕಿತ್ಸೆ, ತರ್ಕಸಂಗ್ರಹ, ಸಾಂಖ್ಯಸಾರ, ಮೊದಲಾದ ವುಗಳನ್ನು ಪ್ರಕಟಿಸಿ ಜನತೆಗೂ ವೈದ್ಯರಿಗೂ ವಾಚನಾಭಿರುಚಿಯನ್ನುಂಟು ಮಾಡಿತು. ಆಯುರ್ವೇದ ಪ್ರಚಾರವಾಗಬೇಕೆಂದು ಬಹುಮುಖವಾಗಿ ಕಾರ್ಯ ಸಾಗಿಸಿತು. ಆಯುರ್ವೇದಕ್ಕೆ ಸರಕಾರ ಮಾನ್ಯತೆಯಿದ್ದಿಲ್ಲವೆಂದು ಜನತೆಯಲ್ಲಿ ತಿರಸ್ಕಾರವುಂಟಾಗಿದ್ದಿತು.

ಪಾಶ್ಚಾತ್ಯಚಿಕಿತ್ಸಾನುಸರಣೆನಡೆದಿರಲು ಇದ್ದಬಿದ್ದ ಆಯುರ್ವೇದವನ್ನು ಪೂರ್ತಿ ನಾಶಮಾಡಲೋ ಎನ್ನುವಂತೇ ಮಿಶ್ರ ಶಿಕ್ಷಣವೊಂದು ಪ್ರಾದುರ್ಭವಿಸಿತು. ಇದರಿಂದಲೂ ಪರಂಪರಾಗತ ಆಯುರ್ವೇದ ಶಿಕ್ಷಣ ಪದ್ಧತಿಯು ಪೂರ್ಣ ನಿಂತುಹೋಯಿತು. ಅರ್ಥಾತ್ ಹೊಸ ಹೊಸ ಗ್ರಂಥಗಳ ನಿರ್ಮಿತಿಯಾಗದೇ ನಿಂತುಹೋದದ್ದರಲ್ಲಿ ಆಶ್ಚರ್ಯವೇನು ? ಇಂಥ ಸಮಯದಲ್ಲಿ ಧ್ಯೇಯಾನುಸಾರಿಯಾದ ಆಯುರ್ವೇದ ಮಂಡಲವು ತನ್ನ ಶಕ್ತಿಮೀರಿ ಶ್ರಮ ದ್ರವ್ಯ ಕಾಲ (ತನು ಮನ ಧನ) ಪರಿವೆಯಿಲ್ಲದೇ ಸಾವಿರಾರು ರೂಪಾಯಿಗಳನ್ನು ಸೂರೆಮಾಡಿ ಗ್ರಂಥ ಪ್ರಕಾಶನ ಮಾಡಿತು ಸಾಂಪ್ರತ ಸರಕಾರದವರು ಮನ್ನಣೇ ಕೊಟ್ಟ "ಶುದ್ಧಾಯುರ್ವೇದ ಶಿಕ್ಷಣವು" ಸಾಗಬೇಕಾದರೆ ಸಂಪೂರ್ಣ ಸುಶ್ರುತಾದಿ ಗ್ರಂಥಗಳ ಅವಶ್ಯಕತೆಯನ್ನು ಪುನಃ ಒತ್ತಿ ಹೇಳಬೇಕಾಗಿಲ್ಲ. ಅವುಗಳು ಸಂಪೂರ್ಣವಾಗಲೀ ಖಂಡಶಃ ಅಥವಾ ಅಂಶಮಾತ್ರದಲ್ಲಿಯೂ ಕನ್ನಡದಲ್ಲಿ ದೊರೆಯುವದಿಲ್ಲ.

ಆಯುರ್ವೇದದಲ್ಲಿ ಶಾರೀರಕ್ಕೆ ಪ್ರಾಶಸ್ತ್ಯವಿರುತ್ತದೆ ಶಿಕ್ಷಣ ಕ್ರಮದಲ್ಲಿ ಸುಶ್ರುತ ಚರಕ ವಾಗ್ಭಟಗಳ ಅಭ್ಯಾಸ ಕ್ರಮಗಳನ್ನೊಳಗೊಂಡು ನಿಯತಗೊಳಿಸಿದ್ದಾರೆ. ಶರೀರ ಶಾಸ್ತ್ರದ ಅಧ್ಯಾಪನ ಅಧ್ಯಯನವಾಗಬೇಕಾದರೆ ಇವುಗಳ ಪ್ರಾಮುಖ್ಯತೆಯಿರುತ್ತದೆ. ಅಥವಾ ಇವುಗಳಲ್ಲಿಯ ಶಾರೀರ ವಿಭಾಗಗಳನ್ನೊಳಗೊಂಡು ಸಂಗ್ರಹಿಸಿ ಅಧ್ಯಯನ ಮಾಡಿಸಬೇಕು. ಇವುಗಳಲ್ಲಿ ಎರಡನೇ ಮಾರ್ಗವೇ ಯೋಗ್ಯವು ಆರ್ಥಿಕ ದೃಷ್ಟಿಯಿಂದಲೂ ಕಡಿಮೆ ಖರ್ಚಿನದಾಗಿದೆ. ಇವೆಲ್ಲ ದೃಷ್ಟಿಯಿಂದ "ಶಾರೀರ ವಿಜ್ಞಾನವು" ಪ್ರಕಾಶಿತವಾಗಿರುತ್ತದೆ.

ಆಯುರ್ವೇದ ಪ್ರಸಾರಕಮಂಡಲಿಯ ಆತ್ರೇಯಸದನದಲ್ಲಿ ಅಧ್ಯಯನ ಅಧ್ಯಾಪನಗಳು ಅನೇಕ ವರ್ಷಗಳಿಂದ ನಡೆಯುತ್ತಾಬಂದಿರುತ್ತವೆ ಇಲ್ಲಿಯ ಹಳೇ ಹೊಸ ಪ್ರೌಢ ವಿದ್ಯಾರ್ಥಿಗಳು ಸ್ವಾಧ್ಯಾಯ ಯಜ್ಞವೆಂದು ಗ್ರಂಥಗಳನ್ನು ಅನುವಾದಿಸಿದವರೂ ಇದ್ದಾರೆ. ಇಲ್ಲಿ ಕಲಿತ, ಕಲಿಯುತ್ತಲಿರುವ, ಮುಂದೆ ಕಲಿಯಬಹುದಾದ ವಿದ್ಯಾರ್ಥಿಗಳಿಗೂ ಮತ್ತು ವಾಚಕರಿಗೂ ಈ "ಶಾರೀರ ವಿಜ್ಞಾನವು" ಮಾರ್ಗದರ್ಶಕವಾಗಲೆಂದು ಹಾರೈಕೆಯು

ಧನತ್ರಯೋದಶಿ<br>ತಾ. ೨೪-೧೦-೧೯೫೪ — **ವೈದ್ಯಗುರು ದಾ. ಅ. ಹಲಸೀಕರ**<br>ಪ್ರಿನ್ಸಿಪಾಲ ಶುದ್ಧಾಯುರ್ವೇದ ವಿದ್ಯಾಲಯ, ಹುಬ್ಬಳ್ಳಿ

# ವಿಷಯಗಳು

## ನಿರೂಪಣಂ

ಗ್ರಂಥ ಸಮಾಪ್ತಿ

# ಅನುಕ್ರಮಣಿಕೆ



## ಗ್ರಂಥಾರಂಭ

॥ ಭಗವಾನ್ ಧನ್ವಂತರಿಃ ॥

# ಶಾರೀರ ವಿಜ್ಞಾನ



## ಶಾರೀರ ನಿರೂಪಣೆಯು

ಶರೀರವಿಷಯಕವಾದ ತಿಳುವಳಿಕೆಗೆ "ಶಾರೀರವಿಜ್ಞಾನ" ವೆಂಬಹೆಸರು

**॥ ಶರೀರೇಭವಾಃ (ಶಾರೀರಾಃ):– ಅನೇಕವ್ಯಾಧ್ಯಾದಯೂ ಭಾವವಿಶೇಷಾಃ ಅಥವಾ ಶರೀರೇವರ್ತಮಾನಾಃ ತತ್ತ್ವಪದಾರ್ಥಕ್ರಿಯಾ ಸ್ವರೂಪ ಪ್ರಯೋಜನಾದಯೋಽಸಂಖ್ಯವಿಕಲ್ಪಾಃ ಏತೇಸರ್ವೇಶಾರೀರಾಃ ತಾನ್ ಅಧಿಕೃತ್ಯಕೃತೋಽಯಂ ಗ್ರಂಥಃ "ಶಾರೀರಮ್"**

ಮನುಷ್ಯನು ಈ ಜಗತ್ತಿನಲ್ಲಿ ಬಾಳಬೇಕಾದರೆ ಅವನಿಗೆ ಅನೇಕ ಸಾಧನಗಳ ಅವಶ್ಯಕತೆಯಿರುತ್ತದೆ. ಆದರೆ ಸಾವಿರಾರು ಸಾಧನ ಸೌಕರ್ಯಗಳಿದ್ದರೂ ಅವನ್ನು ಉಪಯೋಗಿಸಲು ಮುಖ್ಯ ಸಾಧನವೆಂದರೆ ಶರೀರವು. ಇದನ್ನೇ ಸುಶ್ರುತಾಚಾರ್ಯರು ಶಸ್ತ್ರ ಚಿಕಿತ್ಸೆಯಲ್ಲಿ ಹೀಗೆ ಹೇಳಿದ್ದಾರೆ.

**"ಯಂತ್ರಶತಮೇಕೋತ್ತರಂ" ಅತ್ರಹಸ್ತಮೇವ ಪ್ರಧಾನತಮಂ॥ ಕಿಂಕಾರಣಂ? ಯಸ್ಮಾದ್ಧಸ್ತಾದೃತೆ ಯಂತ್ರಾಣಾಮ ಪ್ರವೃತ್ತಿರೇವ ॥**

ನೂರಾಒಂದು ಯಂತ್ರಗಳಿವೆ, ಅವು ಶರೀರದಲ್ಲಿ ನಟ್ಟ ಬಾಣಾದಿ ಗಳನ್ನು ಕಿತ್ತು ತೆಗೆಯುವ ಸಾಧನಗಳು ಈ ಯಂತ್ರಗಳೆಲ್ಲವುಗಳಿಗೂ ಅತ್ಯಂತ ಮುಖ್ಯ ಸಾಧನವೆಂವರೆ ಹಸ್ತವು(ಕೈ). ಯಾಕಂದರೆ ಹಸ್ತದ ವಿನಾ ಇವು ಕೆಲಸ ಮಾಡಲಾರವು. ಚನ್ನಾಗಿ ಧರಿಸಿ ಯಥಾಯೋಗ್ಯ ಕೆಲಸವನ್ನು ಯಂತ್ರದಿಂದ, ಕೈಯ್ಯೇ ಮಾಡಿಸುವದು. ಆದ್ದರಿಂದ ಸಾಧನ ಭೂತ ಯಂತ್ರಗಳಿಗೆ ಪ್ರೇರಕವಾಗಿ, ಪ್ರಧಾನ ಸಾಧಕವು ಹಸ್ತವು. ಹೀಗೆಂದು ವಿವರಿಸಿದ್ದಾರೆ ದೇಹ ಪೋಷಣೆಗೆ ನಾವು ಎಷ್ಟೇ ಪದಾರ್ಥಗಳನ್ನು ಅನೇಕ ರೀತಿ ಸಂಸ್ಕಾರ ಮಾಡಿ ಉಪಯೋಗಿಸಿದರೂ, ಆ ಪದಾರ್ಥಗಳಿಂದ ಶರೀರ ರಕ್ಷಣೆಯಾಗಬೇಕಾದರೆ, ಶರೀರವು ಅನೇಕ ಕ್ರಿಯಾತ್ಮಕ ಅಂಗಗಳಿಂದ ಅವಿ ರತ ಕಾರ್ಯಗಳನ್ನು ಮಾಡಬೇಕಾಗುತ್ತದೆ. ಇದರಿಂದ ಉಪಯೋಗಿಸಿದ ವಸ್ತುಗಳು ದೇಹ ರಕ್ಷಣೆಗೆ ಅರ್ಹವಾಗುತ್ತವೆ.

ಇಂಥ ಮುಖ್ಯ ಸಾಧನವಾದ ಶರೀರವು ಹೇಗೆ ಉತ್ಪನ್ನವಾಗುತ್ತದೆ? ಅದರಲ್ಲಿರುವ ದ್ರವ್ಯಗಳು ಯಾವವು? ಅವುಗಳು ಯಾವ ಕ್ರಿಯೆಗಳನ್ನುಂಟು ಮಾಡುತ್ತವೆ. ಶರೀರವು ಆರೋಗ್ಯದಿಂದಿರಬೇಕಾದರೆ ಅವುಗಳನ್ನು ಯಾವ ರೀತಿಯಲ್ಲಿಡಬೇಕು, ಸರಿಯಾದ ಸ್ಥಿತಿಯಲ್ಲಿರುವ ಆರೋಗ್ಯವುಳ್ಳ ದೇಹದ ಲಕ್ಷಣವೇನು? ಅದು ಯಾವ ಯಾವ ದೋಷ ಧಾತು ಮಲಾದಿ ವಿಕೃತಿ ಗಳಿಂದ, ಯಾವ ಯಾವ ಸ್ಥಾನಗಳಲ್ಲಿ ವೇದನೆಯುಳ್ಳದ್ದಾಗುತ್ತದೆ? ಯಾವ ಯಾವ ಸ್ಥಾನಗಳಲ್ಲಿ ಯಾವ ಯಾವ ರೋಗಗಳ ಆಶ್ರಯವು ಇರುತ್ತದೆ? ಅಂಥ ರೋಗಗಳ ಸಾಧ್ಯಾಸಾಧ್ಯ ಸ್ಥಿತಿ ದೇಹದಲ್ಲಿಯ ಯಾವ ಲಕ್ಷಣ ಸ್ಥಾನ ಕ್ರಿಯಾದಿಗಳಿಂದ ತಿಳಿಯಬೇಕು? ಇತ್ಯಾದಿ ಆ ಮೂಲಾಗ್ರ ವಿಚಾರಗಳು ಶರೀರ ಜ್ಞಾನವಿಲ್ಲದೆ ತಿಳಿಯಲಾರವು. ಆದ್ದರಿಂದ ಶರೀರ ರಕ್ಷಣೆಗೆ, ಅಲ್ಲಲ್ಲಿ ಉತ್ಪನ್ನವಾಗುವ ರೋಗ ಚಿಕಿತ್ಸೆಗೆ, ಶರೀರ ಜ್ಞಾನವು ಅತ್ಯವಶ್ಯವಿರುವದರಿಂದಲೂ, ಅದನ್ನೇ (ಶರೀರ) ಆಶ್ರಯಿಸಿ ಎಲ್ಲ ರೋಗ ಗಳುಂಟಾಗುವದರಿಂದಲೂ, ಆಯುರ್ವೇದಕಾರರು ಸಮಸ್ತ ರೋಗ ನಿದಾನ ವನ್ನು (ಲಕ್ಷಣ) ಹೇಳಿ, ರೋಗಗಳ ಆಶ್ರಯ, ಉತ್ಪತ್ತಿ ಸ್ಥಾನವಾದ ಶರೀರ ವನ್ನು (ಶರೀರ ವಿಷಯ) ವಿಶದವಾಗಿ ಹೇಳಿರುತ್ತಾರೆ. ಅದಕ್ಕೆ "ಶಾರೀರ ವೆಂಬ ಹೆಸರು".

# ಶಾರೀರ ಪ್ರಯೋಜನ

ವೈದ್ಯರು ಶರೀರ ಜ್ಞಾನದಿಂದ ಅಲ್ಲಿ ಸಂಭವಿಸುವ ರೋಗಗಳ ಚಿಕಿತ್ಸೆ ಯನ್ನು ಮಾಡಲೂ, ಇದರಂತೆ ಯೋಗಿಗಳು ಈ ಸ್ಥೂಲ ದೇಹ ಜ್ಞಾನದಿಂದ ಸ್ಥೂಲಕ್ಕೆ ಮೂಲ ಕಾರಣವಾದ ಅವ್ಯಕ್ತ (ಆತ್ಮ) ಸ್ಥಿತಿ ಹೊಂದಲಿಕ್ಕೂ; ಈ ಶಾರೀರವು ರಚಿಸಲ್ಪಟ್ಟಿದೆಯೆಂದು ಸುಶ್ರುತಾಚಾರ್ಯರು ಹೇಳಿದ್ದಾರೆ.

ನಮಗೆ ಇಲ್ಲಿ ಚಿಕಿತ್ಸೆಯೇ ಪ್ರಾಧಾನ್ಯವಾಗಿರುವದರಿಂದ, ಚಿಕಿತ್ಸಾನು ಸಾರ ದೇಹದ ಪಂಚಭೌತಿಕ ಸ್ಥಿತಿ ಸ್ವರೂಪಾದಿಗಳನ್ನು ಹೇಳಿರುತ್ತಾರೆ. ಅದಕ್ಕೆ ಹೊರತಾದ ವಿಚಾರವು ಚಿಕಿತ್ಸೆಯಲ್ಲಿ ಪ್ರಯೋಜನವಿಲ್ಲ. (ಸು। ಶಾ। ಅ ೧ ಶ್ಲೋ ೧೩) "**ಭೂತೇಭ್ಯೋಹಿ ಪರಂಯಸ್ಮಾನ್ನಾಸ್ತಿಚಿಂತಾ ಚಿಕಿತ್ಸಿತೆ**" ಅಂದರೆ:- ಪಂಚಮಹಾ ಭೂತಾದಿಗಳ ಸಮುದಿತ ಸ್ವರೂಪ ವಾದ ದೇಹವು ಚಿಕಿತ್ಸಾ ಸ್ಥಾನವಾಗಿದೆ. ಯಾಕಂದರೆ ಅದರಲ್ಲಿಯೇ ರೋಗ ಸ್ಥಾನಗಳು, ಆರೋಗಗಳ ನಿವಾರಣೆಗಾಗಿ ಪಂಚಮಹಾ ಭೂತಗಳ (ಸ್ಥೂಲ) ಸ್ವರೂಪವುಳ್ಳ ಶರೀರಕ್ಕೆ ಚಿಕಿತ್ಸೆ ಮಾಡಬೇಕಾಗುವದು. ಆದ್ದರಿಂದ ಚಿಕಿತ್ಸಾ ವಿಷಯದಲ್ಲಿ ಭೂತಾದಿಗಳಿಂದ ಹೊರತಾದ ಅವ್ಯಕ್ತವೇ ಮೊದಲಾ ದವುಗಳ ಅವಶ್ಯಕತೆಯಿರುವದಿಲ್ಲ. ಚಿಕಿತ್ಸೆಯಿಂದ ದೇಹದ ವ್ಯಾಧಿ ರೂಪ ದುಃಖವನ್ನು ನಿವಾರಿಸಲು ಚಿಕಿತ್ಸೆಗೆ ಅನುಗುಣವಾದ ಶಾರೀರ ಜ್ಞಾನಗಳಲ್ಲಿ ಭೂತಾದಿಗಳ ಹೊರತಾದ ವಿಷಯವಿಚಾರವಿಲ್ಲೆಂಬರ್ಥವು. ಇನ್ನು ಯೋಗಾದಿಗಳಿಂದ ಆತ್ಮ ಜ್ಞಾನ ಹೊಂದಿ, ಜನ್ಮ ರೂಪ ದುಃಖವನ್ನು ನಿವಾ ರಿಸಿಕೊಳ್ಳಬೇಕೆನ್ನುವವರಿಗೆ, ಮೂಲಪ್ರಕೃತಿಯು, (ಅವ್ಯಕ್ತ) ಪರಮಾತ್ಮ ಜ್ಞಾನವು, ಅದನ್ನು ಹೊಂದಲಿಕ್ಕೆ ಅವಶ್ಯವಿರುವದರಿಂದ ಹೇಳಿರುವರು. "**ಪುರುಷಕೈವಲ್ಯಾರ್ಥಂ ಪ್ರವೃತ್ತಿಮುಪದಿಶಂತಿ**" (ಸುಶ್ರುತ॥ ಶಾ। ಅ ೧ ಸೂ ೮) ಪ್ರಕೃತ ವೈದ್ಯಕ ಚಿಕಿತ್ಸಾ ಶಾರೀರವನ್ನೇ ಮಾತ್ರ ರೋಗ ನಿವಾ ರಣೋದ್ದೇಶವಾಗಿ ಹೇಳುವೆವು ಆದ್ದರಿಂದ, ನಿವೃತ್ತಿಪರವಾದ ಯೋಗ ವಿಷಯ ಕ್ರಮಗಳ ಜ್ಞಾನ ಬೇಕಾದವರು, ಚರಕ ಶಾರೀರವನ್ನು ನೋಡ ಬೇಕು. (ಚರಕ। ಶಾ। ೧ ಶ್ಲೋ ೧೩೭ ರಿಂದ ಪೂರ್ಣ ಅಧ್ಯಾಯವು.)

# ಶಾರೀರ ವಿಷಯು

ಶರೀರದ ಉತ್ಪತ್ತಿ ಹೇಗೆ? ದೇಹದಲ್ಲಿ ಯಾವ ಯಾವ ಪದಾರ್ಥಗಳಿರುತ್ತವೆ? ಅವುಗಳಿಂದ ಪ್ರಯೋಜನವೇನು? ಅವು ಯಾವ ಸ್ಥಿತಿಯಲ್ಲಿದ್ದರೆ ದೇಹವು ಸದೃಢವಾಗಿರುತ್ತದೆ? ಇತ್ಯಾದಿ ದೇಹದ ಉತ್ಪತ್ತಿ ಮೊದಲುಗೊಂಡು ಆಮೂಲಾಗ್ರ ಶರೀರ ವಿಷಯಗಳ ಜ್ಞಾನ ಮಾಡಿಕೊಡುವದೇ "ಶಾರೀರದ ವಿಷಯು" ವಾಗಿದೆ. ಸರ್ವವೇದನಾ ಸ್ವರೂಪವಾದ ರೋಗಗಳಿಗೆ ಈ ಶರೀರವೇ ಆಶ್ರಯ ಸ್ಥಾನವು. ರೋಗಗಳು ದೇಹದಲ್ಲಿಯೇ ಉತ್ಪನ್ನವಾಗಿ ತಮ್ಮ ಪ್ರಭಾವದಿಂದ ವ್ಯಾಪಿಸಿ ದೇಹವನ್ನೇ ನಾಶಪಡಿಸಲೂಬಹುದು ಅಥವಾ ದೇಹದಲ್ಲಿಯ ಸಾಮರ್ಥ್ಯವನ್ನು ಹರಣ ಮಾಡಿ, ಕರ್ತವ್ಯ ಶಕ್ತಿಯಿಲ್ಲದೆ ವೇದನೆಗಳನ್ನನುಭವಿಸುವ, ಪರಾಧೀನವಯನೀಯ ಸ್ಥಿತಿಯನ್ನುಂಟು ಮಾಡಲೂ ಬಹುದು ಮಾನವನ ಎಲ್ಲ ಪ್ರವೃತ್ತಿಗಳು ದೇಹ ರಕ್ಷಣೆಯ ಸಲುವಾಗಿಯೇ ಇರುತ್ತವೆ ಇಂಥ ಅತ್ಯಂತ ಪ್ರಧಾನವಾದ ದೇಹದ, ಜ್ಞಾನ ವಿಷಯುವು, ಅವಶ್ಯವೂ ಪವಿತ್ರವಾದದ್ದೂ ಇರುತ್ತದೆ. ಇಷ್ಟೇ ಅಲ್ಲ ಯಾವಾಗಲೂ ಎಚ್ಚರದಿಂದ ಅಲಕ್ಷ್ಯ ಮಾಡದೆ, ಶರೀರಕ್ಕೆ ಬರುವ ರೋಗಾದಿ ಅಪಾಯಗಳಿಂದ ರಕ್ಷಣೆ ಮಾಡಿದ ದೇಹವು ಸದೃಢವೂ, ಶಕ್ತಿಯುಳ್ಳದ್ದೂ, ಬಹುಕಾಲ ಬಾಳುವಂಥದೂ, ಆಗುವದಲ್ಲದೆ ಬುದ್ಧಿ, ಶಾಂತಿ,ತುಷ್ಟಿ, ಧೈರ್ಯ ಉತ್ಸಾಹ ಯುಕ್ತವಾದದ್ದಾಗುತ್ತದೆ. ಈ ಪ್ರಕಾರ ದೇಹವುಳ್ಳವನು, ತನ್ನ ಕರ್ತವ್ಯಗಳನ್ನು ದಕ್ಷತೆಯಿಂದ ಮಾಡುವನಲ್ಲದೆ, ಕರ್ತವ್ಯ ಜೀವನವಾದ ಜಗತ್ತಿನಲ್ಲಿ ಬದುಕಲು ಅರ್ಹನಾಗುತ್ತಾನೆ. ಸೂಕ್ಷ್ಮವಾಗಿ ಅವಲೋಕಿಸಿದರೆ ಮಾನವನು ಸಾಮಾಜಿಕ, ಆರ್ಥಿಕ, ಶೈಕ್ಷಣಿಕ, ವ್ಯವಸ್ಥೆಗಳನ್ನು ನಿರ್ಮಿಸಿಕೊಂಡುರಾಷ್ಟ್ರವಾಳುವ ಹಿನ್ನೆಲೆಯು "ದೇಹ ರಕ್ಷಣೆ"ಯೇ ಇರುತ್ತದೆಂಬದನ್ನು ಬೇರೆ ಹೇಳಬೇಕಾಗಿಲ್ಲ ಆದ್ದರಿಂದ ಜಗತ್ತಿನಲ್ಲಿ ಸತತ ನಡೆಯುವ ಕರ್ತವ್ಯಗಳು ಈ ದೇಹಕ್ಕಾಗಿಯೇ ಇರುತ್ತವೆಂಬುದನ್ನು ವಾಗ್ಭಟಾಚಾರ್ಯರು ಹೀಗೆ ಹೇಳಿದ್ದಾರೆ.

**ಧರ್ಮಾರ್ಥಕಾಮಮೋಕ್ಷಾಣಾಂ ಶರೀರಂ ಸಾಧನಂಯತಃ ॥**

(ಶಾರ್ಙಧರ। ಪ್ರ. ಖಂಡ। ಅ ೫ ಶ್ಲೋ ೫೩.)

**ಆಯುಃಕಾಮಯಮಾನೇನ ಧರ್ಮಾರ್ಥ ಸುಖಸಾಧನಂ||**
**ಆಯುರ್ವೇದೋಪದೇಶೇಷು ವಿಧೇಯಃ ಪರಮಾದರಃ||**

ಧರ್ಮ, ಅರ್ಥ, (ಧನ) ಕಾಮ, (ಸ್ತ್ರೀ ಸುಖ) ಮೋಕ್ಷ (ನಿತ್ಯ ಸುಖ) ಇವುಗಳನ್ನು ಪಡೆಯಲಿಕ್ಕೆ ಮುಖ್ಯ ಸಾಧನವೆಂದರೆ, ನಿರೋಗಿಯಾದ ಶರೀರವು. ಮತ್ತು ಅದು ದೀರ್ಘಾಯುಷ್ಯವುಳ್ಳದ್ದು ಇರಬೇಕಾಗಿರುತ್ತದೆ. ಹೀಗೆ ಸುಖಸಾಧನೆಗೆ ಈ ಶರೀರವಾಗಬೇಕಾದರೆ ಆಯುರ್ವೇದದಲ್ಲಿಯ ಉಪದೇಶದಂತೆ ಆದರವುಳ್ಳವನಾಗಿ ನಡೆಯಬೇಕು. ಧರ್ಮವೇ ಮೊದಲಾದ ಇಷ್ಟಾರ್ಥ ಸುಖಗಳನ್ನು ಪಡೆಯಲಿಕ್ಕೆ ದೇಹವು ಹುಟ್ಟಿದೆಯೇ ವಿನಾ ದುಃಖ ಪಡೆಯಲಿಕ್ಕೆ ಅಲ್ಲ "ಸುಖಸಾಧನಂ" ಎಂಬ ಪದದಿಂದ ಇದು ಸ್ಪಷ್ಟವಾಗುತ್ತದೆ. ಹೀಗೆ ಸುಖಕ್ಕೆ ಸಾಧನವಾದ, ಸುಖವನ್ನೇ ಇಚ್ಛಿಸುವ, ದೇಹವನ್ನು ವ್ಯವಸ್ಥಿತವಾಗಿ ಇಟ್ಟುಕೊಳ್ಳದಿದ್ದರೆ ದುಃಖವನ್ನು ಹೊಂದುತ್ತಾನೆ ಪರಮಾತ್ಮನು ಬುದ್ಧಿ ಅವಯವಾದಿಗಳನ್ನು ಕರ್ತವ್ಯಕ್ಕಾಗಿಯೇ, ಇತರ ಪ್ರಾಣಿಗಳಿಗಿಂತ ಮಾನವನಿಗೆ ಹೆಚ್ಚಿಗೆ ಕೊಟ್ಟಿರುತ್ತಾನೆ. ಅದರ ಸದುಪಯೋಗದಿಂದ ಸುಖ, ದುರುಪಯೋಗದಿಂದ ದುಃಖವೂ ಆಗುತ್ತದೆ. ಅರ್ಥಾತ್, ಮನುಷ್ಯನು ತನಗೆ ದಯಪಾಲಿಸಿದ ಶುದ್ಧ ಬುದ್ಧ್ಯಾದ್ಯಧಿಕಗಳಿಂದ ಇಹಪರ ಸುಖಗಳನ್ನು ಪಡೆಯಲು ಸಮರ್ಥನಾಗುತ್ತಾನೆ.

( || ಸುಶ್ರುತ|| ಶಾರೀರ|| ಅಧ್ಯಾಯ ೧ ಸೂತ್ರ ೧-೨ || )

**ಅಥಾತಃ ಸರ್ವಭೂತಚಿಂತಾಶಾರೀರಂ ವ್ಯಾಖ್ಯಾಸ್ಯಾಮಃ|| ಸೂ|| ೧|| ಹೇತುಲಕ್ಷಣಪ್ರತಿಪಾದಕಾತ್ ನಿದಾನಸ್ಥಾನಾತ್ ಅಧಿಗತವ್ಯಾಧಿಹೇತುಲಕ್ಷಣಸ್ಯ ವೈದ್ಯಸ್ಯ ಚಿಕಿತ್ಸಾಯಾ ಅವಸರೋವರ್ತತೇ" ಚಿಕಿತ್ಸಾಚ ಅಧಿಷ್ಠಾನವಿಶೇಷಜ್ಞಾನಮಂತರೇಣನಸಂಭವತೀತ್ಯಧಿಷ್ಠಾನಜ್ಞಾನಾಯ ಶಾರೀರಸ್ಥಾನಂ ಆರಭ್ಯತೆ||**

ಅಂದರೆ:- ರೋಗದ ಕಾರಣ ಲಕ್ಷಣಗಳಿಂದ ಯುಕ್ತವಾದ ನಿದಾನ ಸ್ಥಾನಾಭ್ಯಾಸದಿಂದ ನಿದಾನ ಜ್ಞಾನವಾದ ಮೇಲೆ, ವ್ಯಾಧಿ ಲಕ್ಷಣದಿಂದ

ರೋಗ ತಿಳಿದ ವೈದ್ಯನು, ಚಿಕಿತ್ಸೆ (ರೋಗ ನಿವಾರಣೆ)ಯನ್ನು ಮಾಡಬೇಕಾಗುತ್ತದೆ. ಆ ಚಿಕಿತ್ಸೆಯಾದರೂ ದೇಹದಲ್ಲಿಯ ಸ್ಥಾನ ಸ್ಥಿತಿ ಇವುಗಳನ್ನು ತಿಳಿಯದೆ, ಯೋಜಿಸಲು ಬರಲಾರದು ಆದ್ದರಿಂದ ರೋಗಕ್ಕೆ ಸ್ಥಾನವಾದ ಶರೀರವನ್ನು ಕುರಿತು "ಶಾರೀರ ಸ್ಥಾನನೆಂಬ" ವಿಷಯುವು ಹೇಳಲ್ಪಡುತ್ತದೆ

**ಶರೀರಂ ಸರ್ವಥಾಸರ್ವಂ ಸರ್ವದಾವೇದಯೋಭಿಷಿಕ್ ॥**
**ಆಯುರ್ವೇದಂ ಸಕಾತ್ಸ್ನ್ಯೇನವೇದಲೋಕಸುಖಪ್ರದಂ ॥**
(ಚರಕ-ಶಾ-ಅ. ೬ ಶ್ಲೋ. ೧೯)

ದೇಹದ ಸಂಪೂರ್ಣ ಸ್ಥಾನ ವಿಶೇಷಾದಿಗಳನ್ನು ಆಯಾಯ ರೋಗೋತ್ಪತ್ತಿ ಮತ್ತು ಆಶ್ರಯ ಸ್ಥಾನಗಳನ್ನು, ಯಾವನು ತಿಳಿಯುತ್ತಾನೆಯೋ ಮತ್ತು ಸದಾ ಆ ವಿಷಯಗಳಲ್ಲಿ ಅಭ್ಯಾಸ ಕರ್ಮ ನಿಪುಣನಿರುತ್ತಾನೆಯೋ, ಅಂಥ ವೈದ್ಯನು ಲೋಕಕ್ಕೆ ಸುಖವನ್ನು ಕೊಡತಕ್ಕ (ವ್ಯಾಧಿ ರೂಪ ದುಃಖ ನಿವಾರಣೆಯಿಂದ) ಆಯುರ್ವೇದವನ್ನು, ಪೂರ್ಣ ತಿಳಿಯುತ್ತಾನೆ. ಅಂದರೆ ಶರೀರ ಜ್ಞಾನವಿಲ್ಲವಾದರೆ ಆಯುರ್ವೇದ ಜ್ಞಾನವು ಪೂರ್ಣವಾಗುವದಿಲ್ಲವೆಂಬದೇ ಈ ಶ್ಲೋಕಾಭಿಪ್ರಾಯವು.

ಹೀಗೆ ಶರೀರವೆಂದರೇನು ಅದನ್ನು ಯಾಕೆ ತಿಳಿಯಬೇಕೆನ್ನುವವನ್ನು ಹೇಳಿದ ನಂತರ, ದೇಹದಲ್ಲಿರುವ ವಿವಿಧ ಸ್ಥಾನಾದಿಗಳ ಪ್ರತ್ಯಕ್ಷ ಜ್ಞಾನ ಮಾಡಿಕೊಳ್ಳುವ ಕ್ರಮವನ್ನು ಹೇಳುತ್ತಾರೆ. ಇಷ್ಟೇ ಅಲ್ಲದೆ ಶಾಸ್ತ್ರೀಯವಾಗಿ ತಾವು ಕಂಡು ಹಿಡಿದ ಶರೀರ ವಿಭಾಗಾದಿಗಳನ್ನೂ, ಉತ್ಪತ್ತಿ ಕ್ರಮಾದಿಗಳನ್ನೂ, ಅದರಲ್ಲಿಯ (ದೇಹದಲ್ಲಿ ಸಂಭವಿಸುವ ಕ್ರಿಯೆಗಳನ್ನು) ವಿಶೇಷ ವಿಚಾರಗಳನ್ನೂ, "ಶಾರೀರ" ವೆಂಬ ಹೆಸರಿನಿಂದ ಅಭ್ಯಾಸದ ಸಲುವಾಗಿ ರಚಿಸಿರುತ್ತಾರೆ. ಶಾಸ್ತ್ರಾಭ್ಯಾಸದಿಂದಲೂ, ಪ್ರತ್ಯಕ್ಷ (ಶವಚ್ಛೇದ) ದರ್ಶನದಿಂದಲೂ, ಶರೀರ ಜ್ಞಾನವಾಗುವದೇ ಯೋಗ್ಯ ಜ್ಞಾನವೆಂದು ಶಸ್ತ್ರ ಚಿಕಿತ್ಸಕರಾದ ಸುಶ್ರುತಾದಿ ಆಚಾರ್ಯರ ಮತವು. ಪ್ರತ್ಯಕ್ಷ ಶರೀರ ಜ್ಞಾನ ಮಾಡಿಕೊಳ್ಳುವ ಕ್ರಮವು. (ಸುಶ್ರುತ॥ ಶಾ॥ ಅ ೬ ಶ್ಲೋ ೪೬.)

**ತ್ವಕ್‌ಪರ್ಯಂತಸ್ಯ ದೇಹಸ್ಯಯೋಽಯಮಂಗವಿನಿಶ್ಚಯಃ॥**
**ಶಲ್ಯಜ್ಞಾನಾದೃತೇಽನೈಷವರ್ಣ್ಯತೇಽಂಗೇಷುಕೇಷುಚಿತ್ ॥೪೬॥**

ದೇಹದ ಮೇಲೆ ಕಾಣುತ್ತಿರುವ ಚರ್ಮದ ಒಳಗಡೆಯಿರುವ (ಒಳ ಭಾಗದ) ಯಾವ ಯಾವ ಅಂಗಗಳ ಸ್ವರೂಪ ಜ್ಞಾನಾದಿ ಸ್ಥಿತಿಗಳ ನಿರ್ಣಯಗಳನ್ನು ಹೇಳುತ್ತೇವೆಯೋ, ಆಯಾ ಅಂಗಗಳಲ್ಲಿ ಶಸ್ತ್ರ ಛೇದನದಿಂದ ತಿಳಕೊಂಡ ಜ್ಞಾನದ ಹೊರತಾಗಿ ಹೇಳುವದಿಲ್ಲ. ಅರ್ಥಾತ್ ಬೇರೆ ಬೇರೆ ಅನೇಕ ಅಂಗ ಸ್ಥಾನಗಳುಳ್ಳ ಸಂಪೂರ್ಣ ದೇಹವನ್ನು ಚರ್ಮ ಪರ್ಯಂತರವಿರುವ ಒಳಭಾಗಗಳನ್ನು ಶಸ್ತ್ರಾದಿಗಳಿಂದ ಛೇದಿಸಿ ನೋಡಿಯೇ ಹೇಳಿದ್ದೇವಲ್ಲದೆ, ಶಸ್ತ್ರದಿಂದ ಜ್ಞಾನ ಮಾಡಿಕೊಳ್ಳದೆ ಪ್ರತ್ಯಕ್ಷ ಜ್ಞಾನವಿಲ್ಲದೆ, ಹೇಳಿಲ್ಲ ವೆಂಬರ್ಥ.

ಇದೇ ಶ್ಲೋಕದಿಂದ ಇನ್ನೊಂದು ಅರ್ಥವಾಗುತ್ತದೆ. ಅದೇನಂದರೆ:— ಶಾಸ್ತ್ರದಲ್ಲಿಯ ವಿಷಯಗಳು (ಶಾರೀರ) ಪ್ರತ್ಯಕ್ಷ ಜ್ಞಾನಮಾಡಿಕೊಂಡು ಹೇಳಿರುವದಾದರೂ ಬರೀ ಶಾಸ್ತ್ರಾಭ್ಯಾಸಗಳಿಂದ ಪ್ರತ್ಯಕ್ಷ ಅಂಗ ನಿಶ್ಚಿಯವಾಗಲಾರದು. ಅದು ಶಸ್ತ್ರ ಜ್ಞಾನದ ವಿನಾ (ಶಸ್ತ್ರವಿಲ್ಲದೆ) ವರ್ಣಿಸುವ ವಿಷಯವಲ್ಲವೆಂದೂ, ಅತ್ಯಂತ ನಿಶ್ಚಯಾತ್ಮಕ ಜ್ಞಾನವು ಶಸ್ತ್ರದಿಂದಲೇ ಆಗಬೇಕಾಗುತ್ತದೆಂಬ ಅಭಿಪ್ರಾಯವು.

**ತಸ್ಮಾನ್ನಿಃಸಂಶಯಂ ಜ್ಞಾನಂ ಹರ್ತ್ರಾಶಲ್ಯಸ್ಯವಾಂಛತಾ ॥**
**ಶೋಧಯಿತ್ವಾಮೃತಂ ಸಮ್ಯಕ್ ದ್ರಷ್ಟವ್ಯೋಽಂಗವಿನಿಶ್ಚಯಃ**
**(ಸುಶ್ರುತ। ಶಾರೀರ। ಅ ೬-೪೭.)**

**ಪ್ರತ್ಯಕ್ಷತೋಹಿಯದ್ದೃಷ್ಟಂಶಾಸ್ತ್ರದೃಷ್ಟಂಚಯದ್ಭವೇತ್॥**
**ಸಮಾಸತಸ್ತದುಭಯಂಭೂಯೋಜ್ಞಾನವಿವರ್ಧನಂ ॥೪೮॥**

ನಿಶ್ಚಯವಾದ, ಸಂಶಯವಿಲ್ಲದ, ಪ್ರತ್ಯಕ್ಷಜ್ಞಾನವನ್ನು ಶರೀರ ವಿಷಯದಲ್ಲಿ ಮಾಡಿಕೊಳ್ಳಬೇಕಾದರೆ, ಶಾಸ್ತ್ರೋಕ್ತವಾದ (ಸುಶ್ರುತ) ಶಸ್ತ್ರಜ್ಞಾನ, ಶಸ್ತ್ರ ಕರ್ಮಗಳನ್ನು (ಛೇದನಾದಿಗಳನ್ನು)ಅಭ್ಯಾಸ ಮಾಡಿಕೊಂಡು, ನಂತರ

ಯೋಗ್ಯವಾದ (ಶಾಸ್ತ್ರಾಭ್ಯಾಸಕ್ಕೆ) ಮೃತ ದೇಹವನ್ನು, ಕ್ರಮವಾಗಿ ಶೋಧಿಸುತ್ತಾ (ಶಸ್ತ್ರಗಳಿಂದ) ಚನ್ನಾಗಿ ಶಾಸ್ತ್ರದಲ್ಲಿ ಹೇಳಿದ ಅಂಗಾಂಗಗಳನ್ನು, ಅದರ ಸ್ವರೂಪಗಳನ್ನು, ಛೇದಿಸಿ ತಿಳಿದುಕೊಳ್ಳಬೇಕು ಮತ್ತು ಶಾಸ್ತ್ರೋಕ್ತಿಯಂತೆ ಅವುಗಳ ಪರಿಚಯ (ನಿಶ್ಚಯ) ಮಾಡಿಕೊಳ್ಳಬೇಕು

ಪ್ರತ್ಯಕ್ಷವಾಗಿ (ಶಸ್ತ್ರ ಕರ್ಮದಿಂದ) ನೋಡುವದರಿಂದಲೂ, ಶಾಸ್ತ್ರದಲ್ಲಿಯ ಶಾರೀರ ವಿಷಯಕವಾದ ಅಭ್ಯಾಸದಿಂದ ಬಂದ ಜ್ಞಾನದಿಂದಲೂ, ಶಾಸ್ತ್ರಜ್ಞಾನ ಪ್ರತ್ಯಕ್ಷ ಜ್ಞಾನ ಇವರೆಡರಿಂದಲೂ ವಿಶೇಷವಾಗಿ "ಶಾರೀರ" ವಿಷಯದಲ್ಲಿ ಆಮೂಲಾಗ್ರ ತಿಳುವಳಿಕೆಯಾಗುತ್ತದಲ್ಲದೆ, ಇನ್ನೂ ಜ್ಞಾನ ಹೆಚ್ಚುತ್ತದೆ. ಪ್ರತ್ಯಕ್ಷ ಶರೀರ ಜ್ಞಾನ ಮಾಡಿಕೊಳ್ಳುವ ಶಸ್ತ್ರಾದಿ ಕ್ರಮಗಳು.

## ಪ್ರತ್ಯಕ್ಷ ಶರೀರ ಜ್ಞಾನ ಕ್ರಮವು

**"ತಸ್ಮಾತ್ ಸಮಸ್ತಗಾತ್ರಮವಿಷೋಪಹತಮದೀರ್ಘವ್ಯಾಧಿಪೀಡಿತಮವರ್ಷಶತಿಕಂನಿಃಸೃಷ್ಟಾಂತ್ರಪುರೀಷಂ ಪುರುಷಮಾವಹಂತ್ಯಾಮಾಪಗಾಯಾಂನಿಬದ್ಧಂ ಪಂಜರಸ್ಥಂ ಮುಂಜವಲ್ಕಲಕುಶಶಣಾದೀನಾಮನ್ಯತಮೇನಾವೇಷ್ಟಿತಾಂಗಮ ಪ್ರಕಾಶೆದೇಶೆಕೋಥಯೇತ್, ಸಮ್ಯಕ್ ಪ್ರಕುತಿಥಂಚೋದ್ಧೃತ್ಯತತೊದೇಹಂ ಸಪ್ತರಾತ್ರಾದುಶೀರ ಬಾಲವೇಣುಬಲ್ವಜಕೂರ್ಚಾನಾಮನ್ಯತಮೇನಶನೈಃ ಶನೈರವಘರ್ಷಯನ್ ತ್ವಗಾದೀನ್ ಸರ್ವಾನೇವಬಾಹ್ಯಾಭ್ಯಂತರಾನ್ ಅಂಗಪ್ರತ್ಯಂಗವಿಶೇಷಾನ್ ಯಥೋಕ್ತಾನ್ ಲಕ್ಷಯೇಚ್ಚಕ್ಷುಷಾ"** (ಸುಶ್ರುತ ಶಾರೀರ ಅ. ೬ ಸೂತ್ರ ೪೯).

ವಿಷದಿಂದ ಮೃತವಾಗದ, ಎಲ್ಲಾ ಅವಯವಗಳು ಪರಿಪೂರ್ಣವಾಗಿರುವ, ದೀರ್ಘ ವ್ಯಾಧಿಯಿಲ್ಲದಿರುವ, ಬಹಳ ವಯಸ್ಸಾಗದ(ಅತಿಮುಪ್ಪಿನದಲ್ಲದಿರುವ)ಹೊರಗೆ ಬಿದ್ದಿರುವ ದೇಹದಲ್ಲಿಯ ಮಲವುಳ್ಳ, ಇಂಥಾ ಮೃತ ಶರೀರ

ವನ್ನು, ಪ್ರವಹಿಸುತ್ತಿರುವ ನದಿಯಲ್ಲಿ, ಮೆದಿ ಹುಲ್ಲು, ನಾರು,ದರ್ಭೆ, ಸಣಬು ಇವುಗಳಲ್ಲಿ ಯಾವದಾದರೊಂದರಿಂದ ಕೆಳಗೆ ಅವಯವಾದಿಗಳಿಗೆ ಸುತ್ತಿ ಕಟ್ಟಿ, ಒಂದು ಪಂಜರದಲ್ಲಿ ಭದ್ರವಾಗಿಟ್ಟು, ಬಯಲಿಲ್ಲದಲ್ಲಿ ನೀರಲ್ಲಿ ಮುಚ್ಚಿಡ ಬೇಕು. ಹೀಗೆ ನದಿಯ ನೀರಲ್ಲಿಟ್ಟ ದೇಹವು ಚನ್ನಾಗಿ ಕೊಳೆತ ನಂತರ ಏಳು ದಿನಗಳ ಮೇಲೆ ನೀರಿನಿಂದ ತೆಗೆದು, ಬಿದರಿನ ಶಿಬರು, ಮೆದೆ ಹುಲ್ಲಿನ ಬುಡ, (ಕುಂಚದಂತಿರುವ) ಇವುಗಳ ಕುಂಚ, ಅಥವಾ ಬಾಳದ ಬೇರಿನ ಕುಂಚ ಇವುಗಳಲ್ಲಿ ಯಾವದಾದರೊಂದರಿಂದ ಸಾವಕಾಶವಾಗಿ ತಿಕ್ಕಿ ತಿಕ್ಕಿ ಮೇಲಿನ ಚರ್ಮವನ್ನು ತೆಗೆಯುತ್ತಾ, ಅಲ್ಲಲ್ಲಿರುವ ಅಂಗ ಪ್ರತ್ಯಂಗಗಳನ್ನು ತಿಳಕೊಳ್ಳಬೇಕು. ಹೀಗೆ ಪ್ರತ್ಯಕ್ಷವಾಗಿ, ಅವಯವಗಳ ಭಾಗಗಳನ್ನೂ, ಒಳ ಭಾಗ ಸ್ಥಾನಾದಿಗಳನ್ನೂ ವಿಂಗಡಿಸುತ್ತಿರುವಾಗ ಶಾಸ್ತ್ರದಲ್ಲಿ ಹೇಳಿದ, ಅವು ಗಳ ಲಕ್ಷಣ ಸ್ಥಾನಾದಿಗಳನ್ನು ನೆನಪಿಗೆ ತಂದುಕೊಂಡು ಪ್ರತ್ಯಕ್ಷ ನೋಡಿ ದ್ದನ್ನೂ, ಶಾಸ್ತ್ರದಲ್ಲಿ ಹೇಳಿದ್ದನ್ನೂ, ಹೋಲಿಸಿ ನೋಡಬೇಕು. ಇದರಂತೆ ಒಳಭಾಗದಲ್ಲಿಯ ಕರಳು ಆಶಯ ಧಮನೀ ಇತ್ಯಾದಿಗಳೆಲ್ಲವನ್ನೂ ನೋಡಿದ ನಂತರ, ಅಸ್ಥಿಸಂಧಿ ಮೊದಲಾದ ಎಲಬಿನ ಭಾಗವನ್ನು ನೋಡಬೇಕು. ಈ ರೀತಿಯಿಂದ ಶರೀರದ ಪ್ರತ್ಯಕ್ಷ ಜ್ಞಾನ ಮಾಡಿಕೊಳ್ಳಬೇಕೆಂದು ಶಸ್ತ್ರ ಶಾಸ್ತ್ರಜ್ಞರಾದ ಸುಶ್ರುತಾದಿ ಮಹರ್ಷಿಗಳ ಅಭಿಪ್ರಾಯವು ಈ ಮೇಲಿನ ಸೂತ್ರದಿಂದ ಹೇಳಿದ್ದಾಗಿದೆ.

ಸ್ಥೂಲವಾದ ಸ್ಥಾನಾದಿಗಳು, ಆಶಯ, ಸ್ನಾಯು, ಧಮನೀ, ಸ್ರೋತಸ್ಸು, ಎಲ್ಲವುಗಳೂ ಗೋಚರವಾಗುತ್ತವೆ. ಆದರೆ ಅವುಗಳಲ್ಲಿಯ ಕ್ರಿಯಾ ಪ್ರಭಾವಾದಿಗಳು ಗೋಚರವಾಗುವದಿಲ್ಲ. ಯಾಕಂದರೆ ಮೃತ ದೇಹದಲ್ಲಿ ಚೈತನ್ಯವಿಲ್ಲದಿರುವದೇ ಅದಕ್ಕೆ ಕಾರಣವು. ಶಸ್ತ್ರಕ್ರಿಯೆಯಿಂದ ಆಶಯಾದಿಗಳನ್ನು ಛೇದಿಸಿದಾಗ ಆಯಾ ಆಶಯಗಳ ಪ್ರತ್ಯಕ್ಷ ಜ್ಞಾನವಾಗು ವದು. ಆದರೆ ಅದರ ಕ್ರಿಯೆ, ಅಲ್ಲಿರುವ ಪದಾರ್ಥಗಳ ಗತಿ, ಇವು ತಿಳಿಯ ಲಾರವು. ರಕ್ತಾಶಯವನ್ನು ಛೇದಿಸಿದಾಗ ಅದು ಹೇಗಿರುವದೆಂದು ಗೊತ್ತಾ ಗುತ್ತದೆ. ಮೃತ ಶರೀರದಲ್ಲಿ ಕ್ರಿಯೆ ನಡೆಯುವದಿಲ್ಲವಾದ್ದರಿಂದ ರಕ್ತ ಸಂಚಾರ ಕ್ರಮವು ಹೇಗೆ ಸಾಗುತ್ತದೆ ಎಂಬದು ಗೊತ್ತಾಗುವದಿಲ್ಲ. ಇವೆಲ್ಲ

ಗಳನ್ನು ಅನುಮಾನದಿಂದ ತಿಳಿದುಕೊಳ್ಳಬೇಕು. ಇವರಂತೆ ದೇಹದಲ್ಲಿರುವ
ೇತನಾಯುಕ್ತ ಆತ್ಮವು (ಕ್ಷೇತ್ರಜ್ಞನು) ದೃಷ್ಟಿಗೋಚರವಲ್ಲ. ಇದಕ್ಕೆ
ದರ್ಶನವು:—

**ನಶಕ್ಯಃ ಚಕ್ಷುಷಾದ್ರಷ್ಟುಂದೇಹೇಸೂಕ್ಷ್ಮತಮೋವಿಭುಃ ।**
**ದೃಶ್ಯತೇಜ್ಞಾನಚಕ್ಷುರ್ಭಿಃ ತಪಶ್ಚಕ್ಷುರ್ಭಿರೇವಚ ॥** ಸುಶ್ರುತ
ಶ. ಅ- ೬ ಶ್ಲೋಕ ೫೦ ॥

ಆಯುರ್ವೇದ ಶಾರೀರವು ಪ್ರತ್ಯಕ್ಷ ಜ್ಞಾನದಿಂದ ಬರೆದದ್ದಲ್ಲವೆಂಬುದು
ಸ್ತ್ರಕ್ರಿಯಾ ಪದ್ಧತಿಯು ಪ್ರಚರಿತವಿರದ ಈಗಿನ ಆಯುರ್ವೇದಾಭ್ಯಾಸ
ದಲೂ, ಶಸ್ತ್ರ ಕ್ರಿಯಾರಹಿತ ಪದ್ಧತಿಯಿಂದಲೂ, ಜನರಿಗೆ ತಪ್ಪು ತಿಳುವಳಿಕೆ
ಾಗಿದೆ. ಶರೀರ ಜ್ಞಾನವಾಗುವ ಕ್ರಮವನ್ನು ಸುಶ್ರುತ ವಾಕ್ಯವನ್ನೇ ಆಧಾ
ವಾಗಿಟ್ಟು ವಿವರಿಸಿರುತ್ತೇವೆ. ಇದರಿಂದ ಪ್ರತ್ಯಕ್ಷ ಜ್ಞಾನದಿಂದಲೇ ಹೇಳಿ
ವರೆಂದು ವಿವರಿಸುವ ಆಗತ್ಯವಿಲ್ಲ. ಇದಕ್ಕಾಗಿಯೇ, ಶಾಸ್ತ್ರಜ್ಞಾನವೂ
ತ್ಯಕ್ಷಜ್ಞಾನವೂ ಇವೆರಡೂ ಅವಶ್ಯವೆಂದು ಸುಶ್ರುತಾಚಾರ್ಯರ ಅಭಿ
ಾಯ ಶ್ಲೋಕವನ್ನು ಹೇಳಿರುತ್ತದೆ. (ಸುಶ್ರುತ॥ ಶಾರೀರ॥ ಅ೬ ಶ್ಲೋ೪೬)

**ಸೂಚನೆಯು:—** ಈ ರೀತಿ ವೈದ್ಯನು ಪ್ರತ್ಯಕ್ಷ ಕ್ರಿಯಾನ್ವಿತನಾಗಿ,
ರೀರ' ವಿಚ್ಛೇದನ ಮಾಡಿ, ಸಂಪೂರ್ಣ ಮಾಹಿತಿಯುಳ್ಳ, ಶಸ್ತ್ರ ಕ್ರಿಯಾದಿ
ರ್ಮ' ನಿಪುಣನೇ, ದೇಹದಲ್ಲಿಯ ಶಸ್ತ್ರ ಚಿಕಿತ್ಸೆಗೆ ಯೋಗ್ಯ ರೋಗಗಳಲ್ಲಿ,
ಯಾ ನಡೆಸಲು ಯೋಗ್ಯನಾಗುವನು ಶಸ್ತ್ರ ಕರ್ಮಗಳು ಕೈಕೂತು
ಳವಾಗಲು ಮಾಡಬೇಕಾದ ಕಾರ್ಯಕ್ರಮವನ್ನು ಸುಶ್ರುತದಲ್ಲಿ ಹೇಳಿ
ದ್ದರೆ. (ಸೂತ್ರಸ್ಥಾನ, ಅ ೯)



# (೧) ಪ್ರಕೃತಿ ವಿಜ್ಞಾನವು

**" ಅವ್ಯಕ್ತಾದಿ ಅಷ್ಟೌಪ್ರಕೃತಯಃ ॥ "**

(ಪ್ರಕೃತಿಯ ಸ್ವರೂಪ, ಅವ್ಯಕ್ತ ಮೊದಲಾದ ಎಂಟು ಪ್ರಕೃತಿಗಳು) ಪ್ರಕೃತಿಯೆಂದರೆ:- ವಿಕಾರಹೊಂದದೆ ತನ್ನ ಸ್ಥಿತಿಯಲ್ಲಿಯೇ ಇರುವದು ಯಾವದೋ ಅದು ಪ್ರಕೃತಿ. ಪ್ರಕೃತಿಯು, (ತನ್ಮಾತ್ರ) ಇರುವದರಿಂದಲೇ ಎಲ್ಲ ಇಂದ್ರಿಯಗಳು (ನೇತ್ರಾದಿಗಳು) ವಿಷಯಗಳನ್ನು ಗ್ರಹಿಸಿಯೂ ಆ ವಿಷಯಗಳಂತೆ ಆಗದೆ, ತಮ್ಮ ಸ್ಥಿತಿಯಲ್ಲಿಯೇ ಇರುತ್ತವೆ. ಉದಾ:— ವಾಯುವು ಗಂಧಯುಕ್ತ ವಸ್ತುವಿನ ಸ್ಪರ್ಶದಿಂದ ಗಂಧವುಳ್ಳದ್ದಾಗುತ್ತದೆ. ಇದರಂತೆ ವಾಸನೆಯನ್ನು ಗ್ರಹಿಸಿದ ನಂತರ ನಾಸಿಕವು (ಮೂಗು) ಗಂಧ ಸ್ಥಿತಿಯಲ್ಲಿಯೇ ಏಕೆ ಇರಬಾರದು? ಅಲ್ಲದೆ ಪೂರ್ವ ಸ್ಥಿತಿಗೆ ಬಾರದೇ ಇದ್ದರೆ ಗಂಧವುಳ್ಳದ್ದಾಗಿ ಎರಡನೇಯದನ್ನು ಗ್ರಹಿಸುವ ಶಕ್ತಿಯಿಲ್ಲದಂತೆ ಆಗಬಹು ದಲ್ಲವೆ? ಆದರೆ ಹಾಗಾಗುವದಿಲ್ಲ. ಇದಕ್ಕೆ ಕಾರಣವೇನು? ಗಂಧವನ್ನು ಸ್ವೀಕರಿಸಿ ಅದರಂತೆಯೇ ತಾನು ಆಗದೆ ಪ್ರಕೃತಿಯು ತನ್ನ ಸ್ಥಿತಿಯಲ್ಲಿಯೇ ಇರುತ್ತದಾದ್ದರಿಂದ ಅದಕ್ಕೆ ಪ್ರಕೃತಿಯೆಂಬ ಹೆಸರು ಬಂದಿರುತ್ತದೆ.

**ಪ್ರಕೃತಿಯು.**— ಪ್ರಕೃತಿಯು, ಸ್ಥಾವರಜಂಗಮಾತ್ಮಕವಾದ ಎಲ್ಲ ಜಗತ್ತಿನ ಉತ್ಪತ್ತಿಗೆ ಕಾರಣವಾಗಿಯೂ ತನಗೆ ಕಾರಣವಿಲ್ಲದೆಯೂ, ಸತ್ವ, ರಜ, ತಮೋ, ಲಕ್ಷಣವುಳ್ಳದ್ದಾಗಿಯೂ, ಎಂಟು ವಿಧವಾಗಿಯೂ ಇರುತ್ತದೆ. ಈ ಪ್ರಕೃತಿಯೇ ಎಲ್ಲ ವಿಶ್ವದ ಉತ್ಪತ್ತಿಗೆ ಕಾರಣವಾದ "ಅವ್ಯಕ್ತ"ವೆಂಬು ದಾಗಿ ಹೇಳಲ್ಪಡುತ್ತದೆ. ಅವ್ಯಕ್ತವೆಂದರೆ ದೃಷ್ಟಿಗೆ ಗೋಚರವಾಗದೆ ಅನು ಮಾನ ಗ್ರಾಹ್ಯವಾದದ್ದು. ಅದು ಒಂದೇ ಒಂದು ಇದ್ದು ಎಲ್ಲ ಕರ್ಮ ಪುರಷ ಜೀವಗಳ ಅಧಿಷ್ಠಾನವಾಗಿರುತ್ತದೆ ಹೇಗೆ ತಡಾಗ, ನದಿ, ಸರೋ ವರಗಳ ನೀರು, ಸಮುದ್ರವನ್ನು ಹೊಂದುತ್ತವೆಯೋ ಅವುಗಳಿಗೆ, ಸಮುದ್ರವು ಅಧಿಷ್ಠಾನವೋ; ಅದರಂತೆ ಸರ್ವ ಚರಾಚರಾತ್ಮಕ ವಿಶ್ವೋತ್ಪತ್ತಿಗೆ ಅವ್ಯಕ್ತ ಪ್ರಕೃತಿಯೇ ಅಧಿಷ್ಠಾನವಾಗಿದೆ ಅನಂತ ರೂಪಹೊಂದಿದ ವಿಶ್ವದಲ್ಲಿ ಲೀನ ವಾಗಿ ಅವ್ಯಕ್ತ ಪ್ರಕೃತಿಯು ತನ್ನ ಸ್ಥಿತಿಯಲ್ಲಿಯೇ ಇರುತ್ತದೆ.

(॥ಸುಶ್ರುತ॥ ಶಾರೀರ॥ ಅ ೧ ಸೂ ೩ ।) "ಸರ್ವಭೂತಾನಾಂ ಕಾರಣಮಕಾರಣಂ ಸತ್ವರಜಸ್ತಮೋಲಕ್ಷಣ ಮಷ್ಟರೂಪ ಮಖಿಲಸ್ಯಜಗತಃ ಸಂಭವಹೇತುರವ್ಯಕ್ತಂನಾಮ। ತದೇಕಂ ಬಹೂನಾಂಕ್ಷೇತ್ರಜ್ಞಾನಾಮಧಿಷ್ಠಾನಂ ಸಮುದ್ರಇವೌದಕಾನಾಂಭಾವಾನಾಂ ॥

ಯಾವತ್ತೂ ಸ್ಥಾವರ ಮತ್ತು ಜಂಗಮ ಜಗತ್ತನ್ನು ಪ್ರಕಟ ಮಾಡುವಂಥದು, ಮತ್ತೂ ಪ್ರಕಟಮಾಡದೆಯೂ ಇರುವಂಥದು ಯಾವದೋ ಅದು ಅವ್ಯಕ್ತವು. ಇದೇ ಅವ್ಯಕ್ತಕ್ಕೆ ಅಣುವಾದಿಗಳು ಅಣುವೆಂತಲೂ ಅನ್ನುತ್ತಾರೆ ಆ ಶಾಸ್ತ್ರಜ್ಞರು ಆಕಾರಣ ಅವ್ಯಕ್ತಕ್ಕೆ, ಪರಮಾಣುವೆಂತಲೂ ಅನ್ನುವರು.

"ಆತ್ಮಾಜ್ಯೋತಿಶ್ಚಿದಾನಂದರೂಪೋನಿತ್ಯಶ್ಚನಿಸ್ಪೃಹಃ ॥
ನಿರ್ಗುಣಃ ಪ್ರಕೃತೇರ್ಯೋಗಾತ್‌ಸಗುಣಃ ಕುರುತೇಜಗತ್ ॥

ಅರ್ಥ:— ಆತ್ಮನು ಸ್ವಯಂ ಪ್ರಕಾಶಿಯೂ, ಚಿದಾನಂದ ಸ್ವರೂಪನೂ, ನಿರಿಚ್ಛನೂ, ನಿರ್ಗುಣಿಯೂ ಇರುವನು. ಅವನು ತನ್ನ ಮಾಯೆಯ (ಜಗತ್ತಿಗೆ ಕಾರಣವಾದ ಪ್ರಕೃತಿ) ಯೋಗದಿಂದ ಇಚ್ಛಾಯುಕ್ತನಾಗಿ ಈ ಕಾರ್ಯರೂಪ (ದೃಶ್ಯ) ಜಗತ್ತನ್ನು ಹುಟ್ಟಿಸುತ್ತಾನೆ. ಆತ್ಮಾ ಪರಮಾತ್ಮಾ ಇವು ಈಶ್ವರನ ವಾಚಕ ಶಬ್ದಗಳು. ನಿರ್ಗುಣವೆಂದರೆ ಮೂಲ ಪ್ರಕೃತಿ (ಪರಮಾತ್ಮ) ಸಗುಣವೆಂದರೆ ಇಚ್ಛಾಯುಕ್ತನಾಗಿ ಜಗತ್ತನ್ನು ನಿರ್ಮಾಣ ಮಾಡುವವನು. ಈ ವಿಶ್ವದಲ್ಲಿ ಪರಮಾತ್ಮನೂ, ಪ್ರಾಣಿಗಳ ಶರೀರಗಳಲ್ಲಿ ಜೀವಾತ್ಮನೂ ತಾದಾತ್ಮ್ಯವಾಗಿ ಇರುತ್ತಾರೆ.

"ಸತ್ವಂರಜಸ್ತಮಶ್ಚೇತಿಗುಣಾಸ್ತೇಪ್ರಕೃತೇಃ ಸಮಾಃ ॥
ಸಾಜಡಾಪಿಜಗತ್ಕರ್ತ್ರೀಪರಮಾತ್ಮಚಿದನ್ವಯಾತ್ ॥
(ಬೃಹನ್ನಿಘಂಟು ಶಾ. ಅ ೫)

ಅರ್ಥ:— ಸತ್ವಗುಣ ರಜೋಗುಣ, ತಮೋಗುಣ, ಈ ಮೂರು ಗುಣಗಳು ಸೃಷ್ಟಿಯ ಉತ್ಪತ್ತಿಗೆ ಕಾರಣವಾದ ಪ್ರಕೃತಿಗೆ (ಕಾರಣ ಪ್ರಕೃತಿ)

ಹೊಂದಿಕೊಂಡಿರುತ್ತವೆ. ಈ ತ್ರಿಗುಣಾತ್ಮಕ ಅವ್ಯಕ್ತ ಪ್ರಕೃತಿಯು (ಮಾಯೆಯು) ಜಡವಾಗಿದ್ದರೂ ಪರಮಾತ್ಮ ರೂಪ ಚೈತನ್ಯದ (ಕ್ಷೇತ್ರಜ್ಞ) ಸಂಬಂಧದಿಂದ ಜಗತ್ತನ್ನು ಉತ್ಪನ್ನ ಮಾಡುತ್ತದೆ. ಮಾಯೆಯಲ್ಲಿಯ (ಕಾರಣ ಪ್ರಕೃತಿ ) ಸತ್ವಗುಣಲಕ್ಷಣ, ಜ್ಞಾನ, ಸ್ವರೂಪವಾಗಿಯೂ, ಪ್ರಕಾಶಕವಾಗಿಯೂ, ಸುಖಕ್ಕೆ (ಆತ್ಮ ಸುಖಕ್ಕೆ) ಕಾರಣೀ ಭೂತವಾಗಿಯೂ ಇರುತ್ತದೆ.

## ರಜೋಗುಣದ ಲಕ್ಷಣ :—

ರಜೋಗುಣವು ರಾಗಾತ್ಮಕವಾಗಿರುತ್ತದೆ ರಾಗವೆಂದರೆ "ಆಸಕ್ತಿಯಿಂದ ಕೂಡಿದ ಸ್ನೇಹವು" ರಾಗವು ದುಃಖಕ್ಕೆ ಕಾರಣವಾಗಿರುತ್ತದೆ.

## ತಮೋಗುಣ ಲಕ್ಷಣ:—

ಯಾವದರಿಂದ ಮನುಷ್ಯನು ಗ್ಲಾನಿಯನ್ನೂ, ಅಜ್ಞಾನವನ್ನೂ, ಹೊಂದುತ್ತಾನೆಯೋ ಯಾವದು ಬುದ್ಧಿಯನ್ನು ವ್ಯಾಪಿಸಿ ಭ್ರಮೆಯನ್ನುಂಟು ಮಾಡುತ್ತದೆಯೋ, ಅದಕ್ಕೆ ತಮೋಗುಣವೆಂಬ ಹೆಸರು.

## ಸುಶ್ರುತಾಚಾರ್ಯರ ಮತದಂತೆ ಎಂಟು ವಿಧ ಪ್ರಕೃತಿಗಳು:-

೧. ಅವ್ಯಕ್ತ ೨ ಮಹಾನ್ ೩ ಅಹಂಕಾರ ೪. ಶಬ್ದತನ್ಮಾತ್ರ ೫. ಸ್ಪರ್ಶತನ್ಮಾತ್ರ ೬. ರೂಪತನ್ಮಾತ್ರ ೭. ರಸತನ್ಮಾತ್ರ ೮. ಗಂಧತನ್ಮಾತ್ರ ಹೀಗೆ (೮) ಪ್ರಕೃತಿಗಳು.

ಇನ್ನು ಬೇರೆ ಬೇರೆ ಆಚಾರ್ಯರು ಧರ್ಮಜ್ಞಾನಾದಿ ಪ್ರಕೃತಿಯನ್ನು ಹೇಳುತ್ತಾರೆ. ೧. ಧರ್ಮ ೨. ಜ್ಞಾನ ೩ ವೈರಾಗ್ಯ ೪. ಐಶ್ವರ್ಯ ೫. ಅಧರ್ಮ ೬. ಅಜ್ಞಾನ ೭. ಅವೈರಾಗ್ಯ ೮. ಅನೈಶ್ವರ್ಯ ಹೀಗೆ ಎಂಟು ಪ್ರಕೃತಿಗಳೆಂದು ಹೇಳಿರುವರು

"ಚರಕಾಚಾರ್ಯರ ಮತ":— ೧. ಅವ್ಯಕ್ತ ೨. ಬುದ್ಧಿ ೩. ಅಹಂಕಾರ ೪. ಪೃಥಿವಿ ೫. ಜಲ ೬. ಅಗ್ನಿ ೭. ವಾಯು ೮. ಆಕಾಶ ಹೀಗೆ ಎಂಟು ಪ್ರಕೃತಿಗಳು ಇರುತ್ತವೆ

"ಅವ್ಯಕ್ತಂ ಮಹಾನ್ ಅಹಂಕಾರಃ ಪಂಚತನ್ಮಾತ್ರಾಣಿ.ಚೇತ್ಯ ಷ್ಟಾವಪ್ರಕೃತಯಃ॥" (ಸುಶ್ರುತ ಶಾರೀರ ಅ. ೧ ಸೂತ್ರ ೬ ॥.)

ಅವ್ಯಕ್ತ ಮಹಾನ್ಽಹಂಕಾರ ಪೃಥಿವ್ಯಾದಿತನ್ಮಾತ್ರಗಳು, ಹೀಗೆ ೮ ಪ್ರಕೃತಿಗಳು. "ಸರ್ವಭೂತಾನಾಂ ಕಾರಣಂ" ಎಂದು ಹೇಳಿರುವದರಿಂದ ಕಾರ್ಯರೂಪವಾದ ಭೂತಾತ್ಮಕ ಸರ್ವ ಜಗತ್ತಿಗೂ, ಕಾರಣರೂಪ (ಅವ್ಯಕ್ತ) ವಾದ ಪ್ರಕೃತಿಗೂ, ತಾದಾತ್ಮ್ಯ ಸಂಬಂಧ ಉಂಟೆಂದು ತಿಳಿಯಬೇಕು. ತಾದಾತ್ಮ್ಯವೆಂದರೆ ವಿಭಾಗ ಮಾಡಲಿಕ್ಕೆಬಾರದ್ದು, ಅತ್ಯಂತ ವಿಶೇಷ ಸಂಬಂಧವೆಂದೂ, ಒಂದನ್ನೊಂದು ಅಂಟಿಕೊಂಡಿರುವಂತಹದೆಂದೂ, ತಿಳಿಯ ಬೇಕು. ಉದಾಹರಣೆ ಕಲ್ಲಿನಿಂದ ಕೆತ್ತಿದ ಹಗೆಯು ಹಲಿಗೆ ರೂಪಹೊಂದಿ ದರೂ ಕಲ್ಲೇ ಇರುತ್ತದೆ. ಮತ್ತು ಹಲಿಗೆಗೆ ಕಾರಣವಾದ ಕಲ್ಲಿಗೂ, ಹಲಿಗೆ ಸ್ವರೂಪ ಕಾರ್ಯಕ್ಕೂ, ಇರುವ ಅತ್ಯಂತ ಅವ್ಯವಚ್ಛೇದಕ ಸಂಬಂಧಕ್ಕೆ, ತಾದಾತ್ಮ್ಯ ಸಂಬಂಧವೆಂಬ ಹೆಸರು ಈ ಉದಾಹರಣೆಯಿಂದ ಕಾರಣ ರೂಪ ಅವ್ಯಕ್ತಕ್ಕೂ, ಕಾರ್ಯ ರೂಪ ಜಗತ್ತಿಗೂ, ಇರುವ ಸಂಬಂಧವನ್ನು ತಿಳಿಯಬೇಕು (॥ಸುಶ್ರುತ॥ ಶಾ। ಅ ೧ ಸೂ ೩).

"ತದೇಕಂಬಹೂನಾಂ ಕ್ಷೇತ್ರಜ್ಞಾನಾಮಧಿಷ್ಠಾನಂ ಸಮುದ್ರ ಇವೌದಕಾನಾಂಭಾವಾನಾಂ॥"

ಅವ್ಯಕ್ತವು (ಪ್ರಕೃತಿಯು) ಅವಿವೇಚ್ಯಾವಯುವವುಳ್ಳದ್ದಾಗಿ ಯಾವತ್ತೂ ಕರ್ಮ ಜೀವಗಳಿಗೆ, ಆಶ್ರಯವಾದದ್ದಿರುತ್ತದೆ ಸಮುದ್ರವು ನದಿ ಸರೋವರಾದಿ ಯಾವತ್ತೂ ನೀರಿಗೆ ಹೇಗೆ ಆಶ್ರಯ ಸ್ಥಾನವೋ, ಅಥವಾ, ಸಕಲ ಜಲಚರ ಪ್ರಾಣಿಗಳಿಗೆ ಹೇಗೆ ಆಶ್ರಯ ಸ್ಥಾನವೋ, ಅದ ರಂತೆಯೇ ಸಕಲ ಚರಾಚರ ವಿಶ್ವಕ್ಕೆ (ಶರೀರ ಭಾವದಿಂದ) ಶರೀರ ರೂಪ ವಾದ ಸ್ಥಾನವನ್ನು ಹೊಂದಿಸಲು, ಕಾರಣವಾಗಿರುವದು. ಈ ಅವ್ಯಕ್ತ

ಯೋಗದಿಂದ ದೇಹವನ್ನು ಹೊಂದುವ ಜೀವಾತ್ಮಕ್ಕೇ (ಜೀವಕ್ಕೆ) ಪುರುಷ ಕ್ಷೇತ್ರಜ್ಞ,ಎಂದು ಅನ್ನುತ್ತಾರೆ.

ಇನ್ನೂ ಕೆಲವು ವೈದ್ಯಾಚಾರ್ಯರು ಸ್ವಭಾವಾದಿಗಳನ್ನು ಪ್ರಕೃತಿ ಯೆಂದು ಅನ್ನುತ್ತಾರೆ:-

**"ಸ್ವಭಾವಮೀಶ್ವರಂಕಾಲಂಯದೃಚ್ಛಾಂ ನಿಯತಿಂತಥಾ ||**
**ಪರಿಣಾಮಂಚಮನ್ಯಂತೇಪ್ರಕೃತಿಂ ಪೃಥುದರ್ಶಿನಃ ||"**
(ಸುಶ್ರುತ ಶಾರೀರ ಅ. ೧ ಶ್ಲೋ. ೧೧.)

ಎಲ್ಲದಕ್ಕೂ ಸ್ವಭಾವವೇ ಮೂಲ ಕಾರಣವೆಂದು ಹೇಳುತ್ತಾರೆ. ಸ್ವಭಾವವೆಂದರೆ ನಿಸರ್ಗವು; ಯಾವದೇ ಒಂದು ಕಾರಣದಿಂದ ಬಂದಿರುವ ಸ್ಥಿತಿಯಲ್ಲ. ಎಲ್ಲವುಗಳನಿರ್ಮಾಣವು ಸ್ವಾಭಾವಿಕವಾಗಿಯೇ ಉಂಟಾಗುತ್ತವೆ ಆದ್ದರಿಂದ ಸ್ವಭಾವವನ್ನು ಪ್ರಕೃತಿಯೆಂದು ಹೇಳಿದ್ದಾರೆ. ಮುಳ್ಳಿನಲ್ಲಿ ತೀಕ್ಷ್ಣತೆಯೂ. ಮೃಗಗಳಲ್ಲಿ ಚಿತ್ರವಿಚಿತ್ರ ಬಣ್ಣವುಳ್ಳ ಚರ್ಮ, ಮತ್ತು ಪಕ್ಷಿ ಗಳಲ್ಲಿ ಗರಿ, ಮೆಣಸಿನಲ್ಲಿ ಖಾರ, ಕಬ್ಬಿನಲ್ಲಿ ಸಿಹಿ ಇವು ಸ್ವಭಾವತಃ ಇರುವವು ಗಳಾದ್ದರಿಂದಲೂ, ಯಾವದೇ ಅನ್ಯ ಕಾರಣಗಳಿಂದುಂಟಾದ್ದಲ್ಲವಾದ್ದ ರಿಂದಲೂ, ಇವುಗಳಿಗೆ ಸ್ವಭಾವವೇ (ನಿಸರ್ಗ ಸ್ಥಿತಿಯೇ) ಕಾರಣವೆಂದು ಸಿದ್ಧ ವಾಗುತ್ತದೆ. ಹೀಗಿರುವದರಿಂದ ಸ್ವಭಾವವೂ ಪ್ರಕೃತಿಯು.

**ಸ್ವಭಾವಾದಿ ಪ್ರ ಕೃತಿಗಳು:—** ೧. ಸ್ವಭಾವ ೨ ಈಶ್ವರ ೩ ಕಾಲ ೪. ಯದೃಚ್ಛಾ ೫. ನಿಯತಿ ೬. ಪರಿಣಾಮ ಎಂದು ಹೇಳಿದ್ದಾರೆ ಈಗ ಹೇಳಿದ ಸ್ವಭಾವಾದಿ ಪ್ರಕೃತಿಗಳನ್ನು ಹಿಂದೆ ಹೇಳಿದ ಅವ್ಯಕ್ತಾದಿಗಳಲ್ಲಿಯೂ, ಮತ್ತು ತ್ರಿಗುಣಗಳಲ್ಲಿಯೂ, ಅಂತರ್ಭಾವ ಮಾಡದೇ ಪ್ರಕೃತಿಗಳು ಬಹಳ ಇರುವ ವೆಂದು ಹೇಳುವರು. ಪೃಥುದರ್ಶಿಗಳು ಸ್ವಭಾವಾದಿಗಳನ್ನು ಪ್ರಕೃತಿಯೆಂದು ಹೇಳುವರು. ಇದನ್ನು ಸುಶ್ರುತಾಚಾರ್ಯರೂ ಕೂಡಾ ಅನ್ಯ ಮತವಾದಿಗಳ ಹೇಳಿಕೆಯೆಂದು ಉದಾಹರಿಸಿ ಸ್ವೀಕರಿಸಿದ್ದಾರೆ.

**(೧) ಸ್ವಭಾವ ಉದಾ:—** (ಸ್ವಭಾವ ಪ್ರಕೃತಿ ಎನ್ನುವವರ ಮತ)

ಕಃಕಂಟಕಾನಾಂಪ್ರಕರೋತಿತೈಕ್ಷ್ಣ್ಯಂ ಚಿತ್ರಂವಿಚಿತ್ರಂ
ಮೃಗಪಕ್ಷಿಣಾಂಚ ॥

ಮಾಧುರ್ಯಮಿಕ್ಷೌಕಟುತಾಂಮರೀಚೇಸ್ವಭಾವತಃ
ಸರ್ವಮಿದಂಪ್ರವೃತ್ತಂ ॥

ಇವುಗಳೆಲ್ಲದರ ವೈವಿಧ್ಯಪೂರ್ಣವಾದ ಉತ್ಪತ್ತಿಯು ಸ್ವಭಾವತಃ ಇರುವದರಿಂದ ಸ್ವಭಾವವೂ ಪ್ರಕೃತಿಯೆಂದು "ಸ್ವಾಭಾವಿಕ ಪ್ರಕೃತಿ" ವಾದಿಗಳು ಅನ್ನುತ್ತಾರೆ.

(೨) ಈಶ್ವರನು ಪ್ರಕೃತಿಯೆನ್ನುವವರ ಮತ.

"ಅಜ್ಞೋಜಂತುರನೀಶೋಽಯಮಾತ್ಮನಃಸುಖದುಃಖಯೋಃ॥
ಈಶ್ವರಪ್ರೇರಿತೋಗಚ್ಛೇತ್‌ಸ್ವರ್ಗಂ ನರಕಮೇವಚ॥

ಈ ಭೂಮಿ ಪರ್ವತ ಕಂದರಗಳನ್ನು ಹುಟ್ಟಿಸಲಿಕ್ಕೂ, ಜಂತುಗಳಿಗೆ ಸುಖದುಃಖ ಸ್ವರ್ಗ ನರಕಗಳನ್ನು ಕೊಡತಕ್ಕವನು ಈಶ್ವರನು. ಆದ್ದರಿಂದ ಈಶ್ವರ ಪ್ರಕೃತಿವಾದಿಗಳು, ಈಶ್ವರನೇ ಇವೆಲ್ಲಕ್ಕೂ ಕಾರಣ (ಪ್ರಕೃತಿ)ವೆಂದು ಹೇಳುತ್ತಾರೆ.

**ಶ್ಲೋಕಾರ್ಥ:—** ಅಜ್ಞಾನಿ ಜನರು ತಮ್ಮ ಸುಖ ದುಃಖಗಳಲ್ಲಿ ಸ್ವತಂತ್ರರಿರುವದಿಲ್ಲ. ಯಾಕಂದರೆ, ಸುಖವನ್ನು ಬೇಕೆಂದು ಪಡೆಯಲಿಕ್ಕೂ ದುಃಖವನ್ನು ಬೇಡವೆಂದು ಹೋಗಲಾಡಿಸಲಿಕ್ಕೂ ಸಮರ್ಥರಲ್ಲ. ಆದ್ದರಿಂದ ಈಶ್ವರ ಪ್ರೇರಣೆಯಂತೆ ಸ್ವರ್ಗಕ್ಕಾಗಲೀ ನರಕಕ್ಕಾಗಲೀ ಹೋಗುತ್ತಾರೆ ಹೀಗಿರುವದರಿಂದ "ಈಶ್ವರನೇ ಪ್ರಕೃತಿಯು" ಎಂದು ಈಶ್ವರ ಪ್ರಕೃತಿವಾದಿಗಳು ಅನ್ನುತ್ತಾರೆ. ಈಶ್ವರ ಜ್ಞಾನದಿಂದ ಸುಖ ಮತ್ತು ಸ್ವರ್ಗ ಲಭಿಸುತ್ತವೆ. ಈಶ್ವರ ಜ್ಞಾನವಿಲ್ಲದಿರುವದರಿಂದ ಅಥವಾ ನಿರೀಶ್ವರವಾದದಿಂದ (ನಾಸ್ತಿಕ) ನರಕ ಮತ್ತು ದುಃಖಗಳನ್ನು ಹೊಂದುವದರಿಂದ ಈಶ್ವರನೇ ಪ್ರಕೃತಿಯು.

## (೩) ಕಾಲವು ಪ್ರಕೃತಿಯೆಂಬ ಜ್ಯೋತಿಃಶಾಸ್ತ್ರ ಮತವು.

ಜಗತ್ತಿನ ಉತ್ಪತ್ತಿ ಸ್ಥಿತಿ ನಾಶಕ್ಕೆ ಕಾಲವೇ ಕಾರಣವೆಂದು 'ಕಾಲಕಾರಣಿಕರ' (ಜ್ಯೋತಿಷ್ಕರ) ಮತವು. ಆದ್ದರಿಂದ ಕಾಲವೂ ಪ್ರಕೃತಿಯೆಂದು ಅನ್ನುವರು.

**ಶ್ಲೋ॥ ಪ್ರಭವನಿರತಿ ಮಧ್ಯಜ್ಞಾನವಂಧ್ಯಾನಿತಾಂತಂ ವಿದಿತ ಪರಮತತ್ವಾ ಯತ್ರತೇ ಯೋಗಿನೋಪಿ ॥ ತಮುಹಮಿಹ ನಿಮಿತ್ತಂ ವಿಶ್ವಜನ್ಮಾತ್ಯಯಾನಾಂಅನುಮಿತಮಭಿವಂದೇಭ ಗ್ರಹೈಃ ಕಾಲಮೀಶಂ ॥**

ಕಾಲರೂಪಿ ಪ್ರಕೃತಿಯಲ್ಲಿ ಪರಮಾರ್ಥ ಜ್ಞಾನಿಗಳಾದ ಯೋಗಿಗಳೂ ಸಹ, ಉತ್ಪತ್ತಿ ಸ್ಥಿತಿ ಲಯಗಳಿಂದ ಕಾಲನುಸ್ವತಂತ್ರನೆಂದು ಹೇಳುತ್ತಾರೆ. ಅದರಂತೆ ವಿಶ್ವದ ಉತ್ಪತ್ತಿ-ರಕ್ಷಣ ನಾಶ ಇವು ಕಾಲವನ್ನನುಸರಿಸಿ ಇರುತ್ತವೆ. ಸರ್ವಕ್ಕೂ ಅಶ್ವಿನ್ಯಾದಿ ನಕ್ಷತ್ರಗಳು ಸೂರ್ಯಾದಿ ಗ್ರಹಗಳಿಂದ ಕೂಡಿದ ಈ ಕಾಲವೇ, ಕಾರಣವೆಂದು ತಿಳಿಯಲಾಗುತ್ತದೆ. ಆದ್ದರಿಂದ ಕಾಲವು "ಪ್ರಕೃತಿ" ಇರುತ್ತದೆ.

## (೪) ಯದೃಚ್ಛಾ ಪ್ರಕೃತಿವಾದಿಗಳ ಮತವು

**"ಯೋಯತೊಭವತಿ ತತ್ರನಿಮಿತ್ತಮಿತಿ" ಯಾದೃಚ್ಛಿಕಾಃ ॥**

ಯಾವದು ಯಾವದರಿಂದ ಉತ್ಪನ್ನವಾಗುತ್ತದೆಯೋ ಅವು, ಅದಕ್ಕೆ ಉತ್ಪನ್ನವಾದ ವಸ್ತುವಿಗೆ ಕಾರಣವಾಗುತ್ತದೆ.

ಉದಾ:— "ತೃಣಾರಣಿನಿಮಿತ್ತೋವಹ್ನಿರಿತಿ" ಹುಲ್ಲು-ಅರಣಿ (ಅಗ್ನಿಯನ್ನುತ್ಪನ್ನ ಮಾಡುವ ಮಂಥನಕೊರಡು) ಘರ್ಷಣದಿಂದ ಉತ್ಪನ್ನವಾದ ಅಗ್ನಿಯು ತೃಣವನ್ನಾಶ್ರಯಿಸಿ ಸ್ಥಿರವಾಗಿ ನಿಲ್ಲುತ್ತದೆ. ಆದ್ದರಿಂದ ಹುಲ್ಲು ಅರಣಿಗಳೆರಡೂ ಅಗ್ನಿಗೆ ಕಾರಣಗಳಾದವು. ಯಾಕಂದರೆ ಕಟ್ಟಿಗೆಯಲ್ಲಿ ಯಾವಾಗಲೂ ಅಗ್ನಿಯಿರುತ್ತದೆ. ಆದರೆ ಕಟ್ಟಿಗೆಯನ್ನು ದಹಿಸುವದಿಲ್ಲ. ಮತ್ತೂ ಗೋಚರವಾಗುವದೂ ಇಲ್ಲ. ಆದರೆ ಘರ್ಷಣ ನಿಮಿತ್ತವಾಗಿ

ಯದೃಚ್ಛೆಯಿಂದ ಉತ್ಪನ್ನವಾಗಿ ಹುಲ್ಲನ್ನು ಆಶ್ರಯಿಸುವದು. ಅಡವಿಯಲ್ಲಿ ಮರಗಳ ಟೊಂಗೆಗಳ ಘರ್ಷಣದಿಂದ ಬೆಂಕಿಯುತ್ಪನ್ನವಾಗುವದು ಸಹ ಯದೃಚ್ಛೆಯು.

**(೫) ನಿಯತಿ ಪ್ರಕೃತಿವಾದಿಗಳ ಮತವು:—**

**ಪೂರ್ವಜನ್ಮಾರ್ಜಿತ ಧರ್ಮಾಧರ್ಮೌನಿಯತಿಃ ||**

ಪೂರ್ವ ಜನ್ಮದಲ್ಲಿಯು, ಧರ್ಮ ಮತ್ತು ಅಧರ್ಮ ಇವು "ನಿಯತಿ" ಯೆಂದು ಹೇಳಲ್ಪಡುತ್ತವೆ. ಯಾಕಂದರೆ ಪೂರ್ವ ಜನ್ಮದಲ್ಲಿಯ ಕರ್ಮ ಸಂಸ್ಕಾರವುಳ್ಳ ಜೀವವು, ಈಗಿನ ಜನ್ಮದಲ್ಲಿ ತನ್ನ ಕರ್ಮಕ್ಕನುಗುಣವಾಗಿ ದೇಹವನ್ನು ಪಡೆಯುತ್ತದಾದ್ದರಿಂದ "ನಿಯತಿ"ಯೆಂದು ಹೇಳುತ್ತಾರೆ.

**(೬) ಪರಿಣಾಮ ಪ್ರಕೃತಿವಾದಿಗಳ ಮತವು:—** ಅವ್ಯಕ್ತದಿಂದ ಪರಿಣತಿ ಹೊಂದಿದ (ಉತ್ಪನ್ನವಾದ) ಮಹಾನ್ ಮತ್ತು ಅಹಂಕಾರಗಳು ಪ್ರಧಾನವಾಗಿ ದೃಶ್ಯ ಜಗತ್ತಿಗೆ (ಉತ್ಪತ್ತಿಗೆ) ಕಾರಣವಾದ್ದರಿಂದ ಮಹದಾದಿ ಪರಿಣತಗಳು ಪ್ರಕೃತಿ ಇರುತ್ತವೆ.

**"ಪ್ರಧಾನಮೇವಮಹದಂಹಕಾರಾದಿರೂಪತಯಾಪರಿಣತಂ ಸರ್ವಸ್ಯನಿಮಿತ್ತಮಿತಿ ಪರಿಣಾಮವಾದಿನಃ"**

ಮುಖ್ಯವಾಗಿ ಮಹದಹಂಕಾರ ರೂಪಹೊಂದಿದವುಗಳಿಂದಲೇ ಜಗತ್ತು ಹುಟ್ಟುವದರಿಂದಲೂ, ಆ ಮಹತ್ ಅಹಂಕಾರಗಳು ಪರಿಣತ ಹೊಂದಿದವುಗಳಾದ್ದರಿಂದ, ಎಲ್ಲ ವಿಶ್ವೋತ್ಪತ್ತಿಗೆ ಪರಿಣಾಮವೇ ಕಾರಣವೆಂದು "ಪರಿಣಾಮ ಪ್ರಕೃತಿ" ವಾದಿಗಳ ಮತವು. ಸುಶ್ರುತಾಚಾರ್ಯರು ಸ್ವಭಾವಾದಿ ಪ್ರಕೃತಿವಾದಿಗಳ ಮತವನ್ನೂ ಸಂಗ್ರಹಿಸಿ ಹೇಳಿದ್ದಾರೆ. ಮತ್ತು ಸುಶ್ರುತ ಗ್ರಂಥದಲ್ಲಿ ಅಲ್ಲಲ್ಲಿ ಉದಹರಿಸಿದ್ದಾರೆ. (||ಸುಶ್ರುತ|| ಶಾರೀರ|| ಅ ೩ ||) "ಅಂಗಪ್ರತ್ಯಂಗ ನಿರ್ವೃತ್ತಿಃ ಸ್ವಭಾವಾದೇವಜಾಯತೇ"|| ಶರೀರದ ಅಂಗ ಪ್ರತ್ಯಂಗಗಳ ಉತ್ಪತ್ತಿಯು ಸ್ವಾಭಾವಿಕವಾಗಿಯೇ ಆಗುತ್ತದೆಂದು ಹೇಳಿದ್ದಾರೆ ಇದರಿಂದ ಅನ್ಯ ಮತವನ್ನೂ ಸಹ ಗ್ರಹಿಸಿದ್ದಾರೆಂದು ಸಿದ್ಧವಾಗುತ್ತದೆ.

**ಚರಕಾಚಾರ್ಯರ ಮತದಂತೆ ಪ್ರಕೃತಿಗಳು:— (ಚರಕ॥ ಶಾರೀರ॥ ಅ ೧ ಶ್ಲೋ ೬೩ ॥).**

**ಖಾದೀನಿಬುದ್ಧಿರವ್ಯಕ್ತಮಹಂಕಾರಸ್ತಥಾಷ್ಟಮಃ ॥**
**ಭೂತಪ್ರಕೃತಿರುದ್ದಿಷ್ಟಾವಿಕಾರಾಶ್ಚೈವಷೋಡಶ" ॥**

ಆಕಾಶಾದಿ ಪಂಚಮಹಾಭೂತಗಳು, ಬುದ್ಧಿ, ಅವ್ಯಕ್ತ, ಅಹಂಕಾರ ಇವು ಎಂಟು ಪ್ರಕೃತಿಗಳು. ಷೋಡಶ (೧೬) ವಿಕಾರ (ವಿಕೃತಿ) ಗಳೆಂದು ಚರಕಾಚಾರ್ಯರ ಮತವು. ಪ್ರಕೃತಿಗಳು:— ೧ ಆಕಾಶ ೨ ವಾಯು ೩ ತೇಜಸ್ಸು ೪ ಜಲ ೫ ಪೃಥಿವೀ ೬ ಅವ್ಯಕ್ತ ೭ ಬುದ್ಧಿ ೮ ಅಹಂಕಾರ ಹೀಗೆ ಚರಕಾಚಾರ್ಯರು ಹೇಳಿದ ಪ್ರಕೃತಿಗಳು.

**ಪ್ರಕೃತಿ ವಿಷಯದಲ್ಲಿ ಚರಕ-ಸುಶ್ರುತರ ಮತ ಭೇದಗಳು:-** ಸುಶ್ರುತ-ಚರಕಾಚಾರ್ಯರಲ್ಲಿ, ಅವ್ಯಕ್ತ, ಅಹಂಕಾರ ಇವೆರಡು ವಿಷಯ ಗಳಲ್ಲಿ ಮತಭೇದವಿಲ್ಲ ಸುಶ್ರುತಾಚಾರ್ಯರು:- ॥ಪಂಚತನ್ಮಾತ್ರಗಳನ್ನೂ, ಚರಕಾಚಾರ್ಯರು॥ ಪಂಚಭೂತಗಳನ್ನೂ ಹೇಳಿರುವರು. ಸುಶ್ರುತ:— ೧. ಅವ್ಯಕ್ತ ೨ ಮಹಾನ್, ಚರಕ:- ಅವ್ಯಕ್ತ ಬುದ್ಧಿ ಎಂದು ಹೇಳಿದ್ದಾರೆ

**ಭೂತಾದಿಗಳ (ಪೃಥಿವ್ಯಾದಿ) ಉತ್ಪತ್ತಿ ಕ್ರಮವು:— (ಚ। ಶಾ। ಅ ೧ ಶ್ಲೋ ೬೬ ॥.)**

**ಜಾಯತೇಬುದ್ಧಿರವ್ಯಕ್ತಾತ್ ಬುಧ್ಯಾಹಮಿತಿಮನ್ಯತೇ ॥**
**ಪರಂಖಾದೀನ್ಯಹಂಕಾರಾದುತ್ಪದ್ಯಂತೇಯಥಾಕ್ರಮಂ ॥೬೬॥**

ಅವ್ಯಕ್ತದಿಂದ ಬುದ್ಧಿಯುತ್ಪನ್ನವಾಗುತ್ತದೆ. ಆ ಬುದ್ಧಿಯಿಂದ ನಾನು ಎಂಬುದನ್ನು ತಿಳಿಯುತ್ತಾನೆ. (ಅರ್ಥಾತ್ ಉಳಿದವುಗಳಿಂದ ಭಿನ್ನವಾಗುವದು) ಇದಕ್ಕೇ ಅಹಂಕಾರವೆಂಬ ಹೆಸರು. ನಂತರ ಅಹಂಕಾರದಿಂದ ಆಕಾಶಾದಿ ಪಂಚಮಹಾಭೂತಗಳು ಕ್ರಮವಾಗಿ ಉತ್ಪನ್ನವಾಗುತ್ತವೆ. "ಯಥಾಕ್ರಮಂ" ಎನ್ನುವದರಿಂದ ಪೂರ್ಣ ಉತ್ಪತ್ತಿ ಕ್ರಮವು ಧ್ವನಿತ ವಾಗುವದು.

# ಅವ್ಯಕ್ತದಿಂದ ಮಹದಾದಿ ಕ್ರಮ

**ತಸ್ಮಾದವ್ಯಕ್ತಾತ್‌ಮಹಾನುತ್ಪದ್ಯತೇತಲ್ಲಿಂಗಏವ। ತಲ್ಲಿಂಗಾಚ್ಚ ಮಹತಃ ತಲ್ಲಕ್ಷಣಏವ ಅಹಂಕಾರಉತ್ಪದ್ಯತೆ। ಸತ್ರಿವಿಧೋವೈಕಾರಿಕಃ ತೈಜಸೋಭೂತಾದಿರಿತಿ। ತತ್ರವೈಕಾರಿಕಾದಹಂಕಾರಾತ್ತೈಜಸಸಹಾಯಾತ್ತಲ್ಲಕ್ಷಣಾನ್ಯೇವೈಕಾದಶೇಂದ್ರಿಯಾಣ್ಯುತ್ಪದ್ಯಂತೆ। ತದ್ಯಥಾ:- ಶ್ರೋತ್ರ ತ್ವಕ್ ಚಕ್ಷುರ್ಜಿಹ್ವಾ ಘ್ರಾಣ ವಾಗ್ ಹಸ್ತೋಪಸ್ಥ ಪಾಯು ಪಾದ ಮನಾಂಸೀತಿ, ತತ್ರಪೂರ್ವಾಣಿ ಪಂಚಬುದ್ಧೀಂದ್ರಿಯಾಣಿ, ಇತರಾಣಿ ಪಂಚಕರ್ಮೇಂದ್ರಿಯಾಣಿ, ಉಭಯಾತ್ಮಕಂ ಮನಃ, ಭೂತಾದೇರಪಿತೈಜಸಸಹಾಯಾತ್ತಲ್ಲಕ್ಷಣಾನ್ಯೇವಪಂಚ ತನ್ಮಾತ್ರಾಣ್ಯುತ್ಪದ್ಯಂತೆ ಶಬ್ದತನ್ಮಾತ್ರಂ, ಸ್ಪರ್ಶತನ್ಮಾತ್ರಂ, ರೂಪತನ್ಮಾತ್ರಂ, ರಸತನ್ಮಾತ್ರಂ, ಗಂಧತನ್ಮಾತ್ರಮಿತಿ, ತೇಷಾಂ ವಿಶೇಷಾ:- ಶಬ್ದ, ಸ್ಪರ್ಶ, ರೂಪ, ರಸ, ಗಂಧಾಃ, ತೇಭ್ಯೋ ಭೂತಾನಿ ವ್ಯೋಮಾನಿಲಾನಲ ಜಲೋರ್ವ್ಯಃ, ಏವಮೇಷಾ ತತ್ವಚತುರ್ವಿಂಶತಿರ್ವ್ಯಾಖ್ಯಾತಾ ॥** (ಸು॥ ಶಾ॥ ಅ ೧ ಸೂ ೪)

ಈ ಪೂರ್ವೋಕ್ತ ಲಕ್ಷಣಗಳಿಂದ ಕೂಡಿದ "ಅವ್ಯಕ್ತದಿಂದ" ಆ ಅವ್ಯಕ್ತದ ಲಕ್ಷಣವುಳ್ಳ "ಮಹಾನ್" ಉತ್ಪನ್ನವಾಗುತ್ತದೆ. ಉತ್ಪನ್ನವಾದ ಮಹತ್‌ದಿಂದ ಅದೇ ಲಕ್ಷಣಯುಕ್ತವಾದ "ಅಹಂಕಾರವು" ಉತ್ಪನ್ನವಾಗುವದು. ಆ ಅಹಂಕಾರವು ಮೂರು ವಿಧವಾದದ್ದಿರುತ್ತದೆ. **೧. ವೈಕಾರಿಕಃ** (ಸಾತ್ವಿಕಃ) **೨ ತೈಜಸಃ** (ರಾಜಸಃ) **೩. ಭೂತಾದಿಃ** (ತಾಮಸಃ) ಇದಕ್ಕೆ ಸಾತ್ವಿಕ, ರಾಜಸ, ತಾಮಸಗಳೆಂದು ಮೂರು ಬೇರೆ ಹೆಸರುಗಳು ಇರುತ್ತವೆ. ಸತ್ವಗುಣವುಳ್ಳ ಅಹಂಕಾರದಿಂದ ರಾಜಸಗುಣ ಸಹಾಯವಾಗಿ, ಅಹಂಕಾರ ಲಕ್ಷಣಗಳುಳ್ಳ ಹನ್ನೊಂದು (೧೧) ಇಂದ್ರಿಯಗಳು ಉತ್ಪನ್ನವಾಗುತ್ತವೆ. **ಕಿವಿ, ಚರ್ಮ, ಕಣ್ಣು, ನಾಲಿಗೆ, ಮೂಗು, ವಾಕ್, ಕೈ, ಜನನೇಂದ್ರಿಯ, ಗುದ, ಕಾಲು, ಮನಸ್ಸು** ಹೀಗೆ ಹನ್ನೊಂದು ಇಂದ್ರಿ

ಯಗಳು ಅಹಂಕಾರದಿಂದ ಹುಟ್ಟುತ್ತವೆ ಈ ಹನ್ನೊಂದು ಇಂದ್ರಿಯಗಳಲ್ಲಿ ಮೊದಲಿನದು, ಐದು **ಜ್ಞಾನೇಂದ್ರಿಯಗಳು.** ಉಳಿದ ಐದು, **ಕರ್ಮೇಂದ್ರಿಯಗಳು.** ಜ್ಞಾನೇಂದ್ರಿಯ ಕರ್ಮೇಂದ್ರಿಯಗಳೆರಡರಲ್ಲಿಯೂ ಇರತಕ್ಕ 'ಮನಸ್ಸು"ಒಂದು ಹೀಗೆ ವಿಭಾಗಶಃ ಹನ್ನೊಂದು ಇಂದ್ರಿಯಗಳು ಇರುತ್ತವೆ.

ಸತ್ವರಜತಮೋ ಗುಣಗಳಿಂದ ಯಥಾ ಯೋಗ್ಯ ಹೊಂದಿಕೊಂಡು ಉತ್ಪನ್ನವಾದ ವಸ್ತುವಿಗೆ ಕಾರಣವಾದ, ಅಹಂಕಾರದಿಂದ ಪಂಚತನ್ಮಾತ್ರಗಳು ಹುಟ್ಟುತ್ತವೆ. **ಶಬ್ದತನ್ಮಾತ್ರ, ಸ್ಪರ್ಶತನ್ಮಾತ್ರ, ರೂಪತನ್ಮಾತ್ರ ರಸತನ್ಮಾತ್ರ, ಗಂಧತನ್ಮಾತ್ರ**ಗಳೆಂಬ ಐದು ತನ್ಮಾತ್ರಗಳು. ತನ್ಮಾತ್ರವೆಂದರೆ "ಅಷ್ಟೇ" ಎಂಬರ್ಥ. ಶಬ್ದತನ್ಮಾತ್ರವೆಂದರೆ ಶಬ್ದವನ್ನು ಮಾತ್ರ ಗ್ರಹಣ ಮಾಡುವದು ಹೀಗೆಂಬರ್ಥ. ಈ ತನ್ಮಾತ್ರಗಳು ಇರುವದರಿಂದಲೇ ಆಯಾ ಇಂದ್ರಿಯಗಳು ತಮ್ಮ ನಿಯತವಾದ ವಿಷಯಗಳನ್ನಷ್ಟೇ ಗ್ರಹಿಸುತ್ತವೆಯಲ್ಲದೆ ಬೇರೆಯವನ್ನು ಗ್ರಹಿಸುವದಿಲ್ಲ. ಉದಾ:- ಗಂಧತನ್ಮಾತ್ರವುಳ್ಳ ಮೂಗು ವಾಸನೆಯನ್ನು ಮಾತ್ರ ತೆಗೆದುಕೊಳ್ಳುತ್ತದೆಯೇ ಹೊರತು, ರೂಪವನ್ನೂ ರಸವನ್ನೂ ಗ್ರಹಿಸಲಾರದು. ಹೀಗಿರುವದರಿಂದಲೇ ಅನಿಯತ ಗ್ರಹಣದಿಂದ ತನ್ಮಾತ್ರಗಳು ಇವೆಯೆಂದು ಸಿದ್ಧವಾಗುತ್ತದೆ

**ತನ್ಮಾತ್ರಗಳಿಗೆ ಗ್ರಹಣ ವಿಷಯಗಳು** ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳು ಇರುತ್ತವೆ ತನ್ಮಾತ್ರಗಳು ಶಬ್ದಾದಿ ವಿಷಯಗಳನ್ನು ಗ್ರಹಿಸುತ್ತವೆ ಆದ್ದರಿಂದ, ಶಬ್ದಾದಿಗಳು ವಿಷಯಗಳು.

ಈ ಶಬ್ದಾದಿ ತನ್ಮಾತ್ರಗಳಿಂದ, ಅಥವಾ ಶಬ್ದಾದಿಗಳಿಂದ ಆಕಾಶಾದಿ ಪಂಚಭೂತಗಳು ಹುಟ್ಟಿದವು ಹೀಗೆ ಚತುರ್ವಿಂಶತಿ ತತ್ವಗಳು ಇರುತ್ತವೆ. ಇಲ್ಲಿ ಪತಂಜಲಿ ಮಹರ್ಷಿಯ ಮತದಂತೆ ಶಬ್ದಾದಿಗಳಿಂದ ಪಂಚಮಹಾಭೂತಗಳ ಉತ್ಪತ್ತಿಯನ್ನೂ, ಸುಶ್ರುತಾಚಾರ್ಯರ ಮತದಂತೆ ಶಬ್ದತನ್ಮಾತ್ರಾದಿಗಳಿಂದ ಭೂತಾದಿಗಳ ಉತ್ಪತ್ತಿಯನ್ನೂ ಗ್ರಹಿಸಲಾಗಿದೆ. ಇದರಿಂದ ಬಾಧಕವೇನೂ ಇಲ್ಲ ಅಹಂಕಾರದಿಂದುತ್ಪನ್ನವಾದ, ಹನ್ನೊಂದು ಇಂದ್ರಿಯಗಳು ಅಹಂಕಾರ ಗುಣವುಳ್ಳದ್ದರಿಂದ, (ತಾನು ಎಂಬ ಅಭಿಮಾನ)

ಅಹಂಕಾರ ಹುಟ್ಟಿಸಗಲಿಕ್ಕೆ ಕಾರಣವೆಂದು "ಸಾಂಖ್ಯ ಶಾಸ್ತ್ರದ" ಮತವು. ಆದರೆ ವೈದ್ಯಕಿಯಲ್ಲಿ ಇಂದ್ರಿಯಗಳೆಲ್ಲವೂ ಭೌತಿಕದಿಂದ ಉತ್ಪನ್ನವಾದವುಗಳೆಂದು ಸುಶ್ರುತರ ಅಭಿಪ್ರಾಯವು. ಯಾಕಂದರೆ "ಸರ್ವಭೂತ ಚಿಂತಾ ಶಾರೀರಂ" ಎಂದು ಹೇಳಿರುವದರಿಂದ ಶರೀರಾವಯವಗಳು, ದೇಹವು ಭೌತಿಕವಾದ್ದರಿಂದ ಇಂದ್ರಿಯಗಳೂ ಭೌತಿಕವೆಂದು ಪುನಃ ಹೇಳುವ ಕಾರಣವಿಲ್ಲ.

## ಪ್ರಕೃತಿ ಮತ್ತು ವಿಕಾರಗಳು

**ಅವ್ಯಕ್ತಂ ಮಹಾನಹಂಕಾರಃ ಪಂಚತನ್ಮಾತ್ರಾಣಿ ಚೇತ್ಯಷ್ಟೌ ಪ್ರಕೃತಯಃ॥ ಶೇಷಾಃ ಷೋಡಶ ವಿಕಾರಾಃ ॥**

( ಸುಶ್ರುತ॥ ಶಾರೀರ॥ ಅ ೧ ಸೂ ೬॥)

ಪ್ರಕೃತಿಗಳು ೮.

**ಪ್ರಕೃತಿ:—** ೧ ಅವ್ಯಕ್ತ ೨ ಮಹಾನ್ ೩ ಅಹಂಕಾರ ೪ ಶಬ್ದತನ್ಮಾತ್ರ ೫ ಸ್ಪರ್ಶತನ್ಮಾತ್ರ ೬ ರೂಪತನ್ಮಾತ್ರ ೭ ರಸತನ್ಮಾತ್ರ ೮ ಗಂಧತನ್ಮಾತ್ರ ಇವು ಎಂಟು ಪ್ರಕೃತಿಗಳು.

ವಿಕಾರಗಳು ೧೬.

**ವಿಕಾರ:—** ೧ ಪೃಥ್ವಿ ೨ ಜಲ ೩ ತೇಜ ೪ ವಾಯು ೫ ಆಕಾಶ ಇವು ಪಂಚಭೂತಗಳು.

**ಜ್ಞಾನೇಂದ್ರಿಯಗಳು:—** ೧ ಕಿವಿ ೨ ಸ್ಪರ್ಶೇಂದ್ರಿಯಗಳು(ಚರ್ಮ) ೩ ಕಣ್ಣು ೪ ನಾಲಿಗೆ ೫ ಮೂಗು ಇವು ಜ್ಞಾನೇಂದ್ರಿಯಗಳು.

**ಕರ್ಮೇಂದ್ರಿಯಗಳು:—** ೧ ವಾಣೀ ( ವಾಗಿಂದ್ರಿಯ ) ೨ ಹಸ್ತ ೩ ಉಪಸ್ಥ ೪ ಗುದ ೫ ಪಾದ ಇವು ಕರ್ಮೇಂದ್ರಿಯಗಳು.

**ಮನಸ್ಸು:—** ಜ್ಞಾನೇಂದ್ರಿಯ ಕರ್ಮೇಂದ್ರಿಯಗಳೆರಡರಲ್ಲಿಯೂ ಇರುವದು. ಮನಸ್ಸು,(೧), ಶ್ರವಣೇಂದ್ರಿಯಾದಿ, (೧೦) ಇಂದ್ರಿಯಗಳು, ಪೃಥಿವ್ಯಾದಿ ಪಂಚಭೂತಗಳು (೫), ಒಟ್ಟು, ವಿಕಾರಗಳು ೧೬

ಪ್ರಕೃತಿಗಳು (೮), ವಿಕಾರ (೧೬) ಹೀಗೆ ಇವುಗಳ ಗುಂಪಿಗೆ ಚತು ರ್ವಿಂಶತಿ ತತ್ವಗಳೆಂದು ಹೇಳುತ್ತಾರೆ.

**ತತ್ರಬುದ್ಧೀಂದ್ರಿಯಾಣಾಂ ಶಬ್ದಾದಯೋ ವಿಷಯಾಃ ||**
**ಕರ್ಮೇಂದ್ರಿಯಾಣಾಂ ಯಥಾ ಸಂಖ್ಯಂ ವಚನಾದಾನಾನಂದ**
**ವಿಸರ್ಗ ವಿಹರಣಾನಿ ||**

**ಬುದ್ಧೀಂದ್ರಿಯಗಳಿಗೆ:—** ಶಬ್ದ ಸ್ಪರ್ಶ ರೂಪ ರಸ ಗಂಧ ಇವು ಗಳು ವಿಷಯಗಳು. ಅಂದರೆ ಇವುಗಳನ್ನು ಗ್ರಹಿಸಿ ಜ್ಞಾನವಮಾಡಿಕೊಡುತ್ತವೆ.

**ಕರ್ಮೇಂದ್ರಿಯಗಳಿಗೆ:—** ಮಾತಾಡುವದು, ತೆಗೆದುಕೊಳ್ಳುವದು, ಆನಂದ, ಮಲವನ್ನು ಬಿಡುವದು, ಅಡ್ಡಾಡುವದು ಇವು ಕರ್ಮೇಂದ್ರಿಯ ಗಳ ಕೆಲಸಗಳು. (||ಸುಶ್ರುತ|| ಶಾರೀರ|| ಅ ೧ ಶ್ಲೋ ೧೫)

**ಇಂದ್ರಿಯೇಣೇಂದ್ರಿಯಾರ್ಥಂತುಸ್ವಂ ಸ್ವಂಗೃಹ್ಣಾತಿ**
**ಮಾನವಃ ||**
**ನಿಯತಂ ತುಲ್ಯಯೋನಿತ್ವಾನ್ನಾನ್ಯೇ ನಾನ್ಯವಿಂತಿಸ್ಥಿತಿಃ ||೧೫||**

ಇಂದ್ರಿಯಗಳೂ ಇಂದ್ರಿಯ ವಿಷಯಗಳೂ ಪಂಚಭೌತಿಕವೇ ಇರುವ ದರಿಂದ, ಯಾವ ಇಂದ್ರಿಯದಲ್ಲಿ ಯಾವ ಭೂತದ ವಿಶೇಷವಾದ ಆಧಿಕ್ಯ ವಿರುತ್ತದೆಯೋ, ಆ ಇಂದ್ರಿಯ ಅದನ್ನೇ ಗ್ರಹಿಸುತ್ತದೆ. **ಉದಾ:—** ತೇಜ ಸ್ಸಿನ ಭಾಗ ಅಧಿಕವುಳ್ಳ ಚಕ್ಷುರಿಂದ್ರಿಯವು, ರೂಪವನ್ನು ಮಾತ್ರ ಗ್ರಹಿಸು ತ್ತದೆ. ಇದರಂತೆಯೇ ಎಲ್ಲ ಇಂದ್ರಿಯಗಳನ್ನು ತಿಳಿಯಬೇಕು.

ಭೌತಿಕವಾದ ವಿಷಯಗಳನ್ನು ಭೌತಿಕ ಇಂದ್ರಿಯಗಳು, ತಮ್ಮ ಗ್ರಹಣ ಕ್ರಿಯೆಯಿಂದ ಗ್ರಹಿಸಿ; ಮನುಷ್ಯನಿಗೆ ಅವುಗಳ ಜ್ಞಾನ ಮಾಡಿ ಕೊಡುತ್ತವೆ. ಇಂದ್ರಿಯ, ಮತ್ತು ಇಂದ್ರಿಯ ವಿಷಯಗಳೆರಡೂ, ಸದೃಶ ಭೂತಾದಿಗಳುಳ್ಳವುಗಳಾದ್ದರಿಂದ ನಿಯತವಾದದ್ದಿರುತ್ತವೆ. ಆದ್ದರಿಂದ ವಿರುದ್ಧವಾಗಿ ಯಾವದಾದರೊಂದು ಇಂದ್ರಿಯವು ತಾನು ಗ್ರಹಿಸತಕ್ಕದ್ದಲ್ಲದ ವಿಷಯವನ್ನು ಗ್ರಹಿಸಲಾರದು.

**ತತ್ರಸರ್ವ ಏವಅಚೇತನಏಷವರ್ಗಃ ಪುರುಷಃ ಪಂಚವಿಂಶತಿ ತಮಃ ಕಾರ್ಯಕಾರಣ ಸಂಯುಕ್ತಶ್ಚೇತಯಿತಾಭವತಿ ॥ ಸತ್ಯಪ್ಯಚೈತನ್ಯೇಪ್ರಧಾನಸ್ಯ ಪುರುಷ ಕೈವಲ್ಯಾರ್ಥಂ ಪ್ರವೃತ್ತಿ ಮುಪದಿಶಂತಿ" ಕ್ಷೀರಾದೀಂಶ್ಚಾತ್ರ ಹೇತೂನುದಾಹರಂತಿ॥"**
(ಸುಶ್ರುತ॥ ಶಾರೀರ॥ ಅ ೧ ಸೂ ೮)

ಇವು ಈಗ ಉದಹರಿಸಿ ಹೇಳಿದ ಚತುರ್ವಿಂಶತಿ(೨೪) ತತ್ವಗಳು ಅಚೇತನವಾದವುಗಳು. ಇಪ್ಪತ್ತೈದನೆಯದಾದ ಪುರುಷನು. ಕಾರಣ (ಅವ್ಯಕ್ತಾದಿ ಪ್ರಕೃತಿಗಳು) ಕಾರ್ಯ (ಭೂತಾದಿ, ಇಂದ್ರಿಯಗಳು) ಇವುಗಳಿಂದ ಯುಕ್ತನಾಗಿ; ಚೈತನ್ಯವನ್ನುಂಟು ಮಾಡುತ್ತಾನೆ. ಹೀಗೆ ಸಾಂಖ್ಯರು ಪಂಚವಿಂಶತಿ ತತ್ವಾತ್ಮಕ ಪುರುಷನೆಂದು ಹೇಳುತ್ತಾರೆ. ಪುರುಷ ಭಿನ್ನವಾದವುಗಳು ಅಚೇತನವರ್ಗವಾದರೂ, ಪ್ರಧಾನ (ಪ್ರಕೃತಿ) ಮೊದಲಾದದ್ದನ್ನು ಪುರುಷನ (ದೇಹಧಾರಿಯಾದ ಜೀವನ) ಮೋಕ್ಷಕ್ಕಾಗಿ, ವಿವೇಚಿಸಿ ಹೇಳಿದ್ದಾರೆ. ಈ ಅಚೇತನ ವಸ್ತುಗಳು ಮೋಕ್ಷಕ್ಕೆ ಹೇಗೆ ಕಾರಣವಾಗುತ್ತವೆಂಬುವದನ್ನು ಹೇಳಲು ಕ್ಷೀರಾದಿ ಉದಾಹರಣೆಗಳನ್ನು ಕೊಡುತ್ತಾರೆ.

ಹಾಲು ಜಡವಾಗಿದ್ದರೂ ಚೈತನ್ಯಯುಕ್ತ ಶಿಶುವಿನ ಜೀವನಕ್ಕೆ (ಪ್ರಾಣಧಾರಣ ಪೋಷಣೆ) ಹೇಗೆ ಅವಶ್ಯವೋ ಅದರಂತೆ, ಜಡವಾದ ಅಚೇತನ ವರ್ಗಗಳು ಚೇತನವುಳ್ಳ 'ಪುರುಷನ ಮೋಕ್ಷಕ್ಕಾಗಿ ಅವಶ್ಯವಾದವುಗಳು. ಈ ಜಡವಾದವುಗಳೆಲ್ಲದರಲ್ಲಿರುವ ಆತ್ಮವನ್ನು ವಿವೇಕದಿಂದ ನಿಗ್ರಹಿಸಿ, ನಿತ್ಯ ಸ್ವರೂಪ ಚೇತನೆಯುಳ್ಳ, ಪುರುಷ ಸ್ಥಿತಿ ಹೊಂದಲು, ಅವುಗಳ ಜ್ಞಾನ ಅವಶ್ಯವಾಗಿರುತ್ತದೆಂದು ಅಭಿಪ್ರಾಯವು.

**ತತ್ರ ಕಾರಣಾನುರೂಪಂ ಕಾರ್ಯಮಿತಿಕೃತ್ವಾ ಸರ್ವ ಏವತೇ ವಿಶೇಷಾಃ 'ಸತ್ವರಜಸ್ತಮೋಮಯಾಭವಂತಿ, ತದಂಜನತ್ವಾತ್ ತನ್ಮಯತ್ವಾಚ್ಚ ತದ್ಗುಣಾಏವಪುರುಷಾಭವಂತಿ ಇತ್ಯೇಕೇಭಾಷಂತೇ॥** (ಸುಶ್ರುತ॥ ಶಾರೀರ॥ ಅ ೧ ಸೂ ೧೦)

ಕಾರಣದಲ್ಲಿರತಕ್ಕ ಗುಣಗಳು, ಕಾರ್ಯದಲ್ಲಿ ಬರುತ್ತವೆ ಎನ್ನುವ ನಿಯಮದಿಂದಲೂ, ಜಗದಾದಿ, ಎಲ್ಲ ಕಾರ್ಯ ಸ್ವರೂಪಗಳಲ್ಲಿ ಸತ್ವರಜ ತಮಸ್ಸುಗಳು ಗೋಚರಿಸುವದರಿಂದಲೂ, ಸತ್ವಾದಿಗಳಿಂದ ತನ್ಮಯವಾಗಿರುವದರಿಂದಲೂ, ಕಾರ್ಯರೂಪ ಜಗದಾದಿಗಳಲ್ಲಿರುವ ಗುಣಗಳು, ಕಾರಣದಲ್ಲಿರಲೇಬೇಕೆಂಬ ನಿಶ್ಚಯದಿಂದ, ಚತುರ್ವಿಂಶತಿ ತತ್ವಯುಕ್ತನೂ ಪ್ರೇರಕನೂ, ಇದ್ದುದರಿಂದ ಎಲ್ಲ ಜಡಕ್ಕೆ ಚೈತನ್ಯ ಕೊಡಲು ಕಾರಣನಾದ ಪುರುಷನು, ಸತ್ವಾದಿಗುಣವುಳ್ಳವನೆಂದು ಕೆಲವರು ಹೇಳುತ್ತಾರೆ. ಸತ್ವ ಮೊದಲಾದ ಗುಣಗಳ ಸ್ವರೂಪವನ್ನು ಹಿಂದೆ ವಿವರಿಸಿದ್ದೇವೆ.

## ಪುರುಷ ವಿವರಣೆಯು

**ಖಾದಯಶ್ಚೇತನಾಷಷ್ಠಾ ಧಾತವಃ ಪುರುಷಃ ಸ್ಮೃತಃ ||**
**ಚೇತನಾ ಧಾತುರಪ್ಯೇಕಃ ಸ್ಮೃತಃ ಪುರುಷ ಸಂಜ್ಞಕಃ ||೧೬||**
( || ಚರಕ|| ಶಾರೀರ|| ಅ ೧ ಶ್ಲೋ ೧೬ || )

ಪಂಚ ಭೂತಗಳು, (ಆಕಾಶಾದಿಗಳು) ಆರನೇದು "ಚೇತನಾಧಾತು" ಪುರುಷ ಸಂಜ್ಞೆಯುಳ್ಳದ್ದು. ಅಥವಾ ಭೂತಾದಿಗಳೆಲ್ಲವೂ ಜಡವಾಗಿರುವದರಿಂದ "ಚೇತನಾಧಾತು" ವೊಂದೇ ಎಲ್ಲದಕ್ಕೂ ಪ್ರೇರಕವಾದ್ದರಿಂದ ಪುರುಷ ಸಂಜ್ಞೆಯುಳ್ಳದ್ದು. ಚೇತನ ಧಾತುವೇ ಪುರುಷನೆಂದು ಅಭಿಪ್ರಾಯ ಪಡುತ್ತಾರೆ.

ಈ ಚೇತಕ (ಪ್ರೇರಕ) ಪುರುಷನಿಗೆ ಬೇರೆ ಬೇರೆ ಹೆಸರುಗಳು ಇವೆ

ಪುರುಷ, ಚೇತನಾ ಧಾತು, ಪ್ರಧಾನಂ, ಆತ್ಮಾ, ಕ್ಷೇತ್ರಜ್ಞ, ವಿಭು, ಇತ್ಯಾದಿಗಳು.

**ಪುನಶ್ಚ ಧಾತು ಭೇದೇನ ಚತುರ್ವಿಂಶತಿಕಃ ಸ್ಮೃತಃ ||**
**ಮನೋದಶೇಂದ್ರಿಯಾಣ್ಯರ್ಥಾಃ ಪ್ರಕೃತಿಶ್ಚಾಷ್ಟಧಾತುಕೀ||**
(ಚರಕ|| ಶಾರೀರ|| ಅ ೧ ಶ್ಲೋ ೧೭)

ಷಡ್ಧಾತುಕ ಪುರುಷನನ್ನು ಸಾಂಖ್ಯ ಮತದಂತೆ ಚತುರ್ವಿಂಶತಿತತ್ವಾತ್ಮಕವಾಗಿ, ಅನುಸರಿಸಿ ಹೇಳುತ್ತಾರೆ.

ಖಾದಿ ಪಂಚಭೂತಗಳನ್ನು ವಿಭಾಗಿಸಿ, ಮನಸ್ಸು, ಹತ್ತು ಇಂದ್ರಿಯಗಳು, ಇಂದ್ರಿಯ ವಿಷಯಗಳು, (ಶಬ್ದಾದಿಗಳು) ಅವ್ಯಕ್ತಾದಿ ಪ್ರಕೃತಿಗಳು, ಹೀಗೆ ಚತುರ್ವಿಂಶತಿ ತತ್ವಗಳನ್ನು ವಿವರಿಸಿದ್ದಾರೆ. ಅವುಗಳಿಗೆ ಪ್ರೇರಕ (ಕ್ಷೇತ್ರಜ್ಞ) ನನ್ನು ಸಮಾವೇಶ ಮಾಡಿ, ಚತುರ್ವಿಂಶತಿ ತತ್ವಾತ್ಮಕ ಪುರುಷನನ್ನು ಉದಹರಿಸಿದ್ದಾರೆ.

**ಬುದ್ಧೀಂದ್ರಿಯ ಮನೋsರ್ಥಾನಾಂ ವಿದ್ಯಾದ್ಯೋಗಧರಂ ಪರಂ|| ಚತುರ್ವಿಂಶತಿಕೋಹ್ಯೇಷ ರಾಶಿಃ ಪುರುಷಸಂಜ್ಞಕಃ||**

(|| ಚರಕ|| ಶಾರೀರ|| ಅ ೧ ಶ್ಲೋ. ೩೫ ||)

ಬುದ್ಧೀಂದ್ರಿಯ ಮನಸ್ಸು ಇವುಗಳಿಗೂ ಮತ್ತು (ಇವುಗಳಿಂದ ಗ್ರಹಿಸತಕ್ಕ) ವಿಷಯಕ್ಕೂ ಧಾರಕವು. ಜಗತ್ತಿನ ಉತ್ಪತ್ತಿಕಾರಕ ಅವ್ಯಕ್ತದಿಂದ ಭಿನ್ನವೆಂದು ತಿಳಿಯಬೇಕು. ಹೀಗೆ ೨೪ ತತ್ವಗಳ ಸಮುದಾಯ ಯುಕ್ತವಾದದ್ದು ಪುರುಷನೆಂದು ಸಂಜ್ಞೆಯುಳ್ಳದ್ದಿರುವದು.

ವಿಶ್ವೋತ್ಪತ್ತಿಗೆ, ದೇಹಕ್ಕೆ, ಪ್ರೇರಕ ಆತ್ಮನು (ಪುರುಷ) ರಕ್ಷಕನನ್ನುವ ಸಿದ್ಧಾಂತವು ಸಾಂಖ್ಯವು. ಆತ್ಮನಿಂದಲೇ ದೇಹೋತ್ಪತ್ತಿ, ಅವನೇ ಕತೃವೆನ್ನುವದು ವೇದಾಂತ ಶಾಸ್ತ್ರದ ವಿವರಣೆಯು.

**ಕೃತಂ ಮೃದ್ದಂಡಚಕ್ರೈಶ್ಚ ಕುಂಭಕಾರಾದೃತೇಘಟಮ್ ||**
**ಕೃತಂಮೃತ್ತೃಣಕಾಷ್ಠೈಶ್ಚ ಗೃಹಕಾರಾದ್ವಿನಾಗೃಹಮ್||೪೩||**

**ಯೋವದೇತ್ಸವದೇದ್ದೇಹಂ ಸಂಭೂಯಕರಣೈಃ ಕೃತಂ ||**
**ವಿನಾಕರ್ತಾರಮಜ್ಞಾನಾದ್ಯುಕ್ತ್ಯಾಗಮಬಹಿಷ್ಕೃತಃ ||೪೪||**

(||ಚರಕ|| ಶಾರೀರ ಅ ೧ ಶ್ಲೋ ೪೩||)

ಮಣ್ಣು ತಿಗರಿ ಇವುಗಳಿಂದ ಕುಂಬಾರನಿಲ್ಲದೆ, ಗಡಿಗೆಯು ಮಾಡಲ್ಪಟ್ಟಿರುತ್ತದೆ. ಇದರಂತೆ ಮಣ್ಣು ಹುಲ್ಲು ಕಟ್ಟಿಗೆಗಳಿಂದ ಮನೆಕಟ್ಟುವವನಿಲ್ಲದೆ, ಮನೆಯು ನಿರ್ಮಿತವಾಗಿದೆಯೆಂದು ಯಾವನು ಹೇಳುವನೋ, ಅವನು ಯುಕ್ತಿ ಆಗಮಾದಿಗಳನ್ನು ಅರಿಯದೆ ಅಜ್ಞಾನದಿಂದ, ಕರ್ತೃವಿಲ್ಲದೆ ಎಲ್ಲ ಸಾಧನಗಳು ಹೊಂದಿಕೊಂಡು ಜಗತ್ತು ರಚಿಸಲ್ಪಟ್ಟಿತೆಂದು ಹೇಳಬಹುದು.

ಸಾರಾಂಶವೇನೆಂದರೆ:-ಎಲ್ಲಸಾಧನಗಳಿದ್ದರೂಕುಂಬಾರನಿಲ್ಲದೆ,ಮನೆಯನ್ನು ಕಟ್ಟುವವನಿಲ್ಲದೆ, ಗಡಿಗೆ ಮನೆಗಳು ಆಗಲಾರವೋ? ಅದರಂತೆ ಎಲ್ಲ ಸಾಧನಗಳಿದ್ದರೂಕರ್ತೃ(ಪುರುಷ)ಇಲ್ಲದೆ,ಜಗತ್ತುವ ತ್ತುದೇಹವುಆಗಲಾರದು. ಮೇಲಿನ ಯುಕ್ತಿ ಅಥವಾ ಆಗಮ ಇವುಗಳಿಂದ, ನಿಶ್ಚಯವಾಗಿ ಕರ್ತೃವು ಇರಲೇಬೇಕೆಂದು ಸಿದ್ಧವಾಗುತ್ತದೆ. ಆದರೆ ಯುಕ್ತಿ ಆಗಮಗಳನ್ನು ಬಿಟ್ಟು ಅಗೋಚರವಾದ ಆತ್ಮನನ್ನು(ಕರ್ತೃವನ್ನು)ನಿರ್ಧರಿಸಲುಸಾಧ್ಯವಾಗಲಾರದು.

ಕಾರಣಂ ಪುರುಷಃ ಸರ್ವೈಃ ಪ್ರಮಾಣೈರುಪಲಭ್ಯತೇ ॥
ಯೇಭ್ಯಃ ಪ್ರಮೇಯಂ ಸರ್ವೇಭ್ಯಃ ಆಗಮೇಭ್ಯಃ
ಪ್ರಮೀಯತೇ ॥೪೫॥
( ॥ಚರಕ॥ ಶಾರೀರ॥ ಅ ೧ ಶ್ಲೋ. ೪೫॥ )

ಈ ಹಿಂದೆ ಹೇಳಿದಂತೆ (೪೪ ನೆಯ ಶ್ಲೋಕದಲ್ಲಿ) ಎಲ್ಲ ಪ್ರಮಾಣಗಳಿಂದಲೂ, ರಚಿಸಲ್ಪಟ್ಟಿರುವ ದೇಹಾದಿಗಳಿಗೆ ಕಾರಣಾತ್ಮಕ ಆತ್ಮನು ಇರುವನೆಂದು ಸಿದ್ಧವಾಗುತ್ತದೆ ಈ ದೇಹಾದಿಗಳಿಗೆ ಕಾರಣ ಪುರುಷನನ್ನು ಯುಕ್ತ್ಯಾದಿಗಳ ಸಹಾಯದಿಂದ ಪ್ರಮಾಣಿಸಲು, ಬೋಧವಾಗುತ್ತದೆ. ಅಥವಾ ಇಂಥ ಯುಕ್ತ್ಯಾದಿಗಳಿಂದ ವಿಶದವಾಗಿ ವಿವೇಚಿಸಿರುವ ಆಗಮಾದಿಗಳಿಂದಲೂ, ವಿಮರ್ಶಿಸಿ ಕಾರಣಪುರುಷನನ್ನು ತಿಳಕೊಳ್ಳಬೇಕು. ಇದರ ಹೊರತಾಗಿ ಅನ್ಯಮಾರ್ಗವಿಲ್ಲ. ಯಾಕಂದರೆ ಆತ್ಮವು, ಚಾಕ್ಷುಷ ಪ್ರತ್ಯಕ್ಷ ವಿಷಯವಲ್ಲ.

ಅನಾದಿಃ ಪುರುಷೋನಿತ್ಯೋ ವಿಪರೀತಸ್ತು ಹೇತುಜಃ ॥
ಸದಕಾರಣವನ್ನಿತ್ಯಂ ದೃಷ್ಟಂ ಹೇತುಜಮನ್ಯಥಾ ॥
( ॥ ಚರಕ ॥ ಶಾರೀರ ॥ ಅ ೧ ಶ್ಲೋ. ೫೯ ॥ )

ಅನಾದಿಯಾದ ಪೃಥಿವ್ಯಾದಿಗಳ ಉತ್ಪತ್ತಿಗೆ ಕಾರಣವಲ್ಲದ, ಯಾವಾಗಲೂ ಒಂದೇ ಸ್ಥಿತಿಯಲ್ಲಿರತಕ್ಕ (ಸತ್) ನಿತ್ಯವಾದದ್ದಕ್ಕೆ, ಪರಮಾತ್ಮನೆಂದು ಹೇಳುತ್ತಾರೆ ವಿಪರೀತವಾದ ಚತುರ್ವಿಂಶತಿತತ್ವಯುಕ್ತವಾಗ ಪುರುಷನು, ಕಾರಣ ರೂಪನು ಕಾರಣಯುಕ್ತವಾದವನಿರುತ್ತಾನೆ ಆದ್ದರಿಂದಲೇ ಹೇತುಜನೆಂದುಅನ್ನುವರು ಅಕಾರಣವು ನಿಷ್ಕ್ರಿಯವಾದದ್ದು ಹೇತುಜವು ಕಾರ್ಯರೂಪ ದೇಹಾದಿಯುಕ್ತವಿರುವದರಿಂದ, ವ್ಯಕ್ತವಾಗಿ ವಂಥದು ಇರುತ್ತವೆ. ಆದ್ದರಿಂದ ಕಾರಣವುಳ್ಳದ್ದು, ಅಕಾರಣವೆಂಬ, ಎರಡು ರೀತಿ ಭೇದ ಮಾಡಿದ್ದಾರೆ

**ಅನಾದಿಶ್ಚ ಪುರುಷೋऽವ್ಯಕ್ತರೂಪ ಆತ್ಮಶಬ್ದಾಭಿಧೇಯಃ**
(ಸಂಸ್ಕೃತ ಟೀಕಾ)

ಅನಾದಿ ನಿಷ್ಕ್ರಿಯ (ಅಕಾರಣ) ಪುರುಷ ಸಂಜ್ಞಕವು, ಅವ್ಯಕ್ತ ಸ್ವರೂಪವುಳ್ಳದ್ದು ಅದಕ್ಕ ಆತ್ಮವೆಂಬ ಹೆಸರು.

# ಪ್ರಕೃತಿ ಪುರುಷರಲ್ಲಿಯ ಸಮುನ್ಯೆಷಮ್ಯ ಧರ್ಮ

**ಅತಊರ್ಧ್ವಂ ಪ್ರಕೃತಿಪುರುಷಯೋಃ ಸಾಧರ್ಮ್ಯ ವೈಧರ್ಮ್ಯ ವ್ಯಾಖ್ಯಾಸ್ಯಾಮಃ ॥**
**ತದ್ಯಥಾ— ಉಭಾವಪ್ಯನಾದೀ, ಉಭಾವಪ್ಯನಂತೌ, ಉಭಾವಪ್ಯಲಿಂಗೌ, ಉಭಾವಪಿನಿತ್ಯೌ, ಉಭಾವಪ್ಯನಪರೌ, ಉಭೌಚ ಸರ್ವಗತಾವಿತಿ,॥** (ಸುಶ್ರುತ । ಶಾರೀರ ॥ ಅ. ೧. ಸೂ. ೯)

**ಪ್ರಕೃತಿಯಂದರೆ:–** ಅವ್ಯಕ್ತವು **ಪುರುಷನೆಂದರೆ:–** ಆತ್ಮನು. **ಸಾಧರ್ಮ್ಯಂ:–** ಪ್ರಕೃತಿ ಪುರುಷರಲ್ಲಿಯ ಸಮಾನವಾದ ಧರ್ಮ (ಹೋಲಿಕೆಯಾಗುವದು) ಇದಕ್ಕೆ ಸಾಧರ್ಮ್ಯವೆಂಬ ಹೆಸರು. **ವೈಧರ್ಮ್ಯ:–** ಹೋಲಿಕೆಯಾಗದ ವಿಷಮಧರ್ಮಕ್ಕೆ (ವಿಸದೃಶಧರ್ಮ) ವೈಧರ್ಮ್ಯವೆಂದು ಹೇಳುತ್ತಾರೆ.

**ಪ್ರಕೃತಿ ಪುರುಷ ಇವರಲ್ಲಿಯ ಸದೃಶ ವಿಸದೃಶ ಧರ್ಮಗಳು:-** ಪ್ರಕೃತಿ ಪುರುಷ ಇಬ್ಬರೂ ಆದಿಯಿಲ್ಲದವರು. ಅಂದರೆ ಹುಟ್ಟದವರಲ್ಲ; ನಿತ್ಯವಾಗಿಯೂ ಇದ್ದವರು. ನಾಶವಿಲ್ಲದವರು. ಯಾವದೇ ಲಕ್ಷಣದಿಂದ (ಗುರುತು) ತಿಳಿಯಲಿಕ್ಕೆ ಬಾರದವರು.( ಅಲಿಂಗ ) ಅಂದರೆ ಅಗೋಚರ ವಾದವರು ನಿತ್ಯವಾಗಿರುವವರು, ಎಂದೆಂದಿಗೂ ನಾಶವಾಗದವರು. ಇವರ ಹೊರತಾಗಿ ಬೇರೆ ಯಾವದೂ ಇಲ್ಲದಿರುವದರಿಂದ ಇವರೇ ಮುಖ್ಯರು. ( ಅನಪರೌ ); ಯಾಕಂದರೆ:- ಉತ್ಪನ್ನವಾದ ಮಹದಾದಿಗಳಿಗೆ ಇವರೇ ಮುಖ್ಯರು. ಮತ್ತು ಮಹದಾದಿಗಳಿಂದ ಭಿನ್ನವಾಗಿ, ಹೆಚ್ಚಿನವರಿದ್ದು, ಮಹದಾದಿ ಉತ್ಪನ್ನಕ್ಕೆ ಕಾರಣವಾದ್ದರಿಂದ ಶ್ರೇಷ್ಠವಾಗಿದ್ದಾರೆ. ಸರ್ವವನ್ನೂ ವ್ಯಾಪಿಸಿಕೊಂಡಿರುವರಿಂದ (ಸರ್ವಗತೌ) ಎಲ್ಲದರಲ್ಲಿಯೂ, ಎಲ್ಲೆಲ್ಲಿಯೂ ಬಿಡದೆ ವ್ಯಾಪಕವಾಗಿರುವವರು ಇವು ಪ್ರಕೃತಿ ಪುರುಷರಲ್ಲಿಯ ಸಮಾನ (ಸದೃಶ) ಧರ್ಮಗಳು.

## ಅಸಮಾನ (ವಿಷಮ) ಧರ್ಮಗಳು

**"ಏಕಾತು ಪ್ರಕೃತಿರಚೇತನಾ ತ್ರಿಗುಣಾ ಬೀಜ ಧರ್ಮಿಣೀ ಪ್ರಸವಧರ್ಮಿಣ್ಯ ಮಧ್ಯಸ್ಥ ಧರ್ಮಿಣೀಚೇತಿ"**
(ಸುಶ್ರುತ ॥ ಶಾರೀರ ॥ ಅ. ೧ ಸೂ. ೯)

ಒಂದೇ ಒಂದಾದ **ಅವ್ಯಕ್ತ ಪ್ರಕೃತಿಯು,** ಚೇತನಾರಹಿತ (ಅಚೇತನಾ) ವಾದದ್ದು. ಸತ್ವರಜಸ್ತಮೋಗುಣವುಳ್ಳದ್ದು. ಮಹದಾದಿ ವಿಕಾರಗಳಿಗೆ ಬೀಜರೂಪ ಸ್ಥಿತಿಯುಳ್ಳದ್ದು, ಅಥವಾ ಜಗತ್ ಪ್ರಲಯ ಕಾಲದಲ್ಲಿ, ಪಂಚಮಹಾಭೂತ ಇಂದ್ರಿಯ ತನ್ಮಾತ್ರ, ಅಹಂಕಾರ ಮಹದಾದಿ ಗಳಿಗೆ ಆಧಾರಭೂತವಾಗಿ, ಮುಂದೆ ಅವುಗಳ ಉತ್ಪತ್ತಿಗಾಗಿ ಬೀಜರೂಪದಲ್ಲಿ ಅವುಗಳನ್ನು, ತನ್ನಲ್ಲಿ ಸೇರಿಸಿಕೊಳ್ಳುತ್ತದೆ. ಜಗತ್ತನ್ನು ಹುಟ್ಟಿಸಬೇಕೆಂಬ ಇಚ್ಛೆಯುಳ್ಳ ಪುರುಷನಿಂದ ಕೂಡಿ ಕ್ಷೋಭಯೊಂದಿ, ಮಹದಹಂಕಾರಾದಿ ಸ್ವರೂಪವುಳ್ಳ ಚರಾಚರಾತ್ಮಕ ಜಗತ್ತನ್ನು ಹುಟ್ಟಿಸುತ್ತದೆ. ಆದ್ದರಿಂದ "ಪ್ರಸವಧರ್ಮಿಣೀ" ಎಂದು ಅನ್ನುತ್ತಾರೆ. ಸತ್ವಾದಿಗುಣರಾಶಿಯುಳ್ಳದ್ದರಿಂದ,

ಸುಖಾದಿರೂಪದಿಂದ, ಅಂದರೆ:— "ಸುಖೀ" ಸುಖವನ್ನು ಇಚ್ಛಿಸುತ್ತಲೂ, "ದುಃಖಿಯು" ದುಃಖವನ್ನು ದ್ವೇಷಿಸುತ್ತಲೂ, ಸಾಮ್ಯ ಸ್ಥಿತಿಯಿಲ್ಲದೇ ಇರುವಂತಾಗುವದು, ಆದಕ್ಕೇ "ಅಮಧ್ಯಸ್ಥಧರ್ಮಿಣೀ" ಎಂಬ ಹೆಸರು.

ಮಧ್ಯಸ್ಥವೆಂದರೆ:— ಸತ್ವರಜಸ್ತಮೋಗುಣಗಳು ಪ್ರಕೃತಿಯಲ್ಲಿ ಸಮಾನ ಸ್ಥಿತಿಯಲ್ಲಿ ಏನೂ ವ್ಯತ್ಯಾಸ ಹೆಚ್ಚುಕಡಿಮೆಯಾಗದಿರುವದು, ಪುರುಷನ ಯೋಗದಿಂದ ಕ್ಷೋಭಹೊಂದಲು ವೈಷಮ್ಯವಾಗಿ, ಅಮಧ್ಯಸ್ಥಧರ್ಮವುಳ್ಳದ್ದು ಪ್ರಕೃತಿಯು ಆಗುತ್ತದೆ.

"ಬಹುವಸ್ತು ಪುರುಷಾಶ್ಚೇತನಾವಂತೋsಗುಣಾsಬೀಜ
ಧರ್ಮಾಣೋsಪ್ರಸವಧರ್ಮಾಣೋ ಮಧ್ಯಸ್ಥಧರ್ಮಾಣಶ್ಚೇತಿ"
(ಸುಶ್ರುತ ॥ ಶಾರೀರ ಅ ೧ ಸೂ ೯)

ಅನೇಕ ಪುರುಷ (ಜೀವ) ಗಳು, ಚೇತನಾವುಳ್ಳವುಗಳದ್ದು, ಸತ್ವಾದಿಗುಣಗಳಿಲ್ಲದಿರುವವುಗಳು, ಯಾಕಂದರೆ ಸತ್ವಾದಿಗುಣಗಳು ಪ್ರಕೃತಿಯಲ್ಲಿಯೇ ಇರುವದರಿಂದ ಪುರುಷನು ಅಗುಣನು. ಮಹದಾದಿಗಳು ಪ್ರಕೃತಿಯಲ್ಲಿಯೇ ಇರುವದರಿಂದ ಪುರುಷನು ಬೀಜಧರ್ಮವಿಲ್ಲದವನು. ಪ್ರಸವಧರ್ಮವಿಲ್ಲದವನು. ಸತ್ವಾದಿಗುಣಗಳಯೋಗವಿಲ್ಲದ್ದರಿಂದ, ಪ್ರಿತಿ ಅಪ್ರೀತಿ ವಿಷಾದ ಇವುಗಳಿಲ್ಲದೆ, ಇಚ್ಛಾದ್ವೇಷಶೂನ್ಯನಾಗಿರುವನು. ಆದ್ದರಿಂದ ಮಧ್ಯಸ್ಥಧರ್ಮವುಳ್ಳವನೆಂದು ಹೇಳುತ್ತಾರೆ.

## ದೇಹನಾಶದ ನಂತರ ಜೀವದ ಸ್ಥಿತಿಯು

ಪುರುಷಃ ಪ್ರಲಯೇಚೇಷ್ಟ್ಯೈಃ ಪುನರ್ಭಾವೈರ್ವಿಯುಜ್ಯತೆ
ಅವ್ಯಕ್ತಾದ್ವ್ಯಕ್ತತಾಂಯಾತಿವ್ಯಕ್ತಾದವ್ಯಕ್ತತಾಂ ಪುನಃ ॥
ರಜಸ್ತಮೋಭ್ಯಾಂ ಆವಿಷ್ಟಃ ಚಕ್ರವತ್ ಪರಿವರ್ತತೇ ॥
(ಚ ಶಾ. ಅ. ೧ ಶ್ಲೋ ೬೭॥)

ಪುರುಷನು (ಜೀವವು) ದೇಹನಾಶ ಕಾಲದಲ್ಲಿ, ಕರ್ಮಗಳಿಂದ ಸಂಸ್ಕಾರ ರೂಪವಾದ ಕ್ರಿಯಾಭಾವ ಇವುಗಳಿಂದ ಕೂಡಿದವನಾಗುತ್ತಾನೆ.

ಇದಕ್ಕೆ ಸೂಕ್ಷ್ಮ (ಲಿಂಗ) ಶರೀರವೆಂತಲೂ ಅನ್ನುತ್ತಾರೆ. ಪುನಃ ಹುಟ್ಟ ಬೇಕಾದರೆ ಇವೆಲ್ಲವುಗಳಿಗೆ ಯೋಗ್ಯವಾದ ದೇಹವನ್ನು ಪಡೆಯುತ್ತಾನೆ. ನಂತರ ಸೂಕ್ಷ್ಮ ಶರೀರವು ಆಯಾವ ಸಂಸ್ಕಾರ ಕ್ರಿಯಾಭಾವಾದಿಗಳಿಂದ ಕೂಡಿ ವ್ಯಕ್ತವಾದದ್ದಾಗುತ್ತದೆ. ಅರ್ಥಾತ್ ಸೂಕ್ಷ್ಮ ಶರೀರಾನುಗುಣ ದೇಹ ಪಡೆದವನಾಗಿ ಅದಕ್ಕನುಗುಣವಾದ ದುಷ್ಕರ್ಮ ಸತ್ಕರ್ಮ ಇವುಗಳಲ್ಲಿ ನಿರತನಾಗುವನು. ಇದರಂತೆ ಪುನಃ ಪುನಃ ವ್ಯಕ್ತದಿಂದ ಅವ್ಯಕ್ತನೂ, ಅವ್ಯಕ್ತ ದಿಂದ ವ್ಯಕ್ತನೂ, ಆಗುತ್ತಾಗುತ್ತ ರಜೋಗುಣ ತಮೋಗುಣಗಳಿಂದ ಕೂಡಿ ದವನಾಗಿ, ಚಕ್ರದಂತೆ ತಿರುಗುತ್ತಿರುತ್ತಾನೆ ಇದರಂತೆ ಪ್ರಲಯವಾದಾಗ ಎಲ್ಲ ಜೀವಗಳು, ತಮ್ಮ ತಮ್ಮ ಕ್ರಿಯಾಭಾವಗಳಿಂದ ಯುಕ್ತವಾದವುಗಳಾಗಿ, ಪುನಃ ಸೃಷ್ಟಿಯಾದಾಗ ತಮಗನುಗುಣವಾದ ದೇಹವನ್ನು ಪಡೆಯುತ್ತವೆ

**ನಹಿಕರ್ಮ ಮಹತ್‌ಕಿಂಚಿತ್ ಫಲಂಯಸ್ಯ ನಭುಜ್ಯತೇ ||**
**ಕ್ರಿಯಾಘ್ನಾಃ ಕರ್ಮಜಾರೋಗಾಃ ಪ್ರಶಮಂಯಾಂತಿ**
**ತತ್‌ಕ್ಷಯಾತ್ ||**
(|| ಚರಕ|| ಶಾರೀರ|| ಅ ೧ ಶ್ಲೋ. ೧೧೭ ||)

ತಾನು ಮಾಡಿದ ಕರ್ಮಕ್ಕನುಸಾರವಾಗಿ ಮಹತ್ತರವಾದ, ಅಥವಾ ಸ್ವಲ್ಪ ಕರ್ಮಾನುಗುಣ ಫಲವನ್ನು ಭೋಗಿಸದೆ ಇದ್ದವನಿಗೆ, ಚಿಕಿತ್ಸಾದಿ ಕರ್ಮವಿಲ್ಲ. ಚಿಕಿತ್ಸೆಯು ಫಲಕೊಡಲಾರದೆಂಬರ್ಥ. ಯಾಕಂದರೆ ದುಷ್ಕ ರ್ಮದಿಂದುಂಟಾದ ರೋಗಗಳು, ರೋಗ ಪ್ರತೀಕಾರ ಚಿಕಿತ್ಸಾ ಕ್ರಿಯೆ. ಗಳನ್ನು ನಾಶಪಡಿಸತಕ್ಕವುಗಳು. ಕರ್ಮಫಲವಾದ ದುಃಖ ವೇದನೆಗಳನ್ನು ಅನುಭವಿಸಿ ಕರ್ಮಕ್ಷಯವಾದ ನಂತರ ಕರ್ಮಜ ರೋಗಗಳು ಶಾಂತವಾಗು ತ್ತವೆ. **"ಕರ್ಮಕ್ಷಯಶ್ಚ ಕರ್ಮಫಲಭೋಗಾದೇವ ಪರಂಭವತಿ"** ಕರ್ಮ ಫಲವನ್ನು ಭೋಗಿಸಿದ ನಂತರವೇ ಕರ್ಮ ಕ್ಷಯವಾಗುತ್ತದೆಂದು ಹೇಳಿದ್ದರಿಂದ, ಕರ್ಮಜವ್ಯಾಧಿಗಳಲ್ಲಿ ಚಿಕಿತ್ಸಾ ಕರ್ಮಗಳು ಫಲದಾಯಕ ವಲ್ಲವು. ಆದ್ದರಿಂದ ಅದನ್ನು ತಿಳಿಯಲಿಕ್ಕಾಗಿಯೇ ಜೀವವು, ದೇಹಾವ ಸಾನ ಕಾಲದಲ್ಲಿ, ಕರ್ಮಗಳ ಸಂಸ್ಕಾರ ರೂಪ ಕ್ರಿಯಾ ಭಾವನೆಗಳಿಂದ ಯುಕ್ತವಾಗುವದನ್ನು ವಿಮರ್ಶಿಸಿ ಹೇಳಿದ್ದಾರೆ.

**ನಿರ್ದಿಷ್ಟಂ ದೈವಶಬ್ದೇನಕರ್ಮಯತ್ ಪೌರ್ವದೇಹಿಕಂ ||**
**ಹೇತುಸ್ತದಪಿಕಾಲೇನರೋಗಾಣಾಮುಪಲಭ್ಯತೇ ||**
(|| ಚರಕ|| ಶಾರೀರ|| ಅ ೧ ಶ್ಲೋ. ೧೧೬ ||)

ಪೂರ್ವ ಜನ್ಮದಲ್ಲಿ ಮಾಡಿದ ಕರ್ಮವು "ದೈವವೆಂದು" ಹೇಳಲ್ಪಡುತ್ತದೆ. ದೈವವೆಂದು ಹೇಳಲ್ಪಟ್ಟ ಪೂರ್ವಜನ್ಮ ಕೃತ ಕರ್ಮವು, ಕಾಲಾನುಸಾರವಾಗಿ ಪಕ್ವ ಹೊಂದಿ ರೋಗಗಳಿಗೆ ಕಾರಣವಾಗುತ್ತದೆ. ಹೀಗೆ ರೋಗಕ್ಕೆ ಕಾರಣವಾದಾಗ ಕರ್ಮಜ ವ್ಯಾಧಿಯೆಂದು ಗೊತ್ತಾಗುತ್ತದೆ.

ಪುರುಷ ವಿಷಯವಲ್ಲಿ:– ಸುಶ್ರುತಾಚಾರ್ಯರು ಹೇಳಿದ ಅಭಿಪ್ರಾಯವು ವಿವರಿಸಲ್ಪಡುತ್ತದೆ (ಸುಶ್ರುತ|| ಸೂ|| ಅ ೧).

"**ಪಂಚಮಹಾಭೂತ ಶರೀರಿ ಸಮವಾಯಃ ಪುರುಷಃ**" ಪಂಚಮಹಾಭೂತಗಳ ಸ್ವರೂಪವಾದ ದೇಹ ಹೊಂದಿದವನು, ದೇಹಕ್ಕೆ ಚೈತನ್ಯಾತ್ಮಕನಾಗಿರುವವನು ಪುರುಷನು

ಹೀಗೆಂದು ಹೇಳಿರುವದರಿಂದ ದೇಹದಲ್ಲಿ ಯಾವ ಯಾವ ಭಾಗವು ಯಾವ ಯಾವ ಭೂತಾದಿಗಳ ಸ್ವರೂಪವುಳ್ಳದ್ದೆಂದು ಉದಹರಿಸುತ್ತಾರೆ ಆಕಾಶಾದಿ ಪಂಚಮಹಾಭೂತಗಳ ವಿಶೇಷದಿಂದುಂಟಾದ ಆವಾವ ಶರೀರ ಭಾಗಗಳನ್ನೂ ಗುಣಗಳನ್ನೂ ಆ ಭೂತಾದಿಗಳ ಹೆಸರಿನಿಂದಲೇ ಹೇಳುತ್ತಾರೆ.

## ದೇಹದಲ್ಲಿಯ ಪಾಂಚಭೌತಿಕ ವಿಭಾಗ

(೧) ಆಂತರಿಕ್ಷಾ:— "**ಶಬ್ದಃ ಶಬ್ದೇಂದ್ರಿಯಂ ಸರ್ವಛಿದ್ರ ಸಮೂಹೋ ವಿವಿಕ್ತತಾಚ ||**" (ಸುಶ್ರುತ|| ಶಾರೀರ ಅ ೧ ಸೂ. ೧೯)

ಶಬ್ದವು, ಶಬ್ದೇಂದ್ರಿಯಗಳು(ಕಿವಿ) ದೇಹದಲ್ಲಿರತಕ್ಕ ಎಲ್ಲಾ ಛಿದ್ರಗಳು, ಮತ್ತೂ ಪೊಳ್ಳು ಭಾಗಗಳೆಲ್ಲವೂ, ಆಕಾಶ ಸಂಬಂಧಿಯಾದವುಗಳು.

(೨) ವಾಯುವ್ಯಾಸ್ತು:— "**ಸ್ಪರ್ಶಃ ಸ್ಪರ್ಶೇಂದ್ರಿಯಂ ಸರ್ವಚೇಷ್ಟಾಸಮೂಹಃ ಸರ್ವಶರೀರ ಸ್ಪಂದನಂ ಲಘುತಾಚ**"

ಸ್ಪರ್ಶಗುಣವು, ಸ್ಪರ್ಶೇಂದ್ರಿಯವು (ಚರ್ಮ). ದೇಹದಲ್ಲಿಯ ಸರ್ವ ಚೇಷ್ಟಾಗಳು (ಕ್ರಿಯಾ) ಶರೀರದ ಚಲನವಲನಾದಿ ಕರ್ಮಗಳು, ಹಗುರು ಇರುವಂತಹವುಗಳು, ವಾಯುವಿನ ಸಂಬಂಧಿಯಾದಂಥವುಗಳು.

(೩) ತೈಜಸಾಸ್ತು:— "**ರೂಪಂ ರೂಪೇಂದ್ರಿಯಂ ವರ್ಣಃ ಸಂತಾಪೋಭ್ರಾಜಿಷ್ಣುತಾಪಕ್ತಿರಮರ್ಷಃ ತೈಕ್ಷ್ಣ್ಯಂ ಶೌರ್ಯಂಚ॥**"

ರೂಪವು, ರೂಪವನ್ನು ಗ್ರಹಿಸತಕ್ಕ ಇಂದ್ರಿಯಗಳು (ಕಣ್ಣುಗಳು). ಕೆಂಪು ಬಿಳಿ ಮೊದಲಾದ ಬಣ್ಣಗಳು, ಉಷ್ಣತೆಯು, ಬೆಳಕು, (ಪ್ರಕಾಶ) ದೇಹದಲ್ಲಿಯ ಆಹಾರ ರಸಾದಿಗಳನ್ನು ಅವಾವ ಸ್ಥಾನದಲ್ಲಿದ್ದುಕೊಂಡು ಪಚನ ಮಾಡುವದು, ಸಿಟ್ಟು, ತೀಕ್ಷ್ಣತೆಯು, ಶೌರ್ಯ ಇವುಗಳು ತೇಜಸ್ಸಿನ ಗುಣಗಳು.

(೪) ಆಪ್ಯಾಸ್ತು:— "**ರಸೋರಸನೇಂದ್ರಿಯಂ, ಸರ್ವದ್ರವಸಮೂಹೋಗುರುತಾಶೈತ್ಯಂ ಸ್ನೇಹೋರೇತಶ್ಚ**"

ರಸವು (ದ್ರವ ರೂಪವು) ರಸನೇಂದ್ರಿಯವು (ನಾಲಿಗೆ) ಎಲ್ಲಾ ದ್ರವ ರೂಪ ಸಮೂಹಗಳು, ಅಂದರೆ:- ದೋಷ ಧಾತು ಮಲಗಳಲ್ಲಿಯ ಸ್ರವಿಸತಕ್ಕ ದ್ರವ ರೂಪವು, ಜಡತ್ವವು, ಶೀತ, ಜಿಗುಟಾಗುವಿಕೆಯು, ರೇತಸ್ಸು, ಇವುಗಳು ಜಲೀಯ (ಜಲಸಂಬಂಧ) ವಾದವುಗಳು.

(೫) ಪಾರ್ಥಿವಾಸ್ತು:— "**ಗಂಧೋಗಂಧೇಂದ್ರಿಯಂ ಸರ್ವಮೂರ್ತ ಸಮೂಹೋಗುರುತಾಚ॥**

ಗಂಧವು, (ಸುವಾಸನೆ ದುರ್ವಾಸನೆ) ಗಂಧವನ್ನು ಗ್ರಹಿಸುವ ಇಂದ್ರಿಯ (ಮೂಗು) ಎಲ್ಲಾ ವಸ್ತುತಃ ಕಣ್ಣಿಗೆ ಕಾಣುವ ಇಂದ್ರಿಯಗಳು, ಶಿರಾ, ಸ್ನಾಯು, ಧಮನೀ, ಎಲಬು, ಮಾಂಸಾದಿ ದೃಶ್ಯ ಸ್ಥಿರ ದ್ರವ್ಯಗಳು, ಮತ್ತು ದೋಷ ಧಾತು ಮಲಗಳಲ್ಲಿಯ ಕಠಿಣ ಭಾಗಗಳು; ಪೃಥಿವಿಯ ಸಂಬಂಧವಾದವುಗಳು.

ಹೀಗೆ ದೇಹದಲ್ಲಿಯ ಪಾಂಚಭೌತಿಕ ಭಾಗಗಳನ್ನು ವಿವರಿಸಿರುವರು

## ಸಾತ್ವಿಕಾದಿ ಗುಣಗಳ ಸ್ವರೂಪಗಳು

**೧. ಸಾತ್ವಿಕಾಃ— ಆನೃಶಂಸ್ಯಂ ಸಂವಿಭಾಗರುಚಿತಾತಿತಿಕ್ಷಾ ಸತ್ಯಂ ಧರ್ಮಆಸ್ತಿಕ್ಯಂ ಜ್ಞಾನಂ ಬುದ್ಧಿಃ ಮೇಧಾಸ್ಮೃತಿಧೃತಿರನಭಿಷಂಗಶ್ಚ"** (ಸುಶ್ರುತ|| ಶಾರೀರ|| ಅ ೧ ಸೂ. ೧೮)

## ೧. ಸಾತ್ವಿಕ ಗುಣವು

ಮನೆ ಹಾಳು ಮಾಡುವ ಗುಣವಿಲ್ಲದಿರುವದು; (ಕ್ರೂರ ಕರ್ಮವಿಲ್ಲದಿರುವದು) ಸಾತ್ವಿಕ ಆಹಾರ ನಡತೆಗಳಲ್ಲಿ ಪ್ರೀತಿಯಿರುವದು. ಸಹನತೆಯು. (ಕ್ಷಮೆಯು) ಮನೋಹರವಾದ ಹಿತವುಳ್ಳ ವಸ್ತು ಸ್ಥಿತಿಯನ್ನೇ ಮಾತಾಡುವದು. ಕಾಯುವಾಕ್‌ಮನಸ್ಸಿನಿಂದ ಒಳ್ಳೇ ನಡತೆ ಇರೋಣ, ಧರ್ಮಪಾರಲೌಕಿಕ ನಂಬುವದು; ಆತ್ಮಜ್ಞಾನ, ಆಗಿಂದಾಗ ವಿಷಯುವನ್ನು ಗ್ರಹಿಸತಕ್ಕ ಬುದ್ಧಿ, ಗ್ರಂಥಾದಿ ವಿಷಯಗಳನ್ನು ನಿರ್ಣಯ ಮಾಡುವ ಶಕ್ತಿಯು, ಮನೋನಿಗ್ರಹಮಾಡುವದು, ಮೊದಲು ಅನುಭವಿಸಿದ ಅಥವಾ ಒಮ್ಮೆ ಗ್ರಹಿಸಿದ್ದನ್ನೂ ಕೂಡಾ ನೆನಪಿಡುವದು, ಫಲಾಶೆಯ ಲೋಭವಿಲ್ಲದೆ ಕರ್ಮ ಮಾಡುವ ಗುಣವು, ಇವು ಸಾತ್ವಿಕ ಶರೀರದ ಭಾವಗಳು.

## ೨. ರಾಜಸ ಗುಣ

**ರಾಜಸಾಸ್ತು :— ದುಃಖಬಹುಲತಾಟನಶಿಲತಾಧೃತಿರಹಂಕಾರ ಆನೃತಿಕತ್ವಮಕಾರುಣ್ಯಂ ದಂಭೋಮಾನೋ ಹರ್ಷಃ ಕಾಮಃ ಕ್ರೋಧಶ್ಚ"**

ಬಹು ವಿಧವಾದ ದುಃಖ ಕಾರಣಗಳಿಂದ ಕೂಡಿರುವದು, ಸಂಚಾರ ಸ್ವಭಾವ. ಮನೋನಿಗ್ರಹವಿಲ್ಲದಿರುವದು, (ಮನಸ್ಸಿಗೆ ಹೆದರಿಕೆಯಾಗೋಣ) ಅಹಂಕಾರ, ಸುಳ್ಳು ಮಾತಾಡುವ ಗುಣವು, ಕರುಣೆಯಿಲ್ಲದಿರುವದು(ನಿರ್ದಯತ್ವ) ಕುಹಕ ವೃತ್ತಿ, ತಾನು ಹೆಚ್ಚಿನವನೆಂಬ ಬುದ್ಧಿ, ಸುಖಾಭಿಲಾಷೆಯು, ಕಾಮುಕತೆ, ಸಿಟ್ಟು, ಇವು ರಾಜಸ ಗುಣಗಳು.

## ೩. ತಾಮಸ ಗುಣ

**ತಾಮಸಾಸ್ತು:— ವಿಷಾದಿತ್ವಂ ನಾಸ್ತಿಕ್ಯಮಧರ್ಮಶೀಲತಾ ಬುದ್ಧೇರ್ನಿರೋಧೋಜ್ಞಾನಂ ದುರ್ಮೇಧಸ್ತ್ವಂ ಅಕರ್ಮಶೀಲತಾ ನಿದ್ರಾಲುತ್ವಂಚೇತಿ"**

ವಿಷಣ್ಣವಾಗಿರುವದು, ಅಥವಾ ಮೂರ್ಖತ್ವ, ಧರ್ಮ ಪಾರಲೌಕಿಕ ಬುದ್ಧಿಯಿಲ್ಲದಿರುವದು, ಕೆಟ್ಟ ಕೆಲಸ ಅಧರ್ಮದಲ್ಲಿ ರುಚಿಯಿರುವಿಕೆ, ಜಡ ಬುದ್ಧಿಯು, ಆತ್ಮಜ್ಞಾನ ಮತ್ತು ವಿಜ್ಞಾನ ಇವೆರಡೂಯಿಲ್ಲದಿರುವದು, ದುಷ್ಟಬುದ್ಧಿಯು, ಕರ್ತವ್ಯಮಾಡದೇ ಇರುವದು, ಅಥವಾ, ದುಷ್ಕೃತಿಯನ್ನು ಮಾಡುವದು. ಯಾವಾಗಲೂ ನಿದ್ರೆ ಮಾಡುವ ಸ್ವಭಾವವು, ಇವು ತಾಮಸ ಭಾವದ ಶರೀರ ಲಕ್ಷಣಗಳು.

## ಸಾತ್ವಿಕಾದಿ ಗುಣಯುಕ್ತವಾದ ಪಂಚ ಭೂತಗಳು

ಯಾವ ಯಾವ ಭೂತಗಳಲ್ಲಿ ಸಾತ್ವಿಕಾದಿ ಯಾವ ಯಾವ ಗುಣಗಳಿರುತ್ತವೆಯೆಂಬುವದನ್ನು ಹೇಳುತ್ತಾರೆ.

ತತ್ರಸತ್ವಬಹುಲಮಾಕಾಶಂ, ರಜೋಬಹುಲೋವಾಯುಃ ಸತ್ವರಜೋಬಹುಲೋಽಗ್ನಿಃ, ಸತ್ವತಮೋಬಹುಲಾಆಪಃ ತಮೋಬಹುಲಾ ಪೃಥಿವೀತಿ" (ಸುಶ್ರುತ|| ಶಾರೀರ|| ಅ ೧ ಸೂ ೨೦)

**ಆಕಾಶ ||೧||** ಪ್ರಕಾಶಕ (ಹೆಚ್ಚಿನದಾಗಿ ಪ್ರಕಟವಾಗುವ) ವಾದ್ದರಿಂದ, ಸತ್ವಗುಣ ಬಹಳವಾದದ್ದು ಇರುತ್ತದೆ.

**ವಾಯು ||೨||** ಚಂಚಲಗುಣವಿರುವದರಿಂದ, ರಜೋಗುಣಾಧಿಕ್ಯವುಳ್ಳದ್ದು.

**ಅಗ್ನಿ ||೩||** ಪ್ರಕಾಶಕ ಚಂಚಲ ಗುಣವಿರುವದರಿಂದ, ಸತ್ವರಜೋಗುಣಗಳ ಬಾಹುಲ್ಯವುಳ್ಳದ್ದು.

**ಜಲ ||೪||** ಸ್ವಚ್ಛವಿರುವದರಿಂದ ಪ್ರಕಾಶಕ, ಆವರಣೆಯುಳ್ಳದ್ದರಿಂದ ಜಡ, ಹೀಗೆ ಸತ್ವ ತಮೋ ಗುಣಾಧಿಕ್ಯವುಳ್ಳದ್ದು ಜಲವು.

**ಪೃಥಿವೀ ||೫||** ಕೇವಲ ಜಡ ಆವರಣವೂ, ಮಂದವಾದದ್ದಿರುವದರಿಂದಲೂ, ತಮೋಗುಣ ಬಹುಲವಾದದ್ದು ಪೃಥಿವಿಯು. ಕೇವಲ ತಮಸ್ಸಿನ ಬಹುಲತೆಯಿರುವದರಿಂದ ಇದು ಕನಿಷ್ಠವಾದದ್ದು ಇರುವದು.

ಸಾತ್ವಿಕಾದಿ ಗುಣಗಳ ಸ್ವರೂಪವನ್ನು ಹಿಂದೆ ಹೇಳಿರುತ್ತದೆ. ಅವುಗಳನ್ನು ಆಯಾವ ಸತ್ವ ಮೊದಲಾದ ಗುಣಗಳಿಗೆ ಹೋಲಿಸಿ ತಿಳಿಯಬೇಕು.

# ಆಯುರ್ವೇದ ಶಾಸ್ತ್ರದಲ್ಲಿಯ ಪುರುಷ ಸಂಜ್ಞೆಯು

**ನಚಆಯುರ್ವೇದಶಾಸ್ತ್ರೇಷೂಪದಿಶ್ಯಂತಿ ಸರ್ವಗತಾಃ ಕ್ಷೇತ್ರ ಜ್ಞಾನಿತ್ಯಾಶ್ಚ; ಅಸರ್ವಗತೇಷುಚಕ್ಷೇತ್ರಜ್ಞೇಷುನಿತ್ಯಪುರುಷ ಖ್ಯಾಪಕಾನ್ ಹೇತೂನುದಾಹರಂತಿ, ಆಯುರ್ವೇದ ಶಾಸ್ತ್ರೇ ಷ್ವಸರ್ವಗತಾಃ ಕ್ಷೇತ್ರಜ್ಞಾನಿತ್ಯಾಶ್ಚ ತಿರ್ಯಗ್ಯೋನಿಮಾನುಷ ದೇವೇಷುಸಂಚರಂತಿಧರ್ಮಾಧರ್ಮನಿಮಿತ್ತಂ; ತಏತೇಅನು ಮಾನಗ್ರಾಹ್ಯಾಃ ಪರಮಸೂಕ್ಷ್ಮಾಶ್ಚೇತನಾವಂತಃ ಶಾಶ್ವತಾ ಲೋಹಿತರೇತಸೋಃ ಸನ್ನಿಪಾತೆಷ್ವಭಿವ್ಯಜ್ಯಂತೆ ||**

(ಸುಶ್ರುತ|| ಶಾರೀರ|| ಅ ೧ ಸೂ. ೧೬)

ಸಾಂಖ್ಯಾದಿ ದರ್ಶನಗಳಲ್ಲಿ ಹೇಳಿದ ಪುರುಷ ಲಕ್ಷಣವನ್ನು ಹಿಂದೆ ಹೇಳಿದೆ ಆಯುರ್ವೇದ ಶಾಸ್ತ್ರದಲ್ಲಿ ಗ್ರಹೀತವಾದ ಆತ್ಮನ (ಪುರುಷನ) ಲಕ್ಷಣ ಭೇದವನ್ನು ವಿವರಿಸುತ್ತಾರೆ:— ಆಯುರ್ವೇದದಲ್ಲಿ ಸರ್ವ ವ್ಯಾಪಿ ನಿತ್ಯವಾದ ಕ್ಷೇತ್ರಜ್ಞರನ್ನು ಉಪದೇಶ ಮಾಡುವದಿಲ್ಲ. ಪ್ರತಿ ದೇಹ ಭಿನ್ನ ವಾದ ಕ್ಷೇತ್ರಜ್ಞರಲ್ಲಿ (ಅಸರ್ವಗತ) ನಿತ್ಯ ಸರ್ವಗತ ಪುರುಷ ಗುಣಾದಿಗಳನ್ನು ಹೋಲಿಸಿ, ಕಾರಣ ಮೊದಲಾದವುಗಳನ್ನು ಹೇಳುತ್ತಾರೆ. ಆಯುರ್ವೇದ ಶಾಸ್ತ್ರಗಳಲ್ಲಿ ಉಕ್ತವಾದ ಕ್ಷೇತ್ರಜ್ಞರು (ಜೀವಗಳು) ಭಿನ್ನ ಭಿನ್ನ ದೇಹಗಳಲ್ಲಿ ರುವದರಿಂದ ಪರಿಮಿತಿ (ಅಸರ್ವಗತ) ವಾದವುಗಳು. ನಿತ್ಯವಾದವುಗಳೂ ಇರುತ್ತವೆ. ಅವುಗಳು ಧರ್ಮಾಧರ್ಮಗಳಿಂದ, ಪಶುಪಕ್ಷ್ಯಾದಿತಿರ್ಯಕ್ ದೇಹವನ್ನೂ, ಮನುಷ್ಯ, ದೇವಯೋನಿಗಳನ್ನೂ ಹೊಂದುತ್ತವೆ. ಅಧರ್ಮ ದಿಂದ ಪಶ್ವಾದಿಯೋನಿಯನ್ನೂ, ಧರ್ಮಾಧರ್ಮದಿಂದ ಮನುಷ್ಯ ದೇಹ ವನ್ನೂ, ಕೇವಲ ಧರ್ಮದಿಂದ ದೇವತ್ವವನ್ನು ಅಥವಾ ದೇವಯೋನಿ ವಿಶೇಷ ವನ್ನು, ಪಡೆದು, ವಿವಿಧ ಯೋನಿಗಳಲ್ಲಿ ಸಂಚರಿಸುತ್ತವೆ. ಆದ್ದರಿಂದಲೇ ಒಂದು ಪರಿಮಿತಿ ಇರುವದರಿಂದ, "ಅಸರ್ವಗತಾಃ" ಎಂದು ಹೇಳಿದ್ದಾರೆ. ಅರ್ಥಾತ್ ಎಲ್ಲ ಕಡೆಗೆ ವ್ಯಾಪಕವಾಗಿರುವದಿಲ್ಲವೆಂಬರ್ಥವು. ಈ ಎಲ್ಲ ಇನ್ನು

ಮಾನಗಳಿಂದ ಅಸರ್ವಗತವೆಂದು ತಿಳಿಯುತ್ತದೆ. ಒಂದು ದೇಹದಲ್ಲಿಯ ರೋಗದ ದುಃಖವು, ಮತ್ತೊಂದು ದೇಹದಲ್ಲಿರುವ ಜೀವಕ್ಕೆ (ಪುರುಷನಿಗೆ) ಬಾಧಕ ದುಃಖವಾಗುವದಿಲ್ಲವಾದ್ದರಿಂದ, ಪ್ರತಿ ಶರೀರ ಭಿನ್ನ ಪರಿಮಿತ (ಅಸರ್ವಗತತ್ವ)ದಿಂದ ವ್ಯಾಪಕನು ಅಲ್ಲವೆಂಬುವದು ಸಿದ್ಧವಾಗುತ್ತದೆ. ಇನ ರಂತೆ ಅನುಮಾನದಿಂದ ಪುರುಷನಲ್ಲಿಯು ವಿಶೇಷವನ್ನು ತಿಳಿಯಬೇಕು. ಪರಮ ಸೂಕ್ಷ್ಮವಾದ, ಚೇತನಾ ಸ್ವರೂಪ, ನಿತ್ಯವಾದ, ಪುರುಷನು (ಆತ್ಮ) ಹೇಗೆ ಗೋಚರವಾಗುತ್ತಾನೆ? ಹೀಗೆಂಬ ಆಕ್ಷೇಪ ಬಂದೇ ಬರುತ್ತದೆ. ಇದಕ್ಕೆ ಆಯುರ್ವೇದ ಸಿದ್ಧಾಂತವೇನಂದರೆ.— ಪರಮ ಸೂಕ್ಷ್ಮ ಆತ್ಮಗಳು (ಪ್ರಾಣಿ) ಶುಕ್ರಶೋಣಿತಗಳ (ಲೋಹಿತರೇತಸೋಃ) ಸಂಮಿಲನಗಳಲ್ಲಿ ಯಥಾಯೋಗ್ಯ ಪ್ರಕಟವಾಗುತ್ತವೆ. ಹೀಗೆ ಪ್ರಕಟವಾದವುಗಳಿಂದ ಸೂಕ್ಷ್ಮ ವಾದ "ಜೀವಗಳು" ಅನುಮಾನ ಗ್ರಾಹ್ಯವಾಗುತ್ತವೆ. ಆದ್ದರಿಂದ ಸಿಂದ್ಧಾಂತ ನಿರ್ಣಯದಲ್ಲಿ ಹೀಗೆ ಹೇಳಲ್ಪಟ್ಟಿದೆ:-

**ಯತೋಽಭಿಹಿತಂ- "ಪಂಚಮಹಾಭೂತಶರೀರಿ ಸಮವಾಯಃ ಪುರುಷಃ" (ಸೂ ೩. ೧) ಇತಿ; ಸಏಷಕರ್ಮಪುರುಷಶ್ಚಿಕಿತ್ಸಾ ಧಿಕೃತಃ ॥ (ಸುಶ್ರುತ॥ ಶಾರೀರ॥ ಅ ೧ ಸೂ ೧೬)**

ಪಂಚಮಹಾಭೂತಗಳ ಸ್ವರೂಪವಾದ ಶರೀರವನ್ನು ಅತ್ಯಂತವಾಗಿ ವಿಶೇಷ ಸಮವಾಯ ಸಂಬಂಧಾತ್ಮನಾಗಿ ಹೊಂದಿಕೊಂಡಿರುವದೇ; ಪುರುಷ ಎಂದು ಹೇಳುತ್ತಾರೆ. ಕರ್ಮ ಫಲವನ್ನು ಭೋಗಿಸುವ ಈ ಪುರುಷನೇ ಆಯುರ್ವೇದದಲ್ಲಿ ಹೇಳಿದ ಚಿಕಿತ್ಸಾಧಿ ಕೃತ ಕರ್ಮ ಪುರುಷನು. ಅರ್ಥಾತ್, ಚಿಕಿತ್ಸಾ ಕರ್ಮ ಫಲವನ್ನು (ರೋಗ ನಿವಾರಕ ರೂಪವಾದ) ಹೊಂದತಕ್ಕ ವನು ಇರುತ್ತಾನೆ. ಇವನಲ್ಲಿಯೇ ಚಿಕಿತ್ಸೆ ಮಾಡುವದರಿಂದ "ಚಿಕಿತ್ಸಾದಿ ಕೃತಃ" ಎಂದು ಹೇಳಿದ್ದಾರೆ.

**"ಇದಾನೀಂ ತಸ್ಯೈವ ಕರ್ಮ ಪುರುಷಸ್ಯ ಶರೀರಾತ್ಮನೋಃ ಸಂಯೋಗಕಾರಕೇಣಮನಸಾಸಂಯೋಗೇ ಯೇ ಗುಣಾಉತ್ಪ ದ್ಯಂತೆತಾನಾಹುಃ" (ಸುಶ್ರುತ ಟೀಕಾ)**

ಈಗ ಹೇಳಿದ ಕರ್ಮ ಪುರುಷನಿಗೆ (ಚಿಕಿತ್ಸಾಧಿಕೃತ) ಶರೀರ ಆತ್ಮಗಳ ಸಂಯೋಗ ಮಾಡುವ ಮನಸ್ಸಿನ ಯೋಗದಿಂದ, ಉತ್ಪನ್ನವಾಗುವ ಗುಣಗಳನ್ನು ಹೇಳುತ್ತಾರೆ.

## ಕ್ಷೇತ್ರಜ್ಞನ ಗುಣಗಳು

**ತಸ್ಯ ಸುಖದುಃಖೇಚ್ಛಾದ್ವೇಷೌ ಪ್ರಯತ್ನಃ ಪ್ರಾಣಾಪಾನಾವುನ್ಮೇಷನಿಮೇಷೌ ಬುದ್ಧಿರ್ಮನಸ್ಸಂಕಲ್ಪೋ ವಿಚಾರಣಾ ಸ್ಮೃತಿರ್ವಿಜ್ಞಾನಮಧ್ಯವಸಾಯೋ ವಿಷಯೋಪಲಬ್ಧಿಶ್ಚ ಗುಣಾಃ ||**

(ಸುಶ್ರುತ|| ಶಾರೀರ|| ಅ ೧ ಸೂ. ೧೭)

(೧) **ಸುಖ:—** ಇಷ್ಟವಾಗಿದ್ದು, ಸಂತೋಷವನ್ನುಂಟು ಮಾಡತ್ತಿರುವದು. (೨) **ದುಃಖ:—** ಬೇಕೆಂದು ಅನಿಸದೆ, ವೇದನೆ (ನೋವು) ಉಂಟುಮಾಡತಕ್ಕದ್ದು, ಆದ್ದರಿಂದ ಬೇಡವೆಂದೆನಿಸುವದು (೩) **ಇಚ್ಛಾ** - ಅಭಿಲಾಷೆಯು. (೪) **ದ್ವೇಷ:-** ಅಪ್ರೀತಿಯ ಲಕ್ಷಣವು. (೫) **ಪ್ರಯತ್ನ:-** ಕರ್ಮಾರಂಭ ಮಾಡುವ ಉತ್ಸಾಹವು. (೬) **ಪ್ರಾಣ:—** ಹೃದಯದಲ್ಲಿದ್ದು ಮುಖದಿಂದ ಆಗಮನ ನಿರ್ಗಮವುಳ್ಳವಾಯುವು. (೭) **ಅಪಾನ:-** ಮಲಾಶಯದಲ್ಲಿದ್ದು, ಅಧೋಗಾಮಿಯಾದ ವಾಯುವು. (೮) **ಉನ್ಮೇಷ:-** ಕಣ್ಣಿನ ರೆಪ್ಪೆಗಳನ್ನು ತೆರೆಯುವದು (೯) **ನಿಮೇಷ:—** ಕಣ್ಣು ಮುಚ್ಚುವಿಕೆಯು. (೧೦) **ಬುದ್ಧಿ:—** ನಿಶ್ಚಯಾತ್ಮಕ ವಿಚಾರವುಳ್ಳದ್ದು. (೧೧) **ಮನಸ್ಸಂಕಲ್ಪ:—** ಸಂಶಯಾತ್ಮಕವಾದ ಮನಸ್ಸಿನ ಕರ್ಮವು. (೧೨) **ವಿಚಾರಣಾ:—** ಊಹಾಪೋಹ (ತರ್ಕವಿತರ್ಕ) ಗಳಿಂದ, ವಿಷಯ ವಿಮರ್ಶೆಯು. (೧೩) **ಸ್ಮೃತಿ:-** ಪೂರ್ವದಲ್ಲಿ ಗ್ರಹಿಸಿದವುಗಳ ನೆನಪು. (೧೪) **ವಿಜ್ಞಾನ:-** ಶಿಲ್ಪ ಮತ್ತು ಶಾಸ್ತ್ರಾದಿಗಳ ಜ್ಞಾನವು. (೧೫) **ಅಧ್ಯವಸಾಯ:-** ಬುದ್ಧಿಯ ವ್ಯಾಪಾರವು. (೧೬) **ವಿಷಯೋಪಲಬ್ಧಿ:—** ಶಬ್ದಾದಿ ವಿಷಯಗಳನ್ನು ಗ್ರಹಿಸಿ, ಉಪಭೋಗಿಸುವದು.

ಈ ಸುಖಾದಿಗುಣಗಳು (೧೬) ಕರ್ಮ ಪುರುಷನಲ್ಲಿ (ಚಿಕಿತ್ಸಾಧಿಕೃತ) ಇರತಕ್ಕವುಗಳಾಗಿರುತ್ತವೆ. ಕೆಲವರು ಕರ್ಮ ಪುರುಷನ ಷೋಡಶ ಗುಣಗಳಿಗೆ, "ಷೋಡಶಕಲಾ" ಎಂತಲೂ ಅನ್ನುತ್ತಾರೆ.

**ಪ್ರಕೃತಿ, ವಿಕಾರ, ಕ್ಷೇತ್ರಜ್ಞ, ವಿಷಯ ಸಮಾರೋಪವು:-**

**ಅಷ್ಟೌಪ್ರಕೃತಯಃ ಪ್ರೋಕ್ತಾವಿಕಾರಾಃ ಷೋಡಶೈವತು ||**
**ಕ್ಷೇತ್ರಜ್ಞಶ್ಚಸಮಾಸೇನ ಸ್ವತಂತ್ರಪರತಂತ್ರಯೋಃ ||**
(ಸುಶ್ರುತ|| ಶಾರೀರ|| ಅ ೧ ಶ್ಲೋ. ೨೨)

(೮) ಎಂಟುವಿಧವಾದ ಪ್ರಕೃತಿಗಳು. (೧೬) ವಿಕಾರಗಳು ಹದಿನಾರು. ಮತ್ತು ಕ್ಷೇತ್ರಜ್ಞ (ಪುರುಷ) ಇವೆಲ್ಲವುಗಳು; ಸಮುದಾಯವಾಗಿ (ಸಮಾಸೇನ) ಸುಶ್ರುತ, ಶಲ್ಯ, ಶಾಲಾಕ್ಯ ತಂತ್ರಗಳಲ್ಲಿಯೂ, ಸಾಂಖ್ಯ ದರ್ಶನದಲ್ಲಿಯೂ, ವಿವರಿಸಲ್ಪಟ್ಟಿರುತ್ತವೆ. "ಪುರ್" ಎಂಬ ಶಬ್ದದಿಂದ ಮಹದಾದಿಕೃತವಾದ ಲಿಂಗಶರೀರ (ಸೂಕ್ಷ್ಮ) ಸೂಚಿಸಲ್ಪಡುತ್ತದೆ. ಆ ಲಿಂಗ ಶರೀರವು ಯೋಗಿಗಳಿಗೆ ಮಾತ್ರ ಗಮ್ಯವು. "ಪುರಿ" ಲಿಂಗ ಶರೀರದಲ್ಲಿ "ಶೇತೆ" ಇರುತ್ತಾನೆ, ಆದ್ದರಿಂದ "ಪುರುಷ" ನೆಂದು ಅನ್ನುತ್ತಾರೆ

**"ಪುರ್" ಶಬ್ದೇನಮಹದಾದಿಕೃತಂ ಸೂಕ್ಷ್ಮಂ ಲಿಂಗಶರೀರಮುಚ್ಯತೆ|| ತಚ್ಚಯೋಗಿನಾಮೇವದೃಶ್ಯಂತತ್ರ "ಪುರಿ" ಶೇತೆ ಇತಿ ಪುರುಷಃ** (ಸುಶ್ರುತ ಟೀಕಾ)

ಉತ್ಪನ್ನವಾದ ಜಗತ್ತು ಮತ್ತು ದೇಹ ಇವುಗಳ ಮೂಲ ಕಾರಣವನ್ನು ವಿವರಿಸುವ ಉದ್ದೇಶದಿಂದ ಪ್ರಕೃತಿ, ವಿಕಾರ, ಕ್ಷೇತ್ರಜ್ಞ ಮೊದಲಾದವುಗಳನ್ನು ಹೇಳಿದ್ದಾರೆ. ಯೋಗ ಮೋಕ್ಷಾದಿಗಳಿಗೂ ಪ್ರಕೃತ್ಯಾದಿ ವಿಮರ್ಶೆಯು ಅವಶ್ಯವಿದೆ. ಚಿಕಿತ್ಸೆಯಲ್ಲಿಯೂ, ಚಿಂತೆ, ಮನೋರೋಗಾದಿಗಳಲ್ಲಿ, ಆತ್ಮಾದಿ ವಿಜ್ಞಾನಗಳು, ಮನೋ ದೋಷ ನಿವಾರಣೋಪಾಯವೆಂದು ಹೇಳಿದ್ದಾರೆ. ಆದ್ದರಿಂದ ಪ್ರಕೃತ್ಯಾದಿ ವಿವರಣೆಯು ವಿಶೇಷಪ್ರಾಸಂಗಿಕವಾದದ್ದೇ ಇರುತ್ತದೆ.

### ಮನೋ ದೋಷಕ್ಕೆ ಔಷಧ

**ಧೀಧೈರ್ಯಾತ್ಮಾದಿವಿಜ್ಞಾನಂ ಮನೋದೋಷೌಷಧಂಪರಂ||**
(ವಾಗ್ಭಟ|| ಸೂ|| ಅ ೧ ಶ್ಲೋ. ೨೬)

ಧೀಃ ಬುದ್ಧಿಯು. ವ್ಯಾವಹಾರಿಕ, ಆಧ್ಯಾತ್ಮಿಕ, ಹಿತಾಹಿತಗಳನ್ನು ವಿಭಾಗಿಸಿ ತಿಳಿಸುವಂಥಾದ್ದು ಅಥವಾ ಹಿತಾಹಿತ ವಿವೇಕವನ್ನುಂಟು ಮಾಡುತ್ತಿರುವದು.

ಧೈರ್ಯಂ ಮನಸ್ಸನ್ನು ಧೃಡಪಡಿಸುವಂಥದು, ಅಥವಾ ಮನಸ್ಸಿನ ಲ್ಲಿಯ ಚಂಚಲತೆ ಇಲ್ಲದೆ, ಅಹಿತವಾದದ್ದನ್ನು ಬಿಡುತ್ತಲೂ, ಹಿತವನ್ನು ಅನುಸರಿಸುತ್ತಲೂ ಇರುವದು.

ಆತ್ಮಾದಿವಿಜ್ಞಾನಂ ಶಾಸ್ತ್ರ ವಿಚಾರ, ಯೋಗಾಭ್ಯಾಸ ಸಮಾಧಿಗಳಿಂದ, ಆತ್ಮಾನಾತ್ಮ ವಿಚಾರಗಳಿಂದ ಆತ್ಮ ಸ್ಥಿತಿಯನ್ನು ಹೊಂದುವದು. "ವಿಜ್ಞಾನಶಬ್ದದಿಂದ" ಕಲಾಕೌಶಲ್ಯ ಶಾಸ್ತ್ರಾದಿ ಜ್ಞಾನ, ಅಥವಾ ದೇಶಕಾಲಾದಿಗಳ ಜ್ಞಾನ ವಿಜ್ಞಾನ ಸ್ಮೃತಿಗಳು ಉಕ್ತವಾಗುತ್ತವೆ ಇವೆಲ್ಲವುಗಳು ಮನಸ್ಸಿನ ದೋಷವಾದ, ರಜಸ್ತಮ ಕಾಮಕ್ರೋಧಾದಿಗಳಿಂದ ಉಂಟಾದ, ಚಿಂತೆ ಭಯ ರೂಪವಾದ ರೋಗಗಳಿಗೆ ಶ್ರೇಷ್ಠ ಔಷಧಗಳು. ಮನಸ್ಸಿನ ರೋಗವನ್ನು ನಿವಾರಿಸುವ "ಧೀಧೈರ್ಯಾತ್ಮಾದಿವಿಜ್ಞಾನ" ಮೊದಲಾದವುಗಳು, ಮನೋರೋಗದಲ್ಲಿ ದೋಷನಿವಾರಣೆಯ ಸಾಧನಗಳು; ಮುಖ್ಯವಾಗಿ ಇವುಗಳೆಂದು ಹೇಳಿದ್ದಾರೆ.

# ಮೋಕ್ಷ ವಿಷಯದಲ್ಲಿಯ ಮತಭೇದ

## (೧) ವೇದಾಂತ ಮತ

**ಸ್ವಸ್ವರೂಪಜ್ಞಾನಾತ್ ಮಾಯಾಮೂಲಾಜ್ಞಾನ ನಿವೃತ್ತೌ ಸ್ವರೂಪಾಧಿಗಮೋಮೋಕ್ಷಃ ॥**

ತನ್ನ (ಆತ್ಮ) ಸ್ವರೂಪ ಜ್ಞಾನದಿಂದ, ಮಾಯೆಯೇ ಕಾರಣವಾಗಿರುವ ಅಜ್ಞಾನವು ಹೋಗಿ, ತನ್ನ ನಿಜಸ್ಥಿತಿ (ಆತ್ಮ ಸ್ಥಿತಿ) ಯನ್ನು ಹೊಂದುವದೇ ಮೋಕ್ಷವು.

## (೧) ಸಾಂಖ್ಯ ಮತ

**ಪ್ರಕೃತಿಪುರುಷವಿವೇಕಜ್ಞಾನಾತ್ ಮೋಕ್ಷಃ॥ ಅಥವಾ ಪ್ರಕೃತ್ಯುಪರಮೆ ಪುರುಷಸ್ಯಸ್ವಸ್ವರೂಪಾವಸ್ಥಾನಂ ಮೋಕ್ಷಃ; ಪ್ರಕೃತ್ಯುಪರಮಸ್ತು ಪ್ರಕೃತಿಪುರುಷಯೋರ್ಭೇದಜ್ಞಾನಾತ್ ॥**

ಪ್ರಕೃತಿ (ಅವ್ಯಕ್ತಾದಿ) ಪುರುಷ (ಕ್ಷೇತ್ರಜ್ಞ) ಇವುಗಳು ಬೇರೆ ಬೇರೆ ಯೆಂದು ಅನುಭವ ಜ್ಞಾನವಾಗುವದೇ ಮೋಕ್ಷವು. ಇಲ್ಲಿ ವಿವೇಕವೆಂದರೆ ಕೇವಲ ಜ್ಞಾನವೆಂದು ಅರ್ಥ ಮಾಡಬಾರದು. ಯಾಕಂದರೆ ಪ್ರಕೃತಿ ಪುರುಷ ಇವು ಭಿನ್ನವೆಂಬ ಅನುಭವ (ಅನುಭೂತ) ಯುಕ್ತವಾದ ಜ್ಞಾನ ವಾದರೇನೇ ಮೋಕ್ಷವು. ಪುಸ್ತಕವನ್ನು ಓದಿ ಶಬ್ದ ಮಾತ್ರ ಜ್ಞಾನವು ಮೋಕ್ಷ ದಾಯಕವಲ್ಲವು. ಪ್ರಕೃತಿ ಪುರುಷ ಭೇದವು ಅತ್ಯಂತ ಸ್ಥಿರವಾಗಿ ಭಾವ ನೆಯ ಸ್ವರೂಪವಾಗಬೇಕು.

ಹೀಗೆ **ವಿವೇಕ** (ಭೇದ) ವುಂಟಾಗಲು, ಪ್ರಕೃತಿಯಿಂದ ಭಿನ್ನವಾದ ಪುರುಷನು, ತನ್ನ ಸ್ಥಿತಿಯಲ್ಲಿಯೇ ಇರುತ್ತಾನೆ. ಪ್ರಕೃತಿರಹಿತನಾದ್ದರಿಂದ ದೇಹಾದಿಗಳ ಉತ್ಪತ್ತಿಯೇ ಇಲ್ಲದ್ದರಿಂದ, ದೇಹಾದಿಗಳಿಂದ ಭಿನ್ನವಾದವ ನಾಗಿ ತನ್ನ ಸ್ವರೂಪದಲ್ಲಿಯೇ ಇರುತ್ತಾನೆ. ಪ್ರಕೃತಿಯು ಭಿನ್ನವಾಗುವಂತೆ ಮಾಡಲು ಅಥವಾ ಪ್ರಕೃತಿಯು ಪುರುಷನನ್ನು ಕೂಡಿಕೊಂಡು, ಉತ್ಪತ್ತಿ ಯನ್ನು ಮಾಡದಂತೆ ಮಾಡಲು, ಪ್ರಕೃತಿ ಪುರಷರಲ್ಲಿ ಭೇದವಾ (ಭೇದ ಜ್ಞಾನ) ಗಬೇಕು. ಇದರಿಂದಲೇ ಪ್ರಕೃತ್ಯುಪರಮವಾಗುತ್ತದೆ. ಇದು ಸಾಂಖ್ಯ ಮತದಂತೆ ಮೋಕ್ಷ ಸಿದ್ಧಾಂತವು ಸುಶ್ರುತಾಚಾರ್ಯರು ಇದನ್ನೇ ಗ್ರಹಿಸಿದ್ದಾರೆ

## (೩) ಯೋಗಮತ

**[ಜೀವಸ್ಯ] ನಿರುಪಾಧಿಕಸ್ವರೂಪೇಣಅವಸ್ಥಾನಂ ಮೋಕ್ಷಃ ॥ ತಚ್ಚಯಮನಿಯಮಾದಿ ಅಷ್ಟಾಂಗಯೋಗಜನ್ಯಂ ॥**

ಜೀವಕ್ಕಿರುವ ಉಪಾಧಿ (ದೇಹ, ಕರ್ಮರೂಪವಾದ ಆವರಣ) ಸ್ಥಿತಿಯನ್ನು ಹೋಗಲಾಡಿಸಿ ಸ್ವಸ್ವರೂಪ (ಪರಮಾತ್ಮ) ಸ್ಥಿತಿಯಲ್ಲಿರುವದೇ ಮೋಕ್ಷವು. ಅದು "ಸ್ವರೂಪಾವಸ್ಥಾನ" ಯಮನಿಯಮಾದಿ ಅಷ್ಟಾಂಗ ಯೋಗದಿಂದ ಸಂಭವಿಸುತ್ತದೆ.

**ಮೋಕ್ಷ ವಿಷಯದಲ್ಲಿ ವಿಶೇಷ:—** ಚರಕ ಸಂಹಿತೆಯಲ್ಲಿ ಯೋಗದಿಂದ ಮೋಕ್ಷವೆನ್ನುವ ಯೋಗ ಮತವನ್ನೂ, ವೇದಾಂತ ಮತ, ಸಾಂಖ್ಯ, ಎಲ್ಲವುಗಳನ್ನೂ ಗ್ರಹಿಸಿರುವದರಿಂದ ಇಲ್ಲಿ ಅವುಗಳನ್ನು ಪ್ರತ್ಯೇಕವಾಗಿ ಹೇಳಿದ್ದೇನೆ. ವಿಮರ್ಶೆಯು ವಿಸ್ತಾರವಾಗುವದರಿಂದ ತ್ಯಜಿಸಿ, ಸಿದ್ಧಾಂತವನ್ನೇ ವಿವರಿಸಿರುವೆನು. ಆತ್ಮ ವಿಷಯದಲ್ಲಿಯ ಪ್ರಕೃತ್ಯಾದಿ ವಿವರಣೆಯುಳ್ಳ ಶಾರೀರವು, ಯೋಗಿಗಳಿಗೆ ದೇಹ ರೂಪವಾದ (ಜನನ-ಮರಣ) ದುಃಖವನ್ನು ನಿವಾರಿಸಿಕೊಳ್ಳಲಿಕ್ಕೆಂದು ಸುಶ್ರುತಾಚಾರ್ಯರು ಹೇಳಿದ್ದಾರೆ. ಸ್ಥೂಲ ಶರೀರ ವಿಷಯವನ್ನು ಚಿಕಿತ್ಸಕರಿಗೆ, ರೋಗ ನಿವಾರಣೆಗಾಗಿ ವಿವರಿಸಿರುತ್ತಾರೆ. **ವಿಜ್ಞಾನಾರ್ಥಂ ಶರೀರಸ್ಯಭಿಷಜಾಂ ಯೋಗಿನಾಮಪಿ ॥** (ಸುಶ್ರುತ॥ ಸೂ. ಸ್ಥಾ ಅ ೩ ಶ್ಲೋ. ೧೭)

ಇಲ್ಲಿಗೆ ಪ್ರಕೃತಿ, ವಿಕಾರ, ಪುರುಷಾದಿ, ವಿಮರ್ಶೆಯು ಮುಗಿಯಿತು.

# (೨) ಸೂಕ್ಷ್ಮ ಪಂಚಭೂತಗಳ ವಿಜ್ಞಾನ

**ಅಥಾತಃ ಸರ್ವಭೂತಚಿಂತಾಶಾರೀರಂ ವ್ಯಾಖ್ಯಾಸ್ಯಾಮಃ ॥**
(ಸುಶ್ರುತ॥ ಶಾರೀರ॥ ಅ ೧ ಸೂ. ೧)

ದೇಹವು ಪೃಥಿವ್ಯಾದಿ ಪಂಚಭೂತ ಅಂಶಗಳಿಂದ ನಿರ್ಮಿತವಾದದ್ದರಿಂದ, ಅವುಗಳ (ಭೂತಾದಿ) ವಿಚಾರವನ್ನು ಮಾಡುತ್ತೇವೆ. ಅರ್ಥಾತ್, ಆ ಭೂತಾದಿಗಳ ವಿವರಣೆಯುಳ್ಳ "ಶಾರೀರ ಅಧ್ಯಾಯವನ್ನು" ಹೇಳುತ್ತೇವೆಂದು ಹೇಳಿದ್ದಾರೆ. "ಸರ್ವಭೂತ ಚಿಂತಾ" ಎನ್ನುವದರಿಂದ ದೇಹೋತ್ಪತ್ತಿಗೆ ಕಾರಣವಾದ ಪಂಚಭೂತಗಳ ವಿವರಣೆಯು ಅವಶ್ಯವೆಂದು ಸಿದ್ಧವಾಗುತ್ತದೆ

**ಚಿಂತಾನಾಮ:— ಹೇತುಸ್ವಲಕ್ಷಣಕಾರ್ಯೈಃ ಚಿಂತನಂ; ಕುತಉತ್ಪನ್ನಾನಿ? ಕಾವಿಚೈಷಾಂ ಸ್ವಲಕ್ಷಣಾನಿ? ಕಾನಿಕಾರ್ಯಾಣೀತಿಚಿಂತನಂ ||** (ಸುಶ್ರುತ ಟೀಕಾ)

ಪಂಚಭೂತಗಳು ಯಾವದರಿಂದ ಉತ್ಪನ್ನವಾದವು? ಅವುಗಳ ಲಕ್ಷಣವೇನು? ಅವುಗಳ ಕಾರ್ಯವೇನು? ಇತ್ಯಾದಿ ಹೇತು, ಸ್ವಲಕ್ಷಣ, ಕಾರ್ಯಗಳು, ವಿವರಿಸಲ್ಪಡುತ್ತವೆ. ಇದರಿಂದ ದೇಹಕ್ಕೆ ಕಾರಣವಾದ ಪಂಚಭೂತಗಳ ಜ್ಞಾನವಾಗುತ್ತದೆ. ಸೂಕ್ಷ್ಮ ಪಂಚಭೂತಗಳೆಂದರೆ ಪೃಥಿವ್ಯಾದಿಗಳ ಅಣುಗಳು. ಈ ಅಣುಗಳ ಸಂಯೋಗದಿಂದ ಪೃಥಿವ್ಯಾದಿಗಳು ಸ್ಥೂಲ ರೂಪ ಹೊಂದಿ, ಗೋಚರವಾಗುತ್ತವೆ. "ಸೂಕ್ಷ್ಮ" ಅಂದರೆ ಅಣು:- **ಸೂಕ್ಷ್ಮಂ ಸ್ಯಾತ್ ಕತಕ್ಯೇಧ್ಯಾತ್ಮೆ ಪುಂಸ್ಯಣೌತ್ರಿಷುಚಾಲ್ಪಕೆ ||** ( ವಿಶ್ವಕೋಶ ) ಅರ್ಥಾತ್ ಪಂಚಮಹಾ ಭೂತಗಳ ಅಣುಗಳು, ಸೂಕ್ಷ್ಮ ಪಂಚಮಹಾ ಭೂತಗಳೆಂದು ಹೇಳಲ್ಪಡುತ್ತವೆ. ಇದು ಶರೀರ ಶಾಸ್ತ್ರವಾದ್ದರಿಂದ ದೇಹದಲ್ಲಿಯ ಸೂಕ್ಷ್ಮ ಪಂಚಭೂತಗಳನ್ನು, ಗರ್ಭೋತ್ಪತ್ತಿ ಕ್ರಮದ ವಿಚಾರಣಾ ವಿಷಯದಲ್ಲಿ ವಿವರಿಸುತ್ತೇವೆ. ಅಣುವೆಂದರೆ ಪಂಚಮಹಾಭೂತಗಳ ಮೂಲ ಸ್ವರೂಪವು ಕಣ್ಣಿಗೆ ಕಾಣಿಸುವದಿಲ್ಲ. ಆ ಅಣುಗಳಲ್ಲಿ ಪಂಚಮಹಾ ಭೂತಗಳಲ್ಲಿರುವ ಗುಣಗಳು, ಅವ್ಯಕ್ತವಾಗಿರುತ್ತವೆ. ಅಣುಗಳಲ್ಲಿ ಕಾರ್ಯರೂಪ (ಸ್ಥೂಲ) ಪಂಚಮಹಾಭೂತಗಳ ಉತ್ಪತ್ತಿಯ ಇಚ್ಛಾ ಆದೊಡನೆಯೇ, ಒಂದಕ್ಕೊಂದು ಸಂಯೋಗವಾಗಿ; ಸ್ಥೂಲ ಸ್ವರೂಪದ ಭೌತಿಕ ದ್ರವ್ಯಗಳಾಗುತ್ತವೆ. ಸ್ಥೂಲ ರೂಪ ಹೊಂದಿದ ನಂತರ ಅವುಗಳ ಗುಣಗಳು ಗೋಚರವಾಗುತ್ತವೆ.

## ಅಣುವಿನ ಪರಿಮಾಣ

ಬೆಳಕಿಂಡಿಯಿಂದ ಮನೆಯೊಳಗೆ ಬರುವ ಸೂರ್ಯನ ಕಿರಣದಲ್ಲಿ ಯಾವ ಸೂಕ್ಷ್ಮ ಪದಾರ್ಥವು ಹಾರಾಡುವದು ಕಾಣುತ್ತದೆಯೋ? ಅದಕ್ಕೆ "ತ್ರ್ಯಣುಕ" ವೆಂಬ ಹೆಸರು. ಅದರ ಆರನೆ ಭಾಗಕ್ಕೆ "ಅಣು" ವೆಂದು ಅನ್ನುತ್ತಾರೆ. ಅದು (ಅಣುವು) ದೃಷ್ಟಿ ಗೋಚರವಾದದ್ದಲ್ಲ. ಎರಡು ಪರಮಾಣು

ಗಳ ಸಂಯೋಗದಿಂದ "ದ್ವ್ಯಣುಕವು" ಮೂರು ದ್ವ್ಯಣುಕಗಳಿಂದ "ತ್ರ್ಯಣುಕವು" ನಾಲ್ಕು ತ್ರ್ಯಣುಕಗಳಿಂದ "ಚತುರಣಕವು" ಸಂಯೋಗ ಧರ್ಮದಿಂದ ಆಗುತ್ತವೆ. ಆ ಅಣುವಿಗೆ ಲವ, ಲೇಶ, ಕಣ, ಸೂಕ್ಷ್ಮ, ಅಣು, ಪರಮಾಣು, ಪುದ್ಗಲ, ಪೀಲು ಎಂಬ ನಾಮಾಂತರ ಹೆಸರುಗಳು. ಎಲ್ಲಾ ಸ್ಥೂಲ ವಿಶ್ವದ ಉತ್ಪತ್ತಿಗೆ ಕಾರಣವಾದ್ದರಿಂದ, ಕಾರಣ ಇತ್ಯಾದಿ ಅನ್ವರ್ಥ ನಾಮಗಳು ಸಂದರ್ಭಾನುಸಾರ ಅನ್ವಯಿಸುತ್ತದೆ

# ಪರಮಾಣು ವಿಜ್ಞಾನ

**ಪರಮಾಣವಃ ಭೇದೇನ, ಅಪರಿಸಂಖ್ಯೇಯಾಭವಂತಿ ಅತಿ ಬಹುತ್ವಾತ್ ಅತಿಸೂಕ್ಷ್ಮತ್ವಾತ್ ಅತೀಂದ್ರಿಯತ್ವಾಚ್ಚ ಅನುಮೇಯಾಃ ಕಾರ್ಯತಃ ಕಾರ್ಯಕಾರಣಭಾವೇನ, ತೇಷಾಂ ಪರಮಾಣೂನಾಂ ಸಂಯೋಗೇ ವಿಭಾಗೇಪರಮಾಣುಕಾರ್ಯ ನಿರ್ಮಿತೌ ವಾಯುಃ ಕರ್ಮಕಾರಣಂಭವತಿ ||**

ಅಥಚೇತ್, ಕೇ ನಾಮ ಪರಮಾಣವಃ ?

ಪರಮಾಣುಗಳು ಆಯಾವ ಭೂತಗಳು, ಬೇರೆ ಬೇರೆ ಇರುವದರಿಂದಲೂ ಪ್ರತಿಯೊಂದು ಭೂತ (ಪಂಚಮಹಾ ಭೂತ) ದ ಪರಮಾಣುಗಳು, ಭಿನ್ನವಾದವುಗಳು ಇರುತ್ತವೆ. ಅವು ಸಂಖ್ಯಾತೀತವಾದವುಗಳು, ಅತಿ ಬಹಳವೂ ಅತಿ ಸೂಕ್ಷ್ಮವೂ, ಇಂದ್ರಿಯ ಗೋಚರವಾಗದವುಗಳೂ ಇರುತ್ತವೆ. ಸ್ಥೂಲವಾದ ಕಾರ್ಯ ರೂಪದಿಂದ, (ಪಂಚಮಹಾ ಭೂತ) ಕಾರ್ಯ ಕಾರಣ ಭಾವದಿಂದಲೂ ಊಹಿಸಿ ತಿಳಕೊಳ್ಳಬೇಕು. ಅದು ಹೇಗಂದರೆ:— ಒಂದು ಮಣ್ಣಿನ ಹೆಂಟೆ (ತುಣುಕು) ಯನ್ನು ತೆಗೆದುಕೊಂಡು ವಿಭಾಗಿಸಲು ಅನೇಕ ಅಸಂಖ್ಯೆಯ ವಿಭಾಗವಾಗಿ, ಕೊನೆಗೆ ದೃಷ್ಟಿಗೆ ಗೋಚರವಾಗದ ಸೂಕ್ಷ್ಮ ವಿಭಾಗವೇ 'ಅಣುವು' ಅದಕ್ಕೆ ಮುಂದೆ ವಿಭಾಗವಿಲ್ಲ ಹೇಗೆ ಈ ಸ್ಥೂಲದ ವಿಭಾಗದಿಂದ ವಿಭಾಗದ ಆದಿ (ಅಣು) ಸ್ಪಷ್ಟವಾಗುತ್ತದೆಯೋ, ಅದರಂತೆ ಅಣುಗಳ ಸಂಯೋಗದಿಂದ ದೃಷ್ಟಿಗೋಚರ ಈ ಸ್ಥೂಲ ಸ್ಥಿತಿಯು ಆಗಿದೆ.

ಯೆಂದು ಸಹ ಸಿದ್ಧವಾಗುತ್ತದೆ. ಈ ಸ್ಥೂಲ ಸ್ಥಿತಿಗೆ ಕಾರ್ಯವೆಂದೂ, ಇದು ಹುಟ್ಟಲು ಕಾರಣವಾದ ಪರಮಾಣುಗಳಿಗೆ ಕಾರಣವೆಂದೂ, ಅನ್ನುತ್ತಾರೆ. ಈ ಕಾರ್ಯ ಕಾರಣ ಭಾವಗಳಿಂದ ಪರಮಾಣುಗಳು ಊಹಿಸಲ್ಪಟ್ಟು ಆ ವಿಷಯದ ಜ್ಞಾನವಾಗುತ್ತದೆ. ಮೂಲಕಾರಣವಾದ ಅಣುವು ದೃಷ್ಟಿ ಗೋಚರವಲ್ಲದ್ದರಿಂದ ಅದರ ಸಂಯೋಗದಿಂದಾದ ಕಾರ್ಯದಲ್ಲಿಯೂ ಆ ಗುಣವು ಬೇಕಲ್ಲವೆ? ಅತೀಂದ್ರಿಯವಾದ ಪರಮಾಣುವಿನಿಂದ ಹುಟ್ಟಿರುವದ ರಿಂದ ಪಂಚಮಹಾ ಭೂತಗಳೂ ಕೂಡ ದೃಷ್ಟಿಗೋಚರವಾಗದೇ ಇರಬೇಕು. ಹೀಗೆಂದು ಆಕ್ಷೇಪ ಬರುತ್ತದೆ. ಪರಮಾಣುಗಳ ಅಸಂಖ್ಯೇಯ ಗುಂಪುಗಳು ಆಕಾಶದಲ್ಲಿ ಇದ್ದೇ ಇರುತ್ತವೆ. ಅವು ಪ್ರತ್ಯಕ್ಷವಲ್ಲವೇ ಅಲ್ಲ. ಅದರಂತೆ ಪಂಚಮಹಾ ಭೂತಗಳಲ್ಲಿಯ ಪರಮಾಣುಗಳು ಗುಂಪಾದವುಗಳಲ್ಲ. ಒಂದ ಕ್ಕೊಂದು ಸಂಯೋಗವಾಗಿ ಅವಯವ ರೂಪದಿಂದ ಕೂಡಿದವುಗಳು. ಆದ್ದ ರಿಂದ ಸ್ಥೂಲವಾದ ಅವಯವಿಯು ಗೋಚರವಾಗುತ್ತದೆ ಆಗ ಪರ ಮಾಣುಗಳ ಸಂಯೋಜಿತ ಅವಯವ ಉಳ್ಳ ಒಂದು ವಸ್ತುವಾಗಿರುತ್ತದೆ. ಪೃಥಿವ್ಯಾದಿ ಪಂಚಭೂತಗಳ ಪರಮಾಣುಗಳು, ಸೂಕ್ಷ್ಮ ಪಂಚಭೂತ ಗಳೆಂದು ಹೇಳಲ್ಪಟ್ಟಿರುತ್ತವೆ.

## ಸ್ಥೂಲ ಪಂಚ ಮಹಾಭೂತಗಳ ವಿವರಣೆ

ಅಣುಗಳ ಸಂಯೋಗದಿಂದ ಅವಯವಗಳಾಗಿ, ಆ ಅವಯವಗಳ ಸಂಯೋಗ (ಕೂಡುವಿಕೆ) ದಿಂದ ಪದಾರ್ಥಗಳು ಹುಟ್ಟುತ್ತವೆ. ಹುಟ್ಟಿದ ದ್ರವ್ಯವು ದೃಷ್ಟಿಗೋಚರವಾಗಿಯೂ, ಉದ್ಭೂತ ಗುಣವುಳ್ಳದ್ದಾಗಿಯೂ ಇರುತ್ತದೆ. ಆದ್ದರಿಂದ ಅದಕ್ಕೆ ಸ್ಥೂಲ (ಗೋಚರ) ವೆಂಬ ಹೆಸರು.

**ಸ್ಥೂಲ ಪಂಚ ಭೂತಗಳು:—** ( ಆಕಾಶ ಮಾತ್ರ ಸ್ಥೂಲವಲ್ಲ ) **(೧) ಪೃಥ್ವಿ (೨) ಆಪಃ (೩) ತೇಜಃ (೪) ವಾಯು (೫) ಆಕಾಶ ಇವುಗಳು ಸ್ಥೂಲ ಪಂಚ ಭೂತಗಳು.**

# ಸ್ಥೂಲ ಪಂಚ ಮಹಾಭೂತಗಳ ವಿಜ್ಞಾನ

## ಪೃಥಿವೀ ॥೧॥

**ತತ್ರಗಂಧವತೀ ಪೃಥಿವೀ। ಸಾದ್ವಿವಿಧಾ। ನಿತ್ಯಾನಿತ್ಯಾಚ। ನಿತ್ಯಾ ಪರಮಾಣು ರೂಪಾನಿತ್ಯಾ ಕಾರ್ಯ ರೂಪಾ। ಸಾಪುನಃ ತ್ರಿವಿಧಾ। ಶರೀರ, ಇಂದ್ರಿಯ, ವಿಷಯ ಭೇದಾತ್ ॥ ಶರೀರಂ ಅಸ್ಮದಾದೀನಾಂ। ಇಂದ್ರಿಯಂ ಗಂಧಗ್ರಾಹಕಂ ಘ್ರಾಣಂ ನಾಸಾಗ್ರವರ್ತಿ। ವಿಷಯೋ ಮೃತ್ಪಾಷಾಣಾದಿಃ ॥**

(ತರ್ಕ ಸಂಗ್ರಹ)

ಗಂಧ ಗುಣವುಳ್ಳದ್ದು ಪೃಥಿವಿಯು. ಅದು ಎರಡು ವಿಧವಾಗಿರುವದು. ನಾಶವುಳ್ಳದ್ದು, ನಿತ್ಯವಾದದ್ದೆಂದು. । ಪರಮಾಣು ರೂಪವು ನಿತ್ಯವಾದದ್ದು. ಸ್ಥೂಲವಾದದ್ದು, ಕಾರ್ಯರೂಪವು, ನಾಶವುಳ್ಳದ್ದು. ಸ್ಥೂಲರೂಪ ಪೃಥಿವಿಯು ಮೂರು ವಿಧವಾದದ್ದು. ಶರೀರ, ಇಂದ್ರಿಯ, ವಿಷಯಗಳೆಂಬ ಭೇದವುಳ್ಳದ್ದು. ನಮ್ಮೆಲ್ಲರ ಶರೀರವು ಸ್ಥೂಲರೂಪದ ಪೃಥ್ವಿಯದು. ಪಾರ್ಥಿವ (ಪೃಥಿವಿಯ ಸಂಬಂಧ) ಅವಯವವು, ಗಂಧ ಗ್ರಹಣಮಾಡತಕ್ಕ ನಾಸಿಕವು. ಅದಕ್ಕೆ ಘ್ರಾಣೇಂದ್ರಿಯವೆಂಬ ಹೆಸರು. ಅದು ನಾಸಿಕದ ಅಗ್ರ ಭಾಗದಲ್ಲಿರುತ್ತದೆ. ವಿಷಯಗಳು ಮಣ್ಣು, ಕಲ್ಲು ಮೊದಲಾದವುಗಳು.

## ಅಪಃ ॥ ೨ ॥

**ಶೀತಸ್ಪರ್ಶವತ್ಯಃ ಆಪಃ॥ ತಾಶ್ಚದ್ವಿವಿಧಾಃ॥ ನಿತ್ಯಾಅನಿತ್ಯಾಶ್ಚ॥ ನಿತ್ಯಾಃ ಪರಮಾಣುರೂಪಾಃ। ಅನಿತ್ಯಾಃ ಕಾರ್ಯರೂಪಾಃ॥ ಪುನಃ ತ್ರಿವಿಧಾಃ॥ ಶರೀರೇಂದ್ರಿಯ, ವಿಷಯ ಭೇದಾತ್। ಶರೀರಂವರುಣ ಲೋಕೇ। ಇಂದ್ರಿಯಂರಸನಂ ಜಿಹ್ವಾಗ್ರವರ್ತಿ। ವಿಷಯಃ ಸರಿತ್ ಸಮುದ್ರಾದಿಃ॥**

ಜಲ(ನೀರು,)ಶೀತ,ಸ್ಪರ್ಶಗುಣವುಳ್ಳದ್ದು. ಇದು ಎರಡು ವಿಧವಾದದ್ದು. ನಿತ್ಯ ಮತ್ತು ಅನಿತ್ಯವೆಂದ-; ನಿತ್ಯವಾದಜಲವು ಪರಮಾಣು ರೂಪವುಳ್ಳದ್ದು. ಅನಿತ್ಯವಾದದ್ದು ಕಾರ್ಯರೂಪ (ಸ್ಥೂಲ) ಜಲವು. ಇಂಥ ನಮಗೆ ಗೋಚರವಾದ ಜಲವು ಮೂರು ವಿಧವಾದದ್ದು. ಶರೀರ, ಇಂದ್ರಿಯ, ವಿಷಯಗಳೆಂಬ ಭೇದದಿಂದ. ಶರೀರವು ವರುಣ ಲೋಕದಲ್ಲಿ. ಜಲದ ಇಂದ್ರಿಯವು ರಸಗ್ರಾಹಕವಾದ ರಸನೆಯು, ಜಿಹ್ವೆಯ ಅಗ್ರ ಭಾಗದಲ್ಲಿರುವದು. ವಿಷಯವು ಹೊಳೆ, ಸಮುದ್ರ ಮೊದಲಾದವುಗಳು.

### ತೇಜಃ ॥೩॥

**ಉಷ್ಣಸ್ಪರ್ಶವತ್ತೇಜಃ ॥ ತದಪಿದ್ವಿವಿಧಂ ನಿತ್ಯಮನಿತ್ಯಂ ಚ ॥ ನಿತ್ಯಂ ಪರಮಾಣುರೂಪಂ । ಅನಿತ್ಯಂ ಕಾರ್ಯರೂಪಂ। ಪುನಃ ತ್ರಿವಿಧಂಶರೀರೇಂದ್ರಿಯ, ವಿಷಯಭೇದಾತ್ ॥**

ತೇಜಸ್ಸು ಉಷ್ಣಸ್ಪರ್ಶಗುಣವುಳ್ಳದ್ದು, ಅದು ಎರಡು ವಿಧವಾದದ್ದು ಇರುತ್ತದೆ ನಿತ್ಯವಾದದ್ದು ಅನಿತ್ಯವಾದದ್ದೆಂದು. ನಿತ್ಯವಾದ ತೇಜಸ್ಸು ಪರಮಾಣು ರೂಪವುಳ್ಳದ್ದು, ಅನಿತ್ಯವಾದ ತೇಜಸ್ಸು ಕಾರ್ಯರೂಪವಾದದ್ದು, (ಸ್ಥೂಲ) ನಮ್ಮೆಲ್ಲರಿಗೂ ಕಾಣಿಸುವಂಥಾದ್ದು. ಪುನಃತೇಜಸ್ಸು ಶರೀರ, ಇಂದ್ರಿಯ, ವಿಷಯ, ಭೇದಗಳಿಂದ ಮೂರು ವಿಧವಾದದ್ದು ಇರುತ್ತದೆ.

ಶರೀರವು ಆದಿತ್ಯಲೋಕದಲ್ಲಿದೆ. ಇಂದ್ರಿಯವು ರೂಪವನ್ನು ನೋಡತಕ್ಕ ಚಕ್ಷುಸ್ಸು. ಕಣ್ಣಗುಡ್ಡಿಯ ಕಪ್ಪಿನ (ಕೃಷ್ಣತಾರಾ) ಅಗ್ರಭಾಗದಲ್ಲಿರುತ್ತದೆ. ವಿಷಯವು ನಾಲ್ಕು ವಿಧವಾದವುಗಳು- ಭೂಮಿ ಮೊದಲಾದವುಗಳಲ್ಲಿರತಕ್ಕ ತೇಜಸ್ಸು ಅಗ್ನಿ ಮೊದಲಾದವುಗಳು. (೧) ಆಕಾಶದಲ್ಲಿರತಕ್ಕ ಯಾವ ತಡೆಯಿಲ್ಲದ ತೇಜಸ್ಸು, ಸಿಡಿಲು ಮುಂತಾದವುಗಳು. (೨)ಹೊಟ್ಟೆಯಲ್ಲಿ(ಉದರ)ಇದ್ದು ಆಹಾರಾದಿಗಳನ್ನು ಪಚನಮಾಡತಕ್ಕ ಪಾಚಕಾಗ್ನಿಯು. (೩) ಖನಿಜದಲ್ಲಿ ದೊರೆಯುವ ತೇಜಸ್ಸು ಸುವರ್ಣ ಮೊದಲಾದವುಗಳು (೪) ಹೀಗೆ ತೇಜಸ್ಸು (ಅಗ್ನಿ)ನಾಲ್ಕು ವಿಧವಾದದ್ದು ಇರುತ್ತದೆ. ಖನಿಜವೂಭೂಭಾಗವೇ ಆದ್ದರಿಂದ ಭೂಮಿಯಲ್ಲಿರತಕ್ಕ ಅಗ್ನಿಗೆ ಹೋಲಿಸಿ, ಸುವರ್ಣವನ್ನು ಹೇಳಿದರೆ ವಿಭಾಗ

ಗೌರವವು ಕಡಿಮೆಯಾಗುವದೆಂದು ಅನಿಸಬಹುದು ಸುವರ್ಣವು ತೇಜಸ್ಸಾದರೂ ಅಗ್ನಿಯಲ್ಲಿರುವ ಉಷ್ಣಸ್ಪರ್ಶಗುಣವಿಲ್ಲದ್ದರಿಂದಲೂ, ಪೃಥ್ವಿಯಲ್ಲಿ ಎಲ್ಲಾ ಕಡೆಯಲ್ಲಿಯೂ, ಅದರ ಉತ್ಪತ್ತಿಯಾಗದ್ದರಿಂದಲೂ; ಅದಕ್ಕೆ ವಿಭಾಗ ಮಾಡಿ ಖನಿಜದಲ್ಲಿರತಕ್ಕದ್ದೆಂದು ಹೇಳಿದ್ದಾರೆ. ಇದರಿಂದ ವಿಭಾಗಗೌರವ ವಾದಂತಾಗಲಿಲ್ಲ.

### ವಾಯುಃ ॥೪॥

**ರೂಪರಹಿತ ಸ್ಪರ್ಶವಾನ್ ವಾಯುಃ ॥ ಸದ್ವಿವಿಧಃ ॥ ನಿತ್ಯೋಽ ನಿತ್ಯಶ್ಚ ॥ ನಿತ್ಯಃ ಪರಮಾಣುರೂಪಃ ॥ ಅನಿತ್ಯಃ ಕಾರ್ಯ ರೂಪಃ॥ ಪುನಃ ತ್ರಿವಿಧಃ ಶರೀರೇಂದ್ರಿಯ, ವಿಷಯ, ಭೇದಾತ್**

ರೂಪ ಇಲ್ಲದೆ ಸ್ಪರ್ಶಗುಣವುಳ್ಳದ್ದು ವಾಯುವು. ಅದು ಎರಡು ವಿಧ ವಾದದ್ದು ಇರುತ್ತದೆ. ನಿತ್ಯ ಮತ್ತು ಅನಿತ್ಯವೆಂದು. ಪರಮಾಣುರೂಪವಾದ ವಾಯುವು ನಿತ್ಯವು. ಕಾರ್ಯರೂಪವಾದ ನಮ್ಮೆಲ್ಲರಿಗೂ ಸ್ಪರ್ಶದಿಂದ ಗೊತ್ತಾಗುವ, ಮತ್ತೂ ಗಿಡಗಳಲ್ಲಿ ಬೀಸುವಾಗ ಎಲೆಗಳು ಅಲುಗಾಡುವದ ರಿಂದ ತಿಳಿಯುವ, ವಾಯುವು ಅನಿತ್ಯವು. ವಾಯುವು ಪುನಃ ಶರೀರ, ಇಂದ್ರಿಯ, ವಿಷಯಭೇದದಿಂದ ಮೂರು ವಿಧವಾದದ್ದು. ಶರೀರವು ವಾಯು ಲೋಕದಲ್ಲಿರುತ್ತದೆ. ಇಂದ್ರಿಯವು ಸ್ಪರ್ಶವನ್ನು ತಿಳಿಯುವ ತ್ವಕ್ (ಚರ್ಮ) ಎಂಬ, ಸ್ಪರ್ಶೇಂದ್ರಿಯವು. ಪೂರ್ಣ ಶರೀರವನ್ನು ವ್ಯಾಪಿಸಿದ್ದು ಇರುತ್ತದೆ. ವಿಷಯವು ವೃಕ್ಷಾದಿಗಳನ್ನು ಅಲುಗಾಡಿಸಲು ಕಾರಣವಾದದ್ದು ಇನ್ನು ಶರೀರದಲ್ಲಿರತಕ್ಕ ವಾಯುವು "ಪ್ರಾಣಾದಿ" ಸಂಜ್ಞೆಯುಳ್ಳದ್ದು. ಅದು ಒಂದೇ ಇದ್ದರೂ ಬೇರೆಬೇರೆ ಸ್ಥಾನದಲ್ಲಿರುವದರಿಂದ ಬೇರೆಬೇರೆ ಹೆಸರನ್ನು ಪಡೆಯುತ್ತದೆ ಅವುಗಳ ಹೆಸರುಗಳು— ಪ್ರಾಣ-ಅಪಾನ-ವ್ಯಾನ-ಉದಾನ. ಸಮಾನ, ಎಂದು ಇರುತ್ತವೆ. ಹೃದಯದಲ್ಲಿ ಪ್ರಾಣವು, ಪಕ್ವಾಶಯಾದಿಗುದ ಪರ್ಯಂತ ಭಾಗಗಳಲ್ಲಿ ಅಪಾನವು, ವ್ಯಾನವು ಸಂಪೂರ್ಣ ಶರೀರದಲ್ಲಿ ಸಂಚರಿಸುತ್ತದೆ. ಉದಾನವು ಕಂಠಪ್ರದೇಶದಲ್ಲಿ ಇರುತ್ತದೆ. ಸಮಾನವು ನಾಭಿ ಮಂಡಲದಲ್ಲಿ ಇರುತ್ತದೆ. ಈ ಪ್ರಕಾರವಾಗಿ ಪಂಚ, ಪ್ರಾಣಾದಿ ವಾಯುಗಳ ಆಶ್ರಯ ಸ್ಥಳಗಳು ಇರುತ್ತವೆ.

## ಪಂಚ ವಾಯುಗಳ ಸ್ಥಾನ ಕರ್ಮಗಳು

೧. **ಪ್ರಾಣವಾಯುವು,** ಹೃದಯದಲ್ಲಿದ್ದುಕೊಂಡು ಊಟ ಮಾಡಿದ ಅನ್ನವನ್ನು ಗ್ರಹಿಸುತ್ತದೆ. ದೇಹದ ಒಳಗೆ (ಅನ್ನಾಶಯಕ್ಕೆ) ಆಹಾರವು ಹೋಗುವಂತೆ ಮಾಡುತ್ತದೆ.

೨. **ಅಪಾನವಾಯುವು,** ಪಕ್ವಾಶಯದಿಂದ ಗುದಪರ್ಯಂತರ ಸ್ಥಳ ದಲ್ಲಿ ಇದ್ದು ಪಕ್ವಾಹಾರದ ಕಿಟ್ಟ ಭಾಗವಾದ ಮಲ ಮೂತ್ರಗಳನ್ನು ಹೊರಗೆ ಹಾಕುತ್ತದೆ. ರೇತಸ್ಸನ್ನೂ ಪತನ ಮಾಡುತ್ತದೆ. ಇದರಂತೆ ರಜಸ್ಸು ಆರ್ತವಗಳನ್ನು ಕೂಡಾ ಹೊರಗೆ ಹಾಕುತ್ತದೆಂದು ಹೇಳಬಹುದು.

೩. **ವ್ಯಾನ ವಾಯುವು,** ಪೂರ್ಣ ದೇಹ ಸಂಚಾರಿ ಇದ್ದು, ಕಣ್ಣು ರೆಪ್ಪೆಗಳ ಉನ್ಮೇಷ ನಿಮೇಷಾದಿಗಳನ್ನೂ ಸರ್ವ ದೇಹಗಳಲ್ಲಿ ಸಂಚರಿಸುವ ರಸಾದಿ ಧಾತುಗಳನ್ನೂ ಒಯ್ಯುವ (ತಿರುಗಿಸುವ) ಕೆಲಸವನ್ನು ಮಾಡುತ್ತದೆ.

೪. **ಉದಾನವು,** ಕಂಠ ಪ್ರದೇಶದಲ್ಲಿದ್ದುಕೊಂಡು ಭಾಷಣ (ಮಾತಾ ಡುವದು) ಧ್ವನಿ ಹೊರಡಿಸುವ ಮೊದಲಾದ ಕರ್ಮಗಳನ್ನು ಮಾಡುತ್ತದೆ. ಇದರಿಂದ ಅನ್ನ ಪಾನಾದಿಗಳನ್ನು ಗ್ರಹಿಸುವ ಮಾತಾಡುವ ಕೆಲಸಗಳು ಭಿನ್ನ ಭಿನ್ನವಾಗಿ ನಡೆಯುತ್ತವೆನ್ನುವದು ಸಿದ್ಧವಾಗುತ್ತದೆ.

೫. **ಸಮಾನವು,** ನಾಭಿ ಪ್ರದೇಶದಲ್ಲಿದ್ದುಕೊಂಡು, ಆಹಾರವನ್ನು ಪಚನವಾಗುವಂತೆ ಕರಳಿನಲ್ಲಿ ತಿರುಗಿಸುವ ಕೆಲಸವನ್ನು ಮಾಡುತ್ತದೆ. ಜಠ ರಾಗ್ನಿಯನ್ನು ಪುಟ ಮಾಡುತ್ತದೆ.

### ಇಲ್ಲಿಗೆ ಪಂಚವಾಯುಗಳ ಸ್ಥಾನ ಕರ್ಮಗಳು ಮುಗಿದವು

### ಆಕಾಶ ॥೫॥

**ಶಬ್ದಗುಣಕಮಾಕಾಶಂ ॥ ತಚ್ಚೈಕಂವಿಭುನಿತ್ಯಂಚ ॥**

ಆಕಾಶವು ಶಬ್ದ ಗುಣವುಳ್ಳದ್ದು, ಅದು ಒಂದೇ ಇದ್ದು ಭೇದ ಮಾಡ ಲಿಕ್ಕೆ ಬಾರದ್ದಾಗಿಯೂ, ಎಲ್ಲ ಕಡೆಯಲ್ಲಿ ವ್ಯಾಪಕವಾಗಿ ಇರುತ್ತದೆ. ಅದು

ವಿನಾಶಿಯೂ, ಎಲ್ಲದರಲ್ಲಿಯೂ ಇರುವದು. ಆತ್ಮನಂತೆ ಸ್ವತಂತ್ರವಾಗಿರುತ್ತ
ದೆಂದು ಹೇಳುತ್ತಾರೆ. ಮಠಾಕಾಶ, ಘಟಾಕಾಶ, ಭೇರ್ಯಾಕಾಶಾದಿ,
ಭಿನ್ನ ಭಿನ್ನ ಅನೇಕ ಆಕಾಶಗಳು, ಇರುತ್ತಿರಲು ಆಕಾಶವು ಒಂದೇ ಹೇಗೆಂಬ
ವಿಚಾರವು ಬರುತ್ತದೆ. ಆದರೆ ಅದು ಆಕಾಶದ ಭೇದವಲ್ಲ. ಉಪಾಧಿ (ಆವ
ರಣ) **ಭೇದಗಳ ವಿಶೇಷವು**. ಉದಾ:- ಹೇಗೆ ಒಬ್ಬನು ರಾಜನ ವೇಷ,
ತಪಸ್ವೀ ವೇಷ, ಸ್ತ್ರೀ ವೇಷಾದಿಗಳನ್ನು ಧರಿಸಿದಾಗ ಆವರಣ ಭೇದವೇ
ತೋರತು, ವ್ಯಕ್ತಿಯು ಒಬ್ಬನೇ ಇರುವನೋ, ಅದರಂತೆ ಉಪಾಧಿಭೇದ
ಇದ್ದರೂ ಆಕಾಶವು ಒಂದೇ ಇರುವದು

ಇನ್ನೊಂದೆಂದರೆ:— ಆಕಾಶ ಸಂಬಂಧಿಯಾಗಗನ್ನು ಶರೀರ,
ಇಂದ್ರಿಯ, ವಿಷಯಗಳೆಂಬ ಭೇದ ರೂಪಗಳಂತ ವಿಂಗಡಿಸಲು ಬರುವದಿಲ್ಲ.
ಯಾಕಂದರೆ, ಆಕಾಶದ ಪರಮಾಣುಗಳಿಲ್ಲದ್ದರಿಂದ ಅದರಿಂದ (ಆಕಾಶ
ದಿಂದ) ಅನಿತ್ಯ ಕಾರ್ಯ ರೂಪಗಳು ಆಗಲಾರವು ಆದ್ದರಿಂದಲೇ ಆಕಾಶವು
ನಿತ್ಯವು. ಆದರೆ ಇವೆಲ್ಲಕ್ಕೂ ವಿರುದ್ಧವೆನಿಸುವ ಶಬ್ದಗ್ರಹಣ ಮಾಡುವ,
ಶ್ರೋತ್ರೇಂದ್ರಿಯಗಳು" ಆಕಾಶೀಯವಾದವುಗಳು. ಆಕಾಶದ ಸಂಬಂಧ
ವಾದ "ಶ್ರವಣೇಂದ್ರಿಯಗಳು" ಶಬ್ದಗ್ರಹಣ ಮಾಡುತ್ತವೆಂಬುವದಷ್ಟೇ
ಪ್ರಕೃತವಾದ್ದರಿಂದ, ಅಣು ಶಾಸ್ತ್ರಜ್ಞರಿಗೆ ಅದರ ವಿಶೇಷ ವಿಚಾರವನ್ನು
ಬಿಟ್ಟಿದ್ದೇವೆ.

## (೮) ಪಂಚಭೂತಗಳಲ್ಲಿಯ ಪರಸ್ಪರ ಗಣವುಳ್ಳ ಪರಮಾಣು

**ಪಂಚಮಹಾಭೂತೇಭ್ಯಃ ಸಮುದಿತಾನಾಂ**
**ಪರಮಾಣೂನಾಂ ವಿಜ್ಞಾನಂ ॥**

ಪಂಚಮಹಾಭೂತಾದಿಗಳು ಒಂದರಿಂದ ಒಂದು ಕ್ರಮವಾಗಿ ಹುಟ್ಟಿ
ರುವದರಿಂದ ಅವುಗಳ ಪರಮಾಣು ದ್ರವ್ಯ ಗುಣಗಳ ವಿಚಾರಗಳು
ಹ್ಯಾಗಂದರೆ. ಆಕಾಶದಿಂದ ಹುಟ್ಟಿದ ವಾಯುವಿನಲ್ಲಿ ಆಕಾಶದ ಗುಣ, ವಾಯು
ವಿನ ಸ್ವಗುಣಗಳೂ ಇರುತ್ತವೆ. ಅವುಗಳ ವಿವರಣೆಯು.

ಆಕಾಶ ೫॥ ಆಕಾಶಕ್ಕೆ ಪರಮಾಣುವಿಲ್ಲ, ಶಬ್ದ ಗುಣವು ಮಾತ್ರ ಇರುತ್ತದೆ.

ವಾಯು ೪॥ ವಾಯು ಪರಮಾಣುವುಳ್ಳದ್ದು, ಆಕಾಶದಿಂದ ಹುಟ್ಟಿರುವದರಿಂದ ವಾಯುವಿನ ಪರಮಾಣುಗಳಲ್ಲಿ ಅವ್ಯಕ್ತವಾದ ಶಬ್ದ, ಸ್ವಗುಣವಾದ ಸ್ಪರ್ಶಗುಣಗಳು ಇರುತ್ತವೆ ಅದು ಕಾರ್ಯ ರೂಪವಾದಾಗ ಗುಣಗಳು ವ್ಯಕ್ತವಾಗುತ್ತವೆ. ಆಕಾಶವು ವಾಯುವಿನಲ್ಲಿ ಕೂಡಿರುತ್ತದೆ.

ಅಗ್ನಿ ೩॥ ತೇಜಸ್ಸು ಪರಮಾಣುವುಳ್ಳದ್ದು. ವಾಯುವಿನಿಂದ ಹುಟ್ಟಿರುವದರಿಂದ ಅಗ್ನಿಯು ಪರಮಾಣುವಿನಲ್ಲಿ ಅವ್ಯಕ್ತವಾದ ಶಬ್ದ, ಸ್ಪರ್ಶ, ಸ್ವಗುಣವಾದ ರೂಪ ಗುಣಗಳು ಇರುತ್ತವೆ ಕಾರ್ಯ ರೂಪವಾದಾಗ ಗುಣಗೋಚರವಾಗುತ್ತವೆ. ಆಕಾಶ, ವಾಯು ಇವುಗಳು ತೇಜಸ್ಸಿನಲ್ಲಿ ಕೂಡಿಕೊಂಡಿರುತ್ತವೆ

ಜಲ ೨॥ ಜಲವು ಪರಮಾಣುವುಳ್ಳದ್ದು. ತೇಜಸ್ಸಿನಿಂದ ಹುಟ್ಟಿರುವದರಿಂದ ಜಲದಲ್ಲಿ ಶಬ್ದ, ಸ್ಪರ್ಶ, ರೂಪ, ಸ್ವಗುಣವಾದ ರಸ, ಗುಣಗಳು ಪರಮಾಣುವಿನಲ್ಲಿ ಇರುತ್ತವೆ. ಕಾರ್ಯ ರೂಪವಾದಾಗ ಆ ಗುಣಗಳು ಗೋಚರವಾಗುತ್ತವೆ. ಆಕಾಶ, ಗಾಳಿ, ತೇಜಸ್ಸು ಜಲದಲ್ಲಿ ಕೂಡಿಕೊಂಡಿರುತ್ತವೆ.

ಇಲ್ಲಿ ಇನ್ನೊಂದು ವಿಶೇಷವೆಂದರೆ, ವಾಯುವಿನಿಂದ ಹುಟ್ಟಿದ ಅಗ್ನಿಯು, ವಾಯುವನ್ನು ನಾಶ ಪಡಿಸುವದಿಲ್ಲ. ವಾಯುವಿನಿಂದ ಅಭಿವೃದ್ಧಿ ಹೊಂದುತ್ತದೆ ಆದರೆ ಅಗ್ನಿಯಿಂದ ಹುಟ್ಟಿದ ಜಲವು, ಅಗ್ನಿಯನ್ನು ನಾಶ ಪಡಿಸುತ್ತದೆ. ಅಗ್ನಿಯಿಂದ ಕ್ಷೀಣವಾಗುತ್ತದೆ ಹೀಗೆ ವಿರುದ್ಧವಾದ ಜಲ, ಅಗ್ನಿಯ ಗುಣಗಳು ಕೂಡಿ ಒಂದರಲ್ಲಿ ಹೇಗಿರುತ್ತವೆಂಬುವದೇ ವಿಚಾರ ಮಾಡತಕ್ಕ ಸಂಗತಿಯಾಗಿದೆ. ಇದೇ ತಾರ್ಕಿಕರು, **"ಏಕಾಧಿಕರಣೇವಿರುದ್ಧಗುಣಸಮಾವೇಶೋನಭವತಿ"** ಒಂದೇ ಸ್ಥಾನದಲ್ಲಿ ವಿರುದ್ಧ ಗುಣಗಳ ಆಶ್ರಯವು ಆಗಲಾರದು. ಉದಾ:- ನೀರು ಶೀತವೆಂದರೆ ಇದರಲ್ಲಿ ಉಷ್ಣ ಗುಣವಿರುವದಿಲ್ಲ. ಹೀಗಿರುವಾಗ ಪರಸ್ಪರ ವಿರುದ್ಧವಾದ ಗುಣಗಳು ಒಂದೇ

ಪದಾರ್ಥದಲ್ಲಿ ಹೇಗಿರುವವೋ ಎಂಬ ವಿಚಾರವು ಆಶ್ಚರ್ಯಕಾರವು. ಇದಕ್ಕೆ ತಕ್ಕ ಸಮಾಧಾನವೇನಂದರೆ:- ಅಗ್ನಿಯಲ್ಲಿರುವ ಉಷ್ಣತಾ ಗುಣವು ಜಲಕ್ಕೆ ಬರುವದಿಲ್ಲ. ರೂಪವೆಂಬ ಗುಣವು ಮಾತ್ರ ಬರುತ್ತದೆ. ಆ ರೂಪವೆಂಬ ಗುಣವು ಜಲದ ಮುಖ್ಯ ಗುಣವಾದ ರಸಕ್ಕಾಗಲೀ ಇನ್ನಿತರ ಯಾವ ಗುಣಕ್ಕಾಗಲೀ ವಿರುದ್ಧವಾದದ್ದಲ್ಲ. ಜಲದಲ್ಲಿ ಅಗ್ನಿಯ ಉಷ್ಣತೆಯು ಬಂದಿದ್ದರೆ ಶೀತ ಗುಣ ಮತ್ತು ಉಷ್ಣ ಗುಣ ಇವೆರಡೂ ಪರಸ್ಪರ ವಿರುದ್ಧವಾದವುಗಳಾದ್ದರಿಂದ ಆ ಶಂಕೆಯು ಯುಕ್ತವಾಗಬಹುದಾಗಿತ್ತು ಪ್ರಕೃತಹಾಗಿಲ್ಲ ಇದಕ್ಕೆ ವಿಚಿತ್ರ ಪ್ರತ್ಯಯಾರಬ್ಧ ಎಂದು ಅನ್ನುತ್ತಾರೆ.

ಪೃಥಿವೀ ೧॥ ಪೃಥಿವಿಯು ಪರಮಾಣುವುಳ್ಳದ್ದು, ಜಲದಿಂದ ಹುಟ್ಟಿರುವದರಿಂದ ಪೃಥಿವಿಯ ಪರಮಾಣುವಿನಲ್ಲಿ ಶಬ್ದ, ಸ್ಪರ್ಶ, ರೂಪ, ರಸ, ಸ್ವಗುಣವಾದ ಗಂಧ ಗುಣಗಳು ಅವ್ಯಕ್ತವಾಗಿರುತ್ತವೆ. ಅದು ಕಾರ್ಯರೂಪ (ಸ್ಥೂಲ) ವಾದಾಗ ಗುಣಗಳು ಗೋಚರವಾಗುತ್ತವೆ ಆಕಾಶ, ಗಾಳಿ, ತೇಜಸ್ಸು, ಜಲ ಇವುಗಳು ಪೃಥಿವಿಯಲ್ಲಿ ಕೂಡಿಕೊಂಡಿರುತ್ತವೆ

**ಅನ್ಯೋಽನ್ಯಾನು ಪ್ರವಿಷ್ಟಾನಿ ಸರ್ವಾಣ್ಯೇತಾನಿ ನಿರ್ದಿಶೇತ್॥**
**ಸ್ವೇ ಸ್ವೇ ದ್ರವ್ಯೇತು ಸರ್ವೇಷಾಂ ವ್ಯಕ್ತಂ ಲಕ್ಷಣಮಿಷ್ಯತೆ॥**
(ಸುಶ್ರುತ॥ ಶಾರೀರ॥ ಅ ೧ ಶ್ಲೋ. ೨೧)

ಆಕಾಶದಿಂದ ಹುಟ್ಟಿದ ವಾಯುವಿನಲ್ಲಿ, ಆಕಾಶ ಗುಣವಾದ ಶಬ್ದವೂ ಸ್ವಗುಣವಾದ ಸ್ಪರ್ಶವೂ ಕೂಡಿಕೊಂಡಿರುತ್ತವೆ. ಇದರಂತೆ ಆಕಾಶವೂ ಕೂಡಾ ವಾಯುವಿನಲ್ಲಿ ಕೂಡಿರುತ್ತದೆ. ಆದ್ದರಿಂದ ಪಂಚಭೂತಗಳು ಕ್ರಮವಾಗಿ ಆಕಾಶದಿಂದಾರಂಭಿಸಿ ಒಂದರಲ್ಲೊಂದು ಕೂಡಿರುತ್ತವೆ ಹೀಗಿರುವದರಿಂದ "**ಅನ್ಯೋಽನ್ಯಾನು ಪ್ರವಿಷ್ಟಾನಿ**" ಎಂದು ಹೇಳಿದ್ದಾರೆ. ಒಂದರಲ್ಲಿ ಒಂದು ಕೂಡಿದ್ದರ ಲಕ್ಷಣವು, ವ್ಯಕ್ತವಾದ ಆವಾವ ಲಕ್ಷಣಗಳಿಂದ ತಿಳಿಯುತ್ತದೆ. ಉದಾ:— ವಾಯುವಿನಲ್ಲಿ ಶಬ್ದ ಗುಣವು, ಇರುವದರಿಂದ ಆಕಾಶವು ಪ್ರವಿಷ್ಟವಾಗಿದೆ ಎಂದು ಲಕ್ಷಣದಿಂದ ತಿಳಿಯುತ್ತದೆ. ಇದರಂತೆ ಎಲ್ಲವನ್ನೂ ತಿಳಿಯಬೇಕು.

"ತತ್ರ ಶಬ್ದಗುಣಮಾಕಾಶಂ ಮಾರುತೇ ಪ್ರವಿಷ್ಟಂ" ಶಬ್ದ ಸ್ಪರ್ಶ ಗುಣತ್ವಾತ್ ಮಾರುತಸ್ಯ; ಆಕಾಶ ಮಾರುತೌ ತೇಜಸಿ ಪ್ರವಿಷ್ಟೌ, ಶಬ್ದ ಸ್ಪರ್ಶ ರೂಪ ಗುಣತ್ವಾತ್ ತೇಜಸಃ; ಆಕಾಶ ಮರುತ್ತೇಜಾಂಸಿ ತೋಯ ದ್ರವ್ಯೇ ಪ್ರವಿಷ್ಟಾನಿ, ಶಬ್ದ ಸ್ಪರ್ಶ ರೂಪ ರಸ ಗುಣತ್ವಾತ್ತೋಯಸ್ಯ; ಆಕಾಶ ಮರುತ್ತೇಜಸ್ತೋಯಾನಿ ಪೃಥಿವ್ಯಾಮಸು ಪ್ರವಿಷ್ಟಾನಿ, ಶಬ್ದ ಸ್ಪರ್ಶ ರೂಪ ರಸ ಗಂಧ ಗುಣತ್ವಾತ್ ಪೃಥಿವ್ಯಾಃ ॥ (ಸುಶ್ರುತ ಟೀಕಾ)

ಇದರ ಅರ್ಥವನ್ನು ಇಲ್ಲಿಯೇ ಮೇಲೆ ವಿವರಿಸಿದೆ. ಮತ್ತೆ ಅರ್ಥದ ವಿವರಣೆಯು ಅವಶ್ಯವಿಲ್ಲ ಪಾರ ಮಾಡಲು ವಾಕ್ಯರೂಪದಿಂದ ಅನುಕೂಲ ವಾಗಲೆಂದು ವಾಕ್ಯವನ್ನು ನಿರೂಪಿಸಿದ್ದೇನೆ.

**ಆಕಾಶಾದಿ ಪಂಚಭೂತಗಳು ಒಂದರಿಂದೊಂದು ಹುಟ್ಟಿರುತ್ತವೆ**

"ಆತ್ಮನ ಆಕಾಶಃ ಸಂಭೂತಃ, ಆಕಾಶಾದ್ವಾಯುಃ; ವಾಯೋರಗ್ನಿಃ; ಅಗ್ನೇರಾಪಃ; ಅದ್ಭ್ಯಃ ಪೃಥಿವೀ" (ಇತಿ ಶೃತಿಃ)

ಆತ್ಮನಿಂದ ಆಕಾಶವು ಪ್ರಕಟವಾಯಿತು. ಆಕಾಶದಿಂದ ವಾಯು, ವಾಯುವಿನಿಂದ ಅಗ್ನಿಯು; ಅಗ್ನಿಯಿಂದ ಜಲವು; ಜಲದಿಂದ ಪೃಥಿವಿಯು, ಹೀಗೆ ಕ್ರಮವಾಗಿ ಒಂದರಿಂದೊಂದು ಹುಟ್ಟಿರುತ್ತವೆಂದು ವೇದವು ಹೇಳುತ್ತದೆ. ಹೀಗೆ ಒಂದರಿಂದೊಂದು ಹುಟ್ಟಿದ್ದರಿಂದ. ಒಂದರ ಗುಣವು, ತನ್ನಿಂದ ಹುಟ್ಟಿದ ಮತ್ತೊಂದು ದ್ರವ್ಯದಲ್ಲಿ ಬರುತ್ತದೆ

# ದ್ರವ್ಯ ಗುಣಾದಿ ವಿವರಣೆಯು

## ಪದಾರ್ಥಗಳು

**ದ್ರವ್ಯ ಗುಣಕರ್ಮ ಸಾಮಾನ್ಯ ವಿಶೇಷ ಸಮವಾಯಾಭಾವಾಃ ಸಪ್ತ ಪದಾರ್ಥಾಃ ॥ (ತರ್ಕ ಸಂಗ್ರಹ)**

ದ್ರವ್ಯ, ಗುಣ, ಕರ್ಮ, ಸಾಮಾನ್ಯ, ವಿಶೇಷ, ಸಮವಾಯ, ಅಭಾವ ಇವು ಏಳು ಪದಾರ್ಥಗಳು. ಇವುಗಳಲ್ಲಿಯೇ ಭಿನ್ನ ಭಿನ್ನ ಮತವಾದಿಗಳ ಅನೇಕ ಪದಾರ್ಥಗಳು ಅಂತರ್ಭಾವವಾಗುತ್ತವೆ. "ಪದಾರ್ಥ" ವೆಂದರೆ ಶಬ್ದದಿಂದ ಹೇಳಲ್ಪಡುತ್ತಿರುವದು, ಯಾವದೋ ಅದು ಸರ್ವವೂ ಶಬ್ದದಿಂದ ವಾಚ್ಯವಾಗಿರುವದರಿಂದ, ಹೇಳಲ್ಪಡುತ್ತಿರುವದೆಲ್ಲವುಗಳೂ ಪದಾರ್ಥವಾದವುಗಳೇ ಇರುತ್ತವೆ. ಅರ್ಥಾತ್ ಶಾಸ್ತ್ರೀಯವಾದ ವಿವರಣೆ ಎಂದರೆ:- ಪದಾರ್ಥಗಳಿಂದ ಹೇಳಲ್ಪಡತಕ್ಕಂಥ (ಶಬ್ದ ರೂಪ ಹೆಸರಿನಿಂದ ಸೂಚಿತವಾಗುವ) ಧರ್ಮವುಳ್ಳದ್ದೇ ಪದಾರ್ಥವು. "ಅಭಿದೇಯತ್ವಂ ಪದಾರ್ಥ ಸಾಮಾನ್ಯ ಲಕ್ಷಣಂ" (ತರ್ಕ ಸಂಗ್ರಹ)

ಅಭಿಧೇಯತ್ವ ಧರ್ಮವುಳ್ಳದ್ದೆಲ್ಲವೂ ಪದಾರ್ಥಗಳು
ಇದು ಪದಾರ್ಥದ ಲಕ್ಷಣವು

## ೧ ದ್ರವ್ಯ

ದ್ರವ್ಯತ್ವ ಜಾತಿಮತ್ವಂ ಗುಣವತ್ವಂ ಸಮವಾಯಿ ಕಾರಣತ್ವಂ
ವಾದ್ರವ್ಯ ಸಾಮಾನ್ಯ ಲಕ್ಷಣಂ (ತರ್ಕ ಸಂಗ್ರಹ)

ದ್ರವ್ಯದಲ್ಲಿಯ (ದ್ರವ್ಯತ್ವ) ಧರ್ಮವೇನಿದೆ, ಆ ಜಾತಿಯುಳ್ಳದ್ದು, ಗುಣವುಳ್ಳ ಧರ್ಮವಿರೋಣ, ಸಮವಾಯಿ ಕಾರಣತ್ವವಿರುವದೇ ದ್ರವ್ಯದ ಲಕ್ಷಣವು. "**ಗುಣ ಗುಣೇನೋಃ ಸಮವಾಯಃ**" ಎಂದು ಹೇಳಿರುವವರಿಂದ "**ದ್ರವ್ಯವು**" ಅದರಲ್ಲಿರುವ ಗುಣಕ್ಕೆ ಸಮವಾಯಿಕಾರಣವಾಗಿರುತ್ತದೆ.

## ಚರಕ ಮತದಂತೆ ದ್ರವ್ಯ ಲಕ್ಷಣವು

**ಯತ್ರಾಶ್ರಿತಾಃ ಕರ್ಮಗುಣಾಃ ಕಾರಣಂ ಸಮವಾಯಿಯತ್**
**ತದ್ದ್ರವ್ಯಂ ||** (ಚರಕ|| ಸೂತ್ರ, ಸ್ಥಾ. ಅ ೧. ಸೂ. ೫೧)

**ಆಯುರ್ವೇದ ಮತದಂತೆ ದ್ರವ್ಯ ಲಕ್ಷಣವು:—** ಯಾವದರಲ್ಲಿ ಕರ್ಮ ಮತ್ತು ಗುಣಗಳು ಆಶ್ರಯಿಸಿಕೊಂಡಿರುತ್ತವೆಯೋ; ಯಾವದು ಕರ್ಮ

ಗುಣಗಳಿಗೆ ಸಮವಾಯಿ ಕಾರಣವಾದದ್ದಿರುತ್ತದೆಯೋ, ಅದು ದ್ರವ್ಯವು. ವೈಶೇಷಿಕ ಮತವೂ ಆಯುರ್ವೇದ ಮತದಂತೆಯೇ ಇದೆ. "ಕ್ರಿಯಾವ ದ್ಗುಣ ವತ್ಸಮವಾಯಿ ಕಾರಣಂ ದ್ರವ್ಯಂ" (ವೈಶೇಷಿಕ)

## ದ್ರವ್ಯ ಲಕ್ಷಣದಲ್ಲಿ ಆಯುರ್ವೇದ ಮತದಂತೆ ವಿಶೇಷವು

ಏಕೇಂದ್ರಿಯಗೋಚರತ್ವೇಸತಿ, ಏಕೇನವಾಬಹುಲೇನವಾಪಂ ಚ ಭಿರಿಂದ್ರಿಯೈರ್ಯಗ್ರಾಹ್ಯತೇತದ್ದ್ರವ್ಯಂ॥ಅಥವಾಯದ್ಯದಸ್ತಿತದ್ದ್ರವ್ಯಂ॥ ಇತಿಸಾಧಾರಣ ನಿಯಮಾತ್॥ ಯಥಾಯೋಗ್ಯಂ ತತ್ತದ್ದ್ರವ್ಯೈಲಕ್ಷ್ಯೈ ಲಕ್ಷಣಸಮನ್ವಯಃ ॥ ತಸ್ಯ ವಿವರಣಂ:— ಏಕೇಂದ್ರಿಯ ಬಹುಲೇನ ಮೂರ್ತ ದ್ರವ್ಯಂ ॥ ಯದ್ಯಸ್ತೀತ್ಯನೇನ ಅಮೂರ್ತ ದ್ರವ್ಯ ॥

### ೨ ಗುಣ

**ದ್ರವ್ಯಾಶ್ರಯತ್ವೇಸತಿ ಇಂದ್ರಿಯ ಗ್ರಾಹ್ಯತ್ವಂ ಕರ್ಮಾದಿ ಭಿನ್ನತ್ವಂ ಚ। ಗುಣ ಸಾಮಾನ್ಯ ಲಕ್ಷಣಂ॥ (ತರ್ಕಸಂಗ್ರಹ)**

ಕರ್ಮಾದಿಗಳಿಂದ ಭಿನ್ನವಾಗಿಯೂ, ದ್ರವ್ಯವನ್ನಾಶ್ರಯಿಸಿಯೇ ಇರುತ್ತಿದ್ದು, ಇಂದ್ರಿಯ ಗ್ರಾಹ್ಯವಾಗಿರುವದೇ ಗುಣವು.

## ಚಂದ್ರಿಕೆಯಲ್ಲಿಯ ಗುಣ ಲಕ್ಷಣವು

**ಗುಣತ್ವಜಾತಿಮತ್ವಂ ದ್ರವ್ಯಕರ್ಮ ಭಿನ್ನತ್ವೇಸತಿ ಸಾಮಾನ್ಯ ವತ್ವಂ ಗುಣಸಾಮಾನ್ಯಲಕ್ಷಣಂ ॥ (ಚಂದ್ರಿಕಾ ಟೀಕಾ)**

### ೩. ಕರ್ಮ

**ಕರ್ಮತ್ವ ಜಾತಿಮತ್ವಂ ಸಂಯೋಗಭಿನ್ನತ್ವೇಸತಿ ಸಂಯೋಗ ಸಮವಾಯಿಕಾರಣತ್ವಂವಾ ಕರ್ಮಸಾಮಾನ್ಯ ಲಕ್ಷಣಂ ॥ (ಚಂದ್ರಿಕಾ ಟೀಕಾ)**

ಕರ್ಮತ್ವ ಜಾತಿಯುಳ್ಳದ್ದು, ಸಂಯೋಗದಿಂದ ಹೊರತಾದದ್ದು, ಸಂಯೋಗಕ್ಕೆ ಸಮವಾಯಿ ಕಾರಣವಾಗಿರುವದೇ ಕರ್ಮ ಲಕ್ಷಣವು.

## ೪. ಸಾಮಾನ್ಯ

**ಸಾಮಾನ್ಯಲಕ್ಷಣಂತು:-ನಿತ್ಯತ್ವೇಸತಿ ಅನೇಕ ಸಮವೇತತ್ವಂ॥**

(ಚಂದ್ರಿಕಾ ಟೀಕಾ)

ನಿತ್ಯಧರ್ಮವುಳ್ಳದ್ದಿದ್ದು, ಅನೇಕವಾದವುಗಳಲ್ಲಿ ಏಕತ್ವವನ್ನುಂಟು ಮಾಡುವ ಧರ್ಮವುಳ್ಳದ್ದೇ ಸಾಮಾನ್ಯವು.

ಉದಾ:- ಆಕಳನ್ನು ಗುರುತಿಸುವ ಧರ್ಮದಿಂದ, ಬೇರೆ ಬೇರೆ ದೇಶದಲ್ಲಿರುವ ಯಾವದೇ ಆಕಳಿದ್ದರೂ, ಇದು ಆಕಳು, "ಅಯಂ ಗೌಃ" ಎಂಬ ಒಂದೇ ಸಾಮಾನ್ಯ ಜ್ಞಾನವಾಗುತ್ತದೆಯೋ? ಅದೇ ಸಾಮಾನ್ಯವು. ಅರ್ಥಾತ್ ಸಮಾನವಾದವುಗಳಲ್ಲಿ (ಸದೃಶವಾದವುಗಳಲ್ಲಿ) ಒಂದೇ ಎಂಬ ಭಾವದಿಂದ, ಯಾವ ಧರ್ಮವಿದೆಯೋ ಅದೇ ಸಾಮಾನ್ಯವು.

**"ಪರಮಪರಂಚೇತಿ ದ್ವಿವಿಧಂ ಸಾಮಾನ್ಯಂ"** (ತರ್ಕಸಂಗ್ರಹ)

(೧) ಪರಂ (೨) ಅಪರಂ ಎಂದು ಸಾಮಾನ್ಯವು ಎರಡು ವಿಧವು.

**೧. ಪರತ್ವಂ:— ಅಧಿಕದೇಶವೃತ್ತಿತ್ವಂ ॥**

ಅಧಿಕ ದೇಶದಲ್ಲಿರುವ ಧರ್ಮವುಳ್ಳದ್ದೇ, ಪರವೆಂಬ ಸಾಮಾನ್ಯವು. ಉದಾ:- ಪದಾರ್ಥವು, ದ್ರವ್ಯಕ್ಕಿಂತಲೂ ಅಧಿಕ ದೇಶದಲ್ಲಿರುತ್ತದೆ. ಹೀಗಿರುವದರಿಂದ, ದ್ರವ್ಯದಲ್ಲಿರುವ ಸಾಮಾನ್ಯಕ್ಕಿಂತಲೂ, ಪದಾರ್ಥದಲ್ಲಿರುವ ಸಾಮಾನ್ಯವು ಅಧಿಕದೇಶದಲ್ಲಿರುವದು. ಹೀಗಿರುವದರಿಂದ ಅದು "ಪರ" ಸಾಮಾನ್ಯವೆಂದು ತಿಳಿಯಬೇಕು

**೨. ಅಪರತ್ವಂ:— ನ್ಯೂನದೇಶವೃತ್ತಿತ್ವಂ ॥**

ನ್ಯೂನ ದೇಶ (ಅಧಿಕ ದೇಶವಲ್ಲದ್ದರಲ್ಲಿ) ದಲ್ಲಿರುವ ಧರ್ಮವುಳ್ಳದ್ದು "ಅಪರ" ವೆಂಬ ಸಾಮಾನ್ಯವು.

## ೫. ವಿಶೇಷ

**ನಿತ್ಯದ್ರವ್ಯವೃತ್ತಯೋ ವಿಶೇಷಾಸ್ತ್ವನಂತಾ ಏವ ॥**

(ತರ್ಕಸಂಗ್ರಹ)

ನಿತ್ಯದ ದ್ರವ್ಯದಲ್ಲಿರತಕ್ಕ "ವಿಶೇಷವು" ಅಸಂಖ್ಯವಾದದ್ದಿರುತ್ತವೆ. ನಿತ್ಯ ದ್ರವ್ಯವೆಂದರೆ ಪೃಥಿವ್ಯಾದಿ ಪರಮಾಣುಗಳು, ಮತ್ತು ಆಕಾಶಾದಿ ಎಲ್ಲಾ ದ್ರವ್ಯಗಳು. ವಿಶೇಷದಿಂದ ಎಲ್ಲ ದ್ರವ್ಯಗಳು ಭಿನ್ನವಾಗಿರುವದರಿಂದ

ಪ್ರತ್ಯೇಕವಾಗಿ ತಿಳಿಯುತ್ತವೆ. ಅರ್ಥಾತ್ ಈ ಭೇದಕ್ಕನೇ ವಿಶೇಷವೆಂದು ಹೇಳುತ್ತಾರೆ ಪರಮಾಣುಗಳಲ್ಲಿ ಸ್ವಾಭಾವಿಕವಾಗಿಯೇ "ಅಯಂ ಪೃಥ್ವೀಯಃ" "ಅಯಂ ಜಲೀಯಃ" ಎಂಬ ಭೇದವು ಇರುವದರಿಂದ ಅದು ವಿಶೇಷದ್ದಲ್ಲವೆಂದು ಹೇಳುತ್ತಾರೆ. ಸ್ವಾಭಾವಿಕ ಭೇದ ಸಿದ್ಧವಿರಲು ಭೇದವು ವಿಶೇಷದ್ದೆಂದು ಹೇಳಲು ಬರುವದಿಲ್ಲೆಂದು ಕೆಲವರ ಮತವು. "ದ್ವ್ಯಣುಕ ಪರ್ಯಂತವಾದ ಅವಯುವವುಳ್ಳವುಗಳಲ್ಲಿ, ಭೇದವು ಪ್ರತ್ಯಕ್ಷವಾಗಿರುವದರಿಂದ (ಭೇದ ತೋರುವದರಿಂದ) ಇದು ಅಸಂಭವವೆಂದು ಅನಿಸಬಹುದು."

**ಆದರೆ:—** ಭೇದವು ಕಪಾಲದಿಂದ ದ್ವ್ಯಣುಕಪರ್ಯಂತವಾಗಿ, ಅವಯುವಿಯಲ್ಲಿ (ದ್ರವ್ಯದಲ್ಲಿ) ಸ್ಪಷ್ಟವಾಗಿ ಪ್ರತ್ಯಕ್ಷವಾಗಿಯೇ ಇದೆ. ಪರಮಾಣುವಿನಲ್ಲಿಯೇ ಆರಂಭವಾಗಿ, ಭೇದವು ಸಂಭವವಾದ್ದರಿಂದ "ನಿತ್ಯದ್ರವ್ಯ ವೃತ್ತಯಃ" ಎನ್ನುವದೇ ಯೋಗ್ಯವು. ನಿತ್ಯದ್ರವ್ಯವೆಂದು ಹೇಳುವದರಿಂದ ಆಕಾಶಾದಿಗಳಲ್ಲಿ ಭೇದಜ್ಞಾನವಾಗಬೇಕೆಂದು ಹೇಳಿರುವರು.

## ಆಯುರ್ವೇದದಲ್ಲಿಯ ಸಾಮಾನ್ಯ ವಿಶೇಷ ಲಕ್ಷಣ

**ಸಾಮಾನ್ಯಮೇಕತ್ವಕರಂ ವಿಶೇಷಸ್ತು ಪೃಥಕ್ತ್ವಕೃತ್ ॥**
**ತುಲ್ಯಾರ್ಥತಾಹಿಸಾಮಾನ್ಯಂ ವಿಶೇಷಸ್ತು ವಿಪರ್ಯಯಃ ॥**
**(ಚರಕ॥ ಸೂ. ಸ್ಥಾ ಅ ೧ ಶ್ಲೋ ೪೫)**

ಸದೃಶವಾದದ್ದನ್ನು ಏಕತ್ವ ಧರ್ಮದಿಂದ ಒಂದನ್ನಾಗಿ ಮಾಡುವದು, ಸಾಮಾನ್ಯವು. ಪೃಥಕ್ತ್ವ ಧರ್ಮವುಳ್ಳ ವಿಶೇಷವು, ಅಸದೃಶವಾಗಿರುವದನ್ನು ತೋರಿಸುತ್ತದೆ. ಆದ್ದರಿಂದ "**ವಿಪರ್ಯಯಃ**" ಎಂದು ಹೇಳಿದ್ದಾರೆ. ಅಥವಾ "**ಅತುಲ್ಯಾರ್ಥ ಧರ್ಮ, ಪೃಥಕ್ತ್ವ ಧರ್ಮವುಳ್ಳದ್ದು**" ವಿಶೇಷವೆಂದು ಲಕ್ಷಣ ಮಾಡಬಹುದು.

## ೬. ಸಮವಾಯ

**ಸಮವಾಯಸ್ತ್ವೇಕಏವ ॥** (ತರ್ಕಸಂಗ್ರಹ)

ಭಿನ್ನಮಾಡಲು ಬರದೇ ಇರುವ "ಅತ್ಯಂತ ಸಂಬಂಧವೇ" ಸಮವಾಯವು. ಅದು ಒಂದೇ ಇರುತ್ತದೆ.

## ಸಮವಾಯ ವೃತ್ತಿತ್ವವು

**ಅವಯವಾವಯವಿನೋರ್ಜಾತಿವ್ಯಕ್ತ್ಯೋರ್ಗುಣಗುಣಿನೋಃ ಕ್ರಿಯಾ ಕ್ರಿಯಾವತೋರ್ನಿತ್ಯದ್ರವ್ಯ ವಿಶೇಷಯೋಶ್ಚ ಯಃ ಸಂಬಂಧಃ ಸ ಸಮವಾಯಃ (ಚಂದ್ರಿಕಾ ಟೀಕಾ)**

ಅವಯವ ಮತ್ತು ಅವಯವವುಳ್ಳ ವಸ್ತುಗಳಲ್ಲಿ, ಯಾವ ಅತ್ಯಂತ ಸಂಬಂಧವಿದೆಯೋ ಅದು ಸಮವಾಯವು ಇದರಂತೆ ಜಾತಿ, ವ್ಯಕ್ತಿಗಳಲ್ಲಿಯೂ; ಗುಣ, ಗುಣವುಳ್ಳದರಲ್ಲಿಯೂ, ಕ್ರಿಯೆ ಮತ್ತು ಕ್ರಿಯೆಯುಳ್ಳದ್ದರಲ್ಲಿಯೂ; ನಿತ್ಯ ದ್ರವ್ಯ, ವಿಶೇಷಗಳಲ್ಲಿಯೂ, ಇರುವ ಸಂಬಂಧವು "ಸಮವಾಯ" ವೆಂದು ತಿಳಿಯಬೇಕು

## ೭ ಅಭಾವ

ದ್ರವ್ಯಾದಿ ಭಾವ ಷಟ್ಕ ಭಿನ್ನತ್ವಂ ಅಭಾವತ್ವಂ ( ಚಂದ್ರಿಕಾ ಟೀಕಾ ) ಇರತಕ್ಕ ದ್ರವ್ಯಾದಿಗಳಲ್ಲಿಯಂತೆ ಧರ್ಮವಿಲ್ಲದಿರುವದು, ಅಥವಾ ಇರತಕ್ಕವುಗಳಾದ ಪೃಥಿವ್ಯಾದಿಗಳಿಂದ ಭಿನ್ನವಾದ ಧರ್ಮವುಳ್ಳದ್ದು. ಅರ್ಥಾತ್ ಅಭಾವತ್ವಧರ್ಮವುಳ್ಳದ್ದೇ ಅಭಾವವು ಅಭಾವವೆಂದರೆ ಇಲ್ಲದ್ದು, ಇರದೇ ಇರುವದು ಎಂಬರ್ಥ

## ಅಭಾವ ಗ್ರಹಣವು

**ಯೇನೇಂದ್ರಿಯೇಣ ಯಾ ವ್ಯಕ್ತಿರ್ಗೃಹ್ಯತೆ, ತೇನೈವೇಂದ್ರಿಯೇಣ, ತದ್ಗತಾ ಜಾತಿ ಸ್ತದಭಾವಶ್ಚ ಗೃಹ್ಯತೆ॥ ಇತಿ ನಿಯಮಾತ್॥ (ಚಂದ್ರಿಕಾ ಟೀಕಾ)**

ಯಾವ ಇಂದ್ರಿಯದಿಂದ, ಯಾವದು ಗ್ರಹಿಸಲ್ಪಡುತ್ತದೆಯೋ? ಅದೇ ಇಂದ್ರಿಯದಿಂದ, ಅದರಲ್ಲಿಯ ಜಾತಿ,( ಧರ್ಮತ್ವ ) ಅದರ ಅಭಾವವೂ, ಗ್ರಹಿಸಲ್ಪಡುತ್ತದೆ.

ಉದಾ:— ಘಟವನ್ನು ನೋಡುವ ಕಣ್ಣಿನಿಂದ, ಘಟ ಇಲ್ಲದಿದ್ದರೆ; ಇದರ ಅಭಾವವು ತಿಳಿಯುತ್ತದೆ. "ತದಭಾವಶ್ಚ ಗೃಹ್ಯತೆ" ಎಂಬ ಅನ್ನು ವದರಿಂದ, ಅಭಾವವು ಗ್ರಹಿಸಲ್ಪಡುತ್ತದೆಯೋ ಹೇಗೆ ? ಇಲ್ಲದೆ ಇರುವದೇ ಅಭಾವವು, ಇಲ್ಲದೇ ಇರುವದನ್ನು ಹೇಗೆ ಗ್ರಹಿಸಬೇಕೆಂಬ ಆಕ್ಷೇಪ ಬರುತ್ತದೆ. ಯಾವದಾದರೂ ವಸ್ತುವಿದ್ದರೆ ಅದನ್ನು ಗ್ರಹಿಸುತ್ತೇವೆ. ಅದರಂತೆ, ಇಲ್ಲದೇ ಇರುವದರಿಂದ "ಇಲ್ಲ" ಎನ್ನುವ ಜ್ಞಾನವಾಗುತ್ತದೆ ಅದೇ ಅಭಾವ ಗ್ರಹಣವು.

**ಅಭಾವದಲ್ಲಿಯ ವಿಶೇಷ:—** ಆಯುರ್ವೇದದಲ್ಲಿ ಅಭಾವ ಶಬ್ದವು ಬಂದರೂ, ಅದನ್ನು ಪದಾರ್ಥವೆಂದು ಗ್ರಹಿಸಿರುವದಿಲ್ಲ. ಚರಕ ಸಂಹಿತೆ ಯಲ್ಲಿ ಅಭಾವವನ್ನು ಬಿಟ್ಟೇ ಪದಾರ್ಥಗಳನ್ನು ಹೇಳಿದ್ದಾರೆ. ಇದರಿಂದ ಅಭಾವ ವಾದಿಗಳಾದ "ಬೌದ್ಧಕಾಲಕ್ಕಿಂತ" ಪೂರ್ವದಲ್ಲಿಯೇ ಚರಕಸಂಹಿತೆ ರಚಿತವಾಗಿದೆ ಎಂದು ಹೇಳಬಹುದು

# ಪದಾರ್ಥ ದ್ರವ್ಯಾದಿಗಳ ಭೇದಗಳು

## ೧. ದ್ರವ್ಯ

**ತತ್ರದ್ರವ್ಯಾಣಿ:— ಪ್ರಥಿವ್ಯಪ್ತೇಜೋವಾಯ್ವಾಕಾಶ ಕಾಲದಿ ಗಾತ್ಮಮನಾಂಸಿನವ್ಯೆವ ॥** (ತರ್ಕ ಸಂಗ್ರಹ)

## ೨ ಗುಣ

**ರೂಪರಸಗಂಧಸ್ಪರ್ಶ ಸಂಖ್ಯಾಪರಿಮಾಣಪೃಥಕ್ತ್ವಸಂಯೋಗ ವಿಭಾಗ ಪರತ್ವಾಪರತ್ವ ಗುರುತ್ವ ದ್ರವತ್ವ ಸ್ನೇಹ ಶಬ್ದ ಬುದ್ಧಿ ಸುಖದುಃಖೇಚ್ಛಾ ದ್ವೇಷಪ್ರಯತ್ನಧರ್ಮಾಧರ್ಮ ಸಂಸ್ಕಾರಾ ಶ್ಚತುರ್ವಿಂಶತಿರ್ಗುಣಾಃ ॥** (ತರ್ಕ ಸಂಗ್ರಹ)

## ೩. ಕರ್ಮ

**ಉತ್ಕ್ಷೇಪಣಾವಕ್ಷೇಪಣಾಕುಂಚನ ಪ್ರಸಾರಣ ಗಮನಾನಿ ಪಂಚಕರ್ಮಾಣಿ ॥** (ತರ್ಕ ಸಂಗಹ)

## ೪. ಸಾಮಾನ್ಯ

ಪರಮಪರಂಚೇತಿ ದ್ವಿವಿಧಂ ಸಾಮಾನ್ಯಂ ॥ (ತರ್ಕ ಸಂಗ್ರಹ)

## ೫. ವಿಶೇಷ

ನಿತ್ಯದ್ರವ್ಯವೃತ್ತಯೋವಿಶೇಷಾಸ್ತ್ವನಂತಾಏವ॥(ತರ್ಕಸಂಗ್ರಹ)

## ೬ ಸಮವಾಯ

ಸಮವಾಯಸ್ತ್ವೇಕಏವ ॥ (ತರ್ಕ ಸಂಗ್ರಹ)

## ೭. ಅಭಾವ

ಅಭಾವಶ್ಚತುರ್ವಿಧಃ, ಪ್ರಾಗಭಾವಃ ಪ್ರಧ್ವಂಸಾಭಾವೋಽತ್ಯಂತಾಭಾವೋಽನ್ಯೋನ್ಯಾಭಾವಶ್ಚೇತಿ ॥ (ತರ್ಕ ಸಂಗ್ರಹ)

॥ ಪೂರ್ವೋಕ್ತಾನಾಂ ದ್ರವ್ಯಾದೀನಾಂ ವಿಸ್ತಾರಃ ॥

# (೫) ಪಂಚಮಹಾ ಭೂತಗಳಿಂದ ಶುಕ್ರಾರ್ತವ ಉತ್ಪತ್ತಿ

"ಪಂಚಮಹಾಭೂತೇಭ್ಯಃ ಶುಕ್ರಾರ್ತವಯೋಃ ಉತ್ಪತ್ತಿಃ"

ಪ್ರಾಣಿಗಳ ಶರೀರವು ಪಂಚಮಹಾ ಭೂತಗಳಿಂದ ಆಗಿರುತ್ತದೆ. ಪ್ರಾಣಿಗಳ ಆಹಾರವೂಕೂಡಾ ಪಂಚಭೂತಾತ್ಮಕವಾದದ್ದಿರುತ್ತದೆ. ಪ್ರಾಣಿಗಳಿಂದ ಭುಂಜಿಸಲ್ಪಟ್ಟ ಆಹಾರವು ಶರೀರದಲ್ಲಿ ಪಚನವಾಗಿ ದ್ರವ ರೂಪವಾದ "ರಸ" ವೆಂಬ ಪದಾರ್ಥವಾಗುತ್ತದೆ. ರಸಕ್ಕೆ ಹೃದಯವು ಆಶ್ರಯಸ್ಥಾನವಾಗಿರುತ್ತದೆ. ಇದಕ್ಕೆ ಪ್ರಮಾಣ (ಸುಶ್ರುತ॥ ಸೂ. ಅ ೧೪)

"ತತ್ರಪಾಂಚಭೌತಿಕಸ್ಯ, ಚತುರ್ವಿಧಸ್ಯ, ಷಡ್ರಸಸ್ಯ, ದ್ವಿವಿಧ ವೀರ್ಯಸ್ಯಾಷ್ಟವಿಧವೀರ್ಯಸ್ಯವಾಽನೇಕ ಗುಣಸ್ಯೋಪಯು

**ಕ್ತಸ್ಯಾಹಾರಸ್ಯಸಮ್ಯಕ್ ಪರಿಣತಸ್ಯಯಸ್ತೇಜೋಭೂತಃ ಸಾರಃ ಪರಮಸೂಕ್ಷ್ಮಃ ಸ"ರಸ" ಇತ್ಯುಚ್ಯತೆತಸ್ಯಚ ಹೃದಯಂ ಸ್ಥಾನಂ ಸಹೃದಯಾತ್ ಚತುರ್ವಿಂಶತಿಧಮನೀರನುಪ್ರವಿಶ್ಯ, ಊರ್ಧ್ವಗಾದಶ, ದಶಾಧೋಗಾಮಿನ್ಯಃ, ಚತಸ್ರಶ್ಚತಿರ್ಯಗ್ಗಾಃಕೃತ್ಸ್ನಂ ಶರೀರಮಹರಹಸ್ತರ್ಪಯತಿ, ವರ್ಧಯತಿ, ಧಾರಯತಿ, ಯಾಪಯತಿ, ಚಾsದೃಷ್ಟಕೇನಹೇತುನಾಕರ್ಮಣಾ"**

ಪಂಚಮಹಾಭೂತಾತ್ಮ (ಪೃಥಿವ್ಯಾದಿ) ಕವಾದ, ಭಕ್ಷ್ಯ ಭೋಜ್ಯ ಲೇಹ್ಯ ಪೇಯಗಳೆಂದು ನಾಲ್ಕು ವಿಧವಾದ, ಮಧುರ, ಆಮ್ಲ, ಲವಣ ಕಟು, ತಿಕ್ತ, ಕಷಾಯಗಳೆಂಬ ಆರು ರಸಯುಕ್ತವಾದ, ಉಷ್ಣ, ಶೀತ ಗಳೆಂಬ ದ್ವಿವಿಧವೀರ್ಯಾತ್ಮಕವಾದ, ಅಥವಾ ಶೀತ, ಉಷ್ಣ, ಸ್ನಿಗ್ಧ, ರೂಕ್ಷ, ವಿಶದ, ಪಿಚ್ಛಿಲ, ಮೃದು, ತೀಕ್ಷ್ಣಗಳೆಂಬ ಎಂಟ ವಿಧವೀರ್ಯವುಳ್ಳ, ಗುರುಮಂದಾದಿ ಇಪ್ಪತ್ತು ಗುಣವುಳ್ಳದ್ದು ಆಹಾರವು. (ವಾಗ್ಭಟ| ಸೂತ್ರ| ಅ ೧ ಶ್ಲೋ. ೧೮)

## ಗುಣಗಳು

**ಗುರು ಮಂದ ಹಿಮ ಸ್ನಿಗ್ಧ ಶ್ಲಕ್ಷ್ಣ ಸಾಂದ್ರ ಮೃದು ಸ್ಥಿರಾಃ||**
**ಗುಣಾಃ ಸಸೂಕ್ಷ್ಮವಿಶದಾ ವಿಂಶತಿಃ ಸವಿಪರ್ಯಯಾಃ ||೧೮||**

ಮೇಲಿನ ಶ್ಲೋಕದಲ್ಲಿ ಹೇಳಿದ ಹತ್ತು (೧೦) ಗುಣಗಳು, ಅವುಗಳ ವಿರುದ್ಧವಾದವುಗಳು (೧೦), ಹೀಗೆ ಇಪ್ಪತ್ತು ಒಟ್ಟು (೨೦), ಗುಣಗಳು.

ಇವುಗಳಿಂದ ಕೂಡಿದ ಉಪಯೋಗಿಸಿದ "ಆಹಾರದ" ಸತ್ವರೂಪವಾದ ಪರಮಸೂಕ್ಷ್ಮ ಸಾರವು, "ರಸ"ವೆಂದು ಹೇಳಲ್ಪಡುತ್ತದೆ.

ರಸಕ್ಕೆ ಹೃದಯವು ಆಶ್ರಯಸ್ಥಾನವು. ಅದು ಹೃದಯದಿಂದ ಹೊರಟಿರುವ (೨೪) ಧಮನಿಗಳನ್ನು ಪ್ರವೇಶಿಸುತ್ತದೆ ಪ್ರವೇಶಿಸಿದ ನಂತರ ಧಮನಿಗಳ ಮುಖಾಂತರವಾಗಿ, ಸಂಚರಿಸುತ್ತದೆ.

## ಧಮನಿಗಳ ಪ್ರಕಾರಗಳು

ಧಮನಿಗಳೆಂದರೆ ಕೊಳವೆಯಂತಿರುವ ಮಾಂಸದ ನಲಿಕೆಗಳು. ಹೃದಯದಿಂದ ಮೇಲ್ಭಾಗಕ್ಕೆ ಹೋದವುಗಳು (೧೦). ಹೃದಯದಿಂದ ಕೆಳ ಭಾಗಕ್ಕಿಳಿದವುಗಳು(೧೦). ಎಡ, ಬಲ, ಪಾರ್ಶ್ವಗಳಲ್ಲಿ, ಮೇಲೆ ಕೆಳಗೆ ಒಂದೊಂದರಂತೆ, ಎಡ ಪಾರ್ಶ್ವದಲ್ಲಿ (೨). ಬಲವಲ್ಲಿ (೨). ಒಟ್ಟು ಇಪ್ಪತ್ತುನಾಲ್ಕು (೨೪) ಧಮನಿಗಳು ಇರುತ್ತವೆ.

ರಸವು ಹೃದಯದಿಂದ ಹೊರಟ ಈ ಧಮನಿಗಳಲ್ಲಿಯೇ ಸಂಚರಿಸುತ್ತದೆ. ಸಂಪೂರ್ಣ ಶರೀರವನ್ನು ಸದಾತೃಪ್ತಿ ಪಡಿಸುತ್ತದೆ. ಬೆಳೆಸುತ್ತದೆ. ಧಾರಣಾವಮಾಡುತ್ತದೆ. ಜೀವಂತವಿಡುತ್ತದೆ ಬಾಲಕನನ್ನು,ಮಧ್ಯ ವಯಸ್ಸಿನವನನ್ನು, ವೃದ್ಧರನ್ನು ಎಲ್ಲರನ್ನೂ, ತೃಪ್ತಿಪಡಿಸುತ್ತದೆ. ಆದರೆ ಬಾಲಕನನ್ನು ಬೆಳೆಸುತ್ತದೆ. ಮಧ್ಯ ವಯಸ್ಸಿನವರನ್ನು ಇದ್ದಂತೆಯಿಡುತ್ತದೆ. ಮುದುಕರನ್ನು ಜೀವಂತ ಮಾತ್ರ ಇಡುತ್ತದೆ. ಅರ್ಥಾತ್, ಮುದುಕರಿಗೆ ಆಹಾರ ರಸದಿಂದ ದೇಹಾಭಿವೃದ್ಧಿ, ಅಥವಾ ಇದ್ದಂತೆ ಇಡುವದು ಸಹ ಸಾಧ್ಯವಾಗುವದಿಲ್ಲ. ಆಹಾರ ರಸ ಒಂದೇ ಇದ್ದರೂ, ಹೀಗೆ ಪರಿಣಾಮ ಫಲದಲ್ಲಿ ವ್ಯತ್ಯಾಸವಾಗಲು ಕಾರಣವೇನು? ಇತ್ಯಾದಿ ತರ್ಕ ವಿತರ್ಕಗಳು ಬರುತ್ತವೆ ಇದಕ್ಕೆ ಉತ್ತರವಿಷ್ಟೇ; ಅನಿರ್ವಚನೀಯವಾದ ಕಾರಣ, ಕರ್ಮಗಳೆಂದೇ ಹೇಳಬೇಕಾಗುತ್ತದೆ ಸೃಷ್ಟಿಯ ಸ್ವಾಭಾವಿಕ ಸ್ಥಿತಿಯೇ ಹೀಗಿರುತ್ತದೆ ಆದ್ದರಿಂದ ಆಹಾರ ರಸದಲ್ಲಿಯ ವ್ಯತ್ಯಾಸವೇನಿರದೆ, ಶರೀರದಲ್ಲಿ ಸ್ವಾಭಾವಿಕವಾದ ಗೋಚರವಲ್ಲದ, ಸೂಕ್ಷ್ಮವಾದ ಸ್ಥಿತಿ ಕ್ರಿಯಾ ಇವುಗಳೇ ಫಲ ಭಿನ್ನವಾಗರಿಕ್ಕೆ ಕಾರಣವೆಂದು ನಿರ್ಧರಿಸಬಹುದು.

ಅನ್ನರಸದಲ್ಲಿ ವರ್ಧನೆಯ ಗುಣವಿರುವದಾದ್ದರಿಂದ, ಮುದುಕನೂ ಸಹ ಆಹಾರವನ್ನು ತೆಗೆದುಕೊಳ್ಳುತ್ತಾನೆ, ಅದರಿಂದ (ಆಹಾರ ರಸದಿಂದ) ಅವನ ಶರೀರಾಭಿವೃದ್ಧಿಯಾಕಾಗಬಾರದು? ಎನ್ನುವದಕ್ಕೆ ಹೀಗೆ ಅಭಿಪ್ರಾಯ ಪಟ್ಟಿರುತ್ತಾರೆ

**"ಸಏವಅನ್ನರಸೋವೃದ್ಧಾನಾಂ (ಜರಾ) ಪರಿಪಕ್ವಶರೀರತ್ವಾತ್ ಅಪ್ರೀಣನೊಭವತಿ"** (ಸುಶ್ರುತ ||ಸೂತ್ರಸ್ಥಾನ|| ಅ ೧೪ ಸೂ. ೧೯)

ರಸರಕ್ತಾದಿ ಎಲ್ಲ ಧಾತುಗಳನ್ನೂ, ಪೂರ್ಣ ಶರೀರವನ್ನೂ, ಪೋಷಿಸಿ ಬೆಳೆಸುವ ಅನ್ನರಸವು. ಮುದುಕರ ಶರೀರವು ಮುಪ್ಪಿನಿಂದ ಪರಿಪಕ್ವ (ಪಣ್ಣಾಗಿರುವ) ವಾಗಿರುವದರಿಂದ, ಅಭಿವೃದ್ಧಿಯನ್ನು ಮಾಡುವದಿಲ್ಲ. ಹೀಗೆಂದು ಹೇಳಿದ್ದಾರೆ ಇವೆಲ್ಲವಕ್ಕೂ ಆಯಾವ ಅವಸ್ಥೆಯಲ್ಲಿರುವ, ದೇಹದಲ್ಲಿಯ ಅನಿರ್ವಚನೀಯವಾದ ಕ್ರಿಯೆಗಳೇ ಕಾರಣವು. ಇದರ ಹೊರತು ಇನ್ನಾವ ನಿಶ್ಚಯಾತ್ಮಕ ಕಾರಣವು ದೊರೆಯುಲಾರದು.

## ರಸಶಬ್ದದ ರೂಪ ನಿಷ್ಪತ್ತಿಯು

**ತತ್ರ "ರಸ" ಗತೌಧಾತುಃ, ಅಹರಹರ್ಗಚ್ಛತೀತ್ಯತೋರಸಃ**
(॥ಸುಶ್ರುತ॥ ಸೂತ್ರಸ್ಥಾನ| ಅ. ೧೪ ಸೂ. ೧೩)

ಗತ್ಯರ್ಥವುಳ್ಳ "ರಸ" ಎಂಬ ಧಾತುವು. ಯಾವಾಗಲೂ, ಗಮನ ಶೀಲ ವಾದದ್ದು, ಸದಾಹೋಗುತ್ತಿರುತ್ತದೆ, ಎಂಬ ಅರ್ಥದಲ್ಲಿ ರೂಪಸಿದ್ಧಿಮಾಡಲು "ರಸ" ಎಂಬ ಹೆಸರು ಶಾಸ್ತ್ರತಃ ಅನ್ವರ್ಥಕವಾದದ್ದಿರುತ್ತದೆ

**"ಸಶಬ್ದಾರ್ಚಿರ್ಜಲ ಸಂತಾನವದಣುನಾವಿಶೇಷೇಣಾನುಧಾ ವತ್ಯೇವಂ ಶರೀರಂ ಕೇವಲಂ"** (ಸು॥ಸೂತ್ರ॥ ಅ. ೧೪ ಸೂ. ೧೬)

ಸದಾ ಸಂಚರಿಸುತ್ತಿರುವ ಗುಣವುಳ್ಳ ರಸವು, ಶಬ್ದ, ಅಗ್ನಿಯ ಜ್ವಾಲೆ, ನೀರಿನ ಧಾರೆ, ಇವುಗಳಂತೆ ಅತಿ ಸೂಕ್ಷ್ಮವಾಗಿ ಸಮಗ್ರ ಶರೀರವನ್ನು ಸಂಚಾರ ಮಾಡುತ್ತಿರುತ್ತದೆ.

ಶಬ್ದ ಉದಾಹರಣೆಯಿಂದ ಶಬ್ದದಂತೆ, ಅಡ್ಡ ಸಂಚಾರ ಅಥವಾ ವಿಶ್ವ ತೋಗಮನ; ಜ್ವಾಲೆಯ ಉದಾಹರಣೆಯಿಂದ ಮೇಲ್ಭಾಗ (ಊರ್ಧ್ವ) ಗಮನವು, ನೀರಿನ ಧಾರೆ ಅಥವಾ ಪ್ರವಾಹ ಇದರ ಉದಾಹರಣೆಯಿಂದ ಕೆಳಗಡೆ (ಅಧೋಭಾಗ) ಸಂಚಾರವು, ರಸಕ್ಕೆ ಈ ಪ್ರಕಾರ ಎಲ್ಲ ಭಾಗಗಳ ಸಂಚಾರವಿದೆಯೆಂದು ಹೇಳಿದಂತಾಗುತ್ತದೆ.

ಶಬ್ದಾದಿ ದೃಷ್ಟಾಂತಗಳಿಂದ, ತೀಕ್ಷ್ಣವಾದ ಜಠರಾಗ್ನಿ, ಮಧ್ಯ, ಮಂದಾಗ್ನಿ, ಇವುಗಳೂ ಸಹ ಧ್ವನಿತವಾಗುತ್ತವೆ.

ತೀಕ್ಷ್ಣಾಗ್ನಿಯಿದ್ದವನಲ್ಲಿ ರಸದ ಸಂಚಾರವು 'ಶಬ್ದ'ಗತಿಯಂತೆಯೂ, ಮಧ್ಯತರವಾದ ಜಠರಾಗ್ನಿಯಿದ್ದವನಲ್ಲಿ ರಸದ ಗತಿಯು ಜ್ವಾಲೆಯಂತೆಯೂ, ಮಂದಾಗ್ನಿಯಿದ್ದವನಲ್ಲಿ ಜಲದ ಪ್ರವಾಹ ಗತಿಯಂತೆಯೂ, ರಸದ ಸಂಚಾರವು ಇರುತ್ತದೆ. ಇದರಿಂದ ಅತಿವೇಗ, ಮಧ್ಯಮ ವೇಗ, ಕನಿಷ್ಠ ವೇಗಗಳು ಸೂಚಿತವಾಗುತ್ತವೆ.

**ತಸ್ಯ ಶರೀರಮನುಸರತೋಽನುಮಾನಾದ್ಗತಿರುಪಲಕ್ಷಯಿತವ್ಯಾಕ್ಷಯ ವೃದ್ಧಿವೈಕೃತ್ಯೈಃ।** (ಸು। ಸೂ। ಅ ೧೪)

ಶರೀರದಲ್ಲಿ ಸಂಚರಿಸುವ ರಸದ ಗತಿಯನ್ನು, ರಸದ ಕ್ಷೀಣತೆ, ವೃದ್ಧಿ, ವಿಕೃತಿ, ಇವುಗಳಿಂದ ಊಹಿಸಿ ತಿಳಕೊಳ್ಳಬೇಕು. ರಸದ ಕ್ಷೀಣತೆಯಿಂದ ಹೃದಯಕಂಪ ಪೀಡಾಇತ್ಯಾದಿಗಳು ಆಗುತ್ತವೆ. ಆದ್ದರಿಂದ ರಸಕ್ಕೆ ಹೃದಯವು ಆಶ್ರಯ ಸ್ಥಾನವು ಎಂದು ಹೇಳಿದಂತಾಯಿತು. ಮತ್ತು ಜ್ವರಾದಿಗಳು ರಸವನ್ನೇ ಅನುಸರಿಸಿ ಉತ್ಪನ್ನವಾಗುತ್ತಿರುವವು. ಜ್ವರಾದಿಗಳು ಸಂಪೂರ್ಣ ದೇಹವನ್ನೇ ಆಶ್ರಯಿಸಿರುವದರಿಂದ ರಸವು ಸಂಪೂರ್ಣ ದೇಹದಲ್ಲಿ ಸಂಚರಿಸುತ್ತದೆಂದೂ, ರಸದ ಗತಿಯು ಪೂರ್ಣ ದೇಹದಲ್ಲಿರುತ್ತದೆಂದೂ, ಸಿದ್ಧವಾದಂತಾಯಿತು. ಸಮಸ್ಥಿತಿಯಲ್ಲಿರುವ ದೇಹ ಪೋಷಕ ರಸವು ದೇಹದಲ್ಲಿ ಸಂಚಾರ ಮಾಡುವದರಿಂದ ಸಂಪೂರ್ಣ ಶರೀರವು ತೃಪ್ತಿಹೊಂದುತ್ತದೆ. ಆದ್ದರಿಂದಲೂ ರಸಗತಿಯು ತಿಳಿಯುವದು.

**ತಸ್ಮಿನ್ ಸರ್ವಶರೀರಾವಯವ ದೋಷಧಾತುಮಲಾಶಯಾನುಸಾರಿಣಿ ರಸೇ–ಜಿಜ್ಞಾಸಾ:–ಕಿಮಯಂ ಸೌಮ್ಯಸ್ತೈಜಸ? ಇತಿ। ಅತ್ರೋಚ್ಯತೆ:–ಸಖಲುದ್ರವಾನುಸಾರೀಸ್ನೇಹನಜೀವನತರ್ಪಣಧಾರಣಾದಿಭಿರ್ವಿಶೇಷೈಃ ಸೌಮ್ಯಇತ್ಯವಗಮ್ಯತೆ"**

(ಸುಶ್ರುತ॥ ಸೂತ್ರಸ್ಥಾ॥ ಅ ೧೪)

ಸಂಪೂರ್ಣ ಶರೀರದಲ್ಲಿರುವ, ದೋಷಾಶಯ ಧಾತ್ವಾಶಯ ಮಲಾಶಯಗಳಲ್ಲಿ ಸಂಚರಿಸುವ, ಸಂಚರಿಸುತ್ತಿರುವಾಗ ಆ ಆ ಸ್ಥಾನದಲ್ಲಿಯು ಭಿನ್ನ ಭಿನ್ನ ಗುಣವುಳ್ಳ ಪದಾರ್ಥ ಸಂಸರ್ಗವಾಗುವದರಿಂದ ರಸವು ಸೌಮ್ಯವೋ?

(ಶೀತ ಗುಣವುಳ್ಳದ್ದೋ), ಅಥವಾ ತೈಜಸವೋ? (ಉಷ್ಣಗುಣವುಳ್ಳದ್ದೋ), ಎಂದು ಸಂಶಯು ಉತ್ಪನ್ನವಾಗುತ್ತದೆ. ಅದು ಹೇಗೆಂದರೆ:-

ಆಮಾಶಯಕಫಾಶಯಗಳಲ್ಲಿ ಸಂಚರಿಸುವದರಿಂದ ಶೀತಗುಣವುಳ್ಳದ್ದು. ಪಿತ್ತಾಶಯದಲ್ಲಿ ಸಂಚರಿಸುವದರಿಂದ ಉಷ್ಣಗುಣವುಳ್ಳದ್ದು. ಹೀಗೆಂದು ವಿತರ್ಕ ಉಂಟಾಗುವದು.

ದೇಹದಲ್ಲಿಯ ದ್ರವಗಳನ್ನನುಸರಿಸುವದರಿಂದಲೂ (ದ್ರವರೂಪವಾದ್ದರಿಂದ) ದೇಹಕ್ಕೆ ಮೃದುತ್ವವನ್ನುಂಟು ಮಾಡುವದರಿಂದ, ತೃಪ್ತಿ ಪಡಿಸುವದು, ಪೋಷಣೆ, ಧಾರಣೆ, ಜೀವನ, ಇತ್ಯಾದಿಗಳಿಂದ ಸೌಮ್ಯ(ಶೀತವೀರ್ಯ)ವೆಂದು ತಿಳಿಯಲ್ಪಡುತ್ತದೆ.

## ರಸ ಪರಿವರ್ತನೆಯು

"ಸಖಲ್ವಾಪ್ಯೋರಸೋಯಕೃತ್‌ಪ್ಲಿಹಾನೌಪ್ರಾಪ್ಯರಾಗ
ಮುಪೈತಿ" (ಸುಶ್ರುತ। ಸೂತ್ರ। ಅ ೧೪ ಸೂ ೪)

ಪೂರ್ವೋಕ್ತವಾದ ಸೌಮ್ಯಗುಣವುಳ್ಳ ಜಲೀಯರಸವು, ಯಕೃತ್ ಪ್ಲೀಹಗಳಲ್ಲಿ ಸಂಚರಿಸಿ ಕೆಂಪು ಬಣ್ಣವುಳ್ಳದ್ದಾಗುತ್ತದೆ.

ಇಲ್ಲಿಯ ವರೆಗೆ ರಸವನ್ನು ಹೇಳಿ, ರಸದಿಂದ ಉತ್ಪನ್ನವಾಗುವ ರಕ್ತ ಧಾತುವನ್ನು ಹೇಳುತ್ತಾರೆ.

## ರಕ್ತ ಸ್ವರೂಪವು

ರಂಜಿತಾಸ್ತೇಜಸಾತ್ವಾಪಃ ಶರೀರಸ್ಥೇನದೇಹಿನಾಂ ॥
ಅವ್ಯಾಪನ್ನಾಃ ಪ್ರಸನ್ನೇನ ರಕ್ತಮಿತ್ಯಭಿಧೀಯತೇ ॥
(ಸು। ಸೂ।ಅ ೧೪ ಶ್ಲೋ. ೫)

ಶರೀರದಲ್ಲಿಯ ಜಠರಾಗ್ನಿಯಿಂದ, (ಯಕೃತ್ ಪ್ಲೀಹಗಳಿಂದ) ವಿಕೃತವಾಗದಿರುವ ಪ್ರಸನ್ನವಾದ ರಂಜಕವೆಂಬ ಹೆಸರುಳ್ಳ ತೇಜಸ್ಸಿನಿಂದ, (ಅಗ್ನಿ

ಯಿಂದ) ಪರಿಪಕ್ವವಾಗಿ, ರಸವು ಕೆಂಪು ಬಣ್ಣವುಳ್ಳದ್ದಾಗುವದು. ರಸಕ್ಕೆ ಕೆಂಪು ಬಣ್ಣ ಬರುವದರಿಂದಲೇ "ರಕ್ತ" ವೆಂಬ ಹೆಸರು ಬಂದಿರುತ್ತದೆ. ಹೀಗೆ ರಸವು ಪಾಚಕಾಗ್ನಿಯಿಂದ ಪಕ್ವವಾಗಿ ಕೆಂಪು ಬಣ್ಣ ಬಂದು ರಕ್ತವಾಗಿ ಪರಿ ವರ್ತನೆಯನ್ನು ಹೊಂದುತ್ತದೆ.

## ರಸದಿಂದಲೇ ಸ್ತ್ರೀಯರ ರಜೋತ್ಪತ್ತಿಯು

**ರಸಾದೇವಸ್ತ್ರೀಯಾರಕ್ತಂ ರಜಃ ಸಂಜ್ಞಂ ಪ್ರವರ್ತತೆ ॥**
**ತದ್ವರ್ಷಾತ್‌ದ್ವಾದಶಾದೂರ್ಧ್ವಂ ಯಾತಿಪಂಚಾಶತಃ**
**ಕ್ಷಯಂ ॥** (ಸು| ಸೂ| ಅ ೧೪ ಶ್ಲೋ. ೬)

ರಸದಿಂದಲೇ ಸ್ತ್ರೀಯರ ರಜಸ್ಸೆಂಬ ಹೆಸರುಳ್ಳ ರಕ್ತವು (ಮುಟ್ಟು) ಆರಂಭವಾಗುತ್ತದೆ. ಅದು ೧೨ ವರ್ಷಗಳ ನಂತರ ಆರಂಭವಾಗಿ ೫೦ ವರ್ಷ ಗಳ ನಂತರ ನಿಲ್ಲುತ್ತದೆ. ರಜಸ್ಸು ಕ್ಷೀಣವಾದಾಗ ಪ್ರಶಸ್ತವಾದ ಮಧುರ ಪೌಷ್ಟಿಕ ರಸದ ಉಪಯೋಗದಿಂದ, ಕ್ಷೀಣತೆಯು ಹೋಗಿ ಬಲಗೊಳ್ಳುವದು. ಆದ್ದರಿಂದ, ರಸವು ರಜಸ್ಸಿಗೆ ಕಾರಣವೆಂದು ಸಿದ್ಧವಾಗುತ್ತದೆ. "**ರಸಾದೇವ**" ರಸದಿಂದಲೇ ರಜಸ್ಸು (ಮುಟ್ಟು)ಉತ್ಪನ್ನವಾಗುತ್ತದೆಂದು ಸುಶ್ರುತರ ಮತವು.

**ಆರ್ತವಶೋಣಿತವು (ರಜಸ್ಸಿನ ರಕ್ತ) ಆಗ್ನೇಯವೋ?**
**ಸೌಮ್ಯವೋ?**

**ಆರ್ತವಂಶೋಣಿತಂ ಆಗ್ನೇಯಂ ಅಗ್ನೀಷೋಮೀಯತ್ವಾ**
**ದ್ಗರ್ಭಸ್ಯ ॥** (ಸು| ಸೂ| ಅ ೧೪ ಸೂ ೭)

ಗರ್ಭವು ಆಗ್ನೇಯ ಸೌಮ್ಯ ಗುಣವುಳ್ಳದ್ದಾದ್ದರಿಂದ, ಆರ್ತವ ರಕ್ತವು ಆಗ್ನೇಯ (ತೈಜಸ) ಗುಣವುಳ್ಳದ್ದೆಂದುಸಿದ್ಧವಾಗುತ್ತದೆ. ಆರ್ತವವು ಆಗ್ನೇಯ ಗುಣವುಳ್ಳದ್ದು. ಶುಕ್ರವು ಸೌಮ್ಯಗುಣವುಳ್ಳದ್ದು. ಆದ್ದರಿಂದಲೇ ಗರ್ಭವು, "**ಅಗ್ನೀಷೋಮೀಯ**" ವೆಂದು ಹೇಳಲ್ಪಟ್ಟಿರುತ್ತದೆ.

ಆರ್ತವ ಶುಕ್ರಗಳ ಸಂಯೋಗವಾದ ಗರ್ಭವು, ಆಗ್ನೇಯ ಸೌಮ್ಯ ಗುಣವುಳ್ಳದ್ದಿರುವದರಿಂದ, ಆರ್ತವವು ಆಗ್ನೇಯ ಗುಣವುಳ್ಳದ್ದೂ, ಶುಕ್ರವು ಸೌಮ್ಯ ಗುಣವುಳ್ಳದ್ದೂ, ಇರುತ್ತವೆಂಬದು ಸ್ಪಷ್ಟವಾಯಿತು.

# ರಕ್ತವು ಪಂಚಭೂತಾತ್ಮಕವಾದದ್ದು

**ಪಾಂಚಭೌತಿಕಂ ತ್ವಪರೇ ಜೀವರಕ್ತಮಾಹುರಾಚಾರ್ಯಾಃ ॥**
(ಸು। ಸೂ। ಅ ೧೪ ಸೂ ೮)

"ರಕ್ತವು" ಪಾಂಚಭೌತಿಕವೆಂದೂ, ಕೆಲವರು ಜೀವರಕ್ತವೆಂದೂ, ಹೇಳುತ್ತಾರೆ ಜೀವವಿದ್ದ ಶರೀರದಲ್ಲಿಯೇ ರಕ್ತವಿರುತ್ತಿದ್ದು, ಮೃತ ದೇಹ ದಲ್ಲಿ ಇರುವದಿಲ್ಲವಾದ್ದರಿಂದ ಜೀವಿಸಲಿಕ್ಕೆ ರಕ್ತವೇ ಪ್ರಧಾನವಾದದ್ದು ಎಂದು ಸ್ಪಷ್ಟವಾಗುತ್ತದೆ ಆದ್ದರಿಂದ, 'ಜೀವರಕ್ತವೆಂದು" ಆಚಾರ್ಯರು ಸಿದ್ಧಾಂತ ಮಾಡುತ್ತಾರೆ ಪಂಚಭೂತಗಳ ಗುಣವು ರಕ್ತದಲ್ಲಿರುವದರಿಂದ, ರಕ್ತವು ಪಂಚಭೂತಾತ್ಮಕವಾದದ್ದು—

**ವಿಸ್ರತಾದ್ರವತಾರಾಗಃ ಸ್ಪಂದನಂ ಲಘುತಾತಥಾ ॥**
**ಭೂಮ್ಯಾದೀನಾಂ ಗುಣಾಹ್ಯೇತೇದೃಶ್ಯಂತೇಚಾತ್ರಶೋಣಿತೇ॥**
(ಸು। ಸೂ। ಅ ೧೪ ಶ್ಲೋ ೯)

"ವಿಸ್ರತಾ" ಆಮಗಂಧ ಭೂಮಿಯ ಗುಣವು. ದ್ರವರೂಪ ನೀರಿನ ಗುಣವು. ಕೆಂಪುಬಣ್ಣ ತೇಜೋಗುಣವು. ಸ್ಪಂದನ ವಾಯು ಗುಣವು ಹಗುರವಾದದ್ದು ಆಕಾಶ ಗುಣವು. ಈ ಗುಣಗಳು ರಕ್ತದಲ್ಲಿ ಇರುತ್ತವೆ. ಭೂಮಿ ಮೊದಲಾದ ಪಂಚಭೂತಗಳಲ್ಲಿರುವ ಗುಣಗಳು, ರಕ್ತದಲ್ಲಿರುವದ ರಿಂದ ರಕ್ತವೂ ಕೂಡಾ ಪಾಂಚಭೌತಿಕವಿರುತ್ತದೆಂದು ಸಿದ್ಧವಾಗುವದು.

## ರಸದಿಂದ ರಕ್ತಾದಿ ಧಾತುಗಳ ಉತ್ಪತ್ತಿ ಕ್ರಮ

**ರಸಾದ್ರಕ್ತಂ ತತೋಮಾಂಸಂ ಮಾಂಸಾನ್ಮೇದಃಪ್ರಜಾಯತೇ॥**
**ಮೇದಸೋಽಸ್ಥಿತತೋಮಜ್ಜಾಮಜ್ಜ್ಞಃ ಶುಕ್ರಂತುಜಾಯತೇ॥**
(ಸು॥ ಸೂ॥ ಅ ೧೪ ಸೂ ೧೦)

ರಸದಿಂದ ರಕ್ತವೂ, ರಕ್ತದಿಂದ ಮಾಂಸವೂ, ಮಾಂಸದಿಂದ ಮೇದಸ್ಸೂ, ಮೇದಸ್ಸಿನಿಂದ ಅಸ್ಥಿಯೂ, ಅಸ್ಥಿಯಿಂದ ಮಜ್ಜೆಯೂ, ಮಜ್ಜೆ

ಯಿಂದ ಶುಕ್ರವೂ, ಕ್ರಮವಾಗಿ ಉತ್ಪನ್ನವಾಗುತ್ತವೆ ೧ ರಸ, ೨. ರಕ್ತ. ೩. ಮಾಂಸ, ೪. ಮೇದಸ್ಸು, ೫. ಅಸ್ಥಿ, ೬. ಮಜ್ಜಾ, ೭. ಶುಕ್ರ ಇವುಗಳಿಗೆ ಸಪ್ತಧಾತುಗಳೆಂಬ ಹೆಸರು. ಇವು ಕೂಡ ಪಂಚಭೂತಾತ್ಮಕವಾಗಿರುತ್ತವೆ

## ಶರೀರ ಧಾರಣೆಯಿಂದ ಧಾತುವೆಂಬ ಹೆಸರು

**ತಏತೇಶರೀರಧಾರಣಾತ್ ಧಾತವಇತ್ಯುಚ್ಯಂತೆ ॥**
(ಸು॥ ಸೂ॥ ಅ ೧೪ ಸೂ ೨೦)

ರಸ ರಕ್ತಾದಿಗಳು, ದೇಹವನ್ನು ಧಾರಣ ಮಾಡುವದರಿಂದ, ಇವುಗಳಿಗೆ "ಧಾತು" ಎಂಬ ಹೆಸರು. ಈ ಉತ್ಪನ್ನವಾದ ಧಾತುಗಳಿಗೆ ಪುನಃ ಪೋಷಣೆಯು ಬೇಕಾಗುತ್ತದೆ ಆ ಪೋಷಣೆಯನ್ನು ಆಹಾರ ರಸವು ಮಾಡುತ್ತದೆ.

### ಆಹಾರ ರಸದಿಂದ ಧಾತುಗಳ ಪೋಷಣೆಯು

**ತತ್ರೈತೇಷಾಂಧಾತೂನಾಮನ್ನಪಾನರಸಃ ಪ್ರೀಣಯಿತಾ ॥೧೧॥**
**ರಸಜಂ ಪುರುಷಂ ವಿದ್ಯಾತ್ ರಸಂ ರಕ್ಷೇತ್ ಪ್ರಯತ್ನತಃ**
**ಅನ್ನಾತ್ ಪಾನಾಚ್ಚ ಮತಿಮಾನ್ ಆಚಾರಾಚ್ಚಾಪ್ಯತಂದ್ರಿತಃ ॥**

ಪೂರ್ವೋಕ್ತ ಧಾತುಗಳಿಗೆ, ಅನ್ನದ ರಸ ಮತ್ತು ಪಾನ ಮಾಡಿದ (ಕುಡಿದ) ರಸ ಇವು, ಪೋಷಕವಾಗಿಯೂ, ತೃಪ್ತಿ ಪಡಿಸತಕ್ಕವುಗಳಾಗಿಯೂ ಇರುತ್ತವೆ. ಅನ್ನಪಾನ ರಸದಿಂದ, ದೇಹ ಧಾರಣೆಯನ್ನು ಮಾಡುವ, ರಕ್ತಾದಿ ಧಾತುಗಳು ಪೋಷಿತವಾಗುತ್ತವೆ. ಸಪ್ತಧಾತುಗಳು ದೇಹದಲ್ಲಿದ್ದರೂ ದೇಹಕ್ಕೆ ಪುನಃ ಆಹಾರ ಪಾನೀಯಗಳು ಅವಶ್ಯಬೇಕಾಗುವದರಿಂದ, ಧಾತುಗಳಿಗೂ ಸಹ ಪೋಷಣೆಯು ಅವಶ್ಯವೆಂದು ಗೋಚರವಾಗುತ್ತದೆ ದೇಹ ಮತ್ತು ಧಾತುಗಳ ಪೋಷಣೆಯನ್ನು ಅನ್ನಪಾನ ರಸವು, ಮಾಡುತ್ತದೆಂದು ಹೇಳುತ್ತಾರೆ. ರಸದಿಂದ ಧಾತುಗಳು ಹುಟ್ಟುವದರಿಂದಲೂ, ಆ ಧಾತುಗಳನ್ನು ಸಹ ರಸವು ಪೋಷಿಸುವದರಿಂದಲೂ, ರಸವು ದೇಹ ಧಾರಣೆಗೆ

ಅತ್ಯವಶ್ಯವಾದದ್ದು ಇರುತ್ತದೆ. ಆದ್ದರಿಂದ ಮನುಷ್ಯನು ರಸದಿಂದ ಹುಟ್ಟಿರುವನೆಂದು ತಿಳಿಯಬೇಕು. "ಏಷಪುರುಷೋನ್ನ ರಸಮಯಃ" (ಶೃತಿಃ) ಅನ್ನರಸಮಯನಾದ್ದರಿಂದ ಪುರುಷನು ರಸದಿಂದ ಹುಟ್ಟಿರುವನೆಂದು, ರಸ ಪ್ರಶಂಸಾಪರವಾಗಿ ಹೀಗೆ ಹೇಳಿದ್ದಾರೆ. ಶುಕ್ರದಿಂದ ಮನುಷ್ಯನ ಉತ್ಪತ್ತಿಯೇ ಹೊರತು ರಸದಿಂದಅಲ್ಲ ಶುಕ್ರವು ರಸದಿಂದ ಉತ್ಪನ್ನವಾಗುವದರಿಂದ ರಸ ಶ್ರೇಷ್ಠತೆಯನ್ನು ತೋರಿಸಲು ಹೀಗೆ ಹೇಳಿದ್ದಾರೆ. ಜೀವ ಧಾರಣೆಗೆ ಅತ್ಯವಶ್ಯವಾದ ರಸವನ್ನು, ಯೋಗ್ಯವಾಗಿ ಆಹಾರ, ಪಾನ, ಆಚಾರ, ಇವುಗಳಿಂದ ಉತ್ತಮ ತರಗತಿಯದಾಗುವಂತೆ ಯೋಜಿಸಬೇಕು. ರಸದಿಂದಾರಂಭಿಸಿಯೇ ದೇಹಧಾತ್ವಾದಿಗಳು ಉಂಟಾಗುತ್ತವೆ. ರಸವು ಉತ್ತಮವಿದ್ದರೆ ಅವೆಲ್ಲವುಗಳೂ ದೋಷ ರಹಿತವಾದವುಗಳಾಗುತ್ತವೆ. ಆದ್ದರಿಂದ ಮನುಷ್ಯನು ಎಚ್ಚರಿಕೆಯಿಂದ ಪ್ರಮುಖ ರಸ ವಿಷಯದಲ್ಲಿ ಜಾಗರೂಕತೆಯನ್ನು ವಹಿಸಬೇಕು

## ರಸ ಪರಿವರ್ತನ ಕಾಲವು

**"ಸಖಲುತ್ರೀಣಿತ್ರೀಣಿಕಲಾಸಹಸ್ರಾಣಿ ಪಂಚದಶಚಕಲಾ ಏಕೈಕಸ್ಮಿನ್ ಧಾತಾವವತಿಷ್ಠತೆ ಏವಂಮಾಸೇನರಸಃ ಶುಕ್ರಂ ಸ್ತ್ರೀಣಾಮಾರ್ತವಂಚಭವತಿ॥"** (ಸುಶ್ರುತ॥ಸೂ.ಸ್ಥಾ. ೧೪ನೇ ೧೪ನೇ)

ರಸವು (೩೦೧೫) ಮೂರು ಸಾವಿರದ ಹದಿನೈದು ಕಲಾದಷ್ಟು ಹೊತ್ತು ಅಂದರೆ ೫ ದಿನಗಳು ಒಂದೊಂದು, ಧಾತುವಿನಲ್ಲಿ ಇರುತ್ತದೆ. ಇದರಂತೆ ಆರು ಧಾತುಗಳಲ್ಲಿ ಅಂದರೆ (೩೦) ದಿನಗಳು ಕಳೆಯಲಾಗಿ ಶುಕ್ರವಾಗಿಯೂ ಸ್ತ್ರೀಯರಿಗೆ ಆರ್ತವವಾಗಿಯೂ, ಪರಿಣಮಿಸುತ್ತದೆ. ಐದು ದಿನಗಳಂತೆ (೬) ಧಾತುಗಳಲ್ಲಿ (೩೦) ದಿನಗಳು ಇರುತ್ತದೆಂದು ಹೇಳಿರುವದರಿಂದ, ಊಟ ಮಾಡಿದ ಆಹಾರವು ಒಂದು ದಿವಸದಲ್ಲಿ ರಸವಾಗುತ್ತದೆಂದು ಹೇಳಿದಂತಾಯಿತು. (ಸುಶ್ರುತ ಶಾಸ್ತ್ರ ಸಿದ್ಧಾಂತದಲ್ಲಿ, ಒಂದು ದಿವಸಕ್ಕೆ ೬೦೩ ಕಲೆಗಳು ಇರುತ್ತವೆ. ೫ ದಿನಗಳಿಗೆ ೩೦೧೫ ಕಲೆಗಳು ಆಗುತ್ತವೆ.)

**ಅಷ್ಟಾದಶಸಹಸ್ರಾಣಿಸಂಖ್ಯಾಹ್ಯಸ್ಮಿನ್ ಸಮುಚ್ಚಯೇ ॥**
**ಕಲಾನಾಂನವತಿಪ್ರೋಕ್ತಾಸ್ವತಂತ್ರ ಪರತಂತ್ರಯೋಃ ॥**
(ಸುಶ್ರುತ॥ ಸೂತ್ರಸ್ಥಾ. ೧೪ ಶ್ಲೋ. ೧೫)

ರಕ್ತಾದಿ ಆರು ಧಾತುಗಳ ಸ್ಥಾನಗಳಲ್ಲಿ, ಒಂದೊಂದು ಧಾತುವಿನಲ್ಲಿ ೫ ದಿನಗಳಂತೆ, ಒಟ್ಟು (೧೮೦೯೦) ಕಲಾಗಳಷ್ಟು ಕಾಲ, ಧಾತುಗಳ ಸಮ್ಮುಚ್ಚಯಗಳಲ್ಲಿ ವಾಸ ಮಾಡುವ ಅವಧಿಯು ಅಂದರೆ ಒಂದು ತಿಂಗಳು. ಈ ಸಿದ್ಧಾಂತವು ಸುಶ್ರುತ ಮತ್ತು ಇನ್ನಿತರ ತಂತ್ರದವರಿಗೂ ಮಾನ್ಯವಾದದ್ದಾಗಿದೆ.

### ಸುಶ್ರುತ ಮತದಂತೆ ಕಾಲ ಮಾಪನೆಯು

**ತತ್ರ ಲಘ್ವಕ್ಷರೋಚ್ಚಾರಣಮಾತ್ರೋಽಕ್ಷಿನಿಮೇಷಃ, ಪಂಚದಶಾಕ್ಷಿನಿಮೇಷಾಃಕಾಷ್ಠಾ, ತ್ರಿಂಶತ್ಕಾಷ್ಠಾಃಕಲಾ, ವಿಂಶತಿಕಲೋಮುಹೂರ್ತಃ ಕಲಾದಶಭಾಗಶ್ಚ, ತ್ರಿಂಶನ್ಮುಹೂರ್ತಮಹೋರಾತ್ರಂ ॥** (ಸುಶ್ರುತ॥ ಸೂತ್ರ ಸ್ಥಾ ೬ ಸೂ. ೫)

ಲಘುವರ್ಣ(ಅಕ್ಷರ) ಉಚ್ಚಾರ ಮಾಡುವಷ್ಟು ವೇಳೆಗೆ "ಅಕ್ಷಿನಿಮೇಷ"ವೆಂಬ ಹೆಸರು. ಲಘು ಅಕ್ಷರವು "ಅ" ಎಂದು ತಿಳಿದರೆ ಅದನ್ನುಚ್ಚರಿಸುವಷ್ಟು ಹೊತ್ತು ಎಂಬರ್ಥ

| | | |
|---|---|---|
| ೧೫ ಅಕ್ಷಿನಿಮೇಷಕ್ಕೆ | = | ೧ ಕಾಷ್ಠ |
| ೩೦ ಕಾಷ್ಠಕ್ಕೆ | = | ೧ ಕಲಾ |
| ೨೦ ಕಲಾ ಮತ್ತು ೩ಕಾಷ್ಠಕ್ಕೆ | = | ೧ ಮುಹೂರ್ತವು |
| ೩೦ ಮುಹೂರ್ತಕ್ಕೆ | = | ೧ ದಿವಸವು |

ಈ ಪ್ರಮಾಣದಂತೆ ಒಂದು ದಿವಸಕ್ಕೆ (೬೦೩) ಕಲೆಗಳು. ಐದು ದಿವಸಗಳಿಗೆ (೩೦೧೫) ಕಲೆಗಳು. ತಿಂಗಳಿಗೆ (೧೮೦೯೦) ಕಲೆಗಳಾಗುತ್ತವೆ.

### ರಸಾದಿಪರಿಪಾಕ ಕಾಲ ವಿಷಯದಲ್ಲಿ ಚರಕ ಮತವು

**ಷಡ್ಭಿಃ ಕೇಚಿದಹೋರಾತ್ರೈರಿಚ್ಛಂತಿಪರಿವರ್ತನಂ ॥**
**ಸಂತತ್ಯಾಭೋಜ್ಯಧಾತೂನಾಂ ಪರಿವೃತ್ತಿಸ್ತು ಚಕ್ರವತ್ ॥**
(ಚರಕ॥ ಚಿಕಿತ್ಸಾಸ್ಥಾನ॥ ಅ ೧೫ ಶ್ಲೋ. ೨೧)

ಸವಾ ಆಹಾರದಿಂದುಂಟಾದ ರಸಾದಿಧಾತುಗಳ ಸಂಚಾರವು, ಚಕ್ರ ತಿರುಗಿದಂತೆ ನಡೆಯುತ್ತಿರುತ್ತದೆ. ಹೀಗೆ ತಿರುಗುತ್ತಿರುವ ಧಾತುವು ರಸ ದಿಂದಾರಂಭಿಸಿ (೬) ದಿನಗಳಲ್ಲಿ "ಶುಕ್ರ"ವಾಗಿ ಪರಿಣಮಿಸುವದೆಂದು ಚರಕಾ ಚಾರ್ಯರ ಮತವು.

## ಪರಾಶರ ಮತವು

**ಆಹಾರೋ್ಽದ್ಯತನಃ ಶ್ವೋ್ಽಹಿರಸತ್ವಂಗಚ್ಛತಿನೃಣಾಂ॥ ಶೋಣಿತ್ವಂತುತೃತೀಯೋ್ಽಹ್ನಿಚತುರ್ಥೇವಮಾಂಸತಾಮಪಿ॥ಮೇದಸ್ತ್ವಂ ಪಂಚಮೆ, ಷಷ್ಠೆತ್ವಸ್ಥಿತ್ವಂ,ಸಪ್ತಮೇತ್ವಿಂದ್ರಾತ್॥ ಮಜ್ಜತಾಂ, ಶುಕ್ರತಾಂ ಯಾತಿನಿಯಮಾತ್ ಅಷ್ಟಮೇನೃಣಾಂ ॥**

(ಪರಾಶರ ಸಂಹಿತಾ)

ಇಂದು ಊಟ ಮಾಡಿದ ಆಹಾರವು, ನಾಳೆ ದೇಹದಲ್ಲಿ ರಸವಾಗುತ್ತದೆ. ಮೂರನೇದಿನ ರಕ್ತವೂ, ೪ನೇದಿನದಲ್ಲಿ ಮಾಂಸವೂ, ಐದನೇದಿನ ಮೇದಸ್ಸೂ, ಆರನೇದಿನ ಅಸ್ಥಿಯೂ, ಏಳನೇದಿನ ಮಜ್ಜೆಯೂ, ಎಂಟನೇ ದಿನ ಶುಕ್ರವೂ, ಆಗುತ್ತದೆ. ಹೀಗೆ ನಿಯಮದಿಂದ ಆಹಾರರಸವು ಎಂಟು ದಿನಗಳಲ್ಲಿ ಶುಕ್ರವಾಗುತ್ತದೆಂದು ಪರಾಶರ ಮತವು. ಬೇರೆ ಬೇರೆ ಮತದಂತೆ ರಸಾದಿ ಧಾತುಗಳ ಪರಿಣಾಮ ಕಾಲವು ಭಿನ್ನ ಭಿನ್ನವಾದರೂ, ಆ ಮತಗಳೆಲ್ಲ ವನ್ನೂ, ಯೋಗ್ಯವೆಂದು ಗ್ರಹಿಸಿದ್ದಾರೆ. ಯಾಕಂದರೆ ಕೆಲವು ಆಹಾರ ಗುಣ ದಿಂದಲೂ, ಜಠರಾಗ್ನಿಯ ಪಾಟವದಿಂದಲೂ, ಶೀಘ್ರವಾಗಿ ಕಡಿಮೆ ಅವಧಿ ಯಲ್ಲಿಯೇ ಪಾಕವಾಗುತ್ತದೆ ಆದ್ದರಿಂದ ಸುಶ್ರುತಾಚಾರ್ಯರು"**ಶಬ್ದಾರ್ಚಿರ್ಜಲಸಂತಾನವತ್**" ಎಂದು ಉದಹರಿಸಿದ್ದಾರೆ ಇನ್ನು ಆಹಾರವೆಂದರೆ ಹಾಲು ಶೀಘ್ರವಾಗಿ ಶುಕ್ರವಾಗುತ್ತದೆ. "**ಸದ್ಯಃ ಶುಕ್ರಕರಂಪಯಃ**" ಎಂದು ಹೇಳಿರುವದರಿಂದ ಇವೆಲ್ಲ ಮತಗಳು, ರಸಾದಿ ಧಾತು ಪಾಕ ವಿಷಯ ದಲ್ಲಿ ಯೋಗ್ಯವಾದವುಗಳೇ ಇರುತ್ತವೆ

# ರಸಾದಿ ಧಾತುಗಳ ಕ್ರಿಯೆಗಳು

**॥೧॥ ರಸಸ್ತುಷ್ಟಿಂ ಪ್ರೀಣನಂ ರಕ್ತಪುಷ್ಟಿಂಚಕರೋತಿ ॥**

(ಸು॥ ಸೂತ್ರ॥ ಅ ೧೫ ಸೂತ್ರ ೧)

"ರಸವು" ತೃಪ್ತಿಯನ್ನೂ ಪೋಷಣೆಯನ್ನೂ ಮಾಡುತ್ತದೆ. ಪ್ರೀತಿ (ರುಚಿ) ಯುಳ್ಳದ್ದಿರುತ್ತದೆ. ರಕ್ತವನ್ನು ಹೆಚ್ಚಿಸಿ ಪೋಷಿಸುತ್ತದೆ.

**॥೨॥ ರಕ್ತಂ ವರ್ಣಪ್ರಸಾದಂ ಮಾಂಸಪುಷ್ಟಿಂಜೀವಯತಿಚ॥**
**(ಸುಶ್ರುತ॥ ಸೂತ್ರಸ್ಥಾನ॥ ಅ ೧೫ ಶ್ಲೋ ೧)**

"ರಕ್ತವು" ದೇಹಕ್ಕೆ ಬಣ್ಣವನ್ನುಂಟು ಮಾಡುತ್ತದೆ ಮಾಂಸ ಪುಷ್ಟಿಯನ್ನುಮಾಡಿ ಮನುಷ್ಯನನ್ನು ಬದುಕಿಸುತ್ತದೆ. "ಜೀವಯತಿ" ಎಂದು ಹೇಳಿದ್ದರಿಂದ ಜೀವನಕ್ಕೆ ರಕ್ತವು ಅತ್ಯವಶ್ಯವಾದದ್ದೆಂದು ಬೋಧಕವಾಗುತ್ತದೆ. ಬದುಕಲಿಕ್ಕೆ ಮುಖ್ಯವಾದದ್ದು ರಕ್ತವು.

**ದೇಹಸ್ಯರುಧಿರಂ ಮೂಲಂ ರುಧಿರೇಣೈವಧಾರ್ಯತೆ ॥**
**ತಸ್ಮಾದ್ಯತ್ನೇನಸಂರಕ್ಷ್ಯಂ ರಕ್ತಂ ಜೀವಇವಸ್ಥಿತಿಃ ॥**
**(ಸುಶ್ರುತ॥ ಸೂ. ಸ್ಥಾ. ಅ. ೧೪ ಶ್ಲೋ. ೪೪)**

ದೇಹಕ್ಕೆ ರಕ್ತವೇ ಮೂಲವು (ಮುಖ್ಯ). ಅದರಿಂದಲೇ ದೇಹ ಧಾರಣೆಯಾಗುತ್ತದೆ. ಆದ್ದರಿಂದ ಜೀವದಂತೆ ಇರುವ ರಕ್ತವನ್ನು ಪ್ರಯತ್ನದಿಂದ ರಕ್ಷಿಸಬೇಕು.

**॥೩॥ ಮಾಂಸಂ ಶರೀರಪುಷ್ಟಿಂ ಮೇದಸಶ್ಚ ॥**
**(ಸುಶ್ರುತ॥ ಸೂ. ಸ್ಥಾ. ಅ ೧೫ ಸೂ ೧)**

"ಮಾಂಸವು" ಶರೀರ ಪುಷ್ಟಿಯನ್ನು ಮೇದೋಭಿವೃದ್ಧಿ ಪುಷ್ಟಿಯನ್ನುಂಟು ಮಾಡುತ್ತದೆ. ಮಾಂಸವು ಪುಷ್ಟಿಯಾಗಿರಲು ಶರೀರವು ತುಂಬಿಕೊಂಡಿರುತ್ತದೆ.

**॥೪॥ ಮೇದಃ ಸ್ನೇಹಸ್ವೇದೌದೃಢತ್ವಂ ಪುಷ್ಟಿಮಸ್ಥ್ನಾಂಚ ॥**
**(ಸುಶ್ರುತ॥ ಸೂ. ಸ್ಥಾ. ಅ ೧೫ ಸೂ ೧)**

"ಮೇದಸ್ಸು" ನಯ (ನೆಣ) ವನ್ನೂ ಬೆವರನ್ನೂ ಉಂಟು ಮಾಡುತ್ತದೆ. ಅಸ್ಥಿಗಳನ್ನು ಪೋಷಿಸುತ್ತದೆ. ಅಸ್ಥಿಗಳನ್ನು ಬಲವುಳ್ಳದ್ದನ್ನಾಗಿಯೂ, ಬಿರುಸಾಗಿಯೂ, ಮಾಡುತ್ತದೆ.

॥೫॥ ಅಸ್ಥೀನಿದೇಹಧಾರಣಂ ಮಜ್ಞಃ ಪುಷ್ಟಿಂಚ ॥
(ಸುಶ್ರುತ॥ ಸೂ. ಸ್ಥಾ. ಅ ೧೫ ಸೂ ೧)

"ಅಸ್ಥಿಗಳು" ದೇಹವನ್ನು ಧರಿಸುತ್ತವೆ. ಹ್ಯಾಗೆ ಮರಕ್ಕೆ ಹಬ್ಬಿದ ಬಳ್ಳಿಗಳು ಮರವನ್ನವಲಂಬಿಸಿ ಇರುತ್ತವೆಯೋ, ಅದರಂತೆ ಮಾಂಸ ಶಿರಾದಿ ಗಳೆಲ್ಲವೂ, ಅಸ್ಥಿಯನ್ನವಲಂಬಿಸಿ ದೃಢವಾಗಿ ನಿಲ್ಲುತ್ತವೆ. ಅಸ್ಥಿಗಳಿಲ್ಲದಿದ್ದರೆ ದೇಹವೆಂದರೆ ಮಾಂಸ ಮುದ್ದೆಯಂತೇ ಆಗುತ್ತಿತ್ತು. ಆದ್ದರಿಂದ ಮುಖ್ಯವಾಗಿ ದೇಹಕ್ಕೆ ಧಾರಣೆಯಆಧಾರವೇ ಅಸ್ಥಿಗಳು. ದೇಹ ಧಾರಣೆಯನ್ನೂ, ಮಜ್ಜೆಯ ಪುಷ್ಟಿಯನ್ನೂ, ಅಸ್ಥಿಗಳು ಮಾಡುತ್ತವೆ.

॥೬॥ ಮಜ್ಜಾಸ್ನೇಹಂಬಲಂ ಶುಕ್ರಪುಷ್ಟಿಂ ಪೂರಣಮಸ್ಥ್ನಾಂ ಚಕರೋತಿ ॥ (ಸುಶ್ರುತ॥ ಸೂತ್ರಸ್ಥಾನ॥ ಅ ೧೫ ಸೂ ೧)

"ಮಜ್ಜೆಯು" ಸ್ನೇಹವನ್ನೂ(ಜಿಗುಟು) ಬಲವನ್ನೂ ಶುಕ್ರಾಭಿವೃದ್ಧಿ ಪೋಷಣೆಯನ್ನೂ, ಅಸ್ಥಿಗಳ ಒಳಗೆ ಪೊಳ್ಳು ಭಾಗಗಳನ್ನೂ, ತುಂಬಿಕೊಳ್ಳು ವದನ್ನೂ ಮಾಡುತ್ತದೆ. ಅಸ್ಥಿಗಳ ಒಳಗೆ ಪೊಳ್ಳು ಭಾಗದಲ್ಲಿ ಮಜ್ಜೆಯಿದ್ದು, ಅಸ್ಥಿಗಳನ್ನು ಜಿಗುಟು ಆಗುವಂತೆಯೂ, ಒಳಗಡೆ ಪೂರ್ಣವಾಗುವಂತೆಯೂ, ತುಂಬಿಕೊಳ್ಳುತ್ತದೆ.

॥೭॥ ಶುಕ್ರಂ ಧೈರ್ಯಂ ಚ್ಯವನಂಪ್ರೀತಿಂ ದೇಹಬಲಂಹರ್ಷಂ ಬೀಜಾರ್ಥಂಚ ॥ (ಸುಶ್ರುತ॥ ಸೂ. ಸ್ಥಾ. ಅ ೧೫ ಸೂ ೧೧)

ಶುಕ್ರವು ಧೈರ್ಯವನ್ನೂ, ರತಿಪ್ರಸಂಗದಲ್ಲಿ ಸ್ಖಲನವನ್ನೂ, ಸ್ತ್ರೀಯರ ವಿಷಯದಲ್ಲಿ ಪ್ರೀತಿಯನ್ನೂ, ಶರೀರ ಸಾಮರ್ಥ್ಯವನ್ನೂ, ಆನಂದವನ್ನೂ, ಉಂಟು ಮಾಡುತ್ತದೆ. ಮತ್ತು ಬೀಜದ ಸಲುವಾಗಿ ಅಂದರೆ ಗರ್ಭೋತ್ಪತ್ತಿ ಗಾಗಿ ಇರುತ್ತದೆ.

ರಕ್ತಲಕ್ಷಣಮಾರ್ತವಂ ಗರ್ಭಕೃಚ್ಚ ॥
(ಸುಶ್ರುತ॥ ಸೂತ್ರಸ್ಥಾನ॥ ಅ ೧೫ ಸೂ ೫)

ರಕ್ತ ಲಕ್ಷಣವುಳ್ಳ ಆರ್ತವವು ಗರ್ಭಕಾರಕವಾದದ್ದು. ಶುಕ್ರದಂತೆಯೆ ಆರ್ತವಕ್ಕಾದರೂ ಧೈರ್ಯವನ್ನುಂಟುಮಾಡುವ ಗುಣ, ರತಿ ಪ್ರಸಂಗದ ದ್ರವಿಸುವಿಕೆ (ಸೋರುವದು) ಪುರುಷರ ವಿಷಯದಲ್ಲಿ ಪ್ರೀತಿ, ದೇಹಬ ವನ್ನುಂಟು ಮಾಡುವ ಗುಣ, ಆನಂದ, ಬೀಜರಕ್ಷಣೆಯೂ (ಗರ್ಭವನ್ನುಂಟ ಮಾಡುವದು, ಪೋಷಣೆ) ಇತ್ಯಾದಿ ಗುಣಗಳು ಇರುತ್ತವೆ. ಶುಕ್ರ ಗುಣಗಳ ಆರ್ತವದ ಕೆಲವು ಗುಣಗಳು ಅನ್ವಯಿಸುತ್ತವೆ ಆದರೆ ಶುಕ್ರವು ಗರ್ಭೋ ತ್ಪತ್ತಿಯನ್ನು ಮಾಡುತ್ತದೆ. ಆರ್ತವವು ಪೋಷಣೆಯನ್ನು ಮಾಡುತ್ತದೆ ಇದೊಂದೇ ವಿಶೇಷ ಭೇದವುಳ್ಳದ್ದಿರುವದು.

"ಆರ್ತವವು" ರಕ್ತ ಲಕ್ಷಣವುಳ್ಳದ್ದು ಎಂದು ಹೇಳಿದ್ದರಿಂದ, ಪಂ ಭೂತಾತ್ಮಕವಾದದ್ದು ರಕ್ತವು. ಆ ಗುಣ (ರಕ್ತಗುಣ) ವುಳ್ಳ ಆರ್ತವವ ದರೂ ಪಂಚಭೂತಾತ್ಮಕವೆಂದು ಸಿದ್ಧವಾಗುವದು.

ಶುಕ್ರವಾದರೂ ಪಾಂಚಭೌತಿಕವಾದ ರಸಾದಿಗಳಿಂದ ಪರಿಣ (ತಯಾರು) ವಾಗಿರುವದರಿಂದ ಪಂಚಭೂತಾತ್ಮಕವಾದದ್ದು ಇರುತ್ತದೆ.

### ಶುಕ್ರವು ಪಂಚಭೂತಾತ್ಮಕವೆಂದು ಚರಕ ಮತವು

**ಶುಕ್ರಂ ತದಸ್ಯಪ್ರವದಂತಿಧೀರಾಃ ||**
**ಯದ್ಧೀಯತೇಗರ್ಭ ಸಮುದ್ಭವಾಯ ||**
**ವಾಯ್ವಗ್ನಿಭೂಮ್ಯಪ್‌ಗುಣಪಾದವತ್ ತತ್ ||**
**ಷಡ್ಭ್ಯೋರಸೇಭ್ಯಃ ಪ್ರಭವಶ್ಚ ತಸ್ಯ ||**
**(ಚರಕ|| ಶಾರೀರ|| ಅ ೨ ಶ್ಲೋ. ೪)**

ಯಾವದು ಗರ್ಭೋತ್ಪತ್ತಿಯ ಸಲುವಾಗಿ ಬಿಡಲ್ಪಡುತ್ತದೆಯೋ ಆದಕ್ಕೆ ಶುಕ್ರವೆಂಬ ಹೆಸರು. ಆ ಶುಕ್ರವು, ವಾಯು, ಅಗ್ನಿ, ಜಲ, ಭೂಮಿ ಇವುಗಳ ಗುಣವುಳ್ಳದ್ದು ಇರುತ್ತದೆ ವಾಯ್ವಾದಿಗಳು ಸಮವಾದ ವಿಭಾ ಗಳುಳ್ಳವುಗಳಾಗಿ ಶುಕ್ರದಲ್ಲಿ ಇರುತ್ತವೆ. ಹೀಗೆಂದು ಹೇಳಿದ್ದರಿಂದ ಶುಕ್ರ ನಿರ್ಮಾಣ ಕ್ರಿಯೆಯಲ್ಲಿ ಇವೆಲ್ಲವುಗಳೂ ಸಮಾನವಾದವುಗಳೆಂದು ತಿಳಿಯ

ಬೇಕು. ಆರು ರಸಗಳು ಶುಕ್ರದಲ್ಲಿರುತ್ತವೆ. ಯಾಕಂದರೆ ಶುಕ್ರೋತ್ಪತ್ತಿಗೆ ಕಾರಣವಾದ ರಸ ರಕ್ತಾದಿಗಳು ಸಮಸ್ತ ದೇಹ ಆಶಯಾದಿಗಳನ್ನು ಸಂಚರಿಸುವದರಿಂದ ಅಲ್ಲಿರುವ ಬೇರೆಬೇರೆ ರಸಗಳ ಸಂಸರ್ಗದಿಂದ ಆಯಾವ ಗುಣಗಳುಳ್ಳವುಗಳಾಗುತ್ತವೆ. "ಶುಕ್ರವು ಮಧುರ ಗುಣವುಳ್ಳದ್ದೆಂದು ಹೇಳುವದರಿಂದ" ಅನ್ಯ ರಸಗಳ ಸಮಾವೇಶವು ಹೇಗೆಂದರೆ:- ಅನ್ಯ ರಸಗಳು ಅವ್ಯಕ್ತವಾಗಿರುತ್ತವೆಂದು ತಿಳಿಯಬೇಕು. ಮಧುರ ರಸವು ಶುಕ್ರವನ್ನು ಹುಟ್ಟಿಸುತ್ತದೆಂತಲೂ, ಕಟು, ತಿಕ್ತ, ಲವಣ, ರಸಗಳು ಶುಕ್ರನಾಶಕವಾದದ್ದೆಂದು ಹೇಳಿರುವದರಿಂದ, ಶುಕ್ರನಾಶಕ ಗುಣವುಳ್ಳ ರಸಗಳು ಶುಕ್ರದಲ್ಲಿ ಹೇಗಿರುತ್ತವೆಂದು; ಸಂಶಯ ಬರಬಹುದು ಇದಕ್ಕೆ ಹೀಗೆ ಹೇಳಿದ್ದಾರೆ:- ಅತಿ ಸೇವಿಸಿದ ಕಟು, ತಿಕ್ತ, ಲವಣ ರಸಗಳು, ಶುಕ್ರವನ್ನು ನಾಶ ಮಾಡುತ್ತವೆ. ಸಮಯೋಗ್ಯ ಪ್ರಮಾಣದಲ್ಲಿ ಯುಕ್ತವಾಗಿರುವ ರಸಗಳು, ಶುಕ್ರವನ್ನು ನಾಶ ಮಾಡುವದಿಲ್ಲ. ಆದ್ದರಿಂದ ಶುಕ್ರದಲ್ಲಿ ಆರೂ ರಸಗಳು ಇರುತ್ತವೆಂದು ಹೇಳಿದ್ದಾರೆ.

ಪಂಚಭೂತಗಳಲ್ಲಿಯು ಪೃಥಿವಿ, ಜಲ, ತೇಜಸ್ಸು, ವಾಯು, ಇವುಗಳನ್ನಷ್ಟೇ ಹೇಳಿ; ಆಕಾಶವನ್ನು ಬಿಟ್ಟಿದ್ದಾರೆ. ಆದ್ದರಿಂದ ಶುಕ್ರವು ಪಂಚಭೂತಾತ್ಮಕವೆಂದು ಆಗಬಹುದೋ? ಆದರೆ.- ಆಕಾಶವು ಎಲ್ಲ ಕಡೆಯಲ್ಲಿ ನಿತ್ಯವಾಗಿ ಇರುವದರಿಂದಲೂ, ಗಮನ ಆಗಮಾದಿಕ್ರಿಯೆಯು ಸಂಭವವಿಲ್ಲದ್ದರಿಂದಲೂ, ಪ್ರಧಾನವಾಗಿರುವದರಿಂದ, ಆಕಾಶದ ವಿಷಯ ಹೇಳುವ ಕಾರಣವೇ ಇಲ್ಲವೆಂದು ಬಿಟ್ಟಿದ್ದಾರೆ. ಶುಕ್ರದಲ್ಲಿ ಪೃಥಿವ್ಯಾದಿ ಪಂಚಭೂತಗಳೂ ಇರುತ್ತವೆಂದು, ಇದರಿಂದ ಮನವರಿಕೆಯಾಗುವದು.

## ಆರ್ತವವೂ ಪಂಚಭೂತಾತ್ಮಕವು

**ಭೂತಾನಿಮಾತಾಪಿತೃಸಂಭವಾನಿ ।**
**ರಜಶ್ಚಶುಕ್ರಂಚವದಂತಿಗರ್ಭೆ ॥**
**ಆಪ್ಯಾಯ್ಯತೆ ಶುಕ್ರಮಸೃಕ್ ಚಭೂತೈಃ ।**
**ಯೈಸ್ತಾನಿಭೂತಾನಿರಸೋದ್ಭವಾನಿ ॥**
**(ಚರಕ॥ ಶಾರೀರ॥ ಅ ೨ ಶ್ಲೋ. ೩೪)**

ಗರ್ಭದಲ್ಲಿರುವ ರಜಸ್ಸು, ಶುಕ್ರ, ಇವುಗಳು ಪಾಂಚಭೌತಿಕವಾದ
ಗಳು. ಮಾತಾಪಿತೃಗಳಿಂದುತ್ಪನ್ನವಾದವುಗಳು. ರಸ ರೂಪವಾದ ಪಂ
ಭೂತಗಳಿಂದ ಶುಕ್ರ ಮತ್ತು ಆರ್ತವಗಳು, ಪೋಷಣೆ ಹೊಂದುತ್ತ
ಹೀಗೆ ಚರಕಾಚಾರ್ಯರು ಹೇಳುತ್ತಾರೆ. ಅರ್ಥಾತ್, ಪಂಚಭೂತಾತ್ಮ
ವಾದ ಆರ್ತವ,ಶುಕ್ರಗಳನ್ನು ಪಾಂಚಭೌತಿಕ ಆಹಾರರಸವು ಪೋಷಿಸುತ್ತ

"ಶುಕ್ರಮಸೃಕ್ ಚ" ಎಂಬ ಪದದಲ್ಲಿ ಸಮುಚ್ಚಯ ಮಾಡಿ ಹೇ
ದ್ದರಿಂದ ತಂದೆಯ ಶುಕ್ರ ಮತ್ತೂ ರಕ್ತಗಳನ್ನೂ, ತಾಯಿಯ ಆರ್ತ
ಮತ್ತೂ ರಕ್ತಗಳನ್ನೂ, ಆಹಾರ ರಸವು ಪೋಷಿಸುತ್ತದೆಯೆಂದು ಅಥ
ಮಾಡುತ್ತಾರೆ. ಇದು ಗೌಣವಾದದ್ದು. ಯಾಕಂದರೆ ಆಹಾರ ರಸ
ಎಲ್ಲಾಧಾತುಗಳನ್ನೂದೇಹವನ್ನೂಪೋಷಿಸುತ್ತದೆಯೆಂದು ಹಿಂದೆ ಸಿದ್ಧಾಂ
ವಾದ್ದರಿಂದ ಪುನಃ ಗ್ರಹಣ ಮಾಡುವದು, ಕ್ರಿಯಾ ಗೌರವವು.

## ಓಜಸ್ಸಿನ ವಿವರಣೆಯು

ದೇಹದಲ್ಲಿ ರಸದಿಂದಾರಂಭಿಸಿ ಶುಕ್ರಪರ್ಯಂತವಾದ ಸಪ್ತಧಾತುಗ
ಇರುತ್ತವೆಂದು ಹೇಳುತ್ತಾರೆ. ನಂತರ "ಓಜಸ್ಸನ್ನು" ವಿವರಿಸುತ್ತಾರೆ
ಶುಕ್ರಾಂತವಾದ ಧಾತುಗಳಲ್ಲಿಯೇ ಅದರ ಅಂತರ್ಭಾವವೋ? ಅಥವ
ಪ್ರತ್ಯೇಕವಾಗಿರುವದೋ? ಎಂದು ವಿವಾದ ಉತ್ಪನ್ನವಾಗುವದು. ರಸದಿಂ
ಶುಕ್ರಪರ್ಯಂತವಾದ ಯಥಾಯೋಗ್ಯಸ್ವಸಮ ಸ್ಥಿತಿಯಲ್ಲಿರುವ, ಧಾತುಗ
ಸತ್ವ ಸ್ವರೂಪಕ್ಕೆ ಓಜಸ್ಸೆಂಬ ಹೆಸರು. ಭಿನ್ನ ಭಿನ್ನ ಮತವಾದಿಗಳು "ಓಜ
ಶಬ್ದದಿಂದರಸವನ್ನು ಗ್ರಹಣ ಮಾಡುತ್ತಾರೆ. ಇದರಂತೆ "ಜೀವರಕ್ತ"ದ
ಓಜಸ್ಸನ್ನು ಸಮಾವೇಶಮಾಡುತ್ತಾರೆ. ಇತರರು ದೇಹದಲ್ಲಿಯ "ಉಷ್ಣತೆ
ಯೆಂಬದನ್ನು ತೇಜಸ್ಸೆಂದು (ಓಜಸ್ಸೆಂದು) ಅನ್ನುತ್ತಾರೆ. ಸುಶ್ರುತಾಚಾರ್ಯ
ರಾದರೂ "ಬಲಕ್ಕೆ" ಓಜಸ್ಸೆಂದು ಹೇಳಿದರೂ, ಸೂಕ್ಷ್ಮವಾದ ಅವಲೋಕ
ಯಿಂದ ವಿಮರ್ಶಿಸಿ ನೋಡಿದಲ್ಲಿ, ಭಿನ್ನವಾಗಿ ಹೇಳಿದ್ದಾರೆನ್ನುವದು ಸ್ಪಷ್ಟ
ವಾಗುತ್ತದೆ. ಇವೆಲ್ಲ ಮತತತ್ವಗಳನ್ನು ಸುಶ್ರುತಾಚಾರ್ಯರು ಸ್ವೀಕರಿಸಿ
ಶುಕ್ರಾಂತವಾದ ಸರ್ವ ಧಾತುಗಳ ತೇಜೋಭೂತವಾದ ಸತ್ವಕ್ಕೇ ಓಜಸ್ಸೆಂದ
ಹೇಳಿದ್ದಾರೆ.

**ತತ್ರರಸಾದೀನಾಂ ಶುಕ್ರಾಂತಾನಾಂ ಧಾತೂನಾಂ ಯತ್ಪರಂ ತೇಜಸ್ತತ್ ಖಲ್ವೋಜಸ್ತದೇವಬಲಮಿತ್ಯುಚ್ಯತೇ, ಸ್ವಶಾಸ್ತ್ರ ಸಿದ್ಧಾಂತಾತ್ ॥(ಸುಶ್ರುತ॥ ಸೂ. ಸ್ಥಾ. ಅ. ೧೫ ಸೂ. ೧೯)**

ರಸ ಮೊದಲುಗೊಂಡು ಶುಕ್ರಪರ್ಯಂತರವಿರುವ ಧಾತುಗಳ, ಶರೀರ ದಲ್ಲಿಯ ಸಮಸ್ಥಿತಿಬಲ ಮೊದಲಾದವುಗಳಿಂದ ಯುಕ್ತವಾದ "ಶ್ರೇಷ್ಠ ತೇಜೋಭೂತ ಸತ್ವವೇ"ಓಜಸ್ಸು" ಅದಕ್ಕೇ ಬಲವೆಂದು ಅನ್ನುತ್ತಾರೆ. ಇದು ಸುಶ್ರುತ ಶಾಸ್ತ್ರ ಸಿದ್ಧಾಂತವು. ವಸ್ತುತಃ ತಾತ್ವಿಕ ವಿಮರ್ಶೆಯಿಂದ ಓಜಸ್ಸು ಬಲವು ಭಿನ್ನವಾದವುಗಳೆಂದು ಗೋಚರವಾಗುತ್ತವೆ ಆದರೆ:— ವಿಶೇಷವಾದ ಬಲ, ವರ್ಣ, ದೇಹದಲ್ಲಿಯ ತೇಜಸ್ಸು, ಉತ್ಸಾಹ, ಅಪ್ರತಿಹತಬುದ್ಧಿ ಮೊದಲಾದವುಗಳಿಂದ "ಓಜಸ್ಸು" ಸ್ಪಷ್ಟವಾಗಿ ಧ್ವನಿತವಾಗುತ್ತದೆ. ಬಲವೇ ಓಜಸ್ಸಲ್ಲದಿದ್ದರೂ ಓಜಸ್ಸು ಬಲದಿಂದ ಕೂಡಿದ್ದಿರುತ್ತದೆ.

## ಬಲ ಓಜಸ್ಸುಗಳಲ್ಲಿಯ ಭೇದವು

**ಭೇದಸ್ತು ಸರ್ವಧಾತು ಸ್ನೇಹಭೂತಸ್ಯೋಪಚಯಲಕ್ಷಣ ಸ್ಯೌಜಸೋರೂಪರಸೌ ವೀರ್ಯಾದಿ ಚ ವಿದ್ಯತೇ॥ ಬಲಸ್ಯತುಭಾರ ಹರಣಾದಿಶಕ್ತಿಗಮ್ಯಸ್ಯ ರಸವೀರ್ಯ ವರ್ಣಾದಿ ಗುಣಾನ ವಿದ್ಯಂತೇ॥ ಅತೋಽನಯೋರ್ಭೇದೋಽಸ್ತ್ಯೇವೇತಿ॥ ಇಯಂ ಚಾಽಭೇದೋಕ್ತಿಶ್ಚಿಕಿತ್ಸೈಕ್ಯಾರ್ಥಾ, ಪರಮಾರ್ಥಸ್ತು ಬಲೌಜ ಸೋರ್ಭೇದಏವ॥(ಸುಶ್ರುತ ಟೀಕಾ)**

"ಓಜಸ್ಸು" ಎಲ್ಲ ಧಾತುಗಳ ಸಾರಭೂತವಾದ ಸತ್ವರೂಪವೂ, ಎಲ್ಲ ಧಾತುಗಳು ಪರಿಪೂರ್ಣತುಂಬಿಕೊಂಡು ಯಥಾಯೋಗ್ಯವಾಗಿರುವವುಗಳಿಂದ, ಉತ್ಪನ್ನವಾಗುವದರಿಂದಲೂ, ಅದಕ್ಕೆ ರೂಪ, ರಸ, ವೀರ್ಯಾದಿಗಳು ಇರುತ್ತವೆ.

"ಬಲವು" ಭಾರ ಮೊದಲಾದವುಗಳನ್ನು ಹೊರುವ ಶಕ್ತಿಯಿಂದಲೂ, ಕರ್ಮಸಾಮರ್ಥ್ಯದಿಂದಲೂ, ಗಮ್ಯವಾಗುವದರಿಂದ ಬಲಕ್ಕೆ ರಸ, ವೀರ್ಯ, ಗುಣಾದಿಗಳು ಇರುವದಿಲ್ಲ. ಇದರಿಂದ ಓಜಸ್ಸು ಮತ್ತು ಬಲವು ಭಿನ್ನವೆಂದು

ಸಿದ್ಧವಾಯಿತು. ಆದರೆ ದೇಹದಲ್ಲಿ ಪರಿಪೂರ್ಣ ಓಜಸ್ಸು ತುಂಬಿಕೊಂಡಿದ್ದರೆ, ಬಲ ವರ್ಣಾದಿಗಳು ಹೆಚ್ಚಿಗೆ ಇರುತ್ತವೆ. ಬಲವು ಕ್ರಿಯಾಶಕ್ತಿ ಗಮ್ಯವು. ಓಜಸ್ಸು ರಸ, ವರ್ಣ, ಗುಣ, ವೀರ್ಯಾದಿಗಳಿಂದ ಗಮ್ಯವಾದದ್ದೂ ಇರುತ್ತದೆ. ಬಲದ ಹೆಚ್ಚುವಿಕೆಯಿದ್ದಲ್ಲಿ ಬಲಕ್ಕೆ ಕಾರಣವಾದ ಓಜಸ್ಸು ಇದ್ದೇ ಇರುತ್ತದೆಂಬ ನಿಯಮದಿಂದ, ಚಿಕಿತ್ಸಾ ವಿಷಯದಲ್ಲಿ ಸುಲಭವಾಗಿ ರೋಗಿಯ ಬಲದಿಂದ; ಓಜಸ್ಸನ್ನು (ಸತ್ವವನ್ನು) ತಿಳಿಯಲು ಅನುಕೂಲವಾಗುವದರಿಂದ ಚಿಕಿತ್ಸಾ ಸೌಕರ್ಯಕ್ಕಾಗಿ ಹೀಗೆ ಹೇಳಿದ್ದಾರೆ. ಯಥಾರ್ಥವೆಂದರೆ ಭೇದವು ಬಲ ಓಜಸ್ಸುಗಳಲ್ಲಿ ಇದ್ದೇ ಇರುತ್ತದೆ.

**ಭೇದದರ್ಶನಂತು:- ಪ್ರಾಣಿನಾಂ ಪುನರ್ಮೂಲಮಾಹಾರೋ ಬಲವರ್ಣಓಜಸಾಂಚ ॥** (ಸುಶ್ರುತ॥ ಸೂ. ಸ್ಥಾ. ಅ ೧)

ಪ್ರಾಣಿಗಳಿಗೆ ಜೀವಿಸಲು ಆಹಾರವು ಮುಖ್ಯ(ಮೂಲ) ವಾದದ್ದಿರುತ್ತದೆ. ಅದರಂತೆ ಬಲ, ವರ್ಣ, ಓಜಸ್ಸುಗಳಿಗೆ ಆಹಾರವೇ ಕಾರಣವೆಂದು ಹೇಳಿದ್ದಾರೆ. ಇದರಿಂದ ಬಲ, ವರ್ಣ, ಓಜಸ್ಸುಗಳು ಭಿನ್ನವಾಗಿರುತ್ತವೆಂದು ಸಿದ್ಧವಾಗುತ್ತದೆ.

## ಬಲ ಓಜಸ್ಸುಗಳ ಶಕ್ತಿ ಪ್ರಭಾವಗಳು

**ತತ್ರಬಲೇನ ಚಿರೋಪಚಿತಮಾಂಸತಾ ಸರ್ವಚೇಷ್ಟಾಸ್ವಪ್ರಘಾತಃ ಸ್ವರವರ್ಣಪ್ರಸಾದೋಬಾಹ್ಯಾನಾಮಾಭ್ಯಂತರಾಣಾಂ ಚ ಕರಣಾನಾಮಾತ್ಮಕಾರ್ಯ ಪ್ರತಿಪತ್ತಿರ್ಭವತಿ ॥**
**(ಸುಶ್ರುತ॥ ಸೂ. ಸ್ಥಾ. ಅ ೧೫ ಸೂ ೨೦)**

"ಬಲ" ದೇಹದಲ್ಲಿ ಬಲವು ಶ್ರೇಷ್ಠವಾಗಿ ಹೆಚ್ಚಿರಲು, ದೇಹಾವಯವಗಳಲ್ಲಿ ಯಥೋಚಿತ ಮತ್ತು ಚಿರಕಾಲ ಕ್ಷೀಣವಾಗದೇ ಒಂದೇ ಸ್ಥಿತಿಯಲ್ಲಿ ಸ್ಥಿರವಾಗಿ ಮಾಂಸವು ಇರುತ್ತದೆ. ಸರ್ವ ಧಾತುಗಳ ಹೆಚ್ಚುವಿಕೆಯ ಯೋಗ್ಯ ಶಕ್ತಿಯಾದ ಬಲದಲ್ಲಿ, ಸ್ವರವರ್ಣ, ತೃಪ್ತಿ, ಆನಂದ, ಸರ್ವಕ್ರಿಯಾಪಾಟವ, ಯಾವ ಕರ್ತವ್ಯವೂ ಅಸಾಧ್ಯವಿಲ್ಲದಿರುವಿಕೆ, ಮೊದಲಾದವುಗಳು ಇರುತ್ತವೆ.

ಅಂತರಿಂದ್ರಿಯು, ಬಾಹ್ಯೇಂದ್ರಿಯಗಳು, ತಮ್ಮ ತಮ್ಮ ಕ್ರಿಯೆಗಳಲ್ಲಿ ಸಮರ್ಥ ವಾದವುಗಳಾಗಿರುತ್ತವೆ. ಇತ್ಯಾದಿಗಳು ಬಲದ ಶಕ್ತಿ ಸ್ವರೂಪವಾದವುಗಳು. ಇವುಗಳಿಂದ ರಸಾದಿ ಶುಕ್ರ ಪರ್ಯಂತವಾಗಿರುವ ಧಾತುಗಳ ಸತ್ವರೂಪ ವಾದ ಓಜಸ್ಸು ಸಹ ಧ್ವನಿತವಾದಂತಾಯಿತು. ಹೀಗಿರುವದರಿಂದ ಓಜಸ್ಸಿನ ಕ್ರಿಯಾ ರೂಪ ಶಕ್ತಿಯೇ ಬಲವು. ಓಜಸ್ಸು ಮತ್ತು ಅದರ ಕ್ರಿಯಾ ಶಕ್ತಿ ಬೇರೆಯೆಂದು, ಸ್ಪಷ್ಟವಿರುವದರಿಂದ ಓಜಸ್ಸು ಬಲಗಳಲ್ಲಿಯ ಭೇದವನ್ನು ಪುನಃ ಹೇಳಬೇಕಾದ್ದೇನಿಲ್ಲ.

**ಬಾಹ್ಯಾನಾಮಾಭ್ಯಂತರಾಣಾಂ ಮನೋಬುದ್ಧಿಪ್ರಭೃತೀನಾಂ**
**ಬಲಕಾರಣಭೂತಮೋಜಃ ॥** (ಸುಶ್ರುತ ಟೀಕಾ)

"ಓಜಸ್ಸು" ಬಾಹ್ಯವಾದ ಕಣ್ಣು ಮೊದಲಾದ ಇಂದ್ರಿಯಗಳಿಗೆ ಮತ್ತು ಒಳಗಿರುವ ಮನೋಬುದ್ಧಿ ಮೊದಲಾದವುಗಳಿಗೆ ಬಲವುಂಟಾಗ ಲಿಕ್ಕೆ ಕಾರಣೀಭೂತವಾಗಿರುತ್ತದೆ. "ಪ್ರಭೃತಿ" ಎಂದು ಹೇಳಿದ್ದರಿಂದ ಧೈರ್ಯ, ಉತ್ಸಾಹ, ಸ್ಮೃತಿ, ಮೇಧಾ ಮೊದಲಾದ ಪ್ರತಿಭಾ ವಿಶಿಷ್ಟ ವಾದ ಗುಣಗಳು ಗ್ರಹೀತವಾಗುತ್ತವೆ.

## ಓಜಸ್ಸಿನ ಸ್ವರೂಪ

**ಓಜಃ ಸೋಮಾತ್ಮಕಂ ಸ್ನಿಗ್ಧಂಶುಕ್ಲಂ ಶೀತಂಸ್ಥಿರಂ ಸರಮ್॥**
**ವಿವಿಕ್ತಂ ಮೃದುಮೃತ್ಸ್ನಂಚ ಪ್ರಾಣಾಯತನಮುತ್ತಮಂ॥**
**ದೇಹಃ ಸಾವಯವಸ್ತೇನವ್ಯಾಪ್ತೋಭವತಿ ದೇಹಿನಃ॥**
**ತದಭಾವಾಚ್ಚಶೀರ್ಯಂತೆ ಶರೀರಾಣಿಶರೀರಿಣಾಂ ॥**
(ಸುಶ್ರುತ॥ ಸೂ. ಸ್ಥಾ. ಅ ೧೫ ಶ್ಲೋ. ೨೨)

"ಓಜಸ್ಸು" ಸೋಮಾತ್ಮಕವಾಗಿರುತ್ತದೆ. ಸ್ನೇಹ ಗುಣವುಳ್ಳದ್ದು, ಶ್ವೇತ ವರ್ಣಯುಕ್ತವಾದದ್ದು, ಶೀತವೀರ್ಯವು, ಶರೀರಾವಯವಗಳಲ್ಲಿ ಸ್ಥೈರ್ಯವನ್ನುಂಟು ಮಾಡುವದೂ, ಆಗಿರುತ್ತದೆ. ಪ್ರಸರಣ ಶೀಲ ವಾಗಿಯೂ, ಶ್ರೇಷ್ಠ ಗುಣಗಳಿಂದ ಎಲ್ಲ ಧಾತುಗಳಲ್ಲಿ ಭಿನ್ನವಾಗಿ ಹೆಚ್ಚಿನ

ದಾದದ್ದೂ, ಮಾರ್ದವ ಜಿಗಟುಗುಣಯುಕ್ತವಾದದ್ದೂ, ಪ್ರಾಣಕ್
(ಜೀವಕ್ಕೆ) ಮುಖ್ಯ ಆಧಾರವಾಗಿಯೂ, ಇರುತ್ತದೆ. ಸರ್ವ ಅಂಗೋಪಾಂ
ಗಳಿಂದ ಕೂಡಿದ ಸಮಗ್ರ ದೇಹವನ್ನು ವ್ಯಾಪಿಸಿಕೊಂಡಿರುತ್ತದೆ. ಓಜಸ್ಸಿ
ಕೊರತೆಯಾದರೆ ಮನುಷ್ಯನ ಪ್ರಾಣವು ಇರಲಾರದು. ಅಥವಾ ಓಜಸ್ಸಿ
ಅಭಾವ (ನಾಶ) ವಾದರೆ ಮನುಷ್ಯನು ಸಾಯುತ್ತಾನೆ.

## ಓಜಸ್ಸಿನ ವಿಷಯದಲ್ಲಿ ಚರಕ ಮತ

**ಹೃದಿತಿಷ್ಠತಿಯಚ್ಛುದ್ಧಂ ರಕ್ತಮೀಷತ್ಸಪೀತಕಂ ॥**
**ಓಜಃ ಶರೀರೇ ಸಂಖ್ಯಾತಂ ತನ್ನಾಶಾನ್ನಾವಿನಶ್ಯತಿ ॥೭೪॥**
**ಪ್ರಥಮಂ ಜಾಯತೇಹ್ಯೋಜಃ ಶರೀರೇಽಸ್ಮಿನ್ ಶರೀರಿಣಾಂ ॥**
**ಸರ್ಪಿರ್ವರ್ಣಂ ಮಧುರಸಂ ಲಾಜಗಂಧಿ ಪ್ರಜಾಯತೆ ॥**
**(ಚರಕ ॥ ಸೂ. ಸ್ಥಾ. ಅ. ೧೭ ಶ್ಲೋ. ೭೫)**

ಹೃದಯದಲ್ಲಿ ಸ್ವಲ್ಪ ಹಳದೀ ಬಣ್ಣವುಳ್ಳ ಶುಕ್ಲ ರಕ್ತವ
ಇರುತ್ತದೆ. ಇದಕ್ಕೆ ಓಜಸ್ಸೆಂಬ ಹೆಸರು. "ರಕ್ತಮೀಷತ್‌ಸಪೀತಕಂ
ಎನ್ನುವದರಿಂದ ಅತಿ ಸ್ವಲ್ಪವೂ, ಸ್ವಲ್ಪ ರಕ್ತವರ್ಣದ್ದೂ, ಸ್ವಲ್ಪ ಹಳದಿ
ಬಣ್ಣವಿರುವದೂ, ರಕ್ತದ ಸತ್ವಮಯ ಭಾಗವೆಂದೂ ಧ್ವನಿತವಾಗುತ್ತದೆ
ಸರ್ವಶರೀರ ವ್ಯಾಪಿಯಾದ್ದರಿಂದ, ಓಜೋ ನಾಶವಾಗಲು ಮನುಷ್ಯನ
ಮೃತನಾಗುತ್ತಾನೆ. ಓಜಸ್ಸು ಮೂರು ವರ್ಣವುಳ್ಳದ್ದಿರುತ್ತದೆ. ೧. ಶುಕ್ಲ
ವರ್ಣ, ೨. ಸ್ವಲ್ಪ ಕೆಂಪು, ೩. ಸ್ವಲ್ಪ ಹಳದಿ ಬಣ್ಣಗಳು, ಓಜಸ್ಸಿನಲ್ಲಿ
ಇರುತ್ತವೆ. ಇವು ಮೂರು ವಿಧ ಪ್ರತ್ಯೇಕವಾದ ಓಜಸ್ಸಿರದೆ ಒಂದರಲ್ಲಿಯೆ
ಇವೆಲ್ಲ ವರ್ಣಗಳಿರುತ್ತವೆಯಾದ್ದರಿಂದ, ಓಜಸ್ಸು ಒಂದೇ ಎಂದು ತಿಳಿಯ
ಬೇಕು. ಶುಕ್ಲಾದಿ ವರ್ಣಗಳಿರುವದರಿಂದ, ರಸದಿಂದ ಶುಕ್ರಪರ್ಯಂತವಾದ
ಧಾತುಗಳ ಸತ್ವವೇ ಓಜಸ್ಸೆನ್ನುವದು ಸ್ಪಷ್ಟವಾಯಿತು. ಶರೀರ ಧಾರಣೆಗೆ
ಮುಖ್ಯವಾದ್ದರಿಂದ "ಪ್ರಥಮಂ" ಎಂದು ಹೇಳಿದ್ದಾರೆ. ಅಥವಾ ಶರೀರೋ
ತ್ಪತ್ತಿಯಲ್ಲಿ "ಓಜಸ್ಸಿನಿಂದ ಪ್ರೇರಿತವಾದ ಶುಕ್ರದಿಂದಲೇ" ಗರ್ಭಾರಂಭ
ವಾಗುವದರಿಂದ ಶರೀರದಲ್ಲಿ ಮೊದಲನೇಯದು ಓಜಸ್ಸೆಂದು ಅನ್ನಬಹುದು.

ಓಜಸ್ಸಿನ ಗುಣ, ಪ್ರಭಾವ, ದೇಹಧಾರಣೆಗೆ ಅದರ ಅತ್ಯವಶ್ಯಕತೆ ಮೊದಲಾದವುಗಳನ್ನು ಅವಲೋಕಿಸಿ; ಅದು ಪ್ರಧಾನವೆಂದು ಸೂಚಿಸಲು ಹೀಗೆ ವರ್ಣಿಸಿದ್ದಾರೆ. ಅದು ತುಪ್ಪದ ವರ್ಣವುಳ್ಳದ್ದೂ, ಸ್ವಾದುರಸಯುಕ್ತವೂ, ಅಳ್ಳಿನ (ಲಾಜ) ವಾಸನೆಯುಳ್ಳದ್ದೂ ಇರುತ್ತದೆ.

**ತಂತ್ರಾಂತರ ಮತವು:— ಪ್ರಾಣಾಶ್ರಯಸ್ಯೌಜಸೋಽಷ್ಟೌ ಬಿಂದವೋ ಹೃದಯಾಶ್ರಯಾಃ ॥ (ತಂತ್ರಾಂತರೆ)**

ಪ್ರಾಣಕ್ಕೆ (ಬದುಕಲಿಕ್ಕೆ) ಆಶ್ರಯವಾದ ಓಜಸ್ಸು ಎಂಟು ಹನಿ (ಎಂಟು ಬಿಂದು) ಪ್ರಮಾಣವಿದ್ದು, ಹೃದಯವನ್ನಾಶ್ರಯಿಸಿಕೊಂಡಿರುತ್ತದೆ. ಅರ್ಧಾಂಜಲಿ (ಅರ್ಧಬೊಗಸೆ) ಯಷ್ಟು ಓಜಸ್ಸೆಂದು ಚರಕಶಾರೀರದಲ್ಲಿ ಹೇಳಿದ್ದಾರೆ. ಆದ್ದರಿಂದ ಸ್ಥೂಲ ಭೂತ ಓಜಸ್ಸು, ಪ್ರಧಾನವಾದ ಅತಿ ಸೂಕ್ಷ್ಮ ಸತ್ವರೂಪ ಓಜಸ್ಸು, ಭಿನ್ನವೆಂದು ತಿಳಿಯಬೇಕು. ಸ್ಥೂಲವಾದದ್ದು ಶ್ಲೇಷ್ಮೌಜಸ್ಸೆಂದು ಗ್ರಹಿಸಿದ್ದಾರೆ. ಮುಖ್ಯವಾದ ಓಜಸ್ಸು ಎಂಟು ಬಿಂದುವಿನಷ್ಟು ಇದ್ದು ಹೃದಯದಲ್ಲಿರುತ್ತದೆ. ಇಷ್ಟೇ ಅಲ್ಲ ಈ ಸೂಕ್ಷ್ಮ ಓಜಸ್ಸಿನ ಅಷ್ಟಬಿಂದು ಇರುವ ಅವಯವದಲ್ಲಿ, ಭೇದವಾಗಿ ನಾಶ ಸಂಭವಿಸಿದರೂ ಸಹ ಮನುಷ್ಯನಿಗೆ ಮೃತ್ಯು ಬರುತ್ತದೆಂದು ಹೇಳಿದ್ದಾರೆ. ಆಯುರ್ವೇದದಲ್ಲಿ ಮೇಲಿಂದ ಮೇಲೆ ಅಲ್ಲಲ್ಲಿ ಓಜಸ್ಸಿನ ಪ್ರಭಾವವನ್ನು ಮನಮುಟ್ಟಿದರ್ಶಿಸಿದ್ದಾರೆ. **ಅಲೌಕಿಕ ಪ್ರತಿಭಾ, ಧಾರಣಾ, ಸ್ಮೃತಿ, ಶಕ್ತಿ, ಶಾಂತಿ, ತುಷ್ಟಿ, ಧೈರ್ಯ, ಉತ್ಸಾಹ, ಸ್ವರ, ವರ್ಣ, ದೀರ್ಘಾಯುಃ, ಸಾತ್ವಿಕಭಾವ, ಆತ್ಮದರ್ಶನ ಮೊದಲಾದವುಗಳುಳ್ಳ, ಅತಿಮಾನುಷ** ರಲ್ಲಿ, ಸತ್ವಮಯ ಓಜೋಽಧಿಕ್ಯವೇ ಕಾರಣವೆಂದು ಹೇಳಿದ್ದಾರೆ ಚರಕ ಸಂಹಿತೆಯ ರಸಾಯನ ಪಾದದಲ್ಲಿ ಇದರ ವಿವರಣೆ ಇರುತ್ತದೆ. ಆದ್ದರಿಂದ **"ಯತ್ಪರಂತೇಜಃ ಖಲ್ವೋಜಃ"** ಯಾವದು ಅಲೌಕಿಕವಾದ ತೇಜಸ್ಸೋ ಅದೇ ಓಜಸ್ಸೆಂದು ಸ್ಪಷ್ಟಪಡಿಸಿದ್ದಾರೆ. ಓಜಸ್ಸು ಬೇರೆ ಒಂದು ಧಾತುವೆಂದು ತಿಳಿಯಬಾರದು. ಹಾಗೆ ತಿಳಿದರೆ ಅಷ್ಟ (೮) ಧಾತುಗಳಾಗುತ್ತವೆ. ಎಲ್ಲಾ ಧಾತ್ವಾದಿಗಳ ಸತ್ವವಾದ್ದರಿಂದ ಓಜಸ್ಸನ್ನು ಬೇರೆ ಒಂದು ಧಾತುವೆಂದು ಗಣಿಸುವ ಕಾರಣವಿಲ್ಲ.

## ಬಾಲಕನಲ್ಲಿಯ ಶುಕ್ರ ಸ್ಥಿತಿ

ರಸದಿಂದಾರಂಭಿಸಿ ಶುಕ್ರಪರ್ಯಂತವಾದ ಧಾತುಗಳು ಬಾಲಕರಲ್ಲಿಯೂ ಇರುತ್ತವೆ. ಶುಕ್ರವು ಸೂಕ್ಷ್ಮವಾಗಿರುವದರಿಂದ ಗೋಚರವಾಗುವದಿಲ್ಲ. ವಯಸ್ಸಿಗೆ ಬಂದನಂತರ ಸ್ಥೂಲವೂ ವಿಪುಲವೂ ಆಗುವದರಿಂದ ಗೋಚರಿಸುತ್ತದೆ.

**ಯಥಾಹಿಪುಷ್ಪಮುಕುಲಸ್ಥೋ ಗಂಧೋ ನಶಕ್ಯಮಿಹಾಸ್ತೀತಿ ವಕ್ತುಂ, ನೈವನಾಸ್ತೀತಿ; ಅಥಚಾಸ್ತಿ, ಸತಾಂಭಾವಾನಾಮಭಿವ್ಯಕ್ತಿರಿತಿಜ್ಞಾತ್ವಾ, ಕೇವಲಂ ಸೌಕ್ಷ್ಮ್ಯಾನ್ನಾಭಿವ್ಯಜ್ಯತೆ; ಸಏವ ವಿವೃತಪತ್ರಕೇಶರೇಪುಷ್ಪೇಕಾಲಾಂತರೇಣಾಭಿವ್ಯಕ್ತಿಂ ಗಚ್ಛತಿ ಏವಂಬಾಲಾನಾಮಪಿವಯಃ ಪರಿಣಾಮಾತ್ ಶುಕ್ರಪ್ರಾದುರ್ಭಾವೋ ಭವತಿ, ರೋಮರಾಜ್ಯಾದಯಶ್ಚ ವಿಶೇಷಾನಾರೀಣಾಂ ॥ (ಸುಶ್ರುತ॥ ಸೂ. ಸ್ಥಾ. ಅ ೧೪ ಸೂ. ೧೮)**

ಹೇಗೆ ಹೂವು ಮಗ್ಗಿಯಿದ್ದಾಗ ಮಗ್ಗಿಯಲ್ಲಿ ಪರಿಮಳವು ಅದೆಯೆಂದು ಅಥವಾ ಇಲ್ಲವೆಂದು ಹೇಳಲು ಸಾಧ್ಯವಿಲ್ಲವೋ? ಆದರೂ ಯಾವದು ಇರುವಂಥಾದ್ದದೆಯೋ, ಸ್ಪಷ್ಟವಾಗಿ ಕಾಲಾಂತರದಲ್ಲಿ ಅಭಿವ್ಯಕ್ತಿಯನ್ನು ಹೊಂದಿ ದೃಷ್ಟಿಗೋಚರವಾಗುವದೋ, ಅದು ಇರಲಿಕ್ಕೇಬೇಕು. ಇದ್ದೇ ಇರುತ್ತದೆ. ಎನ್ನುವ ನಿಯಮವಿರುವದರಿಂದ, ಗಂಧವಿದ್ದರೂ ಸೂಕ್ಷ್ಮ ಸ್ವರೂಪವುಳ್ಳದ್ದರಿಂದ ಗೋಚರವಾಗುವದಿಲ್ಲ. ಅದೇ ಮಗ್ಗಿಯು ಕ್ರಮಶಃ ಅರಳಿ ಪ್ರಫುಲ್ಲಿತವಾದಾಗ ಪರಿಮಳವು ಗೋಚರಿಸುತ್ತದೆ. ಹಾಗೆಯೇ ಬಾಲಕನಲ್ಲಿ ಶುಕ್ರವು ಸೂಕ್ಷ್ಮ ಸ್ಥಿತಿಯಲ್ಲಿರುವದರಿಂದ ಸ್ಪಷ್ಟವಾಗುವದಿಲ್ಲ. ವಯಸ್ಸು ಬಂದು ತಾರುಣ್ಯ ಸ್ಥಿತಿ ಉಂಟಾಗಲು, ಶುಕ್ರವು ಸ್ಥೂಲ ರೀತಿಯಿಂದ ಗೋಚರವಾಗುತ್ತದೆ. ಗಡ್ಡ ಮೀಶೀ ಮೊದಲಾದವುಗಳು ಉತ್ಪನ್ನವಾಗುತ್ತವೆ. ಇದರಂತೆ ಬಾಲಕಿಯರಿಗೆ ಯೌವ್ವನ ಬರಲು, ರೋಮರಾಜ್ಯಾದಿಗಳೂ, ಸ್ತನಾಭಿವೃದ್ಧಿಯೂ, ಗರ್ಭಾಶಯ ಬೆಳವಣಿಗೆಯೂ, ಆರ್ತವ (ಮಾಸಿಕ ಮುಟ್ಟು) ದರ್ಶನವೂ, ಮೊದಲಾದವುಗಳಾಗುತ್ತವೆ.

# (೬) ಶುದ್ಧಾಶುದ್ಧ ಶುಕ್ರಾರ್ತವ ಲಕ್ಷಣ

## ಶುದ್ಧ ಶುಕ್ರ ಲಕ್ಷಣವು

**ಸ್ಫಟಿಕಾಭಂ ದ್ರವಂ ಸ್ನಿಗ್ಧಂ ಮಧುರಂ ಮಧುಗಂಧಿಚ ॥**

ಶುಕ್ರಮಿಚ್ಛಂತಿಕೇಚಿತ್ತು ತೈಲಕ್ಷೌದ್ರನಿಭಂತಥಾ ||
(ಸುಶ್ರುತ|| ಶಾರೀರ|| ಅ ೨ ಶ್ಲೋ. ೧೧)

"ಶುಕ್ರವು" ಸ್ಫಟಿಕದಂತೆ ಶುಭ್ರವಾದ ವರ್ಣವುಳ್ಳದ್ದು, ದ್ರವರೂಪವಾದದ್ದು, ಜಿಗುಟಾದದ್ದು, ಮಧುರ ರಸವುಳ್ಳದ್ದು, ಜೇನುತುಪ್ಪದ ವಾಸನೆಯುಳ್ಳದ್ದು, ಶುದ್ಧ (ಸ್ವಾಭಾವಿಕ) ಶುಕ್ರವೆಂದು ಹೇಳುತ್ತಾರೆ. ಕೆಲವರು ಜೇನುತುಪ್ಪದ ಬಣ್ಣ, ಅಥವಾ ತೈಲ (ಎಳ್ಳೆಣ್ಣೆ) ವರ್ಣವುಳ್ಳ ಶುಕ್ರವು, ಶುದ್ಧ ಶುಕ್ರವೆಂದು ಹೇಳುತ್ತಾರೆ.

ಶುಕ್ರಂ ಶುಕ್ಲಂ ಗುರುಸ್ನಿಗ್ಧಂ ಮಧುರಂ ಬಹುಲಂಬಹು||
ಘೃತಮಾಕ್ಷಿಕತೈಲಾಭಂ|| (ವಾಗ್ಭಟ|| ಶಾರೀರ|| ಅ ೧ ಶ್ಲೋ ೧೮)

"ಶುಕ್ರವು" ಶ್ವೇತವರ್ಣವುಳ್ಳದ್ದಾಗಿಯೂ, ಜಡವಾಗಿಯೂ, ಜಿಗುಟಾಗಿಯೂ, ಮಧುರ ರಸವುಳ್ಳದ್ದಾಗಿಯೂ, ಬಹಳವಾಗಿ ಬಿಡುವಂಥಾದ್ದು (ರತಿ ಸಮಯದಲ್ಲಿ), ಮತ್ತು ವಿಪುಲವಾಗಿ (ಹೆಚ್ಚಾಗಿ) ರುವದು, ಉತ್ತಮ ಶುಕ್ರವು. ತುಪ್ಪದ ವರ್ಣ, ಜೇನುತುಪ್ಪದ ವರ್ಣ, ತೈಲವರ್ಣ, ಇವುಗಳ ವರ್ಣವಿದ್ದರೂ ಸಹ ಉತ್ತಮ ಶುದ್ಧ ಶುಕ್ರವೆಂದು ಹೇಳುವರು.

## ಶುದ್ಧಾರ್ತವ ಲಕ್ಷಣವು

ಶಶಾಸೃಕ್ಪ್ರತಿಮಂಯತ್ತು ಯದ್ವಾಲಾಕ್ಷಾರಸೋಪಮಂ ||
ತದಾರ್ತವಂಪ್ರಶಂಸಂತಿ ಯದ್ವಾಸೋನವಿರಂಜಯೇತ್ ||
(ಸು| ಶಾ| ಅ ೨ ಶ್ಲೋ ೧೭)

ಯಾವ ಸ್ತ್ರೀಯ ಆರ್ತವವು (ಮುಟ್ಟು), ಮೊಲದ ರಕ್ತದಂತೆ ಇರುವದೋ, ಅಥವಾ ಅರಗಿನ ರಸದಂತೆಯಿದ್ದು, ವಸ್ತ್ರದ ಮೇಲೆ ಹಾಕಿ ನಂತರ ತೊಳೆಯಲಾಗಿ, ಆ ವಸ್ತ್ರಕ್ಕೆ ಯಾವ ಕಲೆಯೂ ಅಂಟಿಕೊಳ್ಳದಿದ್ದರೆ; ಇವೆಲ್ಲ ಲಕ್ಷಣಗಳಿಂದ ಯುಕ್ತವಾದ ಆರ್ತವವನ್ನು, ಶುದ್ಧಾರ್ತವವೆಂದು ಹೇಳುತ್ತಾರೆ. ಈಗ ಹೇಳಿದ ಆರ್ತವವು ಋತುಕಾಲದಲ್ಲಿ ಸ್ರಾವವಾಗುವ ಆರ್ತವವು, ಇದರಿಂದ ಗರ್ಭಕಾರಕವಾದ, ರತಿಕಾಲದಲ್ಲಿ ದ್ರವಿಸುವ ಆರ್ತವಲಕ್ಷಣವನ್ನು ಹೇಳಿದಂತಾಗಲಿಲ್ಲವೆಂದೆನಿಸಬಹುದು. ರತಿಕಾಲದಲ್ಲಿ ದ್ರವಿಸುವ ಆರ್ತವವು ಕೇವಲ ಜಲದಂತೇ ಇರುವದರಿಂದ, ಅದರಿಂದ ಲಕ್ಷಣವು ಗೋಚರವಾಗುವ

ದಿಲ್ಲ. ಅದು ಶುದ್ಧವಿದ್ದರೆ ಮಾತ್ರ ರಜಸ್ಸಿನ (ಮುಟ್ಟಿನಲ್ಲಿ) ಹೇಳಿದ ಲಕ್ಷಣವು ಇರುತ್ತದೆ. ಮಾಸಿಕ ರಜಸ್ಸು ಮೇಲೆ ಹೇಳಿದ ಲಕ್ಷಣವುಳ್ಳದ್ದಾದರೆ ಶುದ್ಧಾರ್ತವವೆಂದೂ; ಬೇರೆಯಾಗಿದ್ದರೆ ವಿಕೃತ(ದೂಷಿತ) ವಾಗಿದೆಯೆಂದೂ, ತಿಳಿಯಬೇಕು.

## ಅಶುದ್ಧ ಶುಕ್ರದಲ್ಲಿಯ ದೋಷಗಳು

ಸಾಧಾರಣವಾಗಿ ಮೇಲೆ ಹೇಳಿದ ಶುದ್ಧ ಶುಕ್ರ ಲಕ್ಷಣದ ವಿರುದ್ಧ ಲಕ್ಷಣವುಳ್ಳ ಶುಕ್ರವನ್ನು, ಅಶುದ್ಧ ಶುಕ್ರವೆಂದು ತಿಳಿಯಬೇಕು. ಹುತ್ತು ಅಶುದ್ಧ ಶುಕ್ರದ ಲಕ್ಷಣಗಳನ್ನೂ ಹೋಲಿಸಿ ಅಶುದ್ಧವಿರುವದನ್ನು ನಿರ್ಧರಿಸಬೇಕು. ಕಾರಣ ಸಹಿತವಾದ, ಅಶುದ್ಧ ಶುಕ್ರ ಲಕ್ಷಣವು:-

**ವಾತ ಪಿತ್ತ ಶ್ಲೇಷ್ಮ ಕುಣಪ ಗ್ರಂಥಿ ಪೂತಿ ಪೂಯ ಕ್ಷೀಣ ಮೂತ್ರ ಪುರೀಷರೇತಸಃ ಪ್ರಜೋತ್ಪಾದನೇ ನ ಸಮರ್ಥಾ ಭವಂತಿ ||** (ಸುಶ್ರುತ| ಶಾರೀರ| ಅ ೨ ಸೂ ೩)

ಯಾವನ ಶುಕ್ರವು ವಾತ, ಪಿತ್ತ, ಕಫಯಿವುಗಳಿಂದ ದೋಷಯುಕ್ತವಾಗಿದೆಯೋ, ಮತ್ತು ಹೆಣದಂತೆ ವಾಸನೆಯುಳ್ಳ, ಗಂಟು ಗಂಟಾಗಿರುವ ಹೊಲಸು ಕೀವಿನಂತೆಯೂ, ಮತ್ತು ಅದರಂತೆ ದುರ್ಗಂಧವುಳ್ಳದ್ದೂ, ಕ್ಷೀಣ ಶುಕ್ರವೂ, ಮೂತ್ರ ವಾಸನೆಯುಳ್ಳದ್ದೂ, ಮಲದ ವಾಸನೆಯುಳ್ಳದ್ದೂ, ಇಂಥ ಶುಕ್ರವುಳ್ಳವರು ಪ್ರಜೋತ್ಪಾದನೆಗೆ ಯೋಗ್ಯರಲ್ಲ. ಅಥವಾ ಇಂಥ ದೂಷಿತ ಶುಕ್ರದಿಂದ ಪ್ರಜೋತ್ಪಾದನೆಯಾದರೆ, ಯೋಗ್ಯ ನಿರೋಗಿ ಸಂತತಿಯಾಗಲಾರದು. ಒಂದು ವೇಳೆ ಇಂಥ ದೂಷಿತ ಶುಕ್ರದಿಂದ ಪ್ರಜೋತ್ಪಾದನೆಯು ಸಹ ಆಗಲಿಕ್ಕಿಲ್ಲ ಕ್ವಚಿತ್ತಾಗಿ ಆದರೂ ದುರ್ಬಲ ಸಂತತಿಯಾಗಬಹುದು. ಇಂಥ ಶುಕ್ರಕ್ಕೆ ಅಶುದ್ಧ ಶುಕ್ರವೆಂಬ ಹೆಸರು.

## ಅಶುದ್ಧ ಶುಕ್ರ ಲಕ್ಷಣ

**ತೇಷು ವಾತವರ್ಣ ವೇದನಂ ವಾತೇನ; ಪಿತ್ತವರ್ಣ ವೇದನಂ ಪಿತ್ತೇನ, ಶ್ಲೇಷ್ಮ ವರ್ಣ ವೇದನಂ ಶ್ಲೇಷ್ಮಣಾ, ಶೋಣಿತವರ್ಣ**

**ವೇದನಂ ಕುಣಪ ಗಂಧಿ ಅನಲ್ಪಂಚ ರಕ್ತೇನ, ಗ್ರಂಥಿಭೂತಂ ಶ್ಲೇಷ್ಮ ವಾತಾಭ್ಯಾಂ, ಪೂತಿಪೂಯನಿಭಂ ಪಿತ್ತ ಶ್ಲೇಷ್ಮಭ್ಯಾಂ ಕ್ಷೀಣಂ ಪ್ರಾಗುಕ್ತಂ ಪಿತ್ತಮಾರುತಾಭ್ಯಾಂ ಮೂತ್ರ ಪುರೀಷ ಗಂಧಿ ಸನ್ನಿಪಾತೇನೇತಿ**
(ಸುಶ್ರುತ॥ ಶಾರೀರ॥ ಅ ೨ ಸೂ ೪)

(೧) "**ವಾತದೂಷಿತ ಶುಕ್ರವು**" ಕೆಂಪು, ಕಪ್ಪು ವರ್ಣಯುಕ್ತ ವಾದದ್ದೂ, ಸ್ಖಲನ ಸಮಯದಲ್ಲಿ ಚುಚ್ಚಿದಂತೆ, ಒಡೆದಂತೆ ಜನನೇಂದ್ರಿಯ ದಲ್ಲಿ ನೋವಾಗುವದು.

(೨) "**ಪಿತ್ತದೂಷಿತ ಶುಕ್ರವು**" ಹಳದೀ, ನೀಲಿ ವರ್ಣವುಳ್ಳದ್ದಾಗಿ ಸ್ಖಲನದಲ್ಲಿ, ದಾಹ, ಉರಿ, ಚೋಷ (ವೇದನಾ ವಿಶೇಷವು) ಮೊದಲಾದವು ಗಳುಂಟಾಗುವವು.

(೩) "**ಕಫ ದೂಷಿತ ಶುಕ್ರವು**" ಬಿಳೀ ವರ್ಣವಿದ್ದು, ದುರ್ಗಂಧ ವಿರುವದು. ಮತ್ತು ಸ್ಖಲನ ಸಮಯದಲ್ಲಿ, ಆ ಸ್ಥಳದಲ್ಲಿ ತುರಿಕೆಯುಂಟಾ ಗುವದು.

(೪) "**ಕುಣಪ ಗಂಧಿ**" ಹೆಣದಂತೆ ವಾಸನೆಯುಳ್ಳ ಶುಕ್ರವು, ರಕ್ತ ದೂಷಿತವಾದದ್ದಿರುತ್ತದೆ. ಮತ್ತು ಬಹಳವಾದದ್ದು, ಹಳದೀ, ನೀಲೀ ಬಣ್ಣಗಳಿಂದ ಯುಕ್ತವಾಗಿ, ದಾಹ, ಉರಿ, ಚೋಷಾದಿ, ವೇದನಾಯುಕ್ತ ವಾಗಿರುತ್ತದೆ.

(೫) "**ಗ್ರಂಥಿ**" ಗಂಟು ಗಂಟಾಗಿರುವ ರೇತಸ್ಸು, ತುರಿಕೆ, ಸ್ಖಲನದಲ್ಲಿ ನೋವು ಇತ್ಯಾದಿಗಳಿರುವವು.

(೬) "**ಪೂತಿ ಪೂಯ**" ರಸಿಗೆ (ಕೀವು) ಯಂತೆ ಇರುವ, ಅಥವಾ ರಸಿಕೆಯಂತೆ ಹೊಲಸು ವಾಸನೆಯುಳ್ಳ ಶುಕ್ರವು, ಪೂತಿಪೂಯವೆಂಬ ಹೆಸ ರುಳ್ಳದ್ದು.

(೭) "**ಕ್ಷೀಣ**" ಕ್ಷೀಣ ಶುಕ್ರವು ಮೈಥುನದಲ್ಲಿ (ರತಿಕಾಲದಲ್ಲಿ) ಸ್ಖಲಿ ಸುವದಿಲ್ಲ. ಸ್ಖಲಿಸಿದರೂ, ಸ್ವಲ್ಪ ರಕ್ತ ವರ್ಣವಾಗಿಯೂ ರಕ್ತದಿಂದ ಕೂಡಿಯೂ ಸ್ರವಿಸುತ್ತದೆ. ನೋವು, ದಾಹಾದಿಗಳು ಇದ್ದು, ಸ್ವಲ್ಪ ಸ್ವಲ್ಪ ವಾಗಿ ಸ್ಖಲಿತವಾಗುವದು.

(೮) "ಮೂತ್ರ ಪುರೀಷ ಗಂಧಿ" ಮೂತ್ರ ಅಥವಾ ಮಲದಂತೆ ವಾಸನೆಯುಳ್ಳ, ಮಲಮೂತ್ರಗಳೆರಡರಂತೆಯೂ ವಾಸನೆಯುಳ್ಳ, ಯಾವ ಶುಕ್ರವಿರುತ್ತದೆಯೋ; ಅದಕ್ಕೆ ಮೂತ್ರಪುರೀಷ ಗಂಧಿಯೆಂಬ ಹೆಸರು. ಅದು ತ್ರಿದೋಷದೂಷಿತವಾದದ್ದಿರುತ್ತದೆ. ಈ ಪೂರ್ವೋಕ್ತ ದೋಷಗಳಿಂದ ಯುಕ್ತವಾದ ಶುಕ್ರವು, ಅಶುದ್ಧ ಶುಕ್ರವು.

## ಅಶುದ್ಧಾರ್ತವ ಲಕ್ಷಣವು

ಆರ್ತವಮಪಿತ್ರಿಭಿರ್ದೋಷೈಃ ಶೋಣಿತ ಚತುರ್ಥೈಃ ಪೃಥಕ್ ದ್ವಂದ್ವೈಃ ಸಮಸ್ತೈಶ್ಚೋಪ ಸೃಷ್ಟಂ ಅಬೀಜಂಭವತಿ ತದಪಿ ದೋಷ ವರ್ಣವೇದನಾದಿಭಿಃ ವಿಜ್ಞೇಯಂ ॥ ತೇಷುಕುಣಪ, ಗ್ರಂಥಿ, ಪೂತಿಪೂಯ, ಕ್ಷೀಣ, ಮೂತ್ರಪುರೀಷಪ್ರಕಾಶಂ ಅಪಿ ಪ್ರಜೋತ್ಪಾದನೆ ಅಯೋಗ್ಯಂಭವತಿ ॥

(ಸುಶ್ರುತ॥ ಶಾರೀರ॥ ಅ ೨ ಸೂ ೫)

"ಆರ್ತವವೂ" ವಾತ, ಪಿತ್ತ, ಕಫದೂಷಿತವಾದದ್ದನ್ನು ಆಯಾವ ಲಕ್ಷಣ ವರ್ಣ ವೇದನೆ ಇತ್ಯಾದಿಗಳಿಂದ, ಶುಕ್ರಕ್ಕೆ ಹೇಳಿದ ಲಕ್ಷಣದಂತೆಯೇ ತಿಳಿಯಬೇಕು. ಹೆಣದ ವಾಸನೆಯು (ಕುಣಪ ಗಂಧಿ) ರಕ್ತ ದೋಷದಿಂದ ಉತ್ಪನ್ನವಾಗುತ್ತದೆ. ವಾತ ಕಫ ದೂಷಿತವು (ಗ್ರಂಥಿ) ಗಂಟುಳ್ಳದ್ದಾಗಿಯೂ ಇರುವದು. ಕೀವಿನಂತೆ ಹೊಲಸು ನಾರುವದು (ಪೂತಿಪೂಯ) ಪಿತ್ತ ಕಫ ದೂಷಿತವಾದದ್ದಿರುತ್ತದೆ. "ಕ್ಷೀಣಾರ್ತವವು" ಮಾಸಿಕ ರಜಸ್ಸಿನ ಅಪ್ರವೃತ್ತಿ ಅಥವಾ ಸ್ವಲ್ಪ ಸ್ರಾವ, ಯೋನಿ ನೋವುಗಳುಳ್ಳದ್ದಾಗುತ್ತದೆ. ಮೂತ್ರ ಪುರೀಷ ಗಂಧಿ ( ಮಲಮೂತ್ರ ವಾಸನೆಯುಳ್ಳ ) ಆರ್ತವವು, ತ್ರಿದೋಷ ದೂಷಿತವಾದದ್ದಿರುತ್ತದೆ. ಇಂಥ ಆರ್ತವವು ಬೀಜ ಪೋಷಣೆಗೆ ಯೋಗ್ಯವಲ್ಲವು. ಶುಕ್ರ ದೋಷ ಲಕ್ಷಣಗಳೆಲ್ಲವನ್ನೂ ಅನ್ವಯಿಸಿ ಆರ್ತವ ದೋಷಗಳನ್ನು ತಿಳಕೊಳ್ಳಬೇಕು. "ಆರ್ತವಮಪಿ" ಆರ್ತವವೂ ಕೂಡಾ ಎಂದು ಹೇಳಿರುವದರಿಂದ, ಶುಕ್ರದೋಷಗಳಂತೆಯೇ ಆರ್ತವದೋಷಗಳನ್ನು ತಿಳಿಯಬೇಕೆಂದು ಸ್ಪಷ್ಟವಾಗುತ್ತದೆ. ಶುಕ್ರ, ಆರ್ತವ ದೋಷಗಳಲ್ಲಿ ಭೇದವೇನೂ ಹೆಚ್ಚು ಕಡಿಮೆಯಾದದ್ದಿರುವದಿಲ್ಲ.

# ಸ್ತ್ರೀ - ಪುರುಷರಲ್ಲಿಯ ನಪುಂಸಕತ್ವ

ಸ್ತ್ರೀ ಪುರುಷರಿಬ್ಬರಲ್ಲಿಯೂ ಷಂಡರು (ಶುಕ್ರ ಆರ್ತವ ರಹಿತ) ಇರುತ್ತಾರೆ. "ನರ ನಾರಿ ಷಂಡೌ" ಪುರುಷ ಮತ್ತು ಸ್ತ್ರೀ ಷಂಡರೆಂದು ಹೇಳಿದ್ದರಿಂದ, ಚರಕಾಚಾರ್ಯರ ಮತದಂತೆ ಸ್ತ್ರೀಯರಲ್ಲಿಯೂ ಕೂಡಾ ನಪುಂಸಕರಿರುತ್ತಾರೆಂದು ಸಿದ್ಧವಾಗುತ್ತದೆ. (ಚರಕ॥ಶಾರೀರ॥ ಅ ೨ ಶ್ಲೋ ೧೭॥)

## ನಪುಂಸಕರಲ್ಲಿಯ ವಿಶೇಷ

ಸ್ತ್ರೀ ಪುರುಷರಲ್ಲಿ ಶುಕ್ರಸಹಿತವಾದ ದೂಷಿತ ಶುಕ್ರಾರ್ತವವುಳ್ಳ ನಪುಂಸಕರಿರುತ್ತಾರೆ ಅವರಿಗೆ "ವಿಪ್ರಕೃತಿಷಂಡ" ರೆಂಬ ಹೆಸರು.

**ಆಸೇಕ್ಯಶ್ಚ, ಸುಗಂಧೀಚ, ಕುಂಭೀಕ, ಶ್ಚೇರ್ಷ್ಯಕಸ್ತಥಾ ॥**
**ಸರೇತಸಸ್ತ್ವಮೀಜ್ಞೇಯಾ, ಅಶುಕ್ರಃ ಷಂಡಸಂಜ್ಞಿತಃ ॥**
(ಸುಶ್ರುತ॥ ಶಾರೀರ॥ ಅ ೨ ಶ್ಲೋಕ ೪೪॥)

## ಶುಕ್ರವುಳ್ಳಂಥ "ವಿಪ್ರಕೃತಿ" ಷಂಡರು

**೧. ಆಸೇಕ್ಯ, ೨. ಸುಗಂಧೀ, ೩ ಕುಂಭೀಕ, ೪ ಈರ್ಷ್ಯಕ,** ಹೀಗೆ ನಾಲ್ಕು ವಿಧವಾದವರಿಗೆ, ದೂಷಿತವಾದ, ಶುಕ್ರಾರ್ತವಗಳಿದ್ದು ಅಥವಾ ದೂಷಿತ ಶುಕ್ರಾರ್ತವಗಳು ಸ್ವಲ್ಪವಿದ್ದು, **"ವಿಪ್ರಕೃತಿ"** ಪ್ರಕೃತಿಗೆ ವಿರುದ್ಧವಾದ ರೀತಿಯಿಂದ ವರ್ತಿಸಿದಾಗ (ಗುದ, ಮುಖ, ನಾಸಾದಿಗಳಿಂದ) ಅವುಗಳ ಸ್ರಾವವುಂಟಾಗುತ್ತದೆ. ಇದು ಅಸ್ವಾಭಾವಿಕವಾದ್ದರಿಂದ ಇಂಥವರನ್ನು ಷಂಡರೊಳಗೆ (ನಪುಂಸಕರಲ್ಲಿ) ಗ್ರಹಿಸಿದ್ದಾರೆ. **ಶುಕ್ರಾರ್ತವಗಳು** ಇರುವದರಿಂದಲೂ ಯದ್ವಾತದ್ವಾರತಿಪ್ರಸಂಗದಿಂದಲೂ ಕ್ವಚಿತ್ ಪ್ರಜೋತ್ಪತ್ತಿಯಾಗುವದರಿಂದಲೂ ಇಂಥವರು **ಸರೇತಸಃ** ಶುಕ್ರವುಳ್ಳ ಷಂಡರು. **"ವಿಪ್ರಕೃತಿ"** ಪ್ರಕೃತಿ ವಿರುದ್ಧ ರೀತಿಯ ರತಿಯುಳ್ಳವರು ಎಂದು ಹೇಳಿದ್ದಾರೆ. ಇನ್ನು ಸ್ವಾಭಾವಿಕವಾಗಿ ಶುಕ್ರಾರ್ತವಗಳಿಲ್ಲದವರಿಗೆ **"ನಪುಂಸಕ"** ರೆಂಬ ಹೆಸರು. ಸ್ವಾಭಾವಿಕ ನಪುಂಸಕರಲ್ಲಿ ಪ್ರಜೋತ್ಪಾದನೆಯಾಗುವದಿಲ್ಲ.

ನಪುಂಸಕರ ಹೊರತಾದ ಆಸೇಕ್ಯಾದಿ, ಶುಕ್ರಾರ್ತವ, ದೋಷದಿಂದಲೇ ಷಂಡ ಸಂಜ್ಞೆಯನ್ನು ಹೊಂದಿರುವದರಿಂದ, ಅಶುದ್ಧ ಶುಕ್ರಾರ್ತವಗಳ ವಿಷಯದಲ್ಲಿ ಪ್ರಾಸಂಗಿಕವಾಗಿ ಹೇಳಬೇಕಾದ್ದರಿಂದ ವಿವರಿಸಿದ್ದೇನೆ. ವಿಶೇಷ ಬೇಕಾದ ವರು ಸುಶ್ರುತವನ್ನು ನೋಡಿರಿ. (ಸುಶ್ರುತ|| ಶಾರೀರ|| ಅ ೨ ಶ್ಲೋ ೩೮ ರಿಂದ ೪೬ ರ ವರೆಗೆ)

"ವಿಪ್ರಕೃತಿ" ಷಂಡರ ದೂಷಿತವಾದ ಶುಕ್ರಾರ್ತವಗಳಿಗೆ ಚಿಕಿತ್ಸೆ ಯಿಲ್ಲ. ಯಾಕಂದರೆ ಅವರು ದೂಷಿತ ಪ್ರಕೃತಿಯುಳ್ಳ ತಂದೆ ತಾಯಿಗಳ ಶುಕ್ರಾರ್ತವಗಳಿಂದ ಹುಟ್ಟಿ ಅವರಲ್ಲಿ ಕ್ರಮೇಣ ದೋಷ ಪ್ರಬಲವಾಗಿ "ವಿಪ್ರಕೃತಿ" ಯುಂಟಾಗಿರುತ್ತದೆ. ಇದು ಜನ್ಮಜವಾದ್ದರಿಂದ ಚಿಕಿತ್ಸೆ ಯಿಲ್ಲ. ಇದರಂತೆ ಶುಕ್ರರಹಿತ ನಪುಂಸಕರಿಗೂ ಪ್ರತಿಕ್ರಿಯೆಯನ್ನು ಶಾಸ್ತ್ರದಲ್ಲಿ ಹೇಳಿರುವದಿಲ್ಲ.

# (೭) ಗರ್ಭೋತ್ಪತ್ತಿ ವಿಜ್ಞಾನ

## ಗರ್ಭಾವಕ್ರಮಣಪ್ರಕ್ರಿಯಾಃ

ಗರ್ಭಾವಕ್ರಮಣವೆಂದರೆ:— ಜೀವಾತ್ಮನು, ತನ್ನ ಲಿಂಗ ಶರೀರ (ಕರ್ಮಜ ದೇಹ) ದೊಡನೆ ಗರ್ಭದಲ್ಲಿ ಅವ್ಯಕ್ತ ಸ್ವರೂಪದಿಂದ ಪ್ರವೇಶಿಸಿ, ಪಾಂಚಭೌತಿಕ ಸೂಕ್ಷ್ಮ ಸ್ಥಿತಿಯ ಗರ್ಭದಲ್ಲಿ ಅನ್ವಯಿಸಿ (ಸಮ್ಮಿಲಿತವಾಗಿ) ಅದನ್ನು ಬೆಳವಣಿಗೆ ಯೋಗ್ಯವಾಗುವಂತೆ ಮಾಡಿ ತಾನೂ ಗರ್ಭಕ್ಕನುಗುಣ ವಾಗಿ, ಕ್ರಮಶಃ ಪ್ರವ್ಯಕ್ತವಾಗುತ್ತಾ, ಪೂರ್ಣ ಸ್ಥಿತಿಗೆ ಮುಟ್ಟುತ್ತಾನೆ. ಈ ಪ್ರಕಾರ ಕ್ರಮಬದ್ಧವಾದ ಗರ್ಭ ಸ್ಥಿತಿಯ ಪರಿಪೂರ್ಣತೆಯ ವರೆಗಿನ, ಕ್ರಿಯಾ, ಸ್ವರೂಪ, ಸ್ಥಿತಿ, ಇವುಗಳ ಕ್ರಮಕ್ಕೆ "ಗರ್ಭಾವಕ್ರಾಂತಿ"ಯೆಂಬ ಹೆಸರು. ಇದು ಶಾಸ್ತ್ರ ಪ್ರತಿಪಾದಿತವಾಗಿದೆ.

ಗರ್ಭಾವಕ್ರಾಂತಿ(ಗರ್ಭ ಕ್ರಮ) ವಿಷಯದಲ್ಲಿ ಶಾಸ್ತ್ರದ ಸ್ಥೂಲ ದೃಷ್ಟಿ ಯಿಂದ ವಿಚಾರಿಸಿದರೆ, ಅನೇಕ ಸಂಶಯಗಳೂ ವಿರೋಧ ಕ್ರಿಯಾ ಘಟನೆ ಗಳೂ ತೋರುತ್ತವೆ. ಇದರಿಂದ ನಿಶ್ಚಯಯಾವದೆಂದು ಗೊತ್ತಾಗುವದಿಲ್ಲ.

ಇದು ಸ್ಥೂಲ ವಿಚಾರವೇ ವಿನಾ ವಿರೋಧವಲ್ಲವು. ಸೂಕ್ಷ್ಮ ವಿಚಾರ ಮಾಡಿದರೆ ವಿರೋಧ ಬರುವದಿಲ್ಲ. ಉದಾ:- ಗರ್ಭ ವಿಷಯದಲ್ಲಿ "ಸುಶ್ರುತಾಚಾರ್ಯರು" ಅಂಗ ಪ್ರತ್ಯಂಗಗಳ ಪೂರ್ಣತೆಯಾಗಿ ಏಳನೇ ತಿಂಗಳಲ್ಲಿ ಗರ್ಭಕ್ಕೆ ಜೀವವುಂಟಾಗುತ್ತದೆಂದು ಹೇಳಿದ್ದಾರೆ. ಹೀಗೆ ಹೇಳಿರುವದರಿಂದ ಏಳು ತಿಂಗಳಿನ ವರೆಗೆ, ಜೀವವಿಲ್ಲದೆ ಗರ್ಭವು ಹೇಗೆ ಬೆಳೆಯಿತು? ಹೀಗೆ ಜೀವವಿಲ್ಲದೆಬೆಳೆಯುವ ಗರ್ಭವು ಪತನವೇಕೆ ಆಗುತ್ತದೆ? ಜೀವವಿದ್ದರೆ ಆಘಾತಾದಿಗಳ (ಅಪಚಾರಗಳ) ಅರಿವಾಗುತ್ತದೆ. ಅದಿಲ್ಲದಿರುವಾಗ ಗರ್ಭ ಪತನ ( ನಾಶ ) ಯಾಕಾಗಬೇಕು? ಜೀವವಿಲ್ಲದೆ ಬೆಳೆಯುವದಾದರೆ, ಜೀವ ರಹಿತ (ಮೃತ) ದೇಹವೂ ಪಂಚಭೂತಾತ್ಮಕವಾದದ್ದು; ಅದೂ ಸಹ ಯಾಕೆ ಬೆಳೆಯಬಾರದು? ಇತ್ಯಾದಿ ತರ್ಕವಿತರ್ಕಗಳುಂಟಾಗುತ್ತವೆ.

ಗರ್ಭವು, ಶುಕ್ರ, ಶೋಣಿತ, ಸಂಯೋಗದಿಂದಾರಂಭವಾದದ್ದಿರುತ್ತದೆ. ಆರಂಭದಲ್ಲಿಯೇ ಅದು ಅವ್ಯಕ್ತ (ಸೂಕ್ಷ್ಮ) ವಾಗಿ ಚೇತನಾಧಾತುಯುಕ್ತವಾಗಿಯೇ ಇರುತ್ತದೆ. ಗರ್ಭವು ಬೆಳೆದು ಪೂರ್ಣತೆಗೆ ಬಂದಾಗ, ಜೀವವೂ ಪೂರ್ಣವಾಗಿ ಸ್ಥೂಲಸ್ಥಿತಿಯಿಂದ ಗೋಚರವಾಗುತ್ತದೆ. ಗೋಚರ (ಸ್ಥೂಲ) ಸ್ಥಿತಿ ಪ್ರಾಪ್ತವಾಗಲು ಗರ್ಭವು ಪೂರ್ಣವಾಗುವದರಿಂದ ಆಗ ಜೀವ ಬರುತ್ತದೆಂದು ಅನಿಸುತ್ತದೆ. ಇದು ಉದಾಹರಣೆಯಿಂದ ಸ್ಪಷ್ಟವಾಗುತ್ತದೆ. ಉದಾ:— ಖಾರ, ಅತ್ಯುಷ್ಣ ಪದಾರ್ಥಗಳ ಸೇವನೆಯಿಂದ, ಪಂಚಭೂತಾತ್ಮಕ ಗರ್ಭಪಿಂಡಕ್ಕೆ ಆಘಾತವಾಗಿ, ಚೇತನಾಧಾತು, (ಅವ್ಯಕ್ತಜೀವ) ಬೇರ್ಪಡುತ್ತದೆ. ಇದರಿಂದ ಗರ್ಭಪತನವಾಗುತ್ತದೆ. ಇದರಂತೆ ಗರ್ಭಿಣಿಯು, ಚಿಂತೆ, ಭಯ ಇತ್ಯಾದಿ ಆಘಾತಗಳಿಂದ, ಗರ್ಭದ ಅವ್ಯಕ್ತಚೇತನೆಗೆ, ವೇದನೆಯಾಗಿ, ಗರ್ಭವುಬೇರ್ಪಟ್ಟು ನಾಶಹೊಂದುತ್ತದೆ. ಹೀಗೆದೈಹಿಕವಾದ ಅಯೋಗ್ಯಾಹಾರ(ಖಾರ, ಉಷ್ಣವೀರ್ಯವುಳ್ಳ ಪದಾರ್ಥ)ಸೇವನೆ, ಅತಿಶ್ರಮ, ಬೀಳೋಣ, ತೀವ್ರ ವ್ಯಾಧಿ ಮೊದಲಾದವುಗಳಿಂದಲೂ, ಮಾನಸಿಕವಾದ ಚಿಂತೆ, ಭಯ, ಅಸೂಯೆ ಮೊದಲಾದವುಗಳಿಂದಲೂ, ಗರ್ಭವು ನಾಶವನ್ನೂ ಅಥವಾ ವಿಕೃತಿಯನ್ನೂ ಹೊಂದುವದರಿಂದ, ಗರ್ಭಕ್ಕೆ, ಸ್ಥೂಲವಾದ (ಪಂಚಭೂತಾತ್ಮಕ) ಮತ್ತು ಸೂಕ್ಷ್ಮ ಜೀವಸ್ಥಿತಿ ಇದ್ದೇ ಇರುತ್ತದೆಂದು ನಿಶ್ಚಯವು. ಅವ್ಯಕ್ತ

ಜೀವಸ್ಥಿತಿ ಇರುವದರಿಂದಲೇ ಕ್ರಮೇಣ ಬೆಳೆಯುತ್ತಾ, ಸೂಕ್ಷ್ಮ ಸ್ಥಿತಿಯಿಂದ ಸ್ಥೂಲಸ್ಥಿತಿಗೆ ಬಂದು ಪೂರ್ಣವಾಗಿ ಅಂಗೋಪಾಂಗಯುಕ್ತ ದೇಹವಾಗುತ್ತದೆ

# ಯೋಗ್ಯ ಗರ್ಭೋತ್ಪತ್ತಿಯ ನಿಯಮಗಳು

ದೇಹವೆಂದರೆ ಒಂದು ಮನೆ ಇದ್ದಂತೆಯೇ ಇರುತ್ತದೆ. ಯೋಗ್ಯನಾದ ಕುಶಲ ಬಡಿಗ, ಉಪಯೋಗಕ್ಕೆ ಯೋಗ್ಯ ಸಾಧನ, ಶ್ರೇಷ್ಠ ತರಗತಿಯ ವಸ್ತುಗಳು ಇವುಗಳೆಲ್ಲದರ ಸಮಾವೇಶವಿದ್ದರೆ, ಉತ್ತಮವೂ, ಬಹು ದಿವಸ ಬಾಳುವಂಥಾದ್ದೂ, ಭದ್ರವಾಗಿರುವ ಗೃಹವು ನಿರ್ಮಾಣವಾಗುತ್ತದೆ ಅದರಂತೆ ನಿರೋಗಿಯೂ, ಸದೃಢ, ದೀರ್ಘಾಯು, ತೇಜಸ್ವಿಯಾದ ದೇಹವಾಗಬೇಕಾದರೆ, ಗರ್ಭೋತ್ಪತ್ತಿಯಿಂದಲೇ ಆರಂಭಿಸಿ ಯೋಗ್ಯ ಸನ್ನಿವೇಶ ಬೇಕು ಅದನ್ನು ಕುರಿತು ಚರಕಾಚಾರ್ಯರು ಹೀಗೆ ಹೇಳಿದ್ದಾರೆ:—

**ಏವಮಯಂ ನಾನಾವಿಧಾನಾಂ ಏಷಾಂ ಗರ್ಭಕರಾಣಾಂ ಭಾವಾನಾಂ ಸಮುದಾಯಾತ್ ಅಭಿನಿವರ್ತತೆಗರ್ಭಃ, ಯಥಾ ಕೂಟಾಗಾರಂ ನಾನಾದ್ರವ್ಯಸಮುದಾಯಾತ್, ಯಥಾ, ವಾರಥೋ ನಾನಾರಥಾಂಗಸಮುದಾಯಾತ್ ||**
(ಚರಕ ಅ ೩ ಶಾರೀರ | ಸೂ ೨೦)

ಅನೇಕ ವಿಧವಾದ ಗರ್ಭಕ್ಕೆ ಕಾರಣವಾದ ಪದಾರ್ಥ ಕ್ರಿಯಾ ಕಾಲ ಇತ್ಯಾದಿಗಳ ನಿಯತ ಸನ್ನಿವೇಶವುಳ್ಳ ಸಮುದಾಯದಿಂದ 'ಗರ್ಭ'ವು ಆರಂಭವಾದದ್ದಿರುತ್ತದೆ. ಮನೆಗೆಬೇಕಾದ ವಿವಿಧ ದ್ರವ್ಯಸಮುದಾಯಗಳಿಂದ ಮನೆಯು (ಕೂಟಾಗಾರ) ಪ್ರಶಸ್ತವಾದದ್ದಾಗುತ್ತದೆ ರಥಕ್ಕೆ ಬೇಕಾದ, ರಥಾವಯವ ಪದಾರ್ಥಗಳಿಂದ ರಥವು ಕಟ್ಟಲ್ಪಡುವದು. ಗರ್ಭನ್ನೂ ಕೂಡಾ ಅದರಂತೆ ಅನೇಕ ದ್ರವ್ಯ ಸನ್ನಿವೇಶದಿಂದುಂಟಾಗಿರುತ್ತದೆ. ಸದ್ಗರ್ಭ (ಉತ್ತಮ ಗರ್ಭ) ಉತ್ಪನ್ನವಾಗಲು ಅನೇಕ ದ್ರವ್ಯಕ್ರಿಯಾದಿಗಳು ಆವಶ್ಯವೆಂದು ಹಿಂದೆಯೇಹೇಳಿದೆ. ಅವುಗಳಲ್ಲಿ ಗರ್ಭೋತ್ಪತ್ತಿಯನ್ನು ಕುರಿತು ಪಾಲಿಸಬೇಕಾದ ನಿಯಮಗಳನ್ನೂ ಶರೀರಕ್ಕೆ ಸಂಬಂಧಪಟ್ಟವುಗಳೆಂದು ಶರೀರ ಶಾಸ್ತ್ರದಲ್ಲಿ ಸಂಗ್ರಹಿಸಿ ಹೇಳಿದ್ದಾರೆ.

**ಆಹಾರಾಚಾರಚೇಷ್ಟಾಭಿಃ ಯಾದೃಶೀಭಿಃ ಸಮನ್ವಿತೌ ||**
**ಸ್ತ್ರೀಪುಂಸೌಸಮುಪೇಯಾತಾಂತಯೋಃಪುತ್ರೋऽಪಿತಾದೃಶಃ||**
(ಸುಶ್ರುತ|| ಶಾರೀರ|| ಅ ೨ ಶ್ಲೋ ೪೬)

ಆಹಾರ ನಡತೆ ದೇಹಾರೋಗ್ಯ ಬೇರೇ ಅನೇಕ ಕರ್ಮಾದಿಗಳು (ದಷ್ಕೃತಿ ಸತ್ಕೃತಿ) ಯಾವ ರೀತಿಯುಳ್ಳ ಸ್ತ್ರೀ ಪುರುಷರು ಮಿಲಿನವಾಗುತ್ತಾರೋ, ಸಂತತಿಯಾದರೂ ಅದೇ ರೀತಿಯುಳ್ಳ ಆರೋಗ್ಯ ದೌರ್ಬಲ್ಯ ರೋಗ ಮೊದಲಾದವುಗಳಿಂದ ಯುಕ್ತವಾದದ್ದಾಗುತ್ತದೆ ಸಬಲ ಸಂತತಿಯಾಗಲಿಕ್ಕೆ ಸ್ತ್ರೀ ಪುರುಷರ ಆರೋಗ್ಯ ನಿರ್ದೋಷ ಸ್ಥಿತಿಯೇ ಕಾರಣವು.

## ವೃದ್ಧರಲ್ಲಿ ಗರ್ಭೋತ್ಪತ್ತಿಯಾದರೆ ಹಾನಿಯು

**ಅತಿವೃದ್ಧಾಯಾಂ ದೀರ್ಘರೋಗಿಣ್ಯಾಮನ್ಯೇನವಾವಿಕಾರೇಣೋಪಸೃಷ್ಟಾಯಾಂ ಗರ್ಭಾಧಾನಂ ನೈವಕುರ್ವೀತ ಪುರುಷಸ್ಯಾಪ್ಯೇವಂ ವಿಧಸ್ಯತಏವದೋಷಾಃ ಸಂಭವಂತಿ ||**
(ಸುಶ್ರುತ|| ಶಾರೀರ|| ಅ ೧೦ ಸೂ ೫೬)

ವೃದ್ಧ (ಮುದುಕ) ಸ್ತ್ರೀಯಲ್ಲಿ ದೀರ್ಘ ರೋಗವುಳ್ಳ ಸ್ತ್ರೀಯಲ್ಲಿ ವ್ಯಾಧಿಯಿಂದ ಅಶಕ್ತಳಾದವಳಲ್ಲಿ ಇನ್ನೂ ಅನೇಕ ಗರ್ಭಕ್ಕೆ ಘಾತಕ ವಿಕಾರವುಳ್ಳ (ಯೋನಿದೋಷ ದೂಷಿತಾರ್ತವಾದಿ ದೋಷವುಳ್ಳ) ಸ್ತ್ರೀಯರಲ್ಲಿ ಗರ್ಭಾಧಾನ ಮಾಡಬಾರದು. ಇದರಂತೆ ಈ ರೀತಿಯಿರುವ ದುರ್ಬಲ ಪುರುಷನು ಕೂಡ ಯೋಗ್ಯನಲ್ಲವು. ರೋಗಿ ದುರ್ಬಲ ದೂಷಿತರಾದವರಿಂದುತ್ಪನ್ನವಾದ ಗರ್ಭವು ನಿರೋಗಿಯೂ ಬಲವುಳ್ಳದ್ದೂ ಆಗಲಾರದು. ಆದ್ದರಿಂದ ಇವೆಲ್ಲ ತ್ಯಾಜ್ಯವಾದವುಗಳು.

## ಅಲ್ಪವಯಸ್ಸಿನವರಲ್ಲಿ ಗರ್ಭೋತ್ಪತ್ತಿ ದೋಷವು

**ಊನಷೋಡಶವರ್ಷಾಯಾಮಪ್ರಾಪ್ತಃ ಪಂಚವಿಂಶತಿಂ ||**
**ಯದ್ಯಾಧತ್ತೇಪುಮಾನ್‌ಗರ್ಭಂ ಕುಕ್ಷಿಸ್ಥಃ ಸವಿಪದ್ಯತೇ ||**
**ಜಾತೋವಾನಚಿರಂಜೀವೇತ್ ಜೀವೇದ್ವಾದುರ್ಬಲೇಂದ್ರಿಯಃ||**
**ತಸ್ಮಾದತ್ಯಂತಬಾಲಾಯಾಂ ಗರ್ಭಾಧಾನಂ ನಕಾರಯೇತ್ ||**
(ಸುಶ್ರುತ|| ಶಾರೀರ|| ಅ ೧೦ ಶ್ಲೋ ೫೫)

ಹದಿನಾರು ವರ್ಷಕ್ಕಿಂತ ಕಡಿಮೆಯುಳ್ಳ ಸ್ತ್ರೀಯಲ್ಲಿ ಇಪ್ಪತ್ತೈದು ವರ್ಷವಾಗದ ಪುರುಷನು ಗರ್ಭಾಧಾನ ಮಾಡಿದರೆ ಅದರಿಂದುಂಟಾದ ಗರ್ಭವು, ಹೊಟ್ಟೆಯಲ್ಲಿಯೇ ನಾಶವಾಗುತ್ತದೆ. ಒಂದು ವೇಳೆ ಹುಟ್ಟಿದರೂ ಬದುಕಲಾರದು. ಬದುಕಿದರೂ ದುರ್ಬಲವಾಗಿರುತ್ತದೆ. ಇಲ್ಲವಾದರೆ ವಿಕೃತ ಊನ ಇತ್ಯಾದಿಗಳು ಆಗಬಹುದು. ಆದ್ದರಿಂದ ಅತ್ಯಂತ ಚಿಕ್ಕವಳಲ್ಲಿ ಮತ್ತು ಅಲ್ಪ ವಯಸ್ಸಿನವನು ಕೂಡ ಗರ್ಭಾಧಾನ ಮಾಡಬಾರದು. ಇದರಿಂದ ಚಿಕ್ಕ ವಯಸ್ಸಿರುವದರಿಂದ ಸ್ತ್ರೀ ಪುರುಷರ ಆರೋಗ್ಯಕ್ಕೂ ಹಾನಿಯುಂಟಾಗುವದು.

## ಋತುಮತಿ ಸ್ತ್ರೀಯಲ್ಲಿ ಗರ್ಭಧಾನ ದೋಷವು

**ತತ್ರ ಪ್ರಥಮೇದಿವಸೆಋತುಮತ್ಯಾಂ ಮೈಥುನಗಮನಂ ಅನಾಯುಷ್ಯಂಪುಂಸಾಂಭವತಿ, ಯಶ್ಚತತ್ರಾಧೀಯತೆಗರ್ಭಃಸಪ್ರಸವಮಾನೋವಿಪದ್ಯತೆ, ದ್ವಿತೀಯೇಪ್ಯೇವಂ ಸೂತಿಕಾಗೃಹೇವಾ, ತೃತೀಯೇಽಪ್ಯೇವಂ ಅಸಂಪೂರ್ಣಾಂಗೋಽಲ್ಪಾಯುರ್ವಾಭವತಿ, ಚತುರ್ಥೇತು ಸಂಪೂರ್ಣಾಂಗೋದೀರ್ಘಾಯುಶ್ಚಭವತಿ। ನ ಚ ಪ್ರವರ್ತಮಾನೆರಕ್ತೆಬೀಜಂಪ್ರವಿಷ್ಟಂಗುಣಕರಂಭವತಿ, ಯಥಾ ನದ್ಯಾಂಪ್ರತಿಸ್ರೋತಃ ಪ್ಲಾವಿದ್ರವ್ಯಂ ಪ್ರಕ್ಷಿಪ್ತಂ ಪ್ರತಿನಿವರ್ತತೆ, ನೋರ್ಧ್ವಂಗಚ್ಛತಿ, ತದ್ವದೇತದ್ದ್ರಷ್ಟವ್ಯಂ। ತಸ್ಮಾನ್ನಿಯಮವತೀಂ ತ್ರಿರಾತ್ರಂ ಪರಿಹರೇತ್ ॥**

(ಸುಶ್ರುತ ॥ ಶಾರೀರ ॥ ಅ ೨ ಸೂ । ೩೧)

ಋತುಮತಿಯಲ್ಲಿ ಗರ್ಭಾಧಾನದಿಂದ ಪುರುಷನ ಆಯುಷ್ಯ ಕ್ಷೀಣವಾಗುತ್ತದೆ. ಮೊದಲನೇಯ ದಿನ ಋತುಮತಿಯಾದ ಸ್ತ್ರೀ ಗರ್ಭ ಧರಿಸಿದರೆ ಆ ಗರ್ಭವು ಹುಟ್ಟುವದರೊಳಗಾಗಿಯೇ ಮರಣಹೊಂದುತ್ತದೆ. ಇದರಿಂದ ಗರ್ಭ ಧರಿಸಿದವಳಿಗೂ ಆಘಾತವಾಗುವದು. ಎರಡನೇ ದಿನದಲ್ಲಿ ಗರ್ಭ ಧರಿಸಿದರೂ ಇದರಂತೆಯೇ ನಾಶವಾಗುತ್ತದೆ. ಅಥವಾ ಬಾಣಂತಿಯ ಮನೆಯಲ್ಲಿಯೇ ನಾಶವಾಗಬಹುದು. ಮೂರನೇಯ ದಿನದಲ್ಲಿಯಾದರೂ ಇದರಂತೆ, ಅಥವಾ

ಒಂದು ವೇಳೆ ಸಂಪೂರ್ಣ ದಿನ ತುಂಬಿ ಹಡೆದರೂ, ವಿಕೃತಾಂಗ ಪೂರ್ಣವಿಲ್ಲದ ಅವಯುವವುಳ್ಳ ಅಲ್ಪಾಯು ದುರ್ಬಲ ಸಂತತಿಯು ಉತ್ಪನ್ನವಾಗುವದು. ನಾಲ್ಕನೇ ದಿವದಲ್ಲಿ ಗರ್ಭಧರಿಸಿದರೆ ಸಂಪೂರ್ಣ ಅವಯುವವುಳ್ಳ ದೀರ್ಘಾಯು ಸಂತತಿಯಾಗುತ್ತದೆ. ಹ್ಯಾಗೆ ನದಿಯು ಹರಿಯುತ್ತಿರುವಾಗ ಕೆಳಗಡೆಯಿಂದ ಮೇಲಕ್ಕೆ ಒಗೆದ ವಸ್ತುವು, ಪ್ರವಾಹಾಭಿಮುಖವಾಗಿ ತಿರುಗಿ ಬರುತ್ತದೆಯೋ ಅದರಂತೆ ರಕ್ತ (ಮುಟ್ಟು) ಸ್ರಾವ ಇರುತ್ತಿರುವಾಗ, ಪ್ರವಿಷ್ಟವಾದ ಬೀಜವು (ಶುಕ್ರವು) ವ್ಯರ್ಥವೂ, ಒಳ್ಳೆಯದನ್ನುಂಟುಮಾಡುವದೂ ಆಗಲಾರದು. ಆದ್ದರಿಂದ ಋತುಮತಿಯಾದ ಸ್ತ್ರೀಯು ಮೂರು ದಿನ ಗರ್ಭಾದಾನಕ್ಕೆ ತ್ಯಾಜ್ಯವು, ಹರಿಯುತ್ತಿರುವ ನದಿಯ ಉದಾಹರಣೆ ಕೊಟ್ಟದ್ದರಿಂದ, ಮುಂದೆ ಒಂದೆರಡು ದಿನ ಸ್ರಾವವಾಗುವ ಪ್ರಕೃತಿಯಿದ್ದರೆ, ಸ್ರಾವ ಬಂದಾಗುವವರೆಗೂ ಬಿಡಬೇಕೆಂದು ಸೂಚಿತವಾಗುತ್ತದೆ.

## ಯೋಗ್ಯ ಗರ್ಭದ ಸಂನ್ನಿವೇಶ

ಧ್ರುವಂಚತುರ್ಣಾಂಸಾನ್ನಿಧ್ಯಾತ್ ಗರ್ಭಃಸ್ಯಾತ್ ವಿಧಿಪೂರ್ವಕಂ ||
ಋತುಕ್ಷೇತ್ರಾಂಬುಬೀಜಾನಾಂ ಸಾಮಗ್ರ್ಯಾದಂ
ಕುರೋಯಥಾ || (ಸುಶ್ರುತ|| ಶಾರೀರ|| ಅ ೨ ಸೂ ೩೩)

ಯೋಗ್ಯವಾದ ಕಾಲ, ಚನ್ನಾಗಿ ಹರಗಿದ ಹೊಲ, ನೀರು, ಉತ್ತಮ ಬೀಜ, ಇವುಗಳ ಪದ್ಧತಿ ಪ್ರಕಾರ ಸನ್ನಿವೇಶ(ಕೂಡವಿಕೆ) ದಿಂದ ಹ್ಯಾಗೆ ಉತ್ತಮವಾದ ಸಸಿಗಳು(ಅಂಕುರ) ಉತ್ಪನ್ನವಾಗುತ್ತವೆಯೋ ಅದರಂತೆ ಗರ್ಭ ಗ್ರಹಣಕ್ಕೆ ಯೋಗ್ಯ ಕಾಲದಲ್ಲಿ, ಗರ್ಭಾಶಯದ ದೂಷಿತವಲ್ಲದ ಪ್ರಸನ್ನ ಸ್ಥಿತಿಯಲ್ಲಿ ಶ್ರೇಷ್ಠವಾದ ರಸವಾಗುವ ಆಹಾರವನ್ನು ಸೇವಿಸುತ್ತಿರುವ ಸ್ತ್ರೀ ಪುರುಷರ ಶುಕ್ರಾರ್ತವಗಳ ಸಂಯೋಗದಿಂದಲೂ, ಹಿಂದೆ ಹೇಳಿದ ಯೋಗ್ಯ ಕಾಲ ಆರೋಗ್ಯ ಸ್ಥಿತಿಯಿಂದ ಯುಕ್ತವಾದದ್ದಾದರೆ, ಸರಿಯಾದ ಸ್ಥಿತಿಯಲ್ಲಿ ಬಿತ್ತಿದ ಬೀಜದಂತೆ, ಪ್ರಸನ್ನ ಗರ್ಭವುಂಟಾಗುವದು. ಆದ್ದರಿಂದಲೇ ಋತ್ವಾದಿ ನಾಲ್ಕರ ಸಾನ್ನಿಧ್ಯದಿಂದ ಪ್ರತ್ಯಕ್ಷ ಕಣ್ಣಿಗೆ ಕಾಣುವ ಹೊಲದಲ್ಲಿಯ ಪೈರನ್ನು ಹೋಲಿಸಿ ಅದರಂತೆ ಗರ್ಭಕ್ಕಾದರೂ ಈ ನಾಲ್ಕರ

ಮುಖ್ಯತೆಯನ್ನು ತೋರಿಸಿದ್ದಾರೆ. ಯೋಗ್ಯ ಸಂನ್ನಿಧಿಯ ಪ್ರಶಸ್ತತೆಯನು ನಿತ್ಯ ಕಣ್ಣೆದುರಿನ ಉದಾಹರಣೆಯಿಂದ ಸ್ಪಷ್ಟ ಪಡಿಸಿದ್ದಾರೆ.

**ಯೋಗ್ಯ ಸನ್ನಿವೇಶದಿಂದುತ್ಪನ್ನವಾದ ಸಂತತಿಯ ಲಕ್ಷಣವು**

**ಏವಂಜಾತಾರೂಪವಂತಃ ಸತ್ವವಂತಃ ಚಿರಾಯುಷಃ ॥**
**ಭವಂತಿರುಣಸ್ಯಮೋಕ್ತಾರಃ ಸತ್ಪುತ್ರಾಃ ಪುತ್ರಿಣೇಹಿತಾಃ ॥**
(ಸುಶ್ರುತ॥ ಶಾರೀರ॥ ಅ ೨ ಶ್ಲೋ ೩೪)

ಸನ್ನಿವೇಶ ಸಂಪನ್ನತೆಯಿಂದ ಹುಟ್ಟಿದವರು ಬಲವಂತರೂ ಧೃ ಸ್ಮೃತಿ ಮೇಧಾ ಧೃಢತೆ ಉತ್ಸಾಹಾದಿ ಸತ್ವಯುಕ್ತರಾಗಿ ದೀರ್ಘಾಯುಷ ವುಳ್ಳವರಾಗುತ್ತಾರೆ. ತಂದೆ ತಾಯಿಗಳಿಗೆ ಹರ್ಷವನ್ನುಂಟು ಮಾಡುವ. ಜನ ಬಂದಿದ್ದನ್ನು ಸಾರ್ಥಕ ಮಾಡಿಕೊಳ್ಳುವ ಸಜ್ಜನರಾಗುತ್ತಾರೆ. ಆದ್ದರಿಂದಲೆ ಸತ್ಪುತ್ರಾಃ (ಒಳ್ಳೆ ಗುಣವುಳ್ಳ ಮಕ್ಕಳು) ಎಂದು ಹೇಳಿದ್ದಾರೆ.

## ಗರ್ಭಕ್ಕೆ ಹಿತವಲ್ಲದ ನಡತೆಯು

**ತದಾಪ್ರಭೃತಿವ್ಯವಾಯಂ ವ್ಯಾಯಾಮಮತಿತರ್ಪಣಮತಿಕ ರ್ಶನಂ, ದಿವಾಸ್ವಪ್ನಂ ರಾತ್ರಿಜಾಗರಣಂ ಶೋಕಂಯಾನಾ ರೋಹಣಂಭಯಮುತ್ಕುಟುಕಾಸನಂ ಚೈಕಾಂತತಃಸ್ನೇಹಾದಿ ಕ್ರಿಯಾಂ ಶೋಣಿತಮೋಕ್ಷಣಂ ಚಾಕಾಲೇವೇಗವಿಧಾರಣಂ ನಸೇವೇತ ॥** (ಸುಶ್ರುತ॥ ಶಾರೀರ॥ ಅ ೩ ಸೂ ೧೬)

ಗರ್ಭಸ್ಥಿತಿ ಆರಂಭವಾದಾಗಿನಿಂದ ರತಿಕ್ರಿಯೆ ವ್ಯಾಯಾಮ ಅತಿಶ್ರಮ ಕೆಲಸ ಬಹಳ ಆಹಾರ ಮೇಲಿಂದ ಮೇಲೆ ಸೇವಿಸುವದು ಜೀರ್ಣವಾಗದಷ್ಟು ಸತ್ವಾಹಾರ ತಕ್ಕೊಳ್ಳುವದು ಅಥವಾ ಕಡಿಮೆ ಆಹಾರ ಸೇವನೆ (ತೃಪ್ತಿ ಯಾಗದಷ್ಟು) ರೂಕ್ಷನೀರಸ ಪದಾರ್ಥ ಸೇವನೆ (ಕರ್ಶನಂ) ಹಗಲು ನಿದ್ರಿ ಸುವದು ರಾತ್ರಿ ಜಾಗರಣೆ, ಚಿಂತೆ ವೇಗದಿಂದ ಹೋಗುವ ಯಾನಾದಿಗಳನ್ನು (ದಡಕೆಯುಳ್ಳ) ಕುದುರೆ ಮೊದಲಾದವುಗಳನ್ನು ಹತ್ತುವದು ಭಯವಾಗು ವಂಥ ವಸ್ತುದರ್ಶನ ವ್ಯಾಘ್ರಾದಿಭಯ ಎತ್ತರ ಪರ್ವತಾದಿಗಳನ್ನೇರುವದು

ಅಥವಾ ಗೋಡೆ ಮೊದಲಾದ (ಕಡಿದಾದ) ಸ್ಥಳದಲ್ಲಿ ಕೂಡ್ರುವದು ಏಕಾಂತ ದಲ್ಲಿ ಸ್ನೇಹಾದಿ ಕಾರ್ಯಕ್ರಮ ರಕ್ತ ತೆಗೆಸಿಕೊಳ್ಳೋಣ, ಅಕಾಲ ಭೋಜನ, ಎಲ್ಲ ಕರ್ತವ್ಯಗಳು ಯೋಗ್ಯ ಕಾಲದಲ್ಲಿ ನಡೆಯದಿರುವದು ಮಲ ಮೂತ್ರಾದಿ ವೇಗ ನಿರೋಧ ಮೊದಲಾದವುಗಳನ್ನು ಮಾಡಬಾರದು. ಇವೆ ಲ್ಲವುಗಳೂ, ಗರ್ಭ ಧರಿಸಿದ ಸ್ತ್ರೀ (ಗರ್ಭವತಿ)ಗೆ ಗರ್ಭಘಾತಕವಾದ್ದರಿಂದ ತ್ಯಾಜ್ಯವಾದವುಗಳು. ಸಮವಾದ ಆರೋಗ್ಯಕ್ಕನುಗುಣ ರೀತಿಯಲ್ಲಿ ವರ್ತಿಸ ಬೇಕು. ಇಲ್ಲವಾದರೆ ಕುಂಟ, ಕುರುಡ ಅಂಗಹೀನ ವಿಕೃತಾವಯವ ದುರ್ಬಲ ರೋಗಿಷ್ಟ ಸಂತತಿಗೆ ಜನ್ಮಕೊಟ್ಟು ತಂದೆ ತಾಯಿಗಳು ಮರುಗ ಬೇಕಾದ ಪ್ರಸಂಗ ಬರುವದಿಷ್ಟೇ ಅಲ್ಲ, ಆ ಸಂತತಿಯಾದರೂ ಅಂಗಹೀನ ದುರ್ಬಲವಾದದ್ದಾದರೆ ಕರ್ತವ್ಯ ಜೀವನವಾದ ಪ್ರಪಂಚದಲ್ಲಿ ಪರಾಧೀನ ವಾಗಿ ಅಥವಾ ಬೇಡಿಯೋ ಕಾಡಿಯೋ ದೈನ್ಯಮಯ ಜೀವನದಿಂದ ಆಯು ಷ್ಯಾಂತ್ಯದ ವರೆಗೂ ಇಂಥ ದೇಹ ಬಂದಿದ್ದರ ಫಲವನ್ನನುಭವಿಸುತ್ತ ಭೂಲೋಕವನ್ನೇ ನರಕವೆಂದು ಭಾವಿಸುತ್ತಿರುವರು. ಇದು ಅತಿ ಮುಖ್ಯ ವಾದ ಅವಶ್ಯವಾಗಿ ಗಮನಿಸತಕ್ಕ ವಿಷಯವಾದ್ದರಿಂದ, ಅದರಿಂದಾಗುವ ದುಷ್ಪರಿಣಾಮ ಸಹಿತ, ಆಚಾರ್ಯರು ಎಚ್ಚರಿಸಿ ಬೋಧಿಸಿದ್ದಾರೆ. ಇನೂ ಅನೇಕ, ಗರ್ಭ ವಿರೋಧ (ಘಾತಕ) ವಿಷಯಗಳು, ಪ್ರಸವಪರ್ಯಂತ ವಾಗಿಯೂ ಆಯಾವ ಕಾಲದಲ್ಲಿ, ಅಯೋಗ್ಯ ವರ್ತನೆಯಿಂದ ಸಂಭವಿಸುತ್ತವೆ. ಅವುಗಳನ್ನು, ಆಯಾವ ಪ್ರಸಂಗಾನುಸಾರ, ಹೇಳುತ್ತಾರೆ.

## ಗರ್ಭಾರಂಭ ಕ್ರಮವು

**ತತ್ರಸ್ತ್ರೀಪುಂಸಯೋಃ ಸಂಯೋಗೆ, ತೇಜಃ ಶರೀರಾದ್ವಾಯು ರುದೀರಯತಿ, ತತಃ ತೇಜೋವಿಲಸಂನ್ನಿಪಾತಾತ್ ಶುಕ್ರಂ, ಚ್ಯುತಂ ಯೋನಿಮಭಿಪ್ರತಿಪದ್ಯತೆ, ಸಂಸೃಜ್ಯತೆಚಾರ್ತವೇನ, ತತೋಽಗ್ನಿಷೋಮ ಸಂಯೋಗಾತ್, ಸಂಸೃಜ್ಯಮಾನೊ, ಗರ್ಭಾಶಯಮನುಪ್ರಪದ್ಯತೆ, ಕ್ಷೇತಜ್ಞೊ, ವೇದಯಿತಾ, ಸ್ಪ್ರಷ್ಟಾ, ಘ್ರಾತಾ, ದೃಷ್ಟಾ, ಶ್ರೋತಾ, ರಸಯಿತಾ, ಪುರಷಃ,**

ಸ್ರಷ್ಟಾ, ಗಂತಾ, ಸಾಕ್ಷೀ, ಧಾತಾ, ವಕ್ತಾ, ಯಃ ಕೋಸಾವಿ ತ್ಯೇವಮಾದಿಭಿಃ, ಪರ್ಯಾಯವಾಚಕೈಃ ನಾಮಭಿಃ ಅಭಿಧೀಯತೇ, ದೈವಸಂಯೋಗಾದಕ್ಷಯೋವ್ಯಯೋಚಿಂತ್ಯೋಭೂತಾತ್ಮನಾಸಹಅನ್ವಕ್ಷಂ ಸತ್ವರಜಃ ತಮೋಬಿಃ ದೈವಾಸುರೈಃ ಅಪರೈಶ್ಚ ಭಾವೈರ್ವಾಯುನಾಭಿಪ್ರೇರ್ಯಮಾಣೋ, ಗರ್ಭಾಶಯಮನುಪ್ರವಿಶ್ಯ, ಅವತಿಷ್ಠತೇ॥ (ಸುಶ್ರುತ॥ ಶಾರೀರ॥ ಅ ೩ ಸೂ ೪)

"ಗರ್ಭ ಸಂಭವ ಕ್ರಿಯೆಯಲ್ಲಿ" ಸ್ತ್ರೀ ಪುರುಷರ ಯಥಾಯೋಗ್ಯ ಪ್ರಾಸಂಗಿಕ ಸಂಯೋಗದಿಂದ, ಸತ್ವಮಯವಾದ ಶುಕ್ರದ ಸೂಕ್ಷ್ಮ ಸ್ವರೂಪವನ್ನು (ತೇಜಸ್ಸನ್ನು) ಶರೀರದಲ್ಲಿವಾಯುವು ಉದ್ದೀಪನಗೊಳಿಸುತ್ತದೆ. ನಂತರ ಪ್ರಚೋದನೆ ಹೊಂದಿದ ತೇಜಸ್ಸು, ವಾಯು, ಯುಕ್ತವಾಗಿ "ಶುಕ್ರವನ್ನು"ಪತನ ಹೊಂದಿಸುತ್ತದೆ. ಶುಕ್ರವು ಯೋನಿಯಲ್ಲಿ (ಸ್ತ್ರೀಜನನೇಂದ್ರಿಯದಲ್ಲಿ) ಬೀಳುತ್ತದೆ. ಯೋನಿಯಲ್ಲಿ ದ್ರವಿಸಿದ ಆರ್ತವದಿಂದ ಹೊಂದಿಕೆಯಾಗಿ (ಕೂಡಿ) ನಂತರ ಜಡವಾದ ಶುಕ್ರಾರ್ತವಗಳಿಗೆ ಚೈತನ್ಯ ಕೊಡುವ, ಅಪ್ರಮೇಯವಾದ 'ಅಗ್ನೀಷೋಮೀಯ ತತ್ವಗಳಿಂದ ಕೂಡಿ, ಶುಕ್ರಾರ್ತವಗಳು ಏಕರಸವಾಗಿ (ಸಂಮಿಲಿತ) ಚೈತನ್ಯ ಹೊಂದಿ, ಗರ್ಭಾಶಯದಲ್ಲಿ ಪ್ರವೇಶಿಸುತ್ತವೆ. ಕ್ಷೇತ್ರಜ್ಞ ಇತ್ಯಾದಿ ಬಹು ವಿಧ ನಾಮಧೇಯವುಳ್ಳ ಅಸಂಖ್ಯೇಯ ನಾನಾಪ್ರಕಾರ ಕ್ರಿಯಾ ವಿಶಿಷ್ಟನಾದ ಜೀವಾತ್ಮನು ದೈವಯೊಗಾತ್ (ಈಶ್ವರೇಚ್ಛೆಯಿಂದ) ಅಪ್ರಮೇಯನೂ ಸೂಕ್ಷ್ಮ ಸ್ವರೂಪನೂ ಅಚಿಂತ್ಯನಿದ್ದರೂ ಗರ್ಭಾಶಯದಲ್ಲಿ "ಅಗ್ನೀಷೋಮೀಯ" ತತ್ವಯುಕ್ತವಾದ ಸೂಕ್ಷ್ಮ ಚೇತನೆಯುಳ್ಳ ಶುಕ್ರಾರ್ತವಗಳ ಸಮ್ಮಿಲಿತ ಸ್ವರೂಪವಾದ 'ಕಲಲ'ದಲ್ಲಿ ತತ್ಕ್ಷಣವೇ (ಅನ್ವಕ್ಷಂ) ವಾಯುವಿನಿಂದ ಪ್ರೇರಿತನಾಗಿ ಕೂಡಿಕೊಳ್ಳುತ್ತಾನೆ. ಹೀಗೆ ಗರ್ಭಾಶಯದಲ್ಲಿ ಪ್ರವೇಶಿಸಿದ, ಜೀವಾತ್ಮನು, ಗರ್ಭದಲ್ಲಿಯು, ಪಾಂಚಭೌತಿಕ ಸ್ಥಿತಿಯುಳ್ಳವನಾಗುವನು. ಮತ್ತು ತನ್ನ ಜನ್ಮಾಂತರೀಯವಾದ ಸತ್ವರಜಸ್ತಮೋಗುಣ, ದೇವರಾಕ್ಷಸಪೈಶಾಚಿಕ ಅನೇಕ ಭಾವಗಳಿಂದ ಸತ್ಕರ್ಮ ದುಷ್ಕರ್ಮ ಮೊದಲಾದವುಗಳುಳ್ಳ ಸೂಕ್ಷ್ಮ ಶರೀರ (ಕರ್ಮಾರ್ಜಿತ ದೇಹ) ಯುಕ್ತನಾದವನಿರುವನು.

## ಶುಕ್ರಾರ್ತವಗಳ ಸಮ್ಮಿಲನ

**ಸೌಮ್ಯಂ ಶುಕ್ರಂ ಆಗ್ನೇಯಂ ಆರ್ತವಂ ಇತರೇಷಾಮಪ್ಯತ್ರ ಭೂತಾನಾಂ ಸಾನ್ನಿಧ್ಯಂ ಅಸ್ತ್ಯಣುನಾವಿಶೇಷೇಣ, ಪರಸ್ಪರೋಪಕಾರಾತ್, ಪರಸ್ಪರಾನುಗ್ರಹಾತ್ ಪರಸ್ಪರಾನುಪ್ರವೇಶಾಚ್ಚ ॥**

(ಸುಶ್ರುತ॥ ಶಾರೀರ॥ ಅ ೩ ಸೂ ೩)

"ಶುಕ್ರವು" ಸೌಮ್ಯ. "ಆರ್ತವವು" ಆಗ್ನೇಯ, ಇನ್ನುಳಿದ ಪೃಥಿವಿ ವಾಯು ಆಕಾಶಗಳೂ ಸಹ ಸೂಕ್ಷ್ಮ ರೂಪದಿಂದ ಶುಕ್ರಾರ್ತವದಲ್ಲಿ ಯುಕ್ತವಾದವುಗಳು ಇರುತ್ತವೆ. ಇವೆಲ್ಲವುಗಳು ಇರುವದರಿಂದಲೇ ಪಂಚಭೂತಾತ್ಮಕವಾದದ್ದು ಗರ್ಭವು. ವಿಶೇಷವಾಗಿ ಶುಕ್ರಾರ್ತವಗಳು ಒಂದಕ್ಕೊಂದು ಹೊಂದಿಕೊಂಡು ಪರಸ್ಪರ ಅನುಕೂಲವಾಗಿ, ಪರಸ್ಪರ ಪೋಷಕ ರೀತಿಯಿಂದ ಒಂದನ್ನೊಂದು ಕೂಡಿಯೇ ಪ್ರವೇಶಮಾಡಿ ಒಂದಕ್ಕೊಂದು ಉಪಕಾರಿಯಾಗಿರುವದರಿಂದ; ಪಂಚಭೂತಗಳ ಸೂಕ್ಷ್ಮವಾದ ಸಾನ್ನಿಧ್ಯವಿದೆಯೆಂದು ನಿರ್ಣಯವಾಗುತ್ತದೆ. ಪಂಚಭೂತಗಳಲ್ಲಿ ದುರ್ಬಲವಾದದ್ದಕ್ಕೆ ಸಬಲವಾದದ್ದು ಉಪಕಾರವಾಗುತ್ತದೆ, ಸಹಾಯಕವಾಗಿ ಕೂಡಿಕೊಳ್ಳುತ್ತದೆ. ಉದಾ:- ಪಂಚಭೂತಾತ್ಮಕಗಳಲ್ಲಿ ಪೃಥಿವಿಯು ಬಲವಾದದ್ದು. ಉಳಿದವು ದುರ್ಬಲ (ಸ್ಥಿರತೆಯಿಲ್ಲದವು) ಆದ್ದರಿಂದ ಪೃಥಿವಿಯು ಜಲಾದಿಗಳಿಗೆ ನಿಲ್ಲಲು ಸ್ಥಳ ಒದಗಿಸಿಕೊಡುತ್ತದೆ. ವಾಯುವು ಜಲದಲ್ಲಿ ಸೇರಿ ಪ್ರವಹಿಸುವಂತೆ ಮಾಡುತ್ತದೆ. ಅಗ್ನಿಯು ಗಾಳಿಯ ಸಹಾಯದಿಂದಲೇ ಪಸರಿಸುತ್ತದೆ. ಗಾಳಿ ಅಗ್ನಿಗಳಿಗೆ ಆಕಾಶವು ಸ್ಥಾನ ಕೊಡುತ್ತದೆ. ಹೀಗಿರುವದರಿಂದ, ಶುಕ್ರಾರ್ತವಗಳ, ಸಂಯುಕ್ತ ಸ್ವರೂಪ "ಕಲಲ"ದಲ್ಲಿ ಪಂಚಭೂತಾತ್ಮಕ ಸೂಕ್ಷ್ಮ ತತ್ವಗಳು ಇರುತ್ತವೆಂದು ಹೇಳಿದಂತಾಯಿತು.

## ಗರ್ಭಾಶಯದಲ್ಲಿ ಗರ್ಭದ ಪರಿಪಾಕವು

**ಶುಕ್ರಶೋಣಿತಂ ಗರ್ಭಾಶಯಸ್ಥಂ ಆತ್ಮಪ್ರಕೃತಿವಿಕಾರಸಂಮೂರ್ಛಿತಂ 'ಗರ್ಭ' ಇತ್ಯುಚ್ಯತೆ, ತಂಚೇತನಾವಸ್ಥಿತಂ**

**ವಾಯುರ್ವಿಭಜತಿ, ತೇಜಏನಂ ಪಚತಿ, ಆಪಃ ಕ್ಲೇದಯಂತಿ, ಪೃಥಿವೀಸಂಹಂತಿ, ಆಕಾಶಂವಿವರ್ಧಯತಿ॥**

(ಸುಶ್ರುತ॥ ಶಾರೀರ॥ ಅ ೫ ಸೂ ೩)

ಗರ್ಭಾಶಯದಲ್ಲಿರುವ, ಶುಕ್ರಶೋಣಿತ ಮಿಶ್ರಣವು, ಹಿಂದೆ ಹೇಳಿದ ಎಂಟು ಪ್ರಕೃತಿ ವಿಕಾರ ಆತ್ಮ (ಕ್ಷೇತ್ರಜ್ಞ) ಇವೆಲ್ಲವುಗಳಿಂದ ಮಿಶ್ರೀಭಾವ ಹೊಂದಿ, "ಗರ್ಭ"ವೆಂಬ ಹೆಸರನ್ನು ಪಡೆಯುತ್ತದೆ. ಅರ್ಥಾತ್ ಗರ್ಭದಲ್ಲಿ ಇವೆಲ್ಲವುಗಳಿರುತ್ತವೆ. ಶಾಸ್ತ್ರಾನುಸಾರವಾಗಿ ಪಂಚವಿಂಶತಿ ತತ್ವಾತ್ಮಕ ವಾದದ್ದು ಗರ್ಭವು. ಹೀಗೆ ಗರ್ಭಾಶಯದಲ್ಲಿ ಚೇತನಾಯುಕ್ತವಾದ "ಗರ್ಭ ವನ್ನು" ದೋಷ ಧಾತು ಮಲ ಅಂಗ ಪ್ರತ್ಯಂಗ ಇತ್ಯಾದಿ ಅಂಗಗಳಿಗನು ಗುಣವಾಗಿ, ವಾಯುವು ವಿಭಾಗ ಮಾಡುತ್ತದೆ. ತೇಜಸ್ಸು (ಗರ್ಭಾಶಯ ದಲ್ಲಿಯ ಅಗ್ನಿಯು) ಪಚನ ಮಾಡುತ್ತದೆ ಮತ್ತು ಒಂದು ರೂಪದಿಂದ ಮತ್ತೊಂದು ರೂಪಬರುವಂತೆ ಕುದಿಸುತ್ತದೆ. ಜಲವು ಗರ್ಭಾಶಯ ದ್ರವವು ವಾಯುವಿನಿಂದ ವಿಭಾಗ ಹೊಂದಿ ಅಗ್ನಿಯಿಂದ ಕುದಿಯುತ್ತಿರುವ ಗರ್ಭ ವನ್ನು ಆದ್ರ್ರವನ್ನಾಗಿ ಮಾಡುತ್ತದೆ. ಪೃಥಿವಿಯು (ಗರ್ಭಾಶಯದಲ್ಲಿಯ ಪೃಥ್ವಿತತ್ವವು) ಜಲದಿಂದ ಆದ್ರ್ರವಾದ ಗರ್ಭವನ್ನು, ಸ್ಥಿರಸ್ಥಿತಿಗೆ ಬರುವಂತೆ ಮಾಡುತ್ತದೆ. ಆಕಾಶವು (ಗರ್ಭಾಶಯದಲ್ಲಿಯ ಪೊಳ್ಳು ಭಾಗವು) ಗರ್ಭಕ್ಕೆ ಸಮಯಕ್ಕನುಗುಣವಾದ, ಸ್ಥಳವನ್ನು ಒದಗಿಸಿಕೊಟ್ಟು ವರ್ಧನೆಯನ್ನು ಮಾಡುತ್ತದೆ. ಗರ್ಭವು ಹೀಗೆ ಪದ್ಧತಿಯಂತೆ ಪಕ್ವಾದಿ ಸ್ಥಿತಿಗಳನ್ನು ಹೊಂದುತ್ತಾ ಬೆಳೆಯುತ್ತದೆ.

## ಗರ್ಭದಲ್ಲಿಯ ಧಾತ್ವಾದಿಗಳ ಪಾಕವು

ಶುಕ್ರಶೋಣಿತ ಮಿಶ್ರಣವಾದ ಗರ್ಭವು ಕಲಲವಾಗುತ್ತದೆ. ನಂತರ ಪಿಂಡ ಮೊದಲಾದ ರೂಪವನ್ನು ಹೊಂದುತ್ತದೆ. ಪ್ರತಿ ಮಾಸಗಳಲ್ಲಿ ಯಾವ ರೂಪಾಂತರ ಹೊಂದಬೇಕೋ ಅವುಗಳೆಲ್ಲ ಸಂಭವಿಸುತ್ತವೆ. ನಾಲ್ಕನೇ ತಿಂಗಳಿನ ವರೆಗೂ ಗರ್ಭಾಶಯದಲ್ಲಿಯ ಉಷ್ಣತೆಯಿಂದ ಪಚನವಾಗುತ್ತಾ ಗುತ್ತ ಬೇರೆ ಬೇರೆ ಅವಸ್ಥೆಗಳನ್ನು ಗರ್ಭವು ಪಡೆಯುತ್ತದೆ. ನಾಲ್ಕನೇ

ತಿಂಗಳಿನಲ್ಲಿ ಅಂಗ ಪ್ರತ್ಯಂಗಗಳು ಉಂಟಾಗುತ್ತವೆ. ಆಗ ಪಾಕದಿಂದ ರಕ್ತ ಮಾಂಸ ಮೊದಲಾದವುಗಳು ರೂಪಾಂತರ ಹೊಂದಿ ಸಿರಾ ಸ್ನಾಯು ಧಮನಿ ಮೊದಲಾದವುಗಳಾಗುತ್ತವೆ ಗರ್ಭವು ಗರ್ಭಿಣಿಯಿಂದ ಪ್ರೋಷಿತವಾಗಿ ರಸ ಸತ್ವವನ್ನು ಗ್ರಹಿಸುತ್ತದೆ. ಆದರಿಂದ ಕ್ರಮೇಣ ಎಲ್ಲಾ ವಿಭಾಗಗಳು ಉತ್ಪನ್ನವಾಗಲಾಗಿ ಶರೀರ ಸ್ವರೂಪ ಬರುತ್ತದೆ. ಹೀಗೆ ಬೇರೆ ಬೇರೆ, ಗರ್ಭದಲ್ಲಿ ವಿಭಾಗಗಳು ಹೇಗೆ ಸಂಭವಿಸುತ್ತವೆ; ಮತ್ತು ಯಾವ ದ್ರವ್ಯಗಳ ಪಾಕದಿಂದ ಯಾವ ವಿಭಾಗ ಉತನ್ನವಾಗುತ್ತದೆಂದು ವಿವೇಚಿಸಿ ವಿಭಾಗಶಃ ಹೇಳುತ್ತಾರೆ. ಕೇವಲ ಶುಕ್ರಾರ್ತವಗಳ ಗುಂಪು ಗರ್ಭವಾಗಿ ಶರೀರ ಸ್ಥಿತಿಯನ್ನು ಹೊಂದುವದರಿಂದ ಗರ್ಭದಲ್ಲಿಯ ಪರಿಪಾಕ ಸ್ಥಿತಿ ರೂಪಾಂತರ ಕ್ರಿಯಾ ವಿಭಾಗಗಳು ಅವೆಯೆನ್ನುವದು ನಿಶ್ಚಯವಾದದ್ದೇ ಸರಿ.

**ಗರ್ಭಸ್ಯಯಕೃತ್ ಪ್ಲೀಹಾನೌಶೋಣಿತಜೌ, ಶೋಣಿತಫೇನ ಪ್ರಭವಃ ಪುಪ್ಪುಸಃ ಶೋಣಿತಕಿಟ್ಟಪ್ರಭವಉಂಡುಕಃ ॥**

(ಸುಶ್ರುತ॥ ಶಾರೀರ॥ ಅ ೪ ಶ್ಲೋ ೨೫)

ರಕ್ತಪಾಕವಾಗಿ ಅದರಿಂದ ಗರ್ಭದ "**ಯಕೃತ್ ಪ್ಲೀಹಗಳು**" ಉತ್ಪನ್ನವಾಗುತ್ತವೆ. ಶೋಣಿತದ ಬುರುಗಿನ (ಫೇನ) ಪಾಕದಿಂದ "**ಪುಪ್ಪುಸವು**" ಉತ್ಪನ್ನವಾಗುತ್ತದೆ. ರಕ್ತದ ಕಿಟ್ಟದಿಂದ "**ಉಂಡುಕವು**" ಹುಟ್ಟುತ್ತದೆ. ಗರ್ಭದಲ್ಲಿಯ ಧಾತುಗಳು ಪಿತ್ತ ತೇಜಸ್ಸಿನಿಂದ ಪಕ್ವವಾಗಿ ಆವಾವ ಅಂಗೋಪಾಂಗಗಳು ಉತ್ಪನ್ನವಾಗುತ್ತವೆ.

**ತತ್ರಾಸ್ಯಮಥ್ಯಮಾನಸ್ಯಧ್ಮಾಯಮಾನಸ್ಯರುಕ್ಮವತ್ ॥
ಜಿಹ್ವಾಸಂಜಾಯತೆಸೌಮಿಯುಯಾವೇದಯತೇ ರಸಸಾನ್॥**

(ಸುಶ್ರುತ ಟೀಕಾ)

ಗಭಾರ್ಶಯದಲ್ಲಿ ಗರ್ಭವು ಪಾಕವನ್ನು ಹೊಂದುತ್ತಿರಲು, ಘರ್ಷಣ ಕರಗಿಸೋಣ ಗಾಳಿಹೊಡೆಯುವದು ಮೊದಲಾದವುಗಳಿಂದ ಭಂಗಾರವು ಉತ್ಪನ್ನವಾಗುವಂತೆ ಗರ್ಭಕ್ಕೆ ನಾಲಿಗೆಯು ಉತ್ಪನ್ನವಾಗುತ್ತಧೆ. ಯಾವದ

ರಿಂದ ಸ್ವಾದು ಮೊದಲಾದ ರಸಗಳನ್ನು ನಾವು ಅರಿತುಕೊಳ್ಳುತ್ತೇವೆಯೋ ಅದೇ ನಾಲಿಗೆಯು.

**ಅಸೃಜಃ ಶ್ಲೇಷ್ಮಣಶ್ಚಾಪಿಯಃಪ್ರಸಾದಃ ಪರೋಮತಃ ॥**
**ತಂಪಚ್ಯಮಾನಂ ಪಿತ್ತೇನವಾಯುಶ್ಚಾಪ್ಯನುಧಾವತಿ ॥**
(ಸುಶ್ರುತ॥ ಶಾರೀರ॥ ಅ ೪ ಶ್ಲೋ ೨೬)

**ತತೋಽಂತ್ರಾಣಿಜಾಯಂತೇಗುದಂಬಸ್ತಿಶ್ಚದೇಹಿನಃ ॥**
**ಉದರೆಪಚ್ಯಮಾನಾನಾಮಾಧ್ಮಾನಾದ್ರುಕ್ಮಸಾರವತ್ ॥೨೭॥**

ರಕ್ತ ಮತ್ತು ಶ್ಲೇಷ್ಮ (ಕಫ) ಇವುಗಳ ಪಾಕವು ನಂತರವಾಗುತ್ತದೆ. ಎಲ್ಲ ಪ್ರಸಾದ (ಪಾಕ) ಕ್ಕಿಂತಲೂ ಇದು ಹೆಚ್ಚಿನದಿರುತ್ತದೆ. ರಕ್ತ ಶ್ಲೇಷ್ಮಗಳು ಪಚನ ಹೊಂದಿ ಉತ್ತಮ ಪ್ರಸಾದಸಾರ (ಪಕ್ವಸಾರ) ಉತ್ಪನ್ನವಾಗುತ್ತದೆ. ಹೀಗೆ ಸಾರವು ಪಿತ್ತದಿಂದ ಪಕ್ವವಾಗುತ್ತಿರಲು ವಾಯುವು ಸಹ ಕೂಡಿಕೊಳ್ಳುತ್ತದೆ ಹೀಗೆ ವಾಯುವಿನ ಆಧ್ಮಾನ (ಜೋರಿನಿಂದ ಪ್ರಸರಣ)ವಾಗುತ್ತಿರಲು, ಅಗ್ನಿಯಿಂದ ಪಕ್ವವಾಗುತ್ತಿರಲು ಚನ್ನಾಗಿ ಗಾಳಿ ಹೊಡೆಯುವದರಿಂದ ಭಂಗಾರವು ಬೇರೆಯಾಗಿ ಹೊರಡುವಂತೆ, ಶರೀರಿಯ ಕರಳು, ಬಸ್ತಿ, ಗುದಗಳು, ಉತ್ಪನ್ನವಾಗುತ್ತವೆ. ಅರ್ಥಾತ್ ರಕ್ತ ಶ್ಲೇಷ್ಮ ಸಾರವನ್ನು ಉದರದಲ್ಲಿ ಪಿತ್ತಾಗ್ನಿಯು ಪಚನ ಮಾಡುತ್ತಿರಲು, ವಾಯುವು ಅದನ್ನು ಭೇದಿಸಿ ಆಧ್ಮಾನದಿಂದ (ಊದುವಿಕೆಯಿಂದ) ಅಂತ್ರಗಳನ್ನೂ, ಬಸ್ತಿ, ಗುದಗಳನ್ನೂ ಉತ್ಪನ್ನ ಮಾಡುತ್ತದೆ

**ಕಫಶೋಣಿತಮಾಂಸಾನಾಂ ಸಾರಾಜಿಹ್ವಾಪ್ರಜಾಯತೆ ॥**
**ಯಥಾರ್ಥಮೂಷ್ಮಣಾಯುಕ್ತೋವಾಯುಃ ಸ್ರೋತಾಂಸಿದಾರಯೇತ್ ॥** (ಸುಶ್ರುತ॥ ಶಾರೀರ॥ ಅ ೪ ಶ್ಲೋ ೨೮)

**ಅನುಪ್ರವಿಶ್ಯಪಿಶಿತಂಪೇಶೀರ್ವಿಭಜತೇತಥಾ ॥**
**ಮೇದಸಃ ಸ್ನೇಹಮಾದಾಯಸಿರಾಸ್ನಾಯುತ್ವಮಾಪ್ನುಯಾತ್ ॥೨೯॥**

ಕಫ ರಕ್ತ ಮಾಂಸಗಳ ಸಾರದಿಂದ ನಾಲಿಗೆಯು ಉತ್ಪನ್ನವಾಗುತ್ತದೆ. ಯಥಾಯೋಗ್ಯ ಸನ್ನಿವೇಶೋಚಿತವಾಗಿ (ಗರ್ಭಕ್ಕನುಗುಣವಾಗಿ) ಪಿತ್ತ ವನ್ನು ಕೂಡಿಕೊಂಡು ವಾಯುವು ಸ್ರೋತಸ್ಸುಗಳನ್ನುಂಟು ಮಾಡುತ್ತದೆ. ಪೂರ್ವೋಕ್ತವಾಗಿ ಸಾರವು ಪಾಕವಾಗುತ್ತಿರಲು ವಾಯುವು ವಿಭಾಗ ಮಾಡಿ ಸ್ರೋತಸ್ಸುಗಳನ್ನು ಹುಟ್ಟಿಸುತ್ತದೆ ನಂತರ ವಾಯುವು ಮಾಂಸವನ್ನು ಪ್ರವೇಶಿಸಿ ಪೇಶೀ (ಮಾಂಸ ಚೀಲ) ಗಳನ್ನು ವಿಭಾಗಿಸಿ ಉಂಟು ಮಾಡುತ್ತದೆ. "ವಿಭಜತೆ" ಎಂದು ಹೇಳಿರುವದರಿಂದ ಆವಾವ ಸ್ಥಳಕ್ಕನುಗುಣವಾಗಿ, ಸ್ಥೂಲ ಸೂಕ್ಷ್ಮ ಹ್ರಸ್ವದೀರ್ಘವರ್ತುಲ ಮುಂತಾದ ಸ್ಥಿತಿಯುಳ್ಳವುಗಳನ್ನು ಸ್ಥಾನೋಚಿತ ಉತ್ಪತ್ತಿಯನ್ನುಮಾಡುತ್ತದೆಂದುಧ್ವನಿತವಾಗುತ್ತದೆ. ಮೇದಸ್ಸಿನ ಸ್ನಿಗ್ಧತೆಯನ್ನು ಗ್ರಹಿಸಿ ವಾಯುವು ಶಿರಾಸ್ನಾಯುಗಳನ್ನುಮಾಡುತ್ತದೆ.

**ಸಿರಾಣಾಂತುಮೃದುಃ ಪಾಕಃ ಸ್ನಾಯೂನಾಂಚ ತತಃ ಖರಃ ॥**
**ಆಶಯಾಭ್ಯಾಸಯೋಗೇನ ಕರೋತ್ಯಾಶಯಸಂಭವಮ್ ॥**

ಸಿರಗಳ ಪಾಕವು ಮೃದು ಪಾಕವು. ಸ್ನಾಯುಗಳಪಾಕವು ಅದಕ್ಕೂ ಘಟ್ಟಿಯಾದದ್ದು (ಖರ) ಇರುತ್ತದೆ. ವಾಯುವು ಭೇದಿಸುವ ಕ್ರಮದಿಂದ ಸ್ಥಾನವನ್ನು ಮಾಡಿಕೊಂಡು ಆಶಯಗಳ ಉತ್ಪತ್ತಿಯನ್ನುಂಟು ಮಾಡುತ್ತದೆ. ರಕ್ತ ಮೊದಲಾದವುಗಳ ಪಾಕದಿಂದ ಉತ್ಪನ್ನವಾಗುವ ಅಂತ್ರ ಮೊದಲಾದವುಗಳನ್ನುಹೇಳಿ, ನಂತರ ವೃಕ್ಕ ಮೊದಲಾದವುಗಳ ಉತ್ಪತ್ತಿಯನ್ನು ಹೇಳುತ್ತಾರೆ.

**ರಕ್ತಮೇದಃ ಪ್ರಸಾದಾತ್‌ವೃಕ್ಕೌ; ಮಾಂಸಾಸೃಕ್ಕಫಮೇದಃ ಪ್ರಸಾದಾತ್‌ವೃಷಣೌ; ಶೋಣಿತಕಫಪ್ರಸಾದಜಂ ಹೃದಯಂ; ಯದಾಶ್ರಯಾಹಿಧಮನ್ಯಃ ಪ್ರಾಣವಹಾಃ; ತಸ್ಯಾಧೋವಾಮತಃ ಪ್ಲೀಹಾಪುಪ್ಫುಸಶ್ಚ, ದಕ್ಷಿಣತೋಯಕೃತ್‌ಕ್ಲೋಮಚ; ತದ್ವಿಶೇಷೇಣ ಚೇತನಾಸ್ಥಾನಂ, ಅತಸ್ತಸ್ಮಿನ್‌ತಮಸಾವೃತೆಸರ್ವಪ್ರಾಣಿನಃ ಸ್ವಪಂತಿ ॥**

(ಸುಶ್ರುತ॥ ಶಾರೀರ॥ ಅ ४ ಸೂ ३೧)

ರಕ್ತ ಮೇದಸ್ಸುಗಳಪಾಕದಿಂದ ವೃಕ್ಕಗಳುತ್ಪನ್ನವಾಗುತ್ತವೆ. ಮಾಂಸ ರಕ್ತ ಕಫ ಮೇದಸ್ಸುಗಳ ಪಾಕದಿಂದ ವೃಷಣ ( ಅಂಡಕೋಶ ) ಉತ್ಪನ್ನ ವಾಗುತ್ತದೆ. ರಕ್ತ ಕಫಗಳ ಪಾಕದಿಂದ ಹೃದಯವು ಉತ್ಪನ್ನವಾಗುತ್ತದೆ. ಹೃದಯವನ್ನಾಶ್ರಯಿಸಿಯೇ ಪ್ರಾಣ ವಾಹಿನೀ ಧಮನಿಗಳು ಇರುತ್ತವೆ. ಹೃದಯದ ಅಧೋಭಾಗದಲ್ಲಿ ಎಡಗಡೆಗೆ ಪ್ಲೀಹ ಪುಪ್ಪುಸಗಳು, ಬಲಗಡೆಗೆ ಯಕೃತ್‌ಕ್ಲೋಮಗಳು ಇರುತ್ತವೆ. ಎಡಗಡೆಗೆ ಪ್ಲೀಹ ಪುಪ್ಪುಸಗಳೆಂದೂ, ಬಲಗಡೆಯಲ್ಲಿ ಯಕೃತ್ ಕ್ಲೋಮಗಳೆಂದೂ, ಸುಶ್ರುತದಲ್ಲಿ ಪ್ರಾಮಾದ ಪಾರ ಕ್ರಮ ನಡೆದುಬಂದಿದೆಯೆಂದು ಪ್ರತ್ಯಕ್ಷ ಶಾರೀರದಲ್ಲಿಯ ಮತವು. "ಉಭ ಯತಃ ಕ್ಲೋಮಪುಪ್ಫುಸೌಚ" ಅಂದರೆ ಎರಡೂ ಕಡೆಗೆ ಪುಪ್ಪುಸ ಕ್ಲೋಮಗಳು ಇರುತ್ತವೆ. ಇದು ಯೋಗ್ಯವಾದ ಪಾಠವು. ಯಾಕಂದರೆ ಎಡ ಗಡೆಯಲ್ಲಿ ಎಂದು ಹೇಳಿದರೆ ಬಲಗಡೆಗೆ ಇರುವದಿಲ್ಲವೆಂದು ಹೇಳಿದಂತಾ ಯಿತು ಇದರಿಂದ ಬಲಗಡೆಯ ಕ್ಲೋಮ ಪುಪ್ಪುಸಳು ಗ್ರಹಣವಾಗುವ ದಿಲ್ಲ. ಇದರಂತೆ ಬಲಗಡೆಯೆಂದು ಹೇಳಿದರೂ ಸರಿಯಲ್ಲ. ಆದ್ದರಿಂದ "ಉಭ ಯತಃ" ಎನ್ನುವದು ಯೋಗ್ಯವೆಂದು ಪ್ರತ್ಯಕ್ಷವಾಗಿ ನಿರ್ಧರಿಸಿದ್ದಾರೆ. ಹೃದ ಯವು ದೇಹದಲ್ಲಿ ಪ್ರಾಮುಖ್ಯವಾದದ್ದಿರುತ್ತದೆ. ಯಾಕಂದರೆ ಚೈತನ್ಯ ಸ್ಥಾನ ವೆಂದರೇ ಹೃದಯವು. ಹೀಗಿರುವದರಿಂದ ಹೃದಯದಲ್ಲಿ ತಮಸ್ಸು ಆವರಿಸಿ ತೆಂದರೆ ಸರ್ವ ಪ್ರಾಣಿಗಳು ನಿದ್ರಿಸುತ್ತವೆ. ದೇಹದಲ್ಲಿ ಮುಖ್ಯ ಸ್ಥಾನವಾದ ಹೃದಯಕ್ಕೆ ಅಂತ್ಯಂತವಾದ ಭದ್ರ ರಕ್ಷಣೆಯು ಅದರ ಮಹತ್ವವನ್ನು ಸೂಚಿ ಸುತ್ತದೆ. ರಕ್ತಾಶಯ ಪ್ರಾಣ ವಾಹಿನೀ ಧಮನೀಗಳು ಹೃದಯದಲ್ಲಿಯೇ ಇರುತ್ತವೆ ವಿಶೇಷವಾಗಿ ಹೃದಯವು ದೇಹದಲ್ಲಿ ಅತಿ ಮಹತ್ವವೂ ಪ್ರಧಾನ ವಾದದ್ದೂ ಇರುತ್ತದೆ. ಯಕೃತಾದಿಗಳ ವರ್ಣನೆಯು ವಿಸ್ತಾರವಾಗಿ ಮುಂದೆ ಕ್ರಮಶಃ ಬರುವದರಿಂದ ವಿಶದೀಕರಿಸಿಲ್ಲ.

## ಗರ್ಭಾಭಿವೃದ್ಧಿ ಕ್ರಮ

**ಗರ್ಭಸ್ಯಖಲುರಸನಿಮಿತ್ತಾ, ಮಾರುತಾಧ್ಮಾನನಿಮಿತ್ತಾಚ, ಪರಿವೃದ್ಧಿರ್ಭವತಿ,** (ಸುಶ್ರುತ॥ ಶಾರೀರ॥ ಅ ೪ ಸೂ ೫೭)

ತಾಯಿಯ ಅನ್ನಪಾನ ರಸದಿಂದಲೂ, ವಾಯುವಿನಿಂದ ಸ್ರೋತೋ ಮಾರ್ಗವಾಗಿ ಗರ್ಭಪೋಷಣ ರಸಾದಿಗಳ ಸಂಚಾರವಾಗುವಂತೆ ಪ್ರೇರಿಸುವದರಿಂದಲೂ, ಮತ್ತೂ ವಾಯುವಿನ ಆಧ್ಮಾನದಿಂದ ಗರ್ಭಕ್ಕೆ ಪುಟವಾಗುವದರಿಂದಲೂ, "ಗರ್ಭವು" ಅಭಿವೃದ್ಧಿಯನ್ನು ಹೊಂದುತ್ತದೆ. ತಾಯಿಯ ಆಹಾರ ರಸದಿಂದ ಗರ್ಭವು ಬೆಳೆಯುವದರಿಂದ ಗರ್ಭಿಣಿಯು, ಸಾತ್ವಿಕ ಪೌಷ್ಟಿಕ ಆಹಾರವನ್ನು ತಕ್ಕೊಳ್ಳಬೇಕೆಂಬ ನಿಯಮ ಮಾಡಿದ್ದಾರೆ.

**ಏವಂ ವಿವಿರ್ಧಿತಃ ಸಯದಾ ಹಸ್ತಪಾದಜಿಹ್ವಾಘ್ರಾಣಕರ್ಣ ನಿತಂಬಾದಿಭಿಃ ಅಂಗೈರುಪೇತಃ ತದಾಶರೀರಂ ಇತಿಸಂಜ್ಞಾಂ ಲಭತೆ ॥** (ಸುಶ್ರುತ॥ ಶಾರೀರ॥ ಅ ೫ ಸೂ ೩)

ಪೂರ್ವೋಕ್ತ ರೀತಿಯಿಂದ ಅಭಿವೃದ್ಧಿ ಹೊಂದಿದ ಗರ್ಭವು, ಕೈಕಾಲು ನಾಲಿಗೆ ಕಣ್ಣು ಮೂಗು ಕಿವಿ ಟೊಂಕವೇ ಮೊದಲಾದ ಅಂಗಗಳಿಂದ ಯುಕ್ತವಾದದ್ದಾಗುತ್ತದೆಯೋ ಆಗ "ಶರೀರ"ವೆಂಬ ಹೆಸರನ್ನು ಪಡೆಯುತ್ತದೆ. (ಅವಯವಾದಿಗಳಿಲ್ಲದಿರುವ ಸ್ಥಿತಿಗೆ "ಗರ್ಭ" ವೆಂದೂ ಅವಯವವುಂಟಾದ ಮೇಲೆ "ಶರೀರ" ವೆಂದೂ ತಿಳಿಯಬೇಕು.)

# (೮) ಗರ್ಭೋತ್ಪತ್ತಿ ವಿಷಯದಲ್ಲಿ ಮತಾಂತರಗಳು

### ಗರ್ಭೋತ್ಪತ್ತಿ ವಿಷಯಕಾಣಿಮತಾಂತರಾಣಿ

### ೧. ಶೌನಕರ ಮತವು

**ಗರ್ಭಸ್ಯಖಲುಸಂಭವತಃ ಪೂರ್ವಂ ಶಿರಃ ಸಂಭವತೀತ್ಯಾಹ ಶೌನಕಃ, ಶಿರೋಮೂಲತ್ವಾತ್ ಪ್ರಧಾನೇಂದ್ರಿಯಾಣಾಂ ॥**

(ಸುಶ್ರುತ॥ ಶಾರೀರ॥ ಅ ೩ ಸೂ ೩೨)

ಗರ್ಭವು ಪೂರ್ಣವಾಗಬೇಕಾದರೆ ಮೊದಲು "ತಲೆ" ಉತ್ಪನ್ನವಾಗು ತ್ತದೆ. ಯಾಕಂದರೆ ಪ್ರಧಾನೇಂದ್ರಿಯಗಳಿಗೆ ತಲೆಯೇ ಮುಖ್ಯವಾದದ್ದು, ಹೀಗೆಂದು ಶೌನಕರು ಹೇಳುತ್ತಾರೆ.

## ೨. ಕೃತವೀರ್ಯನ ಮತವು

**ಹೃದಯಮಿತಿಕೃತವೀರ್ಯೋ, ಬುದ್ಧೇರ್ಮನಸಶ್ಚ ಸ್ಥಾನತ್ವಾತ್ ||**

ಬುದ್ಧಿ ಮತ್ತು ಮನಸ್ಸಿಗೆ ಸ್ಥಾನವಾದ್ದರಿಂದ, "ಹೃದಯವು" ಮೊದಲುತ್ಪನ್ನವಾಗುತ್ತದೆಂದು ಕೃತವೀರ್ಯನ ಮತವು.

## ೩. ಪರಾಶರ ಮತವು

**ನಾಭಿರಿತಿಪಾರಾಶರ್ಯಃ ತತೋಹಿವರ್ಧತೆದೇಹೊದೇಹಿನಃ ||**

"ನಾಭಿಯು" ಮೊದಲು ಹುಟ್ಟುತ್ತದೆ. ಯಾಕಂದರೆ ಅದರಿಂದಲೇ (ನಾಭಿಯಿಂದಲೇ) ಮನುಷ್ಯನ ದೇಹವು ವೃದ್ಧಿಹೊಂದುತ್ತದೆಯಾದ್ದರಿಂದ ನಾಭಿ ಮೊದಲೆಂದು ಪಾರಾಶರ ಅನುಯಾಯಿಗಳ ಅಭಿಪ್ರಾಯವು.

## ೪. ಮಾರ್ಕಾಂಡೇಯ ಮತ

**ಪಾಣಿಪಾದಮಿತಿಮಾರ್ಕಾಂಡೇಯಃ ತನ್ಮೂಲತ್ವಾತ್ ಚೇಷ್ಟಾ ಯಾಗರ್ಭಸ್ಯ ||**

"ಕೈಕಾಲುಗಳು" ಮೊದಲುತ್ಪನ್ನವಾಗುತ್ತವೆ. ಯಾಕಂದರೆ ಗರ್ಭ ಚಲನೆಗೆ ಅವುಗಳೇ (ಕೈಕಾಲು) ಕಾರಣವು, ಇಂತೆಂದು ಮಾರ್ಕಂಡೇಯರು ಅನ್ನುತ್ತಾರೆ.

## ೫. ಗೌತಮ ಮತವು

**ಮಧ್ಯಶರೀರಮಿತಿಸುಭೂತಿಗೌತಮಃ, ತನ್ನಿಬದ್ಧತ್ವಾತ್ ಸರ್ವ ಗಾತ್ರಸಂಭವಸ್ಯ ||**

ಎಲ್ಲ ಅವಯುವಗಳು ಮಧ್ಯ ಶರೀರಕ್ಕೆ ಹೊಂದಿಕೊಂಡಿರುವದರಿಂದ, ಮಧ್ಯ ಶರೀರದ ಉತ್ಪತ್ತಿ ಮೊದಲಾಗುತ್ತದೆಂದು ಗೌತಮರ ಮತವು.

### ೬. ಭಗವಾನ್ ಧನ್ವಂತರಿಯ ಮತವು

**ತತ್ತುನಶಮ್ಯಕ್, ಸರ್ವಾಣ್ಯಂಗಪ್ರತ್ಯಂಗಾನಿ ಯುಗಪತ್, ಸಂಭವಂತೀತ್ಯಾಹಧನ್ವಂತರಿಃ, ಗರ್ಭಸ್ಯಸೂಕ್ಷ್ಮತ್ವಾನ್ನೋಪ ಲಭ್ಯಂತೆ, ವಂಶಾಂಕುರವತ್ ಚೂತಫಲವಚ್ಚ ತದ್ಯಥಾ:-ಚೂತ ಫಲಿಪರಿಪಕ್ವೆಕೇಶರಮಾಂಸಾಸ್ಥಿಮಜ್ಜಾನಃಪೃಥಕ್, ಪೃಥಕ್, ದೃಶ್ಯಂತೆ ಕಾಲಪ್ರಕರ್ಷಾತ್, ತಾನ್ಯೇವತರುಣೆ ನೋಪಲಭ್ಯಂತೆ ಸೂಕ್ಷ್ಮತ್ವಾತ್, ತೇಷಾಂಸೂಕ್ಷ್ಮಾಣಾಂಕೇಶರಾದೀನಾಂಕಾಲಃ ಪ್ರವ್ಯಕ್ತತಾಂ ಕರೋತಿ, ಏತೇನೈವವಂಶಾಕುರೋಪಿ ವ್ಯಾ ಖ್ಯಾತಃ॥ ಏವಂಗರ್ಭಸ್ಯತಾರುಣ್ಯೆಸರ್ವೇಷ್ವಂಗಪ್ರತ್ಯಂಗೇಷು ಸತ್ಸ್ವಪಿ, ಸೌಕ್ಷ್ಮ್ಯಾದನುಪಲಬ್ಧಿಃ, ತಾನ್ಯೇವಕಾಲಪ್ರಕರ್ಷಾ ತ್‌ಪ್ರವ್ಯಕ್ತಾನಿಭವಂತಿ ॥**

ಇವು ಯಾವ ಮತವೂ ಸರಿಯಾದವಲ್ಲ. ಯಾಕಂದರೆ ಎಲ್ಲ ಅಂಗ ಪ್ರತ್ಯಂಗಗಳು ಒಮ್ಮೆಲೇ ಹುಟ್ಟುತ್ತವೆ. ಎಂದು "ಧನ್ವಂತರಿ"ಯು ಹೇಳು ತ್ತಾನೆ. ಗರ್ಭವು ಸೂಕ್ಷ್ಮವಿರುವದರಿಂದ ಗೋಚರವಾಗುವದಿಲ್ಲ. ಹೇಗೆಂದರೆ ಕಳಲೆಯಂತೆ ಅಥವಾ ಮಾವಿನ ಮಿಡಿಯಂತೆ. ಕ್ರಮೇಣ ಬೆಳೆಯುವದರಿಂದ, ಪಕ್ವವಾಗಿ ಮಾವಿನ ಹಣ್ಣಿನ ತಿಳಲು, ಗೊರಟ, ಒಳಗಿನ ನರ, ಇವೆಲ್ಲವು ಗಳು ಬೇರೆ ಬೇರೆಯಾಗಿರುತ್ತವೆ. ಅರ್ಥಾತ್ ಬೇರೆ ಬೇರೆಯಾಗಿ ಕಾಣು ತ್ತವೆ. ಆದೇ ಅವುಗಳು ಮಾವಿನಕಾಯಿ ಹೀಚಿರುವಾಗ ಗೊತ್ತಾಗುವದಿಲ್ಲ. ಯಾಕಂದರೆ ಬಹಳ ಸೂಕ್ಷ್ಮವಾಗಿರುತ್ತವೆಯಾದ್ದರಿಂದ ಪ್ರತ್ಯಕ್ಷವಾಗಿ ಕಾಣುವದಿಲ್ಲ. ಹೀಗೆ ಸೂಕ್ಷ್ಮವಿದ್ದು ಗೋಚರವಲ್ಲದವುಗಳು ಕಾಲ ಕ್ರಮೇಣ ಬೆಳೆದು ಕಣ್ಣಿಗೆ ಕಾಣುವಂತಾಗುತ್ತವೆ. ಇದರಂತೆ ಕಳಲೆಯೂ ಸಹ ಬೆಳೆ ಯುತ್ತಾ ಪೂರ್ಣ ಗೋಚರವಾಗುತ್ತದೆ.

ಇವುಗಳಂತೆ ಗರ್ಭವೂ ಕೂಡಾ ಹೀಚಿನ(ಸೂಕ್ಷ್ಮ)ಸ್ಥಿತಿಯಲ್ಲಿರುವಾಗ, ಅಂಗಪ್ರತ್ಯಂಗಗಳಿರುತ್ತವೆಯಾದರೂ, ಸೂಕ್ಷ್ಮವಿರುವದರಿಂದ ಗೋಚರಿಸು

ವದಿಲ್ಲ. ಕಾಲ ಕ್ರಮೇಣ ಬೆಳೆಯಿತೆಂದರೆ ಮಾವಿನ ಫಲದಂತೆ ಪೂರ್ಣ ಗೋಚರವಾಗುತ್ತದೆ. ಹೀಗೆಂದು "ಧನ್ವಂತರಿ" ಮತವು ಸಿದ್ಧಾಂತವಾದ ದ್ದಿರುತ್ತದೆ.

ಗರ್ಭೋತ್ಪತ್ತಿಯ ವಿಷಯದಲ್ಲಿ ಸುಶ್ರುತ ಸಂಹಿತೆಯಲ್ಲಿ ಶೌನಕಾದಿ ೬ ಮತಗಳನ್ನು ಹೇಳಿರುತ್ತದೆ. ಕಡೆಗೆ ಧನ್ವಂತರಿಯ ಮತದಂತೆ ನಿರ್ಣಯ ವಾಗುತ್ತದೆ. ಚರಕ ಸಂಹಿತೆಯಲ್ಲಿಯೂ ಕೂಡಾ, ಧನ್ವಂತರಿಮತವೇ ಸಿದ್ಧಾಂತವೆಂದು ಗ್ರಹಿಸಿದ್ದಾರೆ. ಚರಕದಲ್ಲಿ ಬೇರೆ ಬೇರೆ ಆಚಾರ್ಯರು ಶಿರಃ ಪ್ರಭೃತಿ ಅಂಗಗಳನ್ನು ಉದಹರಿಸಿ ಹೇಳಿದ್ದಾರೆ. ಅದನ್ನು ಕ್ರಮಶಃ ಆವಾವ ಅಂಗಪ್ರಧಾನವೆಂದು ಹಿಂದೆ ಹೇಳಿದವರ ಸಂಖ್ಯೆಯನ್ನು ಕೊಟ್ಟು ಹೇಳುತ್ತೇನೆ.

**ಸೂಚನೆ:—**

॥೧॥ ಇಲ್ಲಿ ಶೌನಕರ ಮತವು 'ಶಿರಃ ಪ್ರಧಾನವೆಂದಿದೆ' ಚರಕದಲ್ಲಿ ಇದೆ ಮತವನ್ನು ಹೇಳಿದವರ ಹೆಸರನ್ನು (೧) ಇಲ್ಲಿ ಹೇಳಿದ ಅಂಕೆಯನ್ನೇ ಇಟ್ಟು ಹೇಳುತ್ತೇನೆ. ಇದರಂತೆ ಮುಂದಿನದನ್ನೂ ತಿಳಿಯಬೇಕು. (ಚರಕ॥ ಶಾರೀರ॥ ಅ ೬ ಸೂ ೨೧)

**(೧) ಕುಮಾರಶಿರಾಃ ಭರದ್ವಾಜಃ॥ ॥೨॥ ಕಾಂಕಾಯನೊಬಾಹ್ಲೀಕಭಿಷಕ್ ॥೩॥ ಭದ್ರಕಾಪ್ಯಃ ॥೪॥ ಬಡಿಶಃ ಇವು ಹಿಂದೆ ಹೇಳಿ** ದಂತೆಯೇ ಇವೆ.

ಮಲಾಶಯ, ಗುದಗಳು ಮೊದಲೆಂದು "**ಭದ್ರಶೌನಕ**" ॥೫॥
ಇಂದ್ರಿಯಗಳು ಮೊದಲೆಂದು ವಿದೇಹ ಅರಸ "**ಜನಕನು**" ॥೬॥

ಪರೋಕ್ಷವಾದ್ದರಿಂದ ಅಚಿಂತ್ಯವಾದವು, ಯಾವದುಮೊದಲೆಂದು ಹೇಳಲು ಬರುವಂತಿಲ್ಲವೆಂದು "**ಮಾರೀಚಿಃ ಕಶ್ಯಪಃ**" ॥೭॥
ಧನ್ವಂತರಿಯ ಮತವು ಹಿಂದೆ ಹೇಳಿದಂತೆ ಯೋಗ್ಯವೆಂದು ಸಿದ್ಧಾಂತವಾಗಿರುತ್ತದೆ ಒಟ್ಟು ಗರ್ಭ ವಿಷಯದಲ್ಲಿ ಶೌನಕಾದಿ ಹದಿಮೂರು ಜನರ ಭಿನ್ನವಾದ ಎಂಟು ಅಭಿಪ್ರಾಯಗಳಿರುತ್ತವೆ. ಇವುಗಳಲ್ಲಿ ಧನ್ವಂತರಿ ಮತವು, ಯೋಗ್ಯವೆಂದುಸೋದಾಹರಣಪೂರ್ವಕ ನಿರ್ಣಯಿಸಿ ಸಿದ್ಧಾಂತವಾಗಿದೆ.

# ಗರ್ಭಿಣೀ ಲಕ್ಷಣಗಳು

**ತತ್ರಸದ್ಯೋಗೃಹೀತಗರ್ಭಾಯಾ ಲಿಂಗಾನಿ, ಶ್ರಮೋಗ್ಲಾನಿಃ ಪಿಪಾಸಾ ಸಕ್ಥಿಸದನಂ ಶುಕ್ರಶೋಣಿತಯೋರವಬಂಧಃಸ್ಫುರಣಂ ಚಯೋನೇಃ ॥ (ಸುಶ್ರುತ॥ ಶಾರೀರ॥ ಅ ೩ ಸೂ ೧೩)**

**ಸದ್ಯದಲ್ಲಿಯೇ ಗರ್ಭ ಗ್ರಹಿಸಿದವಳ ಲಕ್ಷಣವು:—** ಶ್ರಮವಾಗುವಂಥ ಕೆಲಸ ಮಾಡದೆ ಸ್ವಾಭಾವಿಕವಾಗಿ ಶ್ರಮವಾಗೆ ಇಣ, ಬಾಡಿ ಬಸವಳಿದಂತೆ ಆಗುವಿಕೆ, ನೀರಡಿಕೆ, ತಿಕದಲ್ಲಿ ಮ್ಲಾನತೆಯು, ಶುಕ್ರಶೋಣಿತಗಳ ಅವಬಂಧ, ಶುಕ್ರವನ್ನು ಗ್ರಹಣ ಮಾಡುವ ಕ್ರಿಯೆಯು ಬಂದಾಗುತ್ತದೆ. ಇದರಂತೆ ಶೋಣಿತವನ್ನು ಬಿಡುವದು(ಮಾಸಿಕ ಕ್ರಮ) ಬಂದಾಗುತ್ತದೆ. ಸ್ತ್ರೀಯರಿಗೂ ಶುಕ್ರವಿರುತ್ತದೆಂದು ಶಾಸ್ತ್ರ ಸಿದ್ಧಾಂತವಿರುವದರಿಂದ ಶುಕ್ರ ಮತ್ತು ಆರ್ತವಸ್ರಾವ ಬಂದಾಗುವದೆಂದು ಅಂದರೂ ಅಡ್ಡಿಯಿಲ್ಲ. ಯೋನಿಯು ಸ್ಫುರಣೆಯು (ಆಕುಂಚನ ಪ್ರಸಾರಣ) ಉಂಟಾಗುತ್ತದೆ.

**ಸ್ತನಯೋಃ ಕೃಷ್ಣಮುಖತಾರೋಮರಾಜ್ಯುದ್ಗಮಸ್ತಥಾ ॥**
**ಅಕ್ಷಿಪಕ್ಷ್ಮಾಣಿಚಾಪ್ಯಸ್ಯಾಃ ಸಂಮ್ಮೀಲ್ಯಂತೆವಿಶೇಷತಃ ॥೧೪॥**
**ಅಕಾಮತಃ ಛರ್ದಯತಿಗಂಧಾದುದ್ವಿಜತೆಶುಭಾತ್ ॥**
**ಪ್ರಸೇಕಃ ಸದನಂಚಾಪಿಗರ್ಭಿಣ್ಯಾಲಿಂಗಮುಚ್ಯತೆ ॥**
(ಸುಶ್ರುತ॥ ಶಾರೀರ॥ ಅ ೩ ಶ್ಲೋ ೧೪)

ಸ್ತನದ (ಮೊಲೆಯ) ಮುಖ ಭಾಗಗಳಲ್ಲಿ ಕಪ್ಪು ವರ್ಣವುಂಟಾಗುತ್ತದೆ. ಹೊಕ್ಕಳಿನ ಕೆಳ ಭಾಗದಲ್ಲಿ ಕೂದಲಿನ ಗೆರೆಯಂತೆ ಆಗುತ್ತದೆ. ಕಣ್ಣಿನ ರೆಪ್ಪೆಗಳು ವಿಶೇಷವಾಗಿ ಮುಚ್ಚುತ್ತಿರುತ್ತವೆ. ಕಾರಣವಿಲ್ಲದ ವಾಂತಿಯು, ಸುವಾಸನೆಯನ್ನು ಮೂಸಿದರೂ ಕೆಡಕನಿಸಿ ಅಸಹ್ಯವಾಗುವದು. ಬಾಯಲ್ಲಿ ನೀರೂರಿ ಬರುವದು, ಬಾಡಿ ಬಸವಳಿಯುವದು ಮತ್ತೂ ಸೊರಗುವದು ಗರ್ಭ ಧರಿಸಿದ ಸ್ತ್ರೀಯರಿಗೆ ಇವೆಲ್ಲ ಲಕ್ಷಣಗಳುಂಟಾಗುತ್ತವೆ.

**ಯೋಷಿತೋಽಪಿಸ್ರವತ್ಯೇವಶುಕ್ರಂ ಪುಂಸಾಂಸಮಾಗಮೆ ॥**
**ತನ್ನಗರ್ಭಸ್ಯಕಿಂಚಿತ್ತುಕರೋತೀತಿನಚಿಂತ್ಯತೆ ॥**
**(ವೃದ್ಧವಾಗ್ಭಟ॥ ಅ, ಸಂ, ಶಾ, ಅ ೧)**

ಪುರುಷ ಸಮಾಗದಿಂದ ಸ್ತ್ರೀಯ ಶುಕ್ರವೂ ಕೂಡಾ ಸ್ರವಿಸುತ್ತದೆ ಅದು ಗರ್ಭವನ್ನುಂಟು ಮಾಡುವದಿಲ್ಲವೋ, ಮಾಡುತ್ತದೆಯೋ, ಎನ್ನುವದು ಸಂಶಯಾಸ್ಪದ ವಿಷಯವು. ಆಗು ನಿರ್ಧಾರವಾಗಿ ಹೇಳಲು ಸಾಧ್ಯವಿಲ್ಲವೆಂದು ವಾಗ್ಭಟ ಮತವು. ಇದರ ವಿಷಯ (ಸ್ತ್ರೀ ಶುಕ್ರ ವಿಷಯು) ದಲ್ಲಿ ನಿಶ್ಚಿತ ಹೇಳಲು ಸಾಧ್ಯವಿಲ್ಲವೆಂದು ಅಭಿಪ್ರಾಯವು.

# (೯) ಪ್ರಥಮಾದಿ ತಿಂಗಳಲ್ಲಿಯ ಗರ್ಭ ಶರೀರ ವಿಜ್ಞಾನ

**ಪ್ರಥಮಾದಿಮಾಸಭೇದೇನ ಗರ್ಭ ಶರೀರ ವಿಜ್ಞಾನಂ ॥**
**ತತ್ರಪ್ರಥಮೇಮಾಸಿಕಲಲಂ ಜಾಯತೆ, ದ್ವಿತೀಯೇಶೀತೋ ಷ್ಮಾನಿಲೈರಭಿಪಚ್ಯಮಾನಾನಾಂ ಮಹಾಭೂತಾನಾಂ ಸಂಘಾ ತೋಘನಃ ಸಂಜಾಯತೆ, ಯದಿಪಿಂಡಃ ಪುಮಾನ್, ಸ್ತ್ರೀಚೇತ್ ಪೇಶೀ ನಪುಂಸಕಂಚೇದರ್ಬುದಮಿತಿ, ತೃತೀಯೇ ಹಸ್ತಪಾದ ಶಿರಸಾಂಪಂಚಪಿಂಡಿಕಾನಿರ್ವರ್ತಂತೆ ಅಂಗಪ್ರತ್ಯಂಗವಿಭಾಗಶ್ಚಸೂ ಕ್ಷ್ಮೋಭವತಿ, ಚತುರ್ಥೇಸರ್ವಾಂಗಪ್ರತ್ಯಂಗವಿಭಾಗಃ ಪ್ರವ್ಯ ಕ್ತೋಭವತಿ,ಗರ್ಭಹೃದಯಪ್ರವ್ಯಕ್ತಿಭಾವಾತ್ ಚೇತನಾಧಾತು ರಭಿವ್ಯಕ್ತೋಭವತಿ, ಕಸ್ಮಾತ್? ತತ್ಸ್ಥಾನತ್ವಾತ್। ತಸ್ಮಾ ದ್ಗರ್ಭಃಚತುರ್ಥೇಮಾಸಿ ಅಭಿಪ್ರಾಯಮಿಂದ್ರಿಯಾರ್ಥೇಷುಕ ರೋತಿ, ॥ (ಸುಶ್ರುತ॥ ಶಾರೀರ ಅ ೩ ಸೂ ೧೮)**

(೧) ಪ್ರಥಮ ತಿಂಗಳಿನಲ್ಲ ಶುಕ್ರ ಆರ್ತವಗಳ ಗುಂಪು ಹೆಪ್ಪುಗಟ್ಟಿದ ಮೊಸರಿನಂತೆ ಆಗುತ್ತದೆ. ಅದಕ್ಕೆ "ಕಲಲ" ವೆಂಬ ಹೆಸರು.

(೨) ಎರಡನೇ ತಿಂಗಳಿನಲ್ಲಿ ಶೀತ, ಗರ್ಭಾಶಯದಉಷ್ಣತೆ, ವಾಯು, ಇವುಗಳಿಂದ ಪಾಕವಾಗುತ್ತಿರಲು ಗರ್ಭದಲ್ಲಿಯ ಪಂಚಮಹಾಭೂತಗಳ ಮೆತ್ತಗಿರುವ (ಮೃದುವಾದ) ಗುಂಪು, ಘಟ್ಟಿಯಾದದ್ದಾಗುತ್ತದೆ. ಗಂಡು ಗರ್ಭವಿದ್ದರೆ ಪಿಂಡದಂತೆ (ಕಣಕದ ಮುದ್ದೆ) ಆಗುತ್ತದೆ. ಸ್ತ್ರೀ ಗರ್ಭ ವಿದ್ದರೆ ಚೀಲದ ಆಕೃತಿ (ಪೇಶೀ) ಯುಳ್ಳದ್ದಾಗುತ್ತದೆ. ನಪುಂಸಕವಿದ್ದರೆ ಬುರುಗಿನ ಗುಳ್ಳೆ (ಅರ್ಬುದ) ಯಂತೆ ಆಗುತ್ತದೆ. ದುಂಡಗಿರುವ (ವರ್ತುಲ) ಫಲದ ಅರ್ಧ ಭಾಗದಂತಿರುವದು.

## ಭೋಜದರ್ಶನದಲ್ಲಿಯ ಮತವು

**ಚತುರಸ್ರಾಭವೇತ್ ಪೇಶೀ, ವೃತ್ತಃ ಪಿಂಡೋಘನಃ ಸ್ಮೃತಃ ॥**
**ಶಾಲ್ಮಲೀಮುಕುಲಾಕಾರಂ ಅರ್ಬುದಂಪರಿಚಕ್ಷತೆ ॥**
**(ಸುಶ್ರುತ ಟೀಕಾ)**

ಚೌಕಾಗಿ (ಚತುರಸ್ರವಾಗಿ) ಇರುವದು ಪೇಶಿಯು, ವರ್ತುಲಾಕಾರ ವಾಗಿಯೂ (ದುಂಡಗೆ) ಘಟ್ಟಿಯಾಗಿಯೂ ಇರುವದು ಪಿಂಡವೆಂದು ಹೇಳಲ್ಪ ಟ್ಟಿದೆ. ಬೂರುಗದ (ಶಾಲ್ಮಲೀ) ಮಗ್ಗೆಯಂತೆ ಇರುವದು "ಅರ್ಬುದ"ವೆಂದು ಹೇಳುತ್ತಾರೆ.

(೩) ಮೂರನೇ ತಿಂಗಳಲ್ಲಿ ಕೈಕಾಲು ತಲೆ ಇವುಗಳ ಐದು ಪಿಂಡಿಕೆ ಗಳು ಗರ್ಭಕ್ಕೆ, ಉಂಟಾಗುತ್ತವೆ. ಅಂಗಪ್ರತ್ಯಂಗ ವಿಭಾಗಗಳು ಸೂಕ್ಷ್ಮ ವಾಗಿ ಉತ್ಪನ್ನವಾಗುತ್ತವೆ.

(೪) ನಾಲ್ಕನೇ ತಿಂಗಳಿನಲ್ಲಿ ಎಲ್ಲಾ ಅಂಗಪ್ರತ್ಯಂಗ ವಿಭಾಗಗಳು ಸ್ಥೂಲವಾಗಿ (ಪ್ರವ್ಯಕ್ತ) ದೃಷ್ಟಿಗೋಚರವಾಗುವಂತೆ ಇರುತ್ತವೆ ಈ ತಿಂಗ ಳದಲ್ಲಿ ಗರ್ಭದ ಹೃದಯವು ಉತ್ಪನ್ನವಾಗುತ್ತದೆ ಗರ್ಭಕ್ಕೆ ಹೃದಯ ವುಂಟಾಗಿರುವದರಿಂದ ಚೇತನಾಧಾತುವು ಕೂಡಾ ವ್ಯಕ್ತವಾಗುತ್ತದೆ. ಯಾಕಂದರೆ ಚೇತನಾಧಾತುವಿಗೆ ಹೃದಯವೇ ಸ್ಥಾನವಾಗಿರುವದು. ಆದ್ದ ರಿಂದ ನಾಲ್ಕನೇ ತಿಂಗಳಿನಲ್ಲಿ ಗರ್ಭವು ಇಂದ್ರಿಯುಗಳಿಗೆ ಬೇಕಾದ ನಾನಾ ತರದ ವಿಷಯುಗಳಲ್ಲಿ ಇಚ್ಛೆಯನ್ನು ಮಾಡುತ್ತದೆ. ಆದ್ದರಿಂದ ಎರಡು (ತನ್ನ ಮತ್ತು ಗರ್ಭದ) ಹೃದಯವುಳ್ಳವಳು ದೌಹೃದಿನೀ ಎಂದು ಹೇಳುತ್ತಾರೆ.

**ಪಂಚಮೇಮನಃ ಪ್ರತಿಬುದ್ಧತರಂಭವತಿ, ಷಷ್ಠೆಬುದ್ಧಿಃ, ಸಪ್ತಮೆಸರ್ವಾಂಗಪ್ರತ್ಯಂಗವಿಭಾಗಃ ಪ್ರವ್ಯಕ್ತತರಃ, ಅಷ್ಟಮ್ಯೇಸ್ಥಿರೀಭವತ್ಯೋಜಃ, ತತ್ರಜಾತಶ್ಚೇತ್ ನಜೀವೇತ್‌ನಿರೋಜಸ್ತ್ವಾತ್, ನೈರುತಭಾಗತ್ವಾಚ್ಚ, ತತೋಬಲಿಂ ಮಾಂಸೌದನಮಸ್ಮೈದಾಪಯೇತ್, ನವಮ, ದಶಮ್ಯೇಕಾದಶ, ದ್ವಾದಶಾನಾಮನ್ಯತಮಸ್ಮಿನ್‌ಜಾಯತೆ, ಅತೋನ್ಯಥಾವಿಕಾರೀಭವತಿ॥**

(ಸುಶ್ರುತ॥ ಶಾರೀರ॥ ಅ ೩ ಸೂ ೩೦)

(೫) ಐದನೇ ತಿಂಗಳಿನಲ್ಲಿ ಮನಸ್ಸು ಪೂರ್ಣತೆಗೆ ಬಂದು ಸುಖ ದುಃಖಗಳನ್ನು ಚನ್ನಾಗಿಗ್ರಹಿಸುವಷ್ಟುಪ್ರಬುದ್ಧವಾಗುತ್ತದೆ.

ಚರಕ ಮತವು:— ಈ ತಿಂಗಳಲ್ಲಿ ಎಲ್ಲಾ ತಿಂಗಳಕ್ಕಿಂತಲೂ ಹೆಚ್ಚಾಗಿ ಗರ್ಭಕ್ಕೆ ರಕ್ತ ಮತ್ತು ಮಾಂಸಗಳ ಬೆಳೆಯುವಿಕೆಯು ಆಗುತ್ತದೆ. ಆದ್ದರಿಂದ ಆಗ ಗರ್ಭಿಣಿಯು ವಿಶೇಷವಾಗಿ ಕೃಶಳಾಗುತ್ತಾಳೆ.

(೬) ಆರನೇ ತಿಂಗಳಿನಲ್ಲಿ ಬುದ್ಧಿಯು ಉತ್ಪನ್ನವಾಗುತ್ತದೆ.

ಚರಕ ಮತವು:- ಈ ತಿಂಗಳಿನಲ್ಲಿ ಗರ್ಭಕ್ಕೆ ಬಲವರ್ಣಗಳು ಧಾತುಗಳು ಪುಷ್ಟಿಯೂ ಆಗುತ್ತದೆ. ಆದ್ದರಿಂದ ಆಗ ಗರ್ಭಿಣಿಯು ವಿಶೇಷವಾಗಿ ಬಲ (ಶಕ್ತಿ) ವರ್ಣ (ಸಪ್ತಧಾತುಗಳ ಕಾಂತಿ) ಗಳು ಕಡಿಮೆಯಾಗಿ ದುರ್ಬಲಳು ಆಗುತ್ತಾಳೆ.

(೭) ಏಳನೇ ತಿಂಗಳಲ್ಲಿ ಗರ್ಭದ ಸರ್ವಾಂಗ ಪ್ರತ್ಯಂಗಗಳು ಎಲ್ಲ ವಿಧವಾದ ಶರೀರದ ಪೂರ್ಣತೆಯು ಆಗುತ್ತದೆ. ಇದರಿಂದ ಪ್ರಾಣವೂ ಸಹ ಪ್ರಬುದ್ಧವಾಗುತ್ತದೆಂದು ಹೇಳುವ ಕಾರಣವಿಲ್ಲ "ಪ್ರವ್ಯಕ್ತತರಃ" ಎಂದು ಹೇಳಿದ್ದರಿಂದ ಜೀವವೂ ಪೂರ್ಣ ಸ್ಥಿತಿಗೆ ಬಂದಿರುತ್ತದೆಂದು ಹೇಳಿದಂತಾಯಿತು

**ಚರಕ ಮತ:—** ಈ ತಿಂಗಳಲ್ಲಿ ಗರ್ಭವು ಎಲ್ಲಾ ರೀತಿಯಿಂದಲೂ ಅಭಿವೃದ್ಧಿ ಹೊಂದಿ ಪೂರ್ಣವಾಗಿರುತ್ತದೆ. ಆದ್ದರಿಂದ ಆಗ ಗರ್ಭಿಣಿಯು ಸರ್ವ ವಿಧದಿಂದಲೂ ದುರ್ಬಲಳಾಗಿ ಬಾಡಿದವಳಾಗುತ್ತಾಳೆ.

(೮) ಎಂಟನೇ ತಿಂಗಳಿನಲ್ಲಿ ಗರ್ಭದ ಓಜಸ್ಸು ಅಸ್ಥಿರವಾಗುತ್ತದೆ. ಆದ್ದರಿಂದ ಆಗ ಜನನವಾದರೆ ಬದುಕುವದಿಲ್ಲ. ಯಾಕಂದರೆ ಓಜಸ್ಸಿಲ್ಲದ್ದರಿಂಲೂ ನಿರ್‍ರುತಿ ಭಾಗ (ರಾಕ್ಷಸರ ಅಂಶ) ವಿರುವದರಿಂದಲೂ ಹೀಗಾಗುತ್ತದೆ.

**ಕುಮಾರ ತಂತ್ರ:**— ರುದ್ರನು ರಾಕ್ಷಸರಿಗೆ, ಗರ್ಭದಲ್ಲಿ ಮಾಸ ಪ್ರಕಾರ ವಿಭಾಗಿಸಿ ೮ನೇ ಮಾಸದಲ್ಲಿ ಭಾಗವನ್ನು ಕೊಟ್ಟಿದ್ದಾನೆ.

**ಚರಕಮತವು:**— ಎಂಟನೇತಿಂಗಳಿನಲ್ಲಿ ಓಜಸ್ಸು ಗರ್ಭದಿಂದಓಜಸ್ಸು ತಾಯಿಗೂ, ತಾಯಿಯಿಂದ ಗರ್ಭಕ್ಕೂ ಸಂಚರಿಸುತ್ತಿರುತ್ತದೆ. ಗರ್ಭದಲ್ಲಿ ತ್ಪನ್ನವಾಗುವ ವರೆಗೂ ತಾಯಿಯ ಓಜಸ್ಸೇ ಗರ್ಭದ ಬೆಳವಣಿಗೆಯನ್ನು ಮಾಡುತ್ತದೆ. ಗರ್ಭಕ್ಕೆ ಓಜಸ್ಸುಂಟಾಗಿ ಪೂರ್ಣವಾದ ಮೇಲೆ ತಾಯಿಯ ಓಜಸ್ಸುಗರ್ಭದಲ್ಲಿಯೂ,ಗರ್ಭದಓಜಸ್ಸು ತಾಯಿಯಲ್ಲಿಯೂ,ಸಂಚರಿಸುತ್ತಿರುತ್ತದೆ. ಹೀಗೆ ಪುನಃಪುನಃ ತಾಯಿಯಿಂದ ಗರ್ಭಕ್ಕೂ ಗರ್ಭದಿಂವ ತಾಯಿಗೂ ಓಜಃ ಸಂಚಾರವಿರುವದರಿಂದ, ಗರ್ಭಿಣಿಯು ಒಮ್ಮೆ ಸಂತೋಷಿತಳೂ ಮತ್ತೊಂದು ಕ್ಷಣಕ್ಕೆ ಬಾಡಿದವಳೂ ಅಶಕ್ತಳೂ ಆಗುತ್ತಾಳೆ. ಇದರಂತೆ ಗರ್ಭವೂ ಸಹ ಆಗುತ್ತದೆ. ತಾಯಿಯ ಕಡೆಗೆ ಗರ್ಭದ ಓಜಸ್ಸು ಹೋದಾಗ ಜನನವಾದರೆ ತಾಯಿಗೇನು ಬಾಧೆಯಿಲ್ಲ: ಎಂಟರಲ್ಲಿ ಹುಟ್ಟಿದ ಗರ್ಭವು ಬಹುಶಃ ಬದುಕಲಾರದು. ತಾಯಿಯ ಓಜಸ್ಸು ಗರ್ಭದಲ್ಲಿದ್ದಾಗ ಜನನವಾದರೆ ತಾಯಿಗೆ ಬಾಧೆಯುಂಟು. (ಕಷ್ಟ) ಹೀಗೆಂದು ಅನ್ನುತ್ತಾರೆ. ಆದ್ದರಿಂದ ಎಂಟನೆ ತಿಂಗಳನ್ನು ಕುಶಲತೆಯಿಂದ ಲಕ್ಷ್ಯಗೊಟ್ಟು ಎಣಿಸಿ ತೀಕೊಳ್ಳಬೇಕು. ಗರ್ಭಿಣಿ ಗೆಮಾತ್ರ ನಿಶ್ಚಿತ ಎಂಟನೇ ತಿಂಗಳು ಇದು ಎನ್ನುವದನ್ನು ಹೇಳಬಾರದು. ಯಾಕಂದರೆ ಎಂಟನೇ ತಿಂಗಳನ್ನು ತಿಳಿಸಿದರೆ ಕಠಿಣದಿವಸವೆಂದು ಭಾವಿಸಿ ಗರ್ಭಿಣಿಯು ಚಿಂತೆಯಿಂದ ತನಗೂ ಗರ್ಭಕ್ಕೂ ಬಾಧೆಯನ್ನುಂಟುಮಾಡಿಕೊಳ್ಳಬಹುದು. ಆದ್ದರಿಂದ ಹೇಳಬಾರದೆಂದು ನಿಯಮವಿದೆ. ಈ ತಿಂಗಳಿನಲ್ಲಿ ಅನ್ನ ಮಾಂಸಗಳ ಬಲಿಯನ್ನು ಮಾಡಿ, ಗರ್ಭರಕ್ಷಣೆಯ ಸಲುವಾಗಿ, ನಿರ್‍ರುತಿಗೆ ಕೊಡಬೇಕೆಂದು ಸುಶ್ರುತರ ಮತವು.

(೯) ಒಂಭತ್ತನೇ ತಿಂಗಳು ಗರ್ಭಕ್ಕೆ ಪ್ರಸವ ಕಾಲವು. ತಂದೆ ತಾಯಿಗಳಿರುತ್ತಿರುವ, ಸಕಲ ಚರಾಚರ ಜೀವಿಗಳಿಗಾಧಾರವಾದ, ವಿಶ್ವ ನಿರ್ಮಾಣಕನ ಅಚಿಂತ್ಯ ಕೌಶಲ್ಯ ನಿದರ್ಶನವಾದ, ಜಗತ್ತಿನ (ಸ್ಥೂಲರೂಪ) ಸಂಸರ್ಗವನ್ನು ಗರ್ಭವು ಹೊಂದುವ ಸಮಯವು. ಒಂಭತ್ತು, ಹತ್ತು, ಹನ್ನೊಂದು, ಹನ್ನೆರಡು ತಿಂಗಳಲ್ಲಿಯೂ, ಯಾವದಾದರೊಂದು ತಿಂಗಳಿನಲ್ಲಿ ಯಾದರೂ, ಗರ್ಭಬೆಳವಣಿಗೆಗೆ ಅನುಗುಣವಾಗಿ ಪ್ರಸವವಾಗಬಹುದು. ಹನ್ನೆರಡು ತಿಂಗಳಿನ ನಂತರವಾದರೆ ಗರ್ಭದಲ್ಲಿಯ ವಿಕಾರವೆಂದು ತಿಳಿಯಬೇಕು.

**ಚರಕ ಮತವು:—** ಎಂಟನೇ ತಿಂಗಳಿನ ನಂತರ ಒಂದು ದಿನ ಕಳೆದರೂ ಪ್ರಸವ ದಿವಸ ಆರಂಭವಾಯಿತೆಂದು ತಿಳಿಯಬೇಕು. ಹತ್ತನೇ ತಿಂಗಳ ಮುಗಿಯುವ ವರೆಗೂ ಪ್ರಸವ ದಿನಗಳು. ಅನಂತರ ಗರ್ಭ ವಿಕೃತಿಯೆಂದು ಹೇಳುತ್ತಾರೆ. ಹನ್ನೊಂದು, ಹನ್ನೆರಡು ತಿಂಗಳಲ್ಲಿ ಪ್ರಸವವು ಸ್ವಲ್ಪ ದೋಷ ಕಾರಣವಿರುವದರಿಂದ ದೋಷ ಪಕ್ಷವೆಂದೆಣಿಸಿ, ಹನ್ನೆರಡು ತಿಂಗಳಿನ ನಂತರ ಹೊಟ್ಟೆಯಲ್ಲಿ (ಗರ್ಭಾಶಯದಲ್ಲಿ) ಗರ್ಭವಿರುವದು ವಿಕೃತಿಯೆಂದು ನಿರ್ಣಯಿಸಿದ್ದಾರೆ.

# ೧೦. ಅಪರಾ ಉತ್ಪತ್ತಿ ಸ್ವರೂಪ

**ಅಪರಾನಿರ್ಮಾಣಂ ಸ್ವರೂಪಂಚ ॥**

**ವ್ಯಪಗತ ಪಿಪಾಸಾಬುಭುಕ್ಷಸ್ತು ಖಲುಗರ್ಭಃ ಪರತಂತ್ರವೃತ್ತಿ ರ್ಮಾತರಮಾಶ್ರಿತ್ಯ ವರ್ತಯತಿ ಉಪಸ್ನೇಹೋಪಸ್ವೇದಾಭ್ಯಾಂಗರ್ಭಾಶಯೆ ಸದಸದ್ಭೂತಾಂಗಾವಯವಃ॥ ತದನಂತರಂ ಹ್ಯಸ್ಯಕಶ್ಚಿತ್‌ಲೋಮ ಕೂಪಾಯನೈರುಪಸ್ನೇಹಃ ಕಶ್ಚಿತ್ ನಾಭಿನಾಡ್ಯಯನೈಃ॥ ನಾಭ್ಯಾಂಹ್ಯಸ್ಯ ನಾಡೀಪ್ರಸಕ್ತಾ ನಾಡ್ಯಾಂ ಚಾಪರಾ ಅಪರಾಚಾಸ್ಯಮಾತುಃ ಪ್ರಸಕ್ತಾ ಹೃದಯೆ ಮಾತೃ ಹೃದಯಂತಾಂಅಪರಾಂ ಅಭಿ ಸಂಪ್ಲವತೆ ಸಿರಾಭಿಃ ಸತಸ್ಯ ರಸೊ ಬಲವರ್ಣಕರಃ ಸಂಪದ್ಯತೆ ಸಚಸರ್ವರಸವಾನಾಹಾರಃ॥**

ಗರ್ಭಾಶಯದಲ್ಲಿ ಗರ್ಭವು ಪರತಂತ್ರವೃತ್ತಿಯುಳ್ಳದ್ದು. ಯಾಕಂದರೆ ತಾಯಿಯನ್ನು ಆಶ್ರಯಿಸಿಯೇ ಅದು ಬದುಕಬೇಕಾಗುತ್ತದೆ. ಹೀಗೆ ಪರಾಧೀನವಾದ ಗರ್ಭವು ಅಂಗಾವಯವ ಉತ್ಪನ್ನವಾಗದಿರುವ ಸಮಯದಲ್ಲಿ ಮತ್ತೂ ಅಂಗಾವಯವ ಉತ್ಪನ್ನವಾದ ಮೇಲೆ ಯಾವ ಪ್ರಕಾರ ಅಭಿವೃದ್ಧಿಯನ್ನೂ, ಬಲವರ್ಣ ರಕ್ಷಣೆಯನ್ನೂ ಹೇಗೆ ಯಾವ ರೀತಿಯಿಂದ ಹೊಂದುತ್ತದೆಂಬುವದನ್ನು ಹೇಳುತ್ತಾರೆ. ಗರ್ಭವು ಅಂಗಾವಯವ ಉತ್ಪನ್ನವಾಗದಿರುವಾಗ ಗರ್ಭಾಶಯಕ್ಕಂಟಿಕೊಂಡು ಆ ಗರ್ಭಾಶಯದಲ್ಲಿಯ ರಸ ಮೊದಲಾದ ಜೀವನ ದ್ರವ್ಯಗಳನ್ನು ಸೂಕ್ಷ್ಮ ಲೋಮ (ರೋಮ) ಛಿದ್ರದಂತಿರುವ ಗರ್ಭ ರಂಧ್ರಗಳಿಂದ ರಸ ಸತ್ವವನ್ನು ಗ್ರಹಿಸುತ್ತದೆ. ಗರ್ಭಾಶಯಕ್ಕೆ ಅಂಟಿಕೊಂಡ ತಾಯಿಯ, ರಸವಾಹಿನೀ ಸಿರಗಳಿಂದ ಗರ್ಭಾಶಯಕ್ಕೆ ಬಂದ, ರಸದ ಉಪಸ್ನೇಹವನ್ನು( ತನಸು ) ಹೀರಿಕೊಂಡು ವೃದ್ಧಿಯಾಗುತ್ತದೆ. ಗರ್ಭಕ್ಕೆ ಅಂಗಾವಯವಗಳು ಉತ್ಪನ್ನವಾದ ಮೇಲೆ, ನಾಭಿನಾಲ (ಹೊಕ್ಕಳ ಹುರಿ) ಉಂಟಾಗುತ್ತದೆ. ನಾಭಿನಾಲದಲ್ಲಿ, ಅಪರಾ (ಗರ್ಭಪೋಷಕ ರಸವನ್ನು ಗ್ರಹಿಸುವ ಪರದೆ) ಅಂಟಿಕೊಳ್ಳುವದು. ಅಪರಾ ತಾಯಿಯ ಹೃದಯಕ್ಕೆ ಅಂಟಿಕೊಂಡಿರುವದು. ತಾಯಿಯ ಹೃದಯವು ರಸವಾಹಿನೀ ಸಿರಗಳಿಂದ ಅಪರಾವನ್ನು ಪೋಷಿಸುತ್ತದೆ. ಅಪರಾಕ್ಕೆ ರಸವಾಹಿನೀ, ಸಿರಗಳು ರಸವನ್ನು ಕೊಟ್ಟು (ತುಂಬಿಸಿ) ಪೋಷಿಸುತ್ತವೆಂಬರ್ಥವು. ಹೀಗೆ ರಸಾದಿಗಳನ್ನು ಸಂಗ್ರಹಿಸಿದ ಅಪರಾದಲ್ಲಿಯ ರಸ ಸತ್ವಗಳನ್ನು ನಾಭಿನಾಲ ಮಾರ್ಗಗಳಿಂದ ಗರ್ಭವು ಹೀರಿಕೊಂಡು, ಬೆಳೆಯುತ್ತದೆ. ಆಹಾರ ರಸ ಹೀರಿಕೊಳ್ಳುವ ನಾಭಿನಾಲಾದಿ ಸಾಧನಗಳುತ್ಪನ್ನವಾಗಿರುವದರಿಂದಲೂ, ಅಂಗೋಪಾಂಗ ಸ್ಥಿತಿಯುಳ್ಳ ಗರ್ಭವು ದೊಡ್ಡದಾಗಿರುವದರಿಂದ ಹೆಚ್ಚಿಗೆ ಪೋಷಣೆ ಬೇಕಾಗುತ್ತದೆ. ಸಾಧನಗಳಿರುವದರಿಂದ ರಸಾದಿ ಸಂಗ್ರಹಗಳಿಂದ ಗರ್ಭವು ಅಭಿವೃದ್ಧಿ ಹೊಂದಿ, ಬಲವರ್ಣ, ಯುಕ್ತವಾಗುವದು. ಗರ್ಭ ಪೋಷಣೆಗೆ ಎಲ್ಲ ರಸಯುಕ್ತ ಆಹಾರವೆಂದರೆ, ಗರ್ಭಾಭಿವೃದ್ಧಿ ಮಾಡುವ ಬಲವರ್ಣಕರವಾದ ರಸವು.

**ಅಪರಾ ನಿರ್ಮಾಣ ವಿಷಯದಲ್ಲಿ ಸುಶ್ರುತ ಮತವು**

**ಗೃಹೀತ ಗರ್ಭಾಣಾಮಾರ್ತವವಹಾನಾಂ ಸ್ರೋತಸಾಂ ವ**

**ತ್ರ್ಯಾಣಿ ಅವರುಂಧ್ಯಂತಿ ಗರ್ಭೇಣ ತಸ್ಮಾತ್ ಗೃಹೀತ ಗರ್ಭಾಣಾಮಾರ್ತವಂ ನದೃಶ್ಯತೇ। ತತಃ ತದಧಃ ಪ್ರತಿಹತಮೂರ್ಧ್ವಮಾಗತಮಪರಂ ಚೋಪಚೀಯಮಾನಂ ಅಪರೇತ್ಯಭಿಧೀಯತೇ, ಶೇಷಂಚೋರ್ಧ್ವತರಮಾಗತಂ ಪಯೋಧರಾವಭಿಪ್ರತಿಪದ್ಯತೇ, ತಸ್ಮಾದ್ಗರ್ಭಿಣ್ಯಃ ಪಿನೋನ್ನತಪಯೋಧರಾಭವಂತಿ॥**

(ಸುಶ್ರುತ ॥ ಶಾರೀರ ॥ ಅ ೪ ಸೂ ೨೪)

ಗರ್ಭಿಣಿಯರ ಆರ್ತವ ವಾಹಿನೀ ಸ್ರೋತೋ ಮಾರ್ಗಗಳು ಗರ್ಭದಿಂದ ಅಡ್ಡಿಮಾಡಲ್ಪಡುತ್ತವೆ. ಆದ್ದರಿಂದ ಗರ್ಭ ಧರಿಸಿದವರಿಗೆ ಆರ್ತವದರ್ಶನ (ಮುಟ್ಟು) ಆಗುವದಿಲ್ಲ. ಇದು ಬಹುಶಃ ಮುಖ್ಯ ನಿಯಮ, ಕ್ವಚಿತ್‌ಗರ್ಭಿಣೀ ಸ್ತ್ರೀಯರಿಗೆ ರಜೋದರ್ಶನ (ಮಾಸಿಕ) ವಾಗುವದುಂಟು. ಅನಂತರ ಕೆಳಗೆ ಗರ್ಭದಿಂದ ಅಡ್ಡಿಯಾಗಿರೋಣದರಿಂದ "ಆರ್ತವ"ವು ಮೇಲಕ್ಕೇರಿ ಗರ್ಭಾಶಯಕ್ಕಂಟಿಕೊಂಡು ಅಡ್ಡಿಯಾಗಿ "ಅಪರಾ" ಎಂದು ಹೇಳಿಸಿಕೊಳ್ಳಲ್ಪಡುತ್ತದೆ. ಇನ್ನುಳಿದ ಆರ್ತವವು ಗರ್ಭಾಶಯವನ್ನು ದಾಟಿ ಮೇಲೆ ಹೋಗಿ, ಸ್ತನಕ್ಕೆ ಸೇರುತ್ತದೆ. ಆದ್ದರಿಂದಲೇ ಗರ್ಭಿಣಿಯರ ಸ್ತನಗಳು ದೊಡ್ಡದಾದವುಗಳೂ ಎದ್ದು ನಿಂತಂಥವುಗಳೂ ಇರುತ್ತವೆ.

## ಅಪರಾ ಪರಿಚಯವು

**ಜರಾಯು, ಅಪರಾ, ಅಮರಾ, ಅಮಲಾ ಇತ್ಯಾದಿ ಹೆಸರುಗಳು ಇರುತ್ತವೆ. "ಅಪರಾ" ಅಂದರೆ ಗರ್ಭ ಪರೆದೆಯು, ಜರಾಯುವೆಂಬ ಹೆಸರು. ಇದು ಗರ್ಭಾಶಯದ ಒಳಗಡೆ ಗರ್ಭದ ಸುತ್ತಲೂ ಆವರಿಸಿದ್ದು, ಶಿಶು ಜನನವಾದ ನಂತರ ಹೊರಗೆ ಬರುತ್ತದೆ. ಇದಕ್ಕೆಅಪರಾಪಾತನವೆಂಬ ಹೆಸರು. ಕನ್ನಡದಲ್ಲಿ ಮಾಸ ಬೀಳುವದು, ಎಂದು ಹೇಳುವ ವಾಡಿಕೆಯಿದೆ.**

### ಅಪರಾ ವಿಷಯದಲ್ಲಿ ಭೋಜನ ಮತವು

**ಗರ್ಭೋರುಣದ್ಧಿಸ್ರೋತಾಂಸಿರಸರಕ್ತವಹಾನಿವೈ ॥**
**ರಕ್ತಾಜ್ಜರಾಯುರ್ಭವತಿನಾಡೀಚೈವ ರಸಾತ್ಮಿಕಾ ॥೧॥**

**ಸಾನಾಡೀಗರ್ಭಮಾಪ್ನೋತಿತಯಾಗರ್ಭಸ್ಯವರ್ತನಂ ॥**
**ಯದ್ಯದಶ್ನಾತಿಮಾತ್ಯಾಸ್ಯಭೋಜನಂ ಹಿಚತುರ್ವಿಧಮ್ ॥೨॥**
**ತಸ್ಮಾದನ್ನಾದ್ರಸೀಭೂತಂ ವೀರ್ಯಂತ್ರೇಧಾಪ್ರವರ್ತತೆ ॥**
**ಭಾಗಃ ಶರೀರಂ ಪುಷ್ಣಾತಿ, ಸ್ತನ್ಯಂಭಾಗೇನವರ್ಧತೆ ॥೩॥**
**ಗರ್ಭಃ ಪುಷ್ಯತಿಭಾಗೇನವರ್ಧತೇಚಯಥಾಕ್ರಮಂ ॥**
**ಗರ್ಭಂ ಕುಲ್ಯೇವಕೇದಾರಂ ನಾಡೀಪ್ರೀಣಾತಿತರ್ಪಿತಾ ॥೪॥**
(ಸುಶ್ರುತ ಟೀಕಾ॥ ಶಾರೀರ॥ ಅ ೩ ಸೂ ೩೨)

ಗರ್ಭವು, ರಸ,ರಕ್ತಗಳನ್ನುಒಯ್ಯುವಸ್ರೋತಸ್ಸಗಳನ್ನು ಅಡ್ಡಿಮಾಡುತ್ತದೆ. ರಕ್ತದಿಂದ ಜರಾಯು ( ಅಪರಾ ) ಉಂಟಾಗುತ್ತದೆ. ರಸದಿಂದ ಗರ್ಭಕ್ಕೆ ನಾಡಿಯು (ಹೊಕ್ಕಳ ಹುರಿ) ಉತ್ಪನ್ನವಾಗ.ವದು. ಆ ನಾಡಿಯು ಗರ್ಭವನ್ನು ಪೋಷಿಸುತ್ತದೆ ತಾಯಿಯ ಆಹಾರ ರಸದಿಂದುಂಟಾದ ಸತ್ವವು ಮೂರು ಭಾಗವಾಗಿ ಹಂಚಲ್ಪಡುತ್ತವೆ. ಒಂದುಭಾಗವು ಗರ್ಭಿಣಿಯ ಶರೀರವನ್ನು ಪೋಷಿಸುತ್ತದೆ. ಎರಡನೇ ಭಾಗವು ಸ್ತನಗಳಲ್ಲಿ ಹಾಲನ್ನುಂಟು ಮಾಡುತ್ತದೆ. ಮೂರನೇ ಭಾಗವು ಗರ್ಭವನ್ನು ಬೆಳೆಸುತ್ತದೆ ಗರ್ಭವು ನಾಡಿಯಿಂದ ( ನಾಭಿನಾಲ ) ಆಹಾರ ರಸಸತ್ವವನ್ನು ಹೀರಿ ಬೆಳೆಯುವದು. **ಹ್ಯಾಗಂದರೆ:—** ಹೊಲವು ಕಾಲುವೆಯಿಂದ ನೀರನ್ನು ಗ್ರಹಿಸಿ ಅಭಿವೃದ್ಧಿಯಾಗುವದೋ ಆದರಂತೆ, ಗರ್ಭವೂ, ವೃದ್ಧಿಯಾಗುವದು.

## (೧೧) ಗರ್ಭ ಪೋಷಣ ಕ್ರಮವು

**ಮಾತುಸ್ತು ಖಲುರಸವಹಾಯಾಂ ನಾಡ್ಯಾಂ ಗರ್ಭನಾಭಿನಾಡೀ ಪ್ರತಿಬದ್ಧಾ, ಸ್ಯಾಸ್ಯಮಾತುರಾಹಾರರಸವೀರ್ಯಮಭಿವಹತಿ। ತೇನೋಪಸ್ನೇಹೇನಾಸ್ಯಾಭಿವೃದ್ಧಿರ್ಭವತಿ। ಅಸಂಜಾತಾಂಗಪ್ರತ್ಯಂಗಪ್ರವಿಭಾಗಮಾನಿಷೇಕಾತ್ ಪ್ರಭೃತಿ ಸರ್ವಶರೀರಾವಯವಾನುಸಾರಿಣೀನಾಂ ರಸವಹಾನಾಂ ತಿರ್ಯಗ್ಗತಾನಾಂ ಧಮನೀನಾಮುಪಸ್ನೇಹೋ ಜೀವಯತಿ ॥**

(ಸುಶ್ರುತ॥ ಶಾರೀರ॥ ಅ ೨ ಸೂ ೩೧)

ತಾಯಿಯ ರಸವಾಹಿನೀ ನಾಡಿಯಲ್ಲಿ, ಗರ್ಭದ ನಾಭಿಯ ನಾಡಿಯು ಅಂಟಿಕೊಂಡಿರುತ್ತದೆ. ಅದು (ನಾಡಿಯು) ಗರ್ಭಕ್ಕೆ ತಾಯಿಯ ಆಹಾರ ರಸಸತ್ವವನ್ನು ಒಯ್ದು ಮುಟ್ಟಿಸುತ್ತದೆ. ಈ ರಸ ಸತ್ವದಿಂದ ಗರ್ಭವು ಬೆಳೆಯುತ್ತದೆ. ಅಂಗ ಪ್ರತ್ಯಂಗಗಳುಂಟಾದ ಮೇಲೆ, ಗರ್ಭನಾಭಿನಾಡಿ ಯುಂಟಾಗುವದು. ಆಗ ನಾಡಿಯಿಂದ ಗರ್ಭ ಪೋಷಣೆಯಾಗುತ್ತದೆ. ಆದರೆ ನಾಭಿನಾಡಿ (ಹೊಕ್ಕಳಹುರಿ) ಉತ್ಪನ್ನವಾಗದ ಮೊದಲು ಗರ್ಭದ ಗತಿ ಯೇನು? ಹ್ಯಾಗೆ ಬೆಳೆಯುತ್ತದೆ. ಎನ್ನುವ ವಿಚಾರ ಉಂಟಾಗುವದು.

ಆದ್ದರಿಂದ ಅಂಗಪ್ರತ್ಯಂಗೋತ್ಪತ್ತಿಯ ಮೊದಲಿನ ಪೋಷಣ ಕ್ರಮು ವನ್ನು ಹೇಳುತ್ತಾರೆ:— ಗರ್ಭಾದಾನ ಮೊದಲುಗೊಂಡು, ಅಂಗಾವಯವಗ ಳುತ್ಪನ್ನವಾಗುವ ವರೆಗೆ, ಸರ್ವ ಶರೀರದಲ್ಲಿಪಸರಿಸಿದ ರಸವಾಹಿಗಳಾದ ಗರ್ಭಾಶಯದ ಸುತ್ತಲಿರುವಂಥ ಧಮನಿಗಳ ಉಪಸ್ನೇಹ (ರಸಸತ್ವ) ವು, ಗರ್ಭವನ್ನು ಪೋಷಿಸುತ್ತದೆ.

**ಉದಾ:—** ಕೆರೆ ಸರೋವರಗಳಲ್ಲಿ ನೀರಿರುವದರಿಂವ ಅವುಗಳ ದಂಡೆಯ (ತೀರದ) ಸುತ್ತಲಿರುವ ಗಿಡ ಮರಗಳು ಪ್ರತ್ಯಕ್ಷ ನೀರಿಲ್ಲದಿದ್ದರೂ, ಸರೋವರದ ನೀರಿನ ಸತ್ವದಿಂದ (ತಂಪಿನಿಂದ) ಹೇಗೆ ಪ್ರಫುಲ್ಲಿತವಾಗಿ ಬೆಳ ಯುತ್ತವೆಯೋ ಅದರಂತೆ, ಗರ್ಭಾಶಯದ ಸುತ್ತಲಿರುವ ರಸವಾಹಿನೀ ಧಮ ನಿಗಳ ಸತ್ವದಿಂದ, ಗರ್ಭವು ಬೆಳೆಯುತ್ತದೆಂದು ತಿಳಿಯಬೇಕು.

**ಸೂಚನೆ:—** ಆಹಾರ ರಸದಿಂದ ಯಾವ ಯಾವ ಕ್ರಿಯೆಯುಳ್ಳ, ಗರ್ಭಾಶಯಕ್ಕೆ ಸಂಬದ್ಧ ಅಂಗಗಳಿಂದ, ಹ್ಯಾಗೆ ಗರ್ಭಪೋಷಣೆಯಾಗುವ ದೆಂದು ಅಂತರ್ಗತ ಕ್ರಮುಗಳನ್ನು ಹೇಳಿ, ಆಹಾರ ವಿಹಾರ ವಿಚಾರಾದಿ ಬಹಿರ್ಗತವಾದ ಗರ್ಭಪೋಷಣ ಕ್ರಮುಗಳನ್ನು ಹೇಳುತ್ತಾರೆ:—

## ಗರ್ಭಪೋಷಣೆಗೆ ಯೋಗ್ಯವಾದ ಆಹಾರ ವಿಹಾರ ವಿಧಿಯು

**ಗರ್ಭಿಣೀ ಪ್ರಥಮದಿವಸಾತ್ ಪ್ರಭೃತಿನಿತ್ಯಂ ಪ್ರಹೃಷ್ಟಾಶುಚ್ಯ ಲಂಕೃತಾ ಶುಕ್ಲವಸನಾ ಶಾಂತಿಮಂಗಲದೇವತಾಬ್ರಾಹ್ಮಣ ಗುರುಪರಾ ಚ ಭವೇತ್, ಮಲಿನವಿಕೃತಹೀನ ಗಾತ್ರಾಣಿನ**

ಸ್ಪೃಶೇತ್, ದುರ್ಗಂಧ ದುರ್ದರ್ಶನಾನಿಪರಿಹರೇತ್, ಉದ್ವೇ
ಜನೀಯಾಶ್ಚ ಕಥಾಃ, ಶುಷ್ಕಂ ಪರ್ಯುಷಿತಂ ಕುಥಿತಂ ಕ್ಲಿನ್ನಂ
ಚಾನ್ನಂ ನೋಪಭುಂಜೀತ,ಬಹಿರ್ನಿಷ್ಕ್ರಮಣಂ ಶೂನ್ಯಾಗಾರ
ಚೈತ್ಯಸ್ಮಶಾನ ವೃಕ್ಷಾಶ್ರಯಾನ್ ಕ್ರೋಧಮಯಶಸ್ಕರಾಂಶ್ಚ,
ಭಾವಾನುಚ್ಚೈರ್ಭಾಷ್ಯಾದಿಕಂ ಚ ಪರಿಹರೇದ್ಯಾನಿ ಚ ಗರ್ಭಂ
ವ್ಯಾಪಾದಯಂತಿ, ನಚಾಭೀಕ್ಷ್ಣಂ ತೈಲಾಭ್ಯಂಗೋತ್ಸಾದ
ನಾದೀನಿಸೇವೇತ, ನಚಾಯಾಸಯೇಚ್ಛರೀರಂ, ಪೂರ್ವೋಕ್ತಾ
ನಿಚ ಪರಿಹರೇತ್ ಶಯನಾಸನಂ ಮೃದ್ವಾಸ್ತೀರ್ಣಂ ನಾತ್ಯು
ಚ್ಚ ಮುಪಾಶ್ರಯೋಪೇತಮಸಂಬಾಧಂ ಚ ವಿದಧ್ಯಾತ್

॥ ( ಸುಶ್ರುತ ॥ ಶಾರೀರ ॥ ಅ ೧೦ ಸೂ ೩ )

ಗರ್ಭಿಣಿಯು ಗರ್ಭಧರಿಸಿದಂದಿನಿಂದ ಮೊದಲುಗೊಂಡು.—
ಸದಾ ಸಂತೋಷಿತಳಾಗಿಯೂ, ಶುಚಿಯಾಗಿಯೂ, ಅಲಂಕಾರ ಧರಿಸಿ ಶ್ವೇತ
ವಸ್ತ್ರವನ್ನುಟ್ಟು, ಶಾಂತಿ, ಮಂಗಲಕಾರ್ಯ, ದೇವರು, ಬ್ರಾಹ್ಮಣರು, ವಿದ್ಯಾ
ಗುರುಗಳು, ಇವರಲ್ಲಿ ಆದರವುಳ್ಳವಳಾಗಬೇಕು. ಮಲಿನ (ಹೊಲಸಾದದ್ದು)
ಕೆಟ್ಟದ್ದು, ವಿಕಾರವುಳ್ಳ, ಹೀನವಾದ, ಪದಾರ್ಥಗಳ ಸ್ಪರ್ಶವನ್ನು ಮಾಡ
ಬಾರದು. ಮಲಿನಾದಿ ಶರೀರವುಳ್ಳವರನ್ನೂ ಸ್ಪರ್ಶಿಸಬಾರದು. ದುರ್ಗಂಧ
ವನ್ನೂ, ನೋಡಲಿಕ್ಕೆ ಅಸಹ್ಯವಾದವುಗಳನ್ನೂ, ಬಿಡಬೇಕು. ಬಹುಹರ್ಷ,
ಚಿಂತೆ, ಭಯ, ಹೇಸಿಗೆಬರುವಂಥ, ಉದ್ವೇಗವನ್ನುಂಟುಮಾಡುವ ಕಥೆಗಳನ್ನು
ಕೇಳಬಾರದು. ಒಣಗಿದ (ನೀರಸವಾದ), ಹಳಸಿದ (ಪರ್ಯುಷಿತ), ಕೊಳೆತ,
ನೀರೊಡೆದ ಅನ್ನವನ್ನು ಊಟಮಾಡಬಾರದು. ಬಹಳ ದೂರ ಅಡ್ಡಾಡಲು
ಹೋಗಬಾರದು ಹೊರಗೆ ಸದಾ ಗಾಳಿಯಲ್ಲಿಯೇ ಇರಬಾರದು. ಹಾಳು
ಮನೆ, ಪಿಶಾಚಿಗಳಿರುವ ಮರ, ಸ್ಮಶಾನ, ಮಹಾವೃಕ್ಷಗಳನ್ನಾಶ್ರಯಿಸುವದು,
ಸಿಟ್ಟು, ಅಯೋಗ್ಯವಾದವುಗಳು, ಒದರಿ ಮಾತಾಡುವದು, ಒದರಿಕೊಳ್ಳು
ವದು, ಇತ್ಯಾದಿಗಳನ್ನೂ, ಗರ್ಭಿಣಿಯರು ಗರ್ಭಕ್ಕೆದುಃಖದಾಯಕವಿರುವವೋ
ಅವೆಲ್ಲವುಗಳನ್ನು ಬಿಡಬೇಕು. ಬಹಳ ತಂಪಾಃಗ-ವಂತೆ ತೈಲಅಭ್ಯಂಗವನ್ನೂ
ಮೈಯನ್ನು ಒತ್ತಿ ತಿಕ್ಕುವದನ್ನೂ ವರ್ಜಿಸಬೇಕು. ಶರೀರಕ್ಕೆ ಬಹಳ ಶ್ರಮ'

ಕೊಡಬಾರದು. ಪೂರ್ವೋಕ್ತ ವರ್ಜ್ಯವಾದವುಗಳನ್ನು ತ್ಯಜಿಸಬೇಕು. ಮಲ ತಕ್ಕ ಕೊಡುವ ಆಸನವು ಮೃದುವಾದದ್ದೂ ಬಹಳ ಎತ್ತರವಿಲ್ಲದ್ದೂ ಹಿಡಿ ಮೇಲೆಹತ್ತಲು ಆಶ್ರಯವಿದ್ದ ಮಂಚಮೊದಲಾದ, ಸಂದುಕಟ್ಟಿನಲ್ಲಿಲ್ಲದ ಯಾ ರೀತಿಯಿಂದಲೂ ಬಾಧಕವಲ್ಲದ್ದನ್ನೇ ಯೋಜಿಸಬೇಕು. ಈಮೊದಲು ಗರ್ಭಘಾ ತಕವರ್ಜ್ಯವಾದವುಗಳನ್ನು ಹೇಳಿದರೂ ಪುನಃವಿಸ್ತಾರ ವಿವರಣೆ ಮಾಡಿದ್ದಾ

**ಪ್ರಥಮಾದಿಮಾಸ ಕ್ರಮದಿಂದ ಪೋಷಕ ಆಹಾರ ಉಪಚಾರಗಳ**

**ಹೃದ್ಯಂ ದ್ರವಮಧುರಪ್ರಾಯಂ ಸ್ನಿಗ್ಧಂದೀಪನೀಯಸಂಸ್ಕೃತಂ ಚ ಭೋಜನಂ ಭೋಜಯೇತ್, ಸಾಮಾನ್ಯಮೇತತ್ಆಪ್ರಸವಾತ್ ॥** (ಸುಶ್ರುತ॥ ಶಾರೀರ॥ ಅ ೧೦ ಸೂ ೬)

ಸಾತ್ವಿಕ, ರುಚಿಕರವಾದ, (ಹೃದ್ಯ) ರಸಯುಕ್ತವೂ, ಮಧುರವೂ ಪೌಷ್ಟಿಕವೂ (ಸ್ನಿಗ್ಧ) ಆದ, ಜಡವಲ್ಲದ ಸೌಮ್ಯವಾಗಿ ಸಹಜ ಪಚನವಾಗು ಆಹಾರವನ್ನು, ಯೋಗ್ಯ ರೀತಿಯಿಂದ ಪರಿಷ್ಕೃತವಾಗಿ ತಯಾರಿಸಿ ಯೋಗ್ಯ ಕಾಲದಲ್ಲಿ, ( ಸಮಯ ಮೀರದೆ ) ಆಹಾರ ವ್ಯವಸ್ಥೆಯನ್ನಿಡಬೇಕು. ಗರ್ಭಿಣಿಯರು, ಹಡೆಯುವ ಪರ್ಯಂತವೂ, ಸಾಮಾನ್ಯವಾಗಿ ಆಹಾ ನಿಯಮವು ಇದರಂತೆ ಇರಬೇಕು. ವಿಹಾರವನ್ನು (ಕಾರ್ಯಕ್ರಮ) ನಿಯ ಮದಂತೆ ವಿಧಿಸಿ ಆಹಾರಾದಿಗಳ ನಿಯಮನ ಮಾಡಿ ಮುಂದೆ ಪ್ರಥಮಾದಿ ತಿಂಗಳಲ್ಲಿಯ ವಿಷೇಷ ಅನುಪಾನವನ್ನು ವಿವರಿಸುತ್ತಾರೆ:-

**ವಿಶೇಷತಸ್ತು ಗರ್ಭಿಣೀಪ್ರಥಮದ್ವಿತೀಯತೃತೀಯಮಾಸೇಷು, ಮಧುರ ಶೀತದ್ರವಪ್ರಾಯಮಾಹಾರಮುಪಸೇವೇತ, ವಿಶೇಷ ತಸ್ತುತೃತೀಯೇ ಷಷ್ಟಿಕೌದನಂ ಪಯಸಾಭೋಜಯೇತ್, ಚತುರ್ಥೇದಧ್ನಾ, ಪಂಚಮೆಪಯಸಾ, ಷಷ್ಠೆ ಸರ್ಪಿಷೇತ್ಯೇಕೆ, ಚತುರ್ಥೆಪಯೋನವನೀತಸಂಸೃಷ್ಟಮಾಹಾರಯೇತ್ ಜಾಂಗ ಲಮಾಂಸಸಹಿತಂ ಹೃದ್ಯಮನ್ನಂಚಭೋಜಯೇತ್, ಪಂಚಮೆ ಕ್ಷೀರಸರ್ಪಿಃ ಸಂಸೃಷ್ಟಂ, ಷಷ್ಠೆ ಶ್ವದಂಷ್ಟ್ರಾಸಿದ್ಧಸ್ಯಸರ್ಪಿಷೋ**

**ಮಾತ್ರಾಂಪಾಯಯೇತ್, ಯವಾಗೂಂವಾ, ಸಪ್ತಮೇಸರ್ಪಿಃ**
**ಪೃಥಕ್‌ಪಣ್ಯಾದಿಸಿದ್ಧಂ ಏವಂ ಆಪ್ಯಾಯತೆಗರ್ಭಃ ॥**
(ಸುಶ್ರುತ॥ ಶಾರೀರ॥ ಅ ೧೦ ಸೂ ೪)

॥೧॥ **ಒಂದು ಎರಡು ಮೂರನೇ ತಿಂಗಳುಗಳಲ್ಲಿ** ಗರ್ಭಿಣಿಯು ಮಧುರ, ಶೀತ, ದ್ರವಯುಕ್ತವಾದ ಆಹಾರವನ್ನು ಸೇವಿಸಬೇಕು. ವಿಶೇಷ ವಾಗಿ, ೬೦ ದಿನಕ್ಕೆ ಬೆಳೆಯುವ ಅಕ್ಕಿಯಅನ್ನವನ್ನು ಹಾಲಿನ ಸಂಗಡ ಊಟ ಮಾಡಬೇಕು.

**ಚರಕ ಮತವು:—** ಮೊದಲನೇ ತಿಂಗಳಿನಲ್ಲಿ ಹಿತಕರ (ಸಾತ್ಮ್ಯ) ಆಹಾರವನ್ನು ಪ್ರಾತಃ ಸಾಯಂಕಾಲಗಳಲ್ಲಿ ಉಪಯೋಗಿಸಬೇಕು. ಹಾಲಿಗೆ ಏನನ್ನೂ ಕೂಡಿಸದೆ, ಸ್ವಲ್ಪ, ಸ್ವಲ್ಪ, ಕಾದಾರಿತಣ್ಣಗಾದದ್ದನ್ನು, ಕಾಲ ಕ್ಕನುಗುಣವಾಗಿ, (ಇಚ್ಛಾನುಸಾರ) ಸೇವಿಸಬೇಕು.

॥೨॥ **ಎರಡನೇ ತಿಂಗಳಿನಲ್ಲಿ** ಆಹಾರವು ಮೊದಲನೇ ತಿಂಗಳಿನಂತೆ ಯಿರುವದು. ಹಾಲನ್ನುಮಧುರವಾದಔಷಧಗಳಿಂದಸಿದ್ಧಮಾಡಿ (ಸಂಸ್ಕರಿಸಿ) ಕುಡಿಯಬೇಕು.

॥೩॥ **ಮೂರನೇ ತಿಂಗಳಿನಲ್ಲಿ** ಆಹಾರವು ಹಿಂದಿನಂತೆ, ಹಾಲಿನಲ್ಲಿ, ಜೇನುತುಪ್ಪ ತುಪ್ಪಗಳನ್ನು ಸಮ ಪ್ರಮಾಣವಾಗದಂತೆ ಕೂಡಿಸಿ ಹಾಲನ್ನು ಕುಡಿಯಬೇಕು.

॥೪॥ **ನಾಲ್ಕನೇ ತಿಂಗಳಿನಲ್ಲಿ** ಮೊಸರನ್ನವು, ಮತ್ತು ಹಾಲು, ಬೆಣ್ಣೆ ಮೊದಲಾದವುಗಳಿಂದ ಯುಕ್ತವಾದ ಮಧುರಸ್ನಿಗ್ಧಾಹಾರವನ್ನು ತಕ್ಕೊಳ್ಳಬೇಕು. ಮಾಂಸಾಹಾರಿಗಳಿದ್ದರೆ, ಬೈಲು ದೇಶದಲ್ಲಿಯ ಪ್ರಾಣಿಗಳ ಮಾಂಸವನ್ನುಪಯೋಗಿಸಬಹುದು.

॥೫॥ **ಐದನೇ ತಿಂಗಳಿನಲ್ಲಿ,** ಹಾಲು ಅನ್ನವು, ಮತ್ತು ಹಾಲು, ತುಪ್ಪಯುಕ್ತವಾದ ಆಹಾರವನ್ನು ತಕ್ಕೊಳ್ಳಬೇಕು. ಅಥವಾ ಹಾಲಿನಲ್ಲಿ ತುಪ್ಪವನ್ನು ಕೂಡಿಸಿ ಸಂಸ್ಕರಿಸಿ ಕುಡಿಯಬೇಕು

॥೬॥ **ಆರನೇ ತಿಂಗಳಿನಲ್ಲಿ**, ತುಪ್ಪಾ ಅನ್ನ, ಗೋಕ್ಷುರ (ನೆಗ್ಗಿಲ ಮುಳ್ಳು) ದಿಂದ ಸಿದ್ಧ ಮಾಡಿದ ತುಪ್ಪದ ಮಾತ್ರಾ (ಪ್ರಮಾಣಯುಕ್ತ) ನುಸಾರ ಕುಡಿಸಬೇಕು. ಅಥವಾ ಈ ತುಪ್ಪವನ್ನಾಗಲೀ ಕೂಡಿಸಿ, ಇಲ್ಲವೇ ಹಾಗೇ ಯವಾಗೂ (ಗಂಜಿ) ಪಾನ ಮಾಡಿಸಬೇಕು.

**ಚರಕ ಮತವು:—** ಮಧುರ ಔಷಧಯುಕ್ತವಾದ ಹಾಲು ತುಪ್ಪ ವನ್ನುಪಯೋಗಿಸಬೇಕು. ಏಳನೇ ತಿಂಗಳಿನಲ್ಲಿಯೂ ಇವರಂತೆ ವರ್ತಿಸ ಬೇಕೆಂದು ಚರಕಾಚಾರ್ಯರ ಮತವು

॥೭॥ **ಏಳನೇ ತಿಂಗಳಲ್ಲಿ**, ಪೃಥಕ್ ಪರ್ಣಿ, (ಮೂರೆಲೆ ಹೊನ್ನೆ) ಯಿಂದ ಸಿದ್ಧವಾದ ತುಪ್ಪವನ್ನುಪಯೋಗಿಸಬೇಕು. ಇದರಿಂದ ಗರ್ಭವು ಪೋಷಿತವಾಗಿ ವೃದ್ಧಿ ಹೊಂದುತ್ತದೆ.

**ಸೂಚನೆ:—** ಏಳನೇ ತಿಂಗಳಿನಲ್ಲಿ ಅಹಾರವನ್ನು ಹೇಳಲಿಲ್ಲವಾದ್ದ ರಿಂದ ವಿಶೇಷ ನಿಯಮವಿಲ್ಲೆಂದು ತಿಳಿದು, ಮೊದಲು ಸಾಮಾನ್ಯವಾಗಿ ಹೇಳಿದ ಒಂದರಿಂದ ಒಂಭತ್ತನೇ ತಿಂಗಳ ವರೆಗಿನ ಸಾಮಾನ್ಯ ನಿಯಮ ದಂತೆ ಆಹಾರ ತಕ್ಕೊಳ್ಳಬೇಕು. ಎಲ್ಲಿ ಯಾವ ತಿಂಗಳಲ್ಲಿ ಆಹಾರ ನಿಯಮ ವನ್ನು ಹೇಳಿಲ್ಲವೋ ಆಯಾವ ತಿಂಗಳಲ್ಲಿ ಈ ಸಾಮಾನ್ಯ ನಿಯಮವನ್ನೇ ಅನುಸರಿಸಬೇಕು.

## ಚರಕ ಮತವು

**ಗರ್ಭಿಣಿಗೆ, ಏಳನೇ ತಿಂಗಳಿನಲ್ಲಿ ಚರ್ಮದಲ್ಲಿ ತಿಂಡಿ (ತುರಿಕೆ)** ಯುಂಟಾಗುತ್ತದೆ. ದೇಹದಲ್ಲಿ ದಾಹವೂ ಆಗುವದು. ಇದಕ್ಕೆ ಹೆಂಗಸರು, ಶಿಶುವಿಗೆ ಕೂದಲು ಹುಟ್ಟುವದರಿಂದ ಹೀಗಾಗುತ್ತದೆಂದು ಹೇಳುತ್ತಾರೆ. ಆದರೆ ಅದು ಪ್ರಾಮಾಣಿಕ (ಸತ್ಯ) ವಾದದ್ದಲ್ಲವೆಂದು, ಆತ್ರೇಯರ ಅಭಿ ಗ್ರಾಯವು. ವಸ್ತುತಃ ಗರ್ಭ ಬೆಳೆದು ಮೊದಲಿನ ಎಲ್ಲಾ ತಿಂಗಳಿಗಿಂತಲು ಭಾರವೂ ದೊಡ್ಡದಾದದ್ದೂ ಇದ್ದು ಅವಯವಾದಿಗಳ ಚಲನವಾಗಹತ್ತಲೂ ಗರ್ಭದಿಂದ ಗರ್ಭಾಶಯಕ್ಕೆ ಪೀಡೆಯಾಗ ಹತ್ತುವದು. ಈ ಪೀಡೆಯಿಂದ ವಾತ. ಪಿತ್ತ ಕಫಗಳು ಪ್ರಕೋಪವನ್ನು ಹೊಂದಿ, ಎದೆಯಲ್ಲಿ ಎಲ್ಲಾ ಕಡೆ

ಯಲ್ಲಿ ವಿದಾಹವನ್ನುಂಟು ಮಾಡುತ್ತವೆ. ಇದರಿಂದ ತಿಂಡಿಯುಂಟಾಗುತ್ತದೆಯೇ ವಿನಾ, ಗರ್ಭದಲ್ಲಿಯ ಕೂಸಿನ ಕೂದಲು ಉತ್ಪನ್ನವಾಗುವದರಿಂದ ಅಲ್ಲವು.

## ವಿಶೇಷ

ಗರ್ಭವು ಬೆಳೆದು, ದೊಡ್ಡದೂ, ಭಾರವಾದದ್ದೂ ಇರುವದರಿಂದ, ಗರ್ಭಾಶಯಕ್ಕನುಗುಣವಾಗಿ, ಹೊಟ್ಟೆಯ ಮೇಲ್ಭಾಗದ, ಚರ್ಮವೂ ಕೂಡ ವಿಸ್ತಾರವಾಗಿ ಪ್ರಸರಣ ಹೊಂದಬೇಕಾಗುತ್ತದೆ. ಒಮ್ಮೆಲೇ ಜಗ್ಗಿ,(ಎಳೆದು) ವಿಸ್ತಾರ ಮಾಡಿದಂತೆ ಆಗುವದರಿಂದ, ಚರ್ಮದಲ್ಲಿ ಅಲ್ಲಲ್ಲಿ ಒಡ ಒಡಕು ಗೆರೆಗಳಂತೆ ಆಗುತ್ತವೆ. ಇದಕ್ಕೆ ಆಯುರ್ವೇದದಲ್ಲಿ "ಕಿಕ್ಕಿಸಾವಾಪ್ತಿ" "ಚರ್ಮ ವಿದಾರಣ"ವೆಂದು ಹೇಳುತ್ತಾರೆ. ಚರ್ಮದಲ್ಲಿ ಒಡಒಡಕಾಗಿ ಬಿರಿದು ಗೆರೆಗಳಾಗುತ್ತಿರುವದರಿಂದ ತಿಂಡಿಯುಂಟಾಗುವದು. ಗರ್ಭ ತುಂಬಿದಾಗ, ವಿಶೇಷ ಭಾರವಾದ ಒತ್ತಡವಿರುವದರಿಂದ, ಚರ್ಮವಿದಾರಣವು (ಒಡಕು) ಕಾಣಿಸುವದಿಲ್ಲ. ಹಡೆದ ನಂತರ, ಚರ್ಮವೆಲ್ಲ ಆಕುಂಚನಹೊಂದಿ ಮುದ್ದೆಯಾದಾಗ ಹಿಂದೆ (ಮೊದಲು)ಒಡೆಯೋಣದರಿಂದಾದ ಗುರುತುಗಳು, ಸೂಕ್ಷ್ಮವಾಗಿ ಕೆದರಿದ, ಘಾಯಗಳ, ಮಾದಮೇಲಿನ ಕಲೆಗಳಂತೆ, ಕಾಣುತ್ತವೆ ಹಡೆದ ನಂತರ ಬಹು ಜನರಿಗೆ ಹೀಗಾಗುತ್ತದೆ. ಚರ್ಮದಲ್ಲಿ ಬಹಳೇ ಸ್ನಿಗ್ಧತೆಯುಳ್ಳ, ಚರ್ಮವು ದಪ್ಪವಿರದೆ, ಮೆತ್ತಗಾಗಿ, ಬಿರಸಿಲ್ಲದಿದ್ದರೆ ಅಂಥವರಿಗೆ ಕಲೆ ಬೀಳುವದಿಲ್ಲ. ಕ್ವಚಿತ್ ಅಂಥವರೂ ಇದ್ದಾರೆ. ನಂತರ ಗರ್ಭಿಣಿಯರಾದಾಗಲೆಲ್ಲ ಗರ್ಭ ತುಂಬಿಕೊಂಡ ನಂತರ ಈ ಕಲೆಗಳು ಕಾಣುವದಿಲ್ಲ. ಇದರಂತೆ ಸ್ತನಗಳೂ ಸಹ ಹಾಲಿನ ಒತ್ತಡ ಭಾರ ಪುಷ್ಟತೆಗಳಿಂದ ಹಾಗೆಯೇ ಆಗುತ್ತವೆ ಬಾರೀ ಚಕ್ಕೆಯ ಕಷಾಯದಲ್ಲಿ (ಕೋಲೋದಕದಲ್ಲಿ) ಮಧುರಾಷಧದಿಂದ ಸಿದ್ಧಮಾಡಿದ, ಬೆಣ್ಣೆಯನ್ನು ಒಂದು ಅಡಿಕೆ. ಯಷ್ಟು ಹಾಕಿ ಕಾಲವರಿತು (ಯೋಗ್ಯ ಕಾಲದಲ್ಲಿ) ಕುಡಿಯಬೇಕು. ಚಂದನ ಕಮಲದದೇಟು, ಇವುಗಳ ಕಲ್ಕವನ್ನು ಮಾಡಿ, ಗರ್ಭಿಣಿಯ ಸ್ತನ, ಹೊಟ್ಟೆಗೆ ಹಚ್ಚಿ, ಅತಿ ಸಾವಕಾಶವಾಗಿ ಕೈಯ್ಯಾಡಿಸಬೇಕು. ಕರವೀರಸಿದ್ಧ ತೈಲದಿಂದ ಅಭ್ಯಂಗವನ್ನು ಮಾಡಿಸಬೇಕು. ಜಾಜಿ, ಇಪ್ಪೇಯಲೆ, (ಮಧುಕ) ಹಾಕಿ ಕಾಯಿಸಿದ ನೀರನ್ನು ಧಾರೆಯಾಗಿ ತಿಂಡಿಯಿಡುವ ಜಾಗಕ್ಕೆ ಪರಿಷೇಚನೆ

ಮಾಡಬೇಕು. ಸಾಧ್ಯವಿದ್ದ ಮಟ್ಟಿಗೆ ತಿಂಡಿಯಾದಾಗ ಉಗುರಿನಿಂದ ಕೆದರಿ, ಕೆರಕೊಳ್ಳಬಾರದು. ಹೀಗೆ ಕೆರೆಯುವದರಿಂದ ತಿಂಡಿ ಹೆಚ್ಚಾಗಿ ವೈರಿಯು ಮತ್ತಿಷ್ಟು ಒಡೆಯುವದು. ಆದ್ದರಿಂದ ಉಗುರನ್ನು ಹಚ್ಚಬಾರದು ಸಾವಕಾಶವಾಗಿ ಕೈಯ್ಯಾಡಿಸುವದರಿಂದಲೂ, ಕಂಬಳಿಯಿಂದ ಸಾವಕಾಶ ತಿಕ್ಕುವದರಿಂಲೂ ತಿಂಡಿಯು ಕಡಿಮೆಯಾಗುತ್ತದಲ್ಲದೆ, ಕೆರಕೊಂಡಂತೆ ಯಾವದೇ ತೊಂದರೆಯಾಗುವದಿಲ್ಲಾ. ಮಧುರಾಹಾರ ತಕ್ಕೊಳ್ಳಬೇಕು. ಆ ಆಹಾರವು ವಾತನಾಶಕವಿದ್ದು ಸ್ವಲ್ಪ ಸ್ನಿಗ್ಧ (ಸ್ನೇಹ) ವಾದ ಲವಣ ರಸಯುಕ್ತವಾದದ್ದಿರಬೇಕು. ನೀರನ್ನು ಸ್ವಲ್ಪ ಉಪಯೋಗಿಸಬೇಕು. ಇದರಿಂದ ದೇಹದಲ್ಲಿಯ ತಿಂಡಿಯು ಕಡಿಮೆಯಾಗುವದು.

**ಅಷ್ಟಮೇಬದರೋದಕೇನ, ಬಲಾತಿಬಲಾಶತಪುಷ್ಪಾಪಲಲಪಯೋದಧಿಮಸ್ತುತೈಲ ಲವಣಮದನಫಲಮಧುಘೃತಮಿಶ್ರೇಣಾಸ್ಥಾಪಯೇತ್, ಪುರಾಣಪುರೀಷಶುದ್ಧ್ಯರ್ಥಮನುಲೋಮನಾರ್ಥಂಚ, ವಾಯೋಃ, ತತಃಪಯೋಮಧುರಕಷಾಯಸಿದ್ಧೇನ, ತೈಲೇನಾಽನುವಾಸಯೇತ್ ॥ ಅನುಲೋಮೇಹಿ ವಾಯೌಸುಖಂ ಪ್ರಸೂಯತೆ, ನಿರುಪದ್ರವಾಚ ಭವತಿ ಅತ ಊರ್ಧ್ವಂ, ಸ್ನಿಗ್ಧಾಭಿಃ ಯವಾಗೂಭಿರ್ಜಾಂಗಲರಸೈಶ್ಚೋಪಕ್ರಮೇದಾಪ್ರಸವಕಾಲಾತ್, ಏವಮುಪಕ್ರಾಂತಾ, ಸ್ನಿಗ್ಧಾ ಬಲವತೀಸುಖಂ ಅನುಪದ್ರವಾಪ್ರಸೂಯತೆ, ॥**
**(ಸುಶ್ರುತ॥ ಶಾರೀರ॥ ಅ ೧೦ ಸೂ ೪)**

॥೮॥ **ಚರಕ ಮತವು:—** ಎಂಟನೇ ತಿಂಗಳಲ್ಲಿ ಗರ್ಭಿಣಿಗೆ ಹಾಲಿನಿಂದ ಮಾಡಿದ (ಸ್ವಲ್ಪಹಾಲುಹಾಕಿದ) ಗಂಜಿಯನ್ನು ಸ್ವಲ್ಪ ತುಪ್ಪವನ್ನು ಹಾಕಿ ಕಾಲಕ್ಕನುಸರಿಸಿ ಕುಡಿಯಕೊಡಬೇಕು. ಹೀಗೆ ಕೊಡಬಾರದೆಂದು "ಭದ್ರಕಾಷ್ಯ" ಎಂಬುವರು ಹೇಳುತ್ತಾರೆ. ಯಾಕಂದರೆ ಇದರಿಂದ ಪೈಂಗಲ್ಯ ಬಾಧೆಯು (ಕಣ್ಣುಕೆಂಪಾಗುವಿಕೆ) ಬಂದು ಗರ್ಭದಲ್ಲಿಯ ಶಿಶುವಿನಕಣ್ಣು ಕೆಂಪಾಗುತ್ತವೆ. ಹೀಗೆಂದು ಹೇಳಿದ ನಂತರ ಇದನ್ನು ವಿರೋಧಿಸಿ ನಿರ್ಣಯ ಕೊಡುತ್ತಾರೆ. ಸ್ವಲ್ಪವಾದ್ದರಿಂದ ಪೈಂಗಲ್ಯಬಾಧೆಯು ಬಂದರೂ ಅಡ್ಡಿ

ಯಿಲ್ಲ. ಮುಂದೆ ಬರತಕ್ಕ ಪ್ರಸೂತಿ ಕಾಲದ ವಾತಾದಿಬಾಧೆಗಳು ಇದರಿಂದ ನಿವಾರಣೆ ಹೊಂದುತ್ತವಲ್ಲದೆ, ಒಂದು ವೇಳೆ ವೈಂಗಲ್ಯಬಾಧೆ ಉಂಟಾದರೂ ಸುಲಭ ಕ್ರಿಯೆಯಿಂದ ಗುಣವನ್ನು ಹೊಂದುತ್ತದೆ. ಆದ್ದರಿಂದ ಯವಾಗೂ ಪಾನ ನಿಷಿದ್ಧವಲ್ಲವೆಂದು ಆತ್ರೇಯರ ಮತವು. ಗರ್ಭಿಣಿಯೂ ಕೂಡ ಯವಾಗೂ ಸೇವನೆಯಿಂದ ಆರೋಗ್ಯವಂತಳೂ ನಿರೋಗಿಯೂ ಆಗುತ್ತಾಳೆ. ಬಲವರ್ಣವುಳ್ಳ ಅಂಗಾಂಗಗಳ ಸೌಷ್ಠವಯುಕ್ತ ಪರಿಪುಷ್ಟ ಸಂತತಿಯನ್ನು ಪಡೆಯುತ್ತಾಳೆ. ಇವೆಲ್ಲ ಕಾರಣಗಳಿಂದ ಯವಾಗು ಪಾನವು ಯೋಗ್ಯವೆಂದು ಹೇಳುತ್ತಾರೆ

**ಸುಶ್ರುತ ಮತವು:—** ಎಂಟನೇ ತಿಂಗಳಿನಲ್ಲಿ, ಆಸ್ಥಾಪನ, ಅನುವಾಸನ ಬಸ್ತಿಗಳನ್ನು ಕೊಡಬೇಕು. ಆಸ್ಥಾಪನ ಬಸ್ತಿಯನ್ನು ಉಪಯೋಗಿಸುವದರಿಂದ ಹಳೆಯದಾದ ಮಲ ಸಂಗ್ರಹವು ಹೋಗಿ ಸ್ವಚ್ಛವಾಗುತ್ತದೆ. ಅನುವಾಸನ ಬಸ್ತಿಯಿಂದ, ವಾಯುವು ಯೋಗ್ಯ ಸ್ಥಿತಿಯಲ್ಲಿರುವದಲ್ಲದೆ, ಸುಖ ಪ್ರಸೂತಿಯಾಗುವದು.

**ಆಸ್ಥಾಪನ ಬಸ್ತಿ:—** ಕಷಾಯ ಮತ್ತು ಸ್ನೇಹರಸ (ಘೃತತೈಲಾದಿ) ಗಳನ್ನು ಕೂಡಿಸಿಕೊಡುವ ಬಸ್ತಿಗೆ ಆಸ್ಥಾಪನ ಬಸ್ತಿಯೆಂದು ಹೆಸರು. ದೋಷ ಧಾತುಗಳನ್ನು, ಶೋಧನ ಮಾಡಿ, ಪ್ರಕೋಪಹೊಂದಿ ಸಿಕ್ಕಸಿಕ್ಕ ಕಡೆಗೆ ಹೋಗಗೊಡದೆ ತಮ್ಮ ಸ್ಥಾನದಲ್ಲಿರುವಂತೆ ಮಾಡುವದರಿಂದಲೂ ಈ ಹೆಸರು ಬಂದಿರುತ್ತದೆ. ಆಸ್ಥಾಪನ ಬಸ್ತಿಯಲ್ಲಿ ಹಾಕುವ ಕಷಾಯ, **ಉತ್ತಮ ಪ್ರಮಾಣ,** (೮೦ ತೊಲೆ) **ಮಧ್ಯಮ** (೬೪ ತೊ.) **ಕನಿಷ್ಠ,** (೪೮ ತೊ.) ದೇಹದಬಲಾಬಲ,ದೋಷ ಸ್ಥಿತಿ ಬಲಾಬಲಗಳನ್ನನುಸರಿಸಿ ಹೀನ, ಮಧ್ಯಮ ಉತ್ತಮ ಪ್ರಮಾಣಗಳನ್ನು ಯೋಜಿಸಬೇಕು.

**ಆಸ್ಥಾಪನಬಸ್ತಿಯ ಕಷಾಯ ಕ್ರಮವು:—** ಬಲಾ (ಕಲ್ಲಂಗಡ್ಲೆ) ಅತಿಬಲಾ (ದೊಡ್ಡೆಲೆಯುಳ್ಳ ಬಲಾ) ಬಡೇಸೋಪು, ಇವುಗಳಿಂದ ಸಿದ್ಧ ಮಾಡಿದ ತೈಲ, ಅಥವಾ ಮಾಂಸ ಸ್ನೇಹ, (ಚರಬಿ) ಹಾಲು, ಮೊಸರು, ಮೊಸರಿನ ಕೆಳಗಿರುವ ನೀರು, ತೈಲ,(ಎಳ್ಳೆಣ್ಣೆ ಔಡಲಯಣ್ಣೆ ಮೊದಲಾದವು)

ಜೇನುತುಪ್ಪ, ಇಲ್ಲವೇ ಮದನಫಲ (ಮಗ್ಗಾರೆಕಾಯಿ) ಲವಣ ಇವುಗಳಿಂದ ಸಿದ್ಧವಾದ ಘೃತ, ಇವುಗಳಲ್ಲಿ ಯಾವದಾದರೊಂದನ್ನು ಸಮುಯುಕ್ತನುಗುಣ ವಾಗಿ ಕಷಾಯದಲ್ಲಿ ಕೂಡಿಸಿ ಯೋಜಿಸಬೇಕು. ಬಾರಿಯಚಕ್ಕೆ(ಒಣಗಿದ್ದು) ಗಳನ್ನು, ನೀರಿನಲ್ಲಿ ಅಬಡಜಬಡ ಕುಟ್ಟಿ ಹಾಕಿ ಚನ್ನಾಗಿ ಮರಳಿಸಿ, ಇಳಿಸಿ ಸೋಸಿ, ಘೃತ, ಅಥವಾ ತೈಲಾದಿ ಯೋಜಿಸುವ ಸ್ನೇಹ ದ್ರವ್ಯವನ್ನು ಹಾಕಿ, ತಡೆಯುವಷ್ಟು ಬಿಸಿಯಿದ್ದಾಗಲೇ ಕೈಹಾಕಿ ನೋಡಿ (ನೋಡದೇ ಕೊಟ್ಟರೆ ಬಿಸಿಹೆಚ್ಚಾಗಿ ಅನರ್ಥ ಸಂಭವಿಸುವದು) ಸಮುಗ್ರಾಹ್ಯವಾದಾಗ, ಬಸ್ತಿ ಕೊಡಬೇಕು. ತಣ್ಣಗಾದರೂ ಉಪಯೋಗ ಬೀಳುವದಿಲ್ಲ ಬಸ್ತಿ ಕೊಡುವ ದರಿಂದ ಹಳೇ ಮಲವು ಹೋಗಿ ದೇಹ ಹಗುರಾಗಿ, ವಾಯುವು ಸ್ವಸ್ಥಾನ ದಲ್ಲಿ ಬರುವಂಥದಾಗುತ್ತದೆ

**ಅನುವಾಸನ ಬಸ್ತಿ:—** ಆಸ್ಥಾಪನಬಸ್ತಿಯನ್ನು ಕೊಟ್ಟು ೪-೫ ದಿನಗಳ ನಂತರ ಅನುವಾಸನ ಬಸ್ತಿಯನ್ನು ಕೊಡಬೇಕು. ಈ ಅನುವಾಸನ ಬಸ್ತಿಯ ಕಷಾಯದಲ್ಲಿ ⅓ ಸ್ನೆಹ (ಘೃತ, ತೈಲ) ವನ್ನು ಹಾಕಬೇಕು. ಅನು ವಾಸನ ಬಸ್ತಿಯ ಪ್ರಮಾಣ **ಉತ್ತಮ** (೨೪ ತೊ) **ಮಧ್ಯಮ** (೧೨ ತೊ) **ಕನಿಷ್ಠ** (೬ ತೊ) ಅನುವಾಸನ ಬಸ್ತಿಯಲ್ಲಿ ಸ್ನೆಹ (ಘೃತ-ತೈಲ) ಪ್ರಮಾಣ ⅓ ಅಂಶವೆಂದು ಹೇಳಿದ್ದರಿಂದ, **ಉತ್ತಮ ಬಸ್ತಿಯ** ಮಿಶ್ರಣದಲ್ಲಿ" **ಕಷಾಯ** ೧೮ ತೊ, **ಸ್ನೇಹ ದ್ರವ್ಯ** ೬ ತೊ. ಒಟ್ಟು ಮಿಶ್ರಣ (೨೪ ತೊ) ಇರಬೇಕು. ಇದರಂತೆ ಮುಂದಿನದನ್ನು ತಿಳಿಯಬೇಕು. ಅನುವಾಸನ ಬಸ್ತಿ ಯನ್ನು ಸಹ ಬಲಾಬಲವನ್ನು ನೋಡಿ ಉತ್ತಮ, ಮಧ್ಯಮ, ಕನಿಷ್ಠ, ಪ್ರಮಾಣವನ್ನು ಯೋಜಿಸಬೇಕು.

ಕೇವಲ ಸಿದ್ಧ ತೈಲವನ್ನು (ಔಡಲ ಎಣ್ಣೆ) ಮಾತ್ರ ಕಷಾಯವಿಲ್ಲದೆ ಯೋಜಿಸಬಹುದು. ಅದರ ಪ್ರಮಾಣ **ಉತ್ತಮ ಪ್ರಮಾಣ** ೬ ತೊ, **ಮಧ್ಯಮ** ೫ ತೊ, **ಕನಿಷ್ಠ** ೨॥ ತೊಲೆ ಈ ಪ್ರಮಾಣದಿಂದ ತೈಲ (ಔಡಲ ಯಣ್ಣೆ) ವನ್ನುಪಯೋಗಿಸಬೇಕು.

(೯) **ಒಂಭತ್ತನೇ ತಿಂಗಳಿಂದ,** ಹಡೆಯುವ ಪರ್ಯಂತವೂ, ಸ್ನಿಗ್ಧ ವಾದ (ಸ್ನೇಹಯುಕ್ತ) ಗಂಜಿಯನ್ನು ಉಪಯೋಗಿಸಬೇಕು. ಮಾಂಸಾ

ಹಾರಿಗಳು ಬೈಲುಸೀಮೆ ದೇಶದಲ್ಲಿಯ ಪ್ರಾಣಿಯ ಮಾಂಸವನ್ನುಪಯೋಗಿಸ ಬೇಕು. ಹೀಗೆ ಪದ್ಧತಿಯಿಂದಿದ್ದರೆ ಆರೋಗ್ಯದಿಂದ ಹಡೆಯುತ್ತಾಳೆ.

**ಚರಕ ಮತವು:—** ಮೇಲಿನಂತೆ ನಿಯಮಗಳನ್ನು ಹೇಳಿ ವಿಶೇಷ ನಿಯಮವನ್ನು ಹೇಳುತ್ತಾರೆ.

ತೈಲ ಸ್ನೇಹಾದಿಗಳಿಂದ ಯುಕ್ತವಾದ(ತೊಯ್ದ) ಪಿಚುವನ್ನು (ಅಳ್ಳಿಯ ಮುದ್ದೆ) ಗರ್ಭಬರುವ ಮಾರ್ಗವು ಮೃದುವಾಗುವಸಲುವಾಗಿ, ಯೋನಿಯಲ್ಲಿ (ಜನನೇಂದ್ರಿಯಲ್ಲಿ)ಧಾರಣ ಮಾಡಬೇಕು. ಈ ವಿಧಾನವನ್ನು ಗರ್ಭ ಧಾರಣ ಮಾಡಿದ ಮಾಸದಿಂದ ಮೊದಲುಗೊಂಡು, ಪ್ರಸವ ದಿನಗಳ ವರೆಗೂ, ದಿನ ಬಿಟ್ಟುದಿನದಂತೆ ಅಥವಾ ವಾರದಲ್ಲಿ ಎರಡುದಿನ ಧಾರಣಮಾಡುತ್ತಿರಬೇಕು. ಗರ್ಭಿಣಿಯಹೊಟ್ಟೆ, ಟೊಂಕ,ಪಾರ್ಶ್ವ, ಹಿಂಭಾಗ, ಇವೆಲ್ಲವೂ ಮೃದುವಾಗು ತ್ತವೆ. ಇದರಿಂದ ವಾಯುವು ಪ್ರಕೋಪಹೊಂದದೆ ಮೃದುವಾಗಿ ತನ್ನ ಸ್ಥಾನ ದಲ್ಲಿರುತ್ತದೆ. ಮಲ, ಮೂತ್ರಗಳು ಯೋಗ್ಯವಾಗಿ ನಿಯಮಿತವಾಗುತ್ತವೆ. ವರ್ಣ ಬಲ, ಹೆಚ್ಚಾಗುತ್ತದೆ. ಸ್ನೇಹಧಾರಣೆಯ ವಿಶೇಷವೇನಂದರೆ, ಸ್ಥಾನವು ಮೃದುವಾದ್ದರಿಂದ ಶಿಶುಜನಿಸಲಿಕ್ಕೆ ತೊಂದರೆಯಾಗುವದಿಲ್ಲ. ಯಾಕಂದರೆ ಮೃದು ಸ್ಥಾನವು ವಿಕಾಸ ( ವಿಸ್ತಾರ ) ಹೊಂದಲು, ಬಹಳ ತ್ರಾಸಾಗುವ ದಿಲ್ಲ. ಆದ್ದರಿಂದ ಅಡ್ಡಿಯಿಲ್ಲದೆ ಅನುಕೂಲವಾಗಿ ಜನನವಾಗುವದು. ಗರ್ಭ ಪೋಷಣೆಗೆ ಅನುಕೂಲ ಪ್ರಶಸ್ತವಾದ ಶಾಸ್ತ್ರೀಯ ಕ್ರಮಗಳು ಇಂತಿರುತ್ತವೆ.

### ಬಸ್ತಿಯ ವಿಷಯದಲ್ಲಿ ಸೂಚನೆ

(ಶಾರ್ಙಧರ ೩ ಖಂ, ಅ ೫)

ಅತಿ ಸ್ನಿಗ್ಧತೆ ಉಳ್ಳವರಿಗೆ, ಅನುವಾಸನ ಬಸ್ತಿಯು ನಿಷಿದ್ಧವಿರುತ್ತದೆ. ಇದರಂತೆ ರೂಕ್ಷತೆಯುಳ್ಳವರಿಗೆ ಮತ್ತು ಗರ್ಭಿಣಿಯರಿಗೆ ಆಸ್ಥಾಪನ ಬಸ್ತಿಯು ಯೋಗ್ಯವಲ್ಲವೆಂದು ಹೇಳಿದ್ದಾರೆ.

**ಚರಕ–ಸುಶ್ರುತರ ಕಾಲದಲ್ಲಿ** ಜನರ ಆಹಾರ ಪರಿಸ್ಥಿತಿಗಳಿಂದ ಸದೃಢತೆ ಇದ್ದಿರುವ ಮೂಲಕ ಅದಕ್ಕನುಸರಿಸಿದ ಯೋಜನೆಯಿದೆ. ಆದ್ದ

ರಿಂದ, ದೋಷ, ದೂಷ್ಯ, ದೇಶ, ಕಾಲ, ಬಲ, ಅಗ್ನಿ (ಜಠರಾಗ್ನಿ) ಪ್ರಕೃತಿ, ವಯಸ್ಸು ಇವುಗಳನ್ನು ಯೋಚಿಸಿ ಅವಶ್ಯವಿದ್ದಾಗಲೂ, ಅತ್ಯಾಯಿಕ ಪರಿಸ್ಥಿತಿಯಲ್ಲಿಯೂ, ವೈದ್ಯರಾದವರೇ ಬಸ್ತಿಯನ್ನು ಯೋಚಿಸಲು ಅಡ್ಡಿಯಿಲ್ಲ.

# ೧೨. ಗರ್ಭದಲ್ಲಿಯ ಪಿತೃಜಾದಿ ಲಕ್ಷಣ

**ಗರ್ಭಸ್ಯಪಿತೃ, ಮಾತೃ, ರಸ,ಆತ್ಮ, ಸತ್ವ, ಸಾತ್ಮ್ಯಜಾನಿ ಲಕ್ಷಣಾನಿ.**
**(ಸುಶ್ರುತ|| ಶಾರೀರ|| ಅ ೩ ಸೂ ೩೩)**

**ತತ್ರಗರ್ಭಸ್ಯ, ಪಿತೃಜ, ಮಾತೃಜ, ರಸಜ, ಆತ್ಮಜ, ಸತ್ವಜ, ಸಾತ್ಮ್ಯಜಾನಿ, ಶರೀರ ಲಕ್ಷಣಾನಿ ವ್ಯಾಖ್ಯಾಸ್ಯಾಮಃ|| ಗರ್ಭಸ್ಯಕೇಶಸ್ಮಶ್ರು ಲೋಮಾಸ್ಥಿ ನಖಸಿರಾ ಸ್ನಾಯುಧಮನೀರೇತಃ ಪ್ರಭೃತೀನಿಸ್ಥಿರಾಣಿ ಪಿತೃಜಾನಿ||ಮಾಂಸ ಶೋಣಿತ ಮೇದೋಮಜ್ಜ ಹೃನ್ನಾಭಿ ಯಕೃತ್ ಪ್ಲೀಹಾಂತ್ರ ಗುದ ಪ್ರಭೃತೀನಿ ಮಾತೃಜಾನಿ|| ಶರೀರೋಪಚಯೋ ಬಲಂ ವರ್ಣಃ ಸ್ಥಿತಿಃ ಹಾನಿಶ್ಚ ರಸಜಾನಿ|| ಇಂದ್ರಿಯಾಣಿ ಜ್ಞಾನಂ ವಿಜ್ಞಾನಂ ಆಯುಃ ಸುಖ ದುಃಖಾದಿಕಂ ಚಾತ್ಮಜಾನಿ || ಸತ್ವಜಾನಿ ಉತ್ತರತ್ರವಕ್ಷ್ಯಾಮಃ|| (ಗರ್ಭ ವ್ಯಾಕರಣೆ ೬೪ ಆರಭ್ಯ ೮೦ ಪರ್ಯಂತಂ|| ೮೧೩. ಸಂಪೂರ್ಣಂ)ವೀರ್ಯಮಾರೋಗ್ಯಂ ಬಲವರ್ಣೌಮೇಧಾಚಸಾತ್ಮ್ಯಜಾನಿ ||**

## (೧) ಗರ್ಭದಲ್ಲಿ ಪಿತೃಜ
## ತಂದೆಯ ಅಂಶದಿಂದ ಉತ್ಪನ್ನವಾದವುಗಳು

ಗರ್ಭದ ತಲೆಕೂದಲು, ಗಡ್ಡಮೀಸೆ, (ಮುಂದೆ ಬರತಕ್ಕವು)ರೋಮ (ಮೈಮೇಲೆ ಎಲ್ಲ ಕಡೆಗಿರುವ ಕೂದಲು) ಎಲಬು, ಉಗುರು, ಹಲ್ಲು (ನಂತರ ಬರತಕ್ಕವು) ಸಿರಾ, ಸ್ನಾಯು, ಧಮನೀ ರೇತಸ್ಸು (ತಾರುಣ್ಯದಲ್ಲಿ ಪ್ರಕಟವಾಗುವದು) ಸ್ಥಿರವಾದವುಗಳೆಲ್ಲವೂ, ತಂದೆಯ ಅಂಶದಿಂದ ಗರ್ಭದಲ್ಲಿ ಉತ್ಪನ್ನವಾದವುಗಳು.

## (೨) ಗರ್ಭದಲ್ಲಿ ಮಾತೃಜವಾದವುಗಳು

ಮಾಂಸ, ರಕ್ತ, ಮೇದಸ್ಸು, ಮಜ್ಜಾ, ಹೃದಯ, ನಾಭಿ, (ಹೊಕ್ಕಳು) ಯಕೃತ್, ಪ್ಲೀಹಾ, ಅಂತ್ರ, (ಕರಳು) ಗುದ, (ಮಲದ್ವಾರ) ಮೊದಲಾದ ಮೃದು ವಿಭಾಗಗಳು, ತಾಯಿಯಅಂಶದಿಂದಗರ್ಭದಲ್ಲುಂಟಾದವುಗಳು.

**ಚರಕ ಮತವು:—** ಕ್ಲೋಮ, ಚರ್ಮ, ವೃಕ್ಕ (ಮಾಂಸ ಪಿಂಡ ಗಳು) ಬಸ್ತಿ, ಪಕ್ವಾಶಯ, (ಮಲಾಶಯ) ಆಮಾಶಯ, ಗುದದ ಆದಿಭಾಗ, ಅಂತ್ಯಭಾಗ, ಸ್ಥೂಲಾಂತ್ರ, (ದೊಡ್ಡಕರುಳು) ಕ್ಷುದ್ರಾಂತ್ರ, (ಸಣ್ಣಕರುಳು) ವಪೆಯನ್ನು ಒಯ್ಯುವ ನಲಿಕೆಗಳು, (ತೈಲವರ್ತಿಕಾ) ಇವುಗಳು ಮಾತೃಜ ವೆಂದು ವಿಸ್ತಾರವಾಗಿ ಹೇಳಿರುತ್ತಾರೆ.

## (೩) ರಸದಿಂದ ಗರ್ಭದಲ್ಲುಂಟಾದವುಗಳು

ಶರೀರೋಪಚಯ, (ದೇಹದ ಪರಿಪುಷ್ಟತೆಯು) ಬಲವು, ವರ್ಣ, (ಬಣ್ಣ ಹೊಳಪು) ಸ್ಥಿತಿ, (ಬಮುಕಿ ಬೆಳೆಯುವದು) ಹಾನಿ, (ನಾಶವಾಗುವಿಕೆ ಹೀನ, ದುರ್ಬಲವಾಗುವಿಕೆ) ಇವು ಗರ್ಭಕ್ಕೆ ಗರ್ಭಿಣಿಯ ಆಹಾರರಸ ದಿಂದುಂಟಾಗುತ್ತವೆ.

**ಚರಕ ಮತವು:—** ತಾಯಿ ಗರ್ಭಗಳ, ಪೋಷಣೆ, ಗರ್ಭಾಭಿವೃದ್ಧಿ, ಅಂಗೋಪಾಂಗಗಳನ್ನುಂಟುಮಾಡುವದು, ಪ್ರಾಣಾನುಬಂಧ, (ಬಲೋಪ ಚಯ) ತೃಪ್ತಿ, ಪುಷ್ಟಿ, ಉತ್ಸಾಹ, ಈವುಗಳು ಯೋಗ್ಯ ರಸ ಸೇವನೆಯಿಂದ ಉಂಟಾದವುಗಳು.

## (೪) ಆತ್ಮಾನುಬಂಧವಾಗಿ ಗರ್ಭದಲ್ಲುಂಟಾದವುಗಳು

ಏಕಾದಶ ಇಂದ್ರಿಯಗಳು, ಜ್ಞಾನ, (ಮೋಕ್ಷ ವಿಷಯಕ ತಿಳುವಳಿಕೆ) ವಿಜ್ಞಾನ (ಶಿಲ್ಪಾದಿ ವಿಷಯಕ ಜ್ಞಾನ) ಆಯುಸ್ಸು, ಸುಖ, ದುಃಖ ಇವೆ ಲ್ಲವು ಆತ್ಮಜಗಳು.

**ಚರಕ ಮತವು:—** ಅನೇಕ ಯೋನಿಗಳಲ್ಲಿ ಉತ್ಪತ್ತಿ, ಆಯುಸ್ಸು, ಆತ್ಮಜ್ಞಾನ, ಮನಸ್ಸು, ಇಂದ್ರಿಯಗಳು, ಪ್ರಾಣಪಾನಗಳು, ಇಂದ್ರಿಯಗಳ ಪ್ರೇರಣೆ, ದಾರಣೆಗಳು, ಆಕೃತಿ, ಸ್ವರ, ವರ್ಣ ಮೊದಲಾದವುಗಳೂ ಸುಖ, ದುಃಖ, ಇಚ್ಛಾ, ದ್ವೇಷ, ಚೇತನಾ, ಧೃತಿ, ಬುದ್ಧಿ, ಸ್ಮೃತಿ, ಅಹಂಕಾರ ಪ್ರಯತ್ನ ಇವು ಆತ್ಮಜವಾದವುಗಳು.

### (೫) ಗರ್ಭದಲ್ಲಿ ಸತ್ವದಿಂದುತ್ಪನ್ನವಾದವುಗಳು

**ಚರಕ ಮತವು॥** ಭಕ್ತಿಃ, ಪೂಜ್ಯರಲ್ಲಿ ಆದರವು, ಶೀಲಂ ಸದ್ವೃತ್ತಿ, ಶೌಚಂ ಸ್ವಚ್ಛತೆ, ದ್ವೇಷ, ಸ್ಮೃತಿಃ ನೆನಪು, ಮೋಹ ಅಜ್ಞಾನ, ತ್ಯಾಗ, ಮಾತ್ಸರ್ಯ, ಶೌರ್ಯ, ಭಯ, ಕ್ರೋಧ, ತಂದ್ರಾ (ಮಬ್ಬಾದಂತೆ ಯಿರುವದು.) ಉತ್ಸಾಹ, ಕಠೋರ (ಕ್ರೂರ), ಮೃದುತ್ವ (ವಿನಯ), ಗಾಂಭೀರ್ಯ (ದೃಢತೆಯು) ಚಂಚಲತೆ, ಇವೇ ಮೊದಲಾದವುಗಳು ಸತ್ವ ದಿಂದುತ್ಪನ್ನವಾದವುಗಳು.

### (೬) ಗರ್ಭದಲ್ಲಿ ಸಾತ್ಮ್ಯಜವಾದವುಗಳು

**ವೀರ್ಯ, ಆರೋಗ್ಯ, ಬಲ, ವರ್ಣ, ಮೇಧಾ,** (ಬುದ್ಧಿ) ಇವು ಸಾತ್ಮ್ಯಜಗಳು.

**ಚರಕ ಮತವು:—**ಆರೋಗ್ಯ, ಆಲಸ್ಯಯಿಲ್ಲದೇ ಇರುವದು. ಅತ್ಯಾಶೆ ಯಿಲ್ಲದಿರುವದು, ಇಂದ್ರಿಯಗಳು ಪ್ರಸನ್ನವಾಗಿರೋಣವು, ಸ್ವರ, ವರ್ಣಗಳು, ಬೀಜಸಂಪತ್ತು (ಶುಕ್ರ) ರತಿ ಸಮಯದಲ್ಲಿ ಬಹಳ ಆನಂದವು, ಇವು ಸಾತ್ಮ್ಯಿ ದಿಂದ ಗರ್ಭದಲ್ಲುಂಟಾದವುಗಳು.

## ಸತ್ವಾದಿ ದೇಹ ಲಕ್ಷಣ

**ಸತ್ವಾದಿ ದೇಹ ಲಕ್ಷಣಗಳು: –** ಸಾತ್ವಿಕ, ರಾಜಸ, ತಾಮಸ, ಭೇದಗಳಿಂದ ಹದಿನಾರು ಭೇದಗಳಾಗುತ್ತವೆ. ಅವನ್ನು ಕ್ರಮಶಃ ಹೇಳುತ್ತಾರೆ

## ಸಾತ್ವಿಕಕಾಯ ಲಕ್ಷಣಂ ಸಾತ್ವಿಕಾಯಾಃ ಸಪ್ತ ॥೭॥

### ಬ್ರಹ್ಮಕಾಯಲಕ್ಷಣ ॥೧॥

ಶೌಚಮಾಸ್ತಿಕ್ಯಮಭ್ಯಾಸೋವೇದೇಷುಗುರುಪೂಜನಂ ॥
ಪ್ರಿಯಾತಿಥಿತ್ವಮಿಜ್ಯಾಚಬ್ರಹ್ಮಕಾಯಸ್ಯ ಲಕ್ಷಣಂ ॥

(ಸುಶ್ರುತ॥ ಶಾರೀರ॥ ಅ ೫ ಶ್ಲೋ॰ ೮೧ ರಿಂದ)

ಶುದ್ಧವಾಗಿರುವದು, ಆಸ್ತಿಕತೆ, ವೇದಾಭ್ಯಾಸ, ಗುರುಗಳಲ್ಲಿ ಆದರೆ, ಅತಿಥಿ ಅಭ್ಯಾಗತರ ಆತಿಥ್ಯ, ಯಜ್ಞಯಾಗಾದಿಗಳನ್ನು ಮಾಡೋಣ ಇವು ಬ್ರಹ್ಮಕಾಯದ ಲಕ್ಷಣಗಳು.

### ಮಾಹೇಂದ್ರಕಾಯ ಲಕ್ಷಣ ॥೨॥

ಮಾಹಾತ್ಮ್ಯಂಶೌರ್ಯಮಾಜ್ಞಾಚಸತತಂ ಶಾಸ್ತ್ರಬುದ್ಧಿತಾ ॥
ಭೃತ್ಯಾನಾಂಭರಣಂಚಾಪಿಮಾಹೇಂದ್ರಂ ಕಾಯಲಕ್ಷಣಂ ॥

ಮಹತ್ವಾಕಾಂಕ್ಷೆ, ಮತ್ತೂ ಮಹಾಪ್ರಭಾವ, ಶೌರ್ಯ, ಆಜ್ಞಾ ಮಾಡೋಣ, ಯಾವಾಗಲೂ ಶಾಸ್ತ್ರ ವಿಚಾರ ಪರನಾಗುವದು, ಆಳು, ಸೇವ ಕರನ್ನು ಯೋಗ್ಯ ರೀತಿಯಿಂದ ನಡೆಯಿಸಿಕೊಳ್ಳುವದು, ಇದು ಮಾಹೇಂದ್ರ ಕಾಯದ ಲಕ್ಷಣವು.

### ವರುಣಕಾಯ ಲಕ್ಷಣ ॥೩॥

ಶೀತಸೇವಾಸಹಿಷ್ಣುತ್ವಂ ಪೈಂಗಲ್ಯಂಹರಿಕೇಶಿತಾ॥ಪ್ರಿಯವಾದಿ
ತ್ವಮಿತ್ಯೇತದ್ವಾರುಣಂ ಕಾಯಲಕ್ಷಣಂ ॥

ಸೀತವಾದ ಪದಾರ್ಥ ಸೇವನೆ, ಥಂಡಿಯಲ್ಲಿರುವದು, ಸಹನತೆ, ಕಪಿಲ ವರ್ಣವು (ಕಪ್ಪುಕೆಂಪುಮಿಶ್ರ) ಸಿಂಹ ಜಡೆಯಂತೆ ಕೂದಲು, ಪ್ರಿಯ ಮಾತನ್ನಾಡುವದು, ವರುಣಕಾಯದ ಲಕ್ಷಣವು.

## ಕೌಬೇರಕಾಯ ಲಕ್ಷಣ ||೪||

**ಮಧ್ಯಸ್ಥತಾಸಹಿಷ್ಣುತ್ವಮರ್ಥಸ್ಯಾಗಮಸಂಚಯೌ ||**
**ಮಹಾಪ್ರಸವಶಕ್ತಿತ್ವಂ ಕೌಬೇರಂಕಾಯಲಕ್ಷಣಂ ||**

ತಟಸ್ಥನಾಗಿರುವದು, ತಾಳ್ಮೆ, ಧನಾರ್ಜನೆ ಮತ್ತು ಸಂಚಯ, ಪ್ರಜೋತ್ಪಾದನ ಸಾಮರ್ಥ್ಯ ಹೆಚ್ಚಿಗೆ ಇರೋಣ, ಇವು ಕುಬೇರಕಾಯ ಲಕ್ಷಣಗಳು.

## ಗಂಧರ್ವಕಾಯ ಲಕ್ಷಣ ||೫||

**ಗಂಧಮಾಲ್ಯಪ್ರಿಯತ್ವಂಚನೃತ್ಯವಾದಿತ್ರಕಾಮಿತಾ ||**
**ವಿಹಾರಶೀಲತಾಚೈವಗಾಂಧರ್ವಂ ಕಾಯಲಕ್ಷಣಂ ||**

ಗಂಧ, ಹೂವಿನ ಮಾಲೆಗಳಲ್ಲಿ ಪ್ರೀತಿಯು, ನರ್ತನ, ವೀಣಾ ಮೊದಲಾದವುಗಳಲ್ಲಿ ಆಸಕ್ತಿ, ವಿಹರಿಸುವಗುಣ, ಇವು ಗಂಧರ್ವಕಾಯದ ಲಕ್ಷಣಗಳು.

## ಯಮಸತ್ವ ದೇಹಲಕ್ಷಣ ||೬||

**ಪ್ರಾಪ್ತಕಾರೀದೃಢೋತ್ಥಾನೋ ನಿರ್ಭಯಃ ಸ್ಮೃತಿವಾನ್ ಶುಚಿಃ|| ರಾಗಮೋಹಮದದ್ವೇಷೈಃ ವರ್ಜಿತೋಯಾಮ್ಯಸತ್ವ ವಾನ್ ||**

ಯೋಗ್ಯವಾದ ಕಾರ್ಯವನ್ನು ಮಾಡುವವನು, ಆರಂಭಿಸಿದ ಕಾರ್ಯವನ್ನು ಬಿಡದವನು, ಭಯವಿಲ್ಲದಿರುವಿಕೆ, ಶುಚಿಯಾಗಿರುವದು, ತನ್ನದೆಂಬ ಆಸಕ್ತಿ, ಅಜ್ಞಾನ, ದ್ವೇಷ, ಅಹಂಕಾರ ಇವಿಲ್ಲದವನು, ಯಮಸತ್ವವುಳ್ಳವನು.

## ಋಷಿಸತ್ವ ದೇಹಲಕ್ಷಣ ||೭||

**ಜಪವ್ರತ ಬ್ರಹ್ಮಚರ್ಯಹೋಮಾಧ್ಯಯನ ಸೇವಿನಮ್ ||**
**ಜ್ಞಾನವಿಜ್ಞಾನಸಂಪನ್ನಮೃಷಿತ್ವಂ ನರಂವಿದುಃ ||**

ಮಂತ್ರಾನುಷ್ಠಾನ, ವ್ರತ, ಬ್ರಹ್ಮಚರ್ಯ, ಹೋಮ, ಅಧ್ಯಯನಾದಿಗಳನ್ನು ಮಾಡುವವನು. ಜ್ಞಾನ, ವಿಜ್ಞಾನಯುಕ್ತನಾದವನು, ಋಷಿಸತ್ವ ದೇಹವುಳ್ಳವನು; ಇವು ಏಳು ಸಾತ್ವಿಕ ದೇಹಗಳು.

ರಾಜಸದೇಹ ಆರು ಪ್ರಕಾರವಾದದ್ದಿರುತ್ತನೆ. ಅವುಗಳಲ್ಲಿ:—

ಆಸುರಕಾಯ ಲಕ್ಷಣವು ॥೧॥

ಐಶ್ವರ್ಯವಂತಂರೌದ್ರಂಚ ಶೂರಂಚಂಡಮಸೂಯಕಂ ॥
ಏಕಾಶಿನಂಚೌದರಿಕಮಾಸುರಂ ಸತ್ವಮೀದೃಶಂ ॥

ಧನ ಸಂಗ್ರಹವುಳ್ಳ ಅಥವಾ ಅಧಿಕಾರ ನಡೆಸುವ ಗುಣವುಳ್ಳ, ರೌದ್ರ (ಹೆದರಿಕೆ ಬರುವಂಥ) ಪರಾಕ್ರಮವುಳ್ಳ, ತೀವ್ರಕೋಪ, ಪರರ ಗುಣಗಳಲ್ಲಿ ಮತ್ಸರ, ಒಬ್ಬನೇ ತಿನ್ನುವವ, ಹೊಟ್ಟೆಬಾಕ ಗುಣವು, ಇವುಗಳು ರಾಕ್ಷಸ ಕಾಯದ ಲಕ್ಷಣಗಳು.

ಸರ್ಪಸತ್ವಕಾಯ ಲಕ್ಷಣವು ॥೨॥

ತೀಕ್ಷ್ಣಮಾಯಾಸಿನಂಭೀರುಂಚಂಡಂಮಾಯಾನ್ವಿತಂತಥಾ ।
ವಿಹಾರಾಚಾರಚಪಲಂಸರ್ಪಸತ್ವಂ ವಿದುರ್ನರಂ ॥

ಬಹಳ ಕ್ರೂರವಾದ, ಆಯಾಸ ಹೊಂದುವ, ಭಯಪಡುತ್ತಿರುವ, ತೀವ್ರ ಸಿಟ್ಟುಳ್ಳ, ಅಡಗಿಕೊಂಡಿರುವ, ಅಡ್ಡಾಡುವಿಕೆ, ಮುಂತಾದ ನಡತೆ ಯಿವುಗಳೂ ಚಂಚಲವಾಗಿರುವ ದೇಹವು ಸರ್ಪಸತ್ವವುಳ್ಳದ್ದು.

ಪಕ್ಷಿಕಾಯದ ಲಕ್ಷಣವು ॥೩॥

ಪ್ರವೃದ್ಧಕಾಮಸೇವೀಚಾಪ್ಯಜಸ್ರಾಹಾರಏವಚ ॥
ಅಮರ್ಷಣೋऽನವಸ್ಥಾಯೀಶಾಕುನಂಕಾಯ ಲಕ್ಷಣಂ ॥

ಅತ್ಯಂತ ರತಿಸುಖ ಭೋಗಿಸುವವನು, ಯಾವಾಗಲೂ ಆಹಾರ ತಿನ್ನು ವವನೂ, ಸಿಟ್ಟಿನವನು, ಒಂಡೇ ಸ್ಥಳದಲ್ಲಿ ನಿಲ್ಲದವನೂ, ಶಾಕುನಕಾಯ (ಪಕ್ಷಿ) ವುಳ್ಳವನೆಂದು ತಿಳಿಯಬೇಕು.

ರಾಕ್ಷಸಕಾಯ ಲಕ್ಷಣವು ॥೪॥

ಏಕಾಂತಗ್ರಾಹಿತಾರೌದ್ರಮಸೂಯಾಧರ್ಮಬಾಹ್ಯತಾ ॥
ಭೃಶಮಾತ್ರಂತಮಶ್ಚಾಪಿರಾಕ್ಷಸಂ ಕಾಯಲಕ್ಷಣಂ ॥

ಗುಪ್ತವಾಗಿ ಮಂದಿಯನ್ನು ಹಿಡಿಯುವ ಗುಣ, ಭೀಷಣವಾದ ರೂಪ, ಅಸೂಯಾ, ಅಧರ್ಮಾಚರಣೆ, ಅತ್ಯಂತ ತಮೋಗುಣವ್ಯಾಪಾರವುಳ್ಳ ಶರೀರವು, ರಾಕ್ಷಸ ಕಾಯವು.

**ಪಿಶಾಚಕಾಯ ಲಕ್ಷಣವು ||೫||**

**ಉಚ್ಛಿಷ್ಟಾಹಾರತಾತೈಕ್ಷ್ಣ್ಯಂಸಾಹಸಪ್ರಿಯತಾತಥಾ ||**
**ಸ್ತ್ರೀಲೋಲುಪತ್ವಂನೈರ್ಲಜ್ಯಂ ಪೈಶಾಚಂ ಕಾಯಲಕ್ಷಣಂ ||**

ತಿಂದು ಬಿಟ್ಟದ್ದನ್ನು ತಿನ್ನುವ, ಸಿಟ್ಟುಳ್ಳ, ಸಾಹಸ ಗುಣ, ಸ್ತ್ರೀಯರಲ್ಲಿ ಆಸಕ್ತಿ, ನಾಚಿಕೆ ಇಲ್ಲದಿರೋಣ, ಇವು ಪಿಶಾಚ ಶರೀರವುಳ್ಳವರ ಲಕ್ಷಣವು

**ಪ್ರೇತಸತ್ವ ದೇಹಲಕ್ಷಣ ||೬||**

**ಅಸಂವಿಭಾಗಮಲಸಂದುಃಖಶೀಲಮಸೂಯಕಂ ||**
**ಲೋಲುಪಂಚಾಪ್ಯದಾತಾರಂ ಪ್ರೇತಸತ್ವಂ ವಿದುರ್ನರಂ ||**

ಯಾವದು ಹೇಗೆಂದು ತಿಳಿಯುವ ವಿಚಾರವಿಲ್ಲದಿರುವಿಕೆ, ಆಲಸ್ಯವುಳ್ಳ, ಯಾವಾಗಲೂ ದುಃಖ ಪಡುತ್ತಿರುವ, ಅಸೂಯೆ, ಆಶೆಬುರುಕ, ಎರಡನೆಯವರಿಗೆ ಕೊಡುವ ಗುಣವಿಲ್ಲದವನು, ಪ್ರೇತಸತ್ವವುಳ್ಳವನು. ಅಸುರಾದಿಆರು ಪ್ರಕಾರ ರಾಜಸಕಾಯಲಕ್ಷಣವು.

**ತಾಮಸ ಪ್ರಕೃತಿಯ ದೇಹವು ಮೂರು ಪ್ರಕಾರವಾದದ್ದು:-**

**ಪಾಶವ ಶರೀರವು ||೧||**

**ದುರ್ಮೇಧಸ್ತ್ವಂಮಂದತಾಚಸ್ವಪ್ನೆಮೈಥುನನಿತ್ಯತಾ ||**
**ನಿರಾಕರಿಷ್ಣುತಾಚೈವವಿಜ್ಞೇಯಾಃ ಪಾಶವಾಃ ಗುಣಾಃ ||**

ದುರ್ಬುದ್ಧಿ, ಜಾಡ್ಯವುಳ್ಳ, ನಿತ್ಯದಲ್ಲಿಯೂ ಸ್ವಪ್ನೇಂದ್ರಿಯವಾಗೋಣ, ತಿರಸ್ಕಾರ ಗುಣವುಳ್ಳವನು, ಪಶುಶರೀರವುಳ್ಳವನು.

## ಮತ್ಸ್ಯಸತ್ವದೇಹದ ಲಕ್ಷಣವು ॥೨॥

**ಅನವಸ್ಥಿತತಾಮೌಖ್ರ್ಯ ಭೀರುತ್ವಂ ಸಲಿಲಾರ್ಥಿತಾ ॥**
**ಪರಸ್ಪರಾಭಿಮರ್ದಶ್ಚ ಮತ್ಸ್ಯಸತ್ವಸ್ಯಲಕ್ಷಣಂ ॥**

ಸ್ಥಿರತೆ ಇಲ್ಲದಿರುವ, ಮೂರ್ಖತಾ, ಹೆದರಿಕೆ, ನೀರನ್ನು ಬಯಸುವ, ತಮ್ಮ ತಮ್ಮಲ್ಲಿ ಬಡೆದಾಡುವ, ಅಥವಾ ದೊಡ್ಡ ಮೀನವು ಸಣ್ಣ ಮೀನವನ್ನು ನುಂಗುವಂತೆ, ತನಗಿಂತ ಅಲ್ಪನಾದವನನ್ನು ತನ್ನ ಸ್ವಾಧೀನಮಾಡಿಕೊಳ್ಳುವವನು, ಮತ್ಸ್ಯಸತ್ವ ದೇಹವುಳ್ಳವನು.

## ವಾನಸ್ಪತ್ಯ ದೇಹ ಲಕ್ಷಣವು ॥೩॥

**ಏಕಸ್ಥಾನರತಿರ್ನಿತ್ಯಮಾಹಾರೇಕೇವಲೇರತಃ ॥**
**ವಾನಸ್ಪತ್ಯೋನರಃ ಸತ್ವಧರ್ಮಕಾಮಾರ್ಥವರ್ಜಿತಃ ॥**

ಒಂದೇ ಸ್ಥಾನದಲ್ಲಿ ನಿತ್ಯವೂ ಇರುವದು, ಕೇವಲ ಆಹಾರ ಮಾತ್ರ ತೆಗೆದುಕೊಳ್ಳುವದೊಂದೇ ಕರ್ತವ್ಯವು, ಯಾವದೇ ಒಂದು ವಿಶೇಷ ಪ್ರಭಾವ ಯುಕ್ತದೇಹದ ಚಟುವಟಿಕೆ ಇಲ್ಲದಿರುವಿಕೆ, ಧರ್ಮ ಕಾಮಾರ್ಥಗಳಲ್ಲಿ ಸಂಗ್ರಹಮಾಡುವ ಗುಣವಿಲ್ಲದವನು, ವಾನಸ್ಪತ್ಯ(ಮರದಂತೆ)ದೇಹವುಳ್ಳವನು.
**ಸಾತ್ವಿಕದೇಹ ೭, ರಾಜಸದೇಹ ೬, ತಾಮಸದೇಹ ೩** ಹೀಗೆ ಹದಿನಾರು (೧೬) ದೇಹಗಳು

# ವಾತಾದಿ ಪ್ರಕೃತಿಗಳು

## ವಾತ ಪ್ರಕೃತಿಯು ದೇಹ ಲಕ್ಷಣ ॥೧॥

**ತತ್ರವಾತಪ್ರಕೃತಿಃ ಪ್ರಜಾಗರೂಕಃ ಶೀತದ್ವೇಷೀದುರ್ಭಗಃ ಸ್ತೇನೋಮತ್ಸರ್ಯನಾರ್ಯೋ ಗಂಧರ್ವಚಿತ್ತಃ ಸ್ಫುಟಿತಕರ ಚರಣೋಽಲ್ಪರೂಕ್ಷಸ್ಮಶ್ರುನಖಕೇಶಃ ಕ್ರೋಧೀದಂತಖಾದೀ ಚ ಭವತಿ॥** ( ಸುಶ್ರುತ ॥ ಶಾರೀರ ॥ ಅ. ೪ ಸೂ. ೬೪ )

ಬಹಳ ಎಚ್ಚರಿಕೆಯುಳ್ಳವನು, ಥಂಡಿಯನ್ನು ಸಹಿಸದವನು, ಹುರ ಬರಕ ಒಣಕ ನೋಡಲಿಕ್ಕೆ ಅಸಹ್ಯ ಕಾಣುವಂಥವನು, ಕಳ್ಳ, ಹೊಟ್ಟೇಕಿಚ್ಚುಳ್ಳವನು, ಕಾಡು ಮನುಷ್ಯನಂತೆ ಇರುವವನು, ಗೀತ ನೃತ್ಯಾದಿಗಳಲ್ಲಿ ಆಸಕ್ತಿಯುಳ್ಳವ ಮತ್ತು ರಸಿಕ ಸ್ಥಿತಿಯಿರುವವನು, ಕಾಲು, ಕೈಗಳಲ್ಲಿ ಹುರ ಬರಕು ಒಡಕು ಚರ್ಮವುಳ್ಳವನು, ಹಿಂಸಾಗುಣ, ನಿದ್ರೆಯಲ್ಲಿ ಹಲ್ಲುಕಟಿಯುತ್ತಿರುವವನು, ವಾತಪ್ರಕೃತಿ ದೇಹವುಳ್ಳವನು.

**ಅಧೃತಿರಧೃಢಸೌಹೃದಃ ಕೃತಘ್ನಃ ಕೃಶಪುರುಷೋ ಧಮನೀತತಃ ಪ್ರಲಾಪೀ ಧೃತಗತಿರಟನೋನವಸ್ಥಿತಾತ್ಮಾವಿಯತಿ ಚ ಗಚ್ಛತಿಸಂಭ್ರನೇಣಸುಪ್ತಃ ॥೬೫॥**

ಧೈರ್ಯವಿಲ್ಲದವನು,ಅಸ್ಥಿರಮಿತ್ರತೆ, ಉಪಕಾರವನ್ನರಿಯದವನು,ಕೃಶ, ಕಠೋರ ಸ್ವಭಾವ, ಧಮನಿಗಳು ಶಬ್ದ ಮಾಡುತ್ತಿರುವ ಅಥವಾ ದೇಹದಲ್ಲಿ ವ್ಯಾಪ್ತವಾದ ಧಮನಿಗಳುಳ್ಳ,(ಹೆಚ್ಚಿನದಾಗಿ ಕಾಣುವ) ಬಡಬಡಿಸುವ, ದೃತಗಾಮೀ, ಶೀಘ್ರಭಾಷೀ, ಸಂಚಾರಶೀಲ, ಚಂಚಲ, ನಿದ್ದೆ ಮಾಡಿದಾಗ ಆಕಾಶದಲ್ಲಿಸಂಚರಿಸಿದಂತೆ ಸ್ವಪ್ನವನ್ನುಕಾಣುವನು, ಇವೆಲ್ಲ ಲಕ್ಷಣವುಳ್ಳವನು ವಾತಪ್ರಕೃತಿ ಮನುಷ್ಯನು.

**ಅವ್ಯವಸ್ಥಿತಮತಿಶ್ಚಲದೃಷ್ಟಿರ್ಮಂದರತ್ನ ಧನಸಂಚಯಮಿತ್ರಃ ॥ ಕಿಂಚಿದೇವ ವಿಲಪತ್ಯನಿಬದ್ಧಂ ಮಾರುತಪ್ರಕೃತಿರೇಷ ಮನುಷ್ಯಃ ॥೬೬॥**

ಅವ್ಯವಸ್ಥಿತ ಬುದ್ಧಿಯು, ಚಂಚಲದೃಷ್ಟಿ, ಜಡವಾದ ರತ್ನ ಧನ ಸಂಚಯದಲ್ಲಿ ಪ್ರೀತಿಯುಳ್ಳವನು, ಅಥವಾ ರತ್ನಾದಿ ಸಂಚಯ ಮಾಡಿದಂಥ ಮಿತ್ರರನ್ನು ದೊರಕಿಸಿಕೊಳ್ಳುವವನು, ಯಾವಾಗಾದರೊಮ್ಮೆ ಸ್ವಲ್ಪಬಡಬಡಿಸುವವನು, ವಾತಪ್ರಕೃತಿಯವನು.

**ವಾತಿಕಾಶ್ಚಾಜಗೋಮಾಯುಶಶಾಖೂಷ್ಟ್ರಶುನಾಂ ತಥಾ ॥ ಗೃಧ್ರಕಾಕಖರಾದೀನಾಮನೂಕ್ಯೈಃ ಕೀರ್ತಿತಾಸರಾಃ ॥೬೭॥**

ಆಡು, ನರಿ, ಮೊಲ, ಇಲಿ, ಒಂಟೆ, ನಾಯಿ, ಹದ್ದು, ಕಾಗೆ, ಕತ್ತೆ, ಇವುಗಳ ಸ್ವಭಾವ, ಗುಣಗಳಂತೆ ವಾತ ಪ್ರಕೃತಿಯವರ ಸ್ವಭಾವ ಗುಣಗಳು ಇರುತ್ತವೆ.

ಪಿತ್ತ ಪ್ರಕೃತಿಯ ಶರೀರ ಲಕ್ಷಣವು ॥೨॥

**ಪಿತ್ತಪ್ರಕೃತಿಸ್ತು ಸ್ವೇದನೋದುರ್ಗಂಧಃ ಪೀತಶಿಥಿಲಾಂಗಸ್ತಾ ಮ್ರನಖನಯನತಾಲುಜಿಹ್ವೋಷ್ಠಪಾಣಿಪಾದತಲೋ, ದುರ್ಭ ಗೋವಲೀಪಲಿತಖಾಲಿತ್ಯಜುಷ್ಟೋಬಹುಭುಗುಷ್ಣ ದ್ವೇಷೀಕ್ಷಿ ಪ್ರಕೋಪಪ್ರಸಾದೋಮಧ್ಯಬಲೋಮಧ್ಯಾಯುಶ್ಚಭವತಿ, ॥**

(ಸುಶ್ರುತ॥ ಶಾರೀರ॥ ಅ ೪ ಶ್ಲೋ ೬೮)

ಬೆವರು ಬರುತ್ತಿರುವವನು, ದುರ್ಗಂಧವುಳ್ಳವನು, ಹಳದಿ, ಶಿಥಿಲವಾದ ಅವಯವವುಳ್ಳವನು, ಉಗುರು, ಕಣ್ಣು, ಕಾಲು, (ನಾಲಿಗೆಯ ಕೆಳಭಾಗ) ನಾಲಿಗೆ, ತುಟಿ, ಕಾಲು ಕೈಗಳ ತಳಭಾಗ ಇವು ಕೆಂಪುಳ್ಳವನು, ಅಸಹ್ಯ ರೂಪವುಳ್ಳವನು, ಚರ್ಮ ನೆರಿಗೆಯುಳ್ಳ, ನೆರೆಗೂದಲು, ಖಾಲಿತ್ಯವುಳ್ಳ, ಬಹಳ ಊಟಮಾಡುವವನು, ಬಿಸಿಯನ್ನೊಲ್ಲದವನು, ಶೀಘ್ರಕೋಪಿಯು, ಕೂಡ್ಲೇ ಸಂತೋಷಹೊಂದುವವನು, ಮಧ್ಯಮ ಬಲವುಳ್ಳ, ಮಧ್ಯಾಯು, ಪಿತ್ತ ಪ್ರಕೃತಿಯ ಮನುಷ್ಯನ ಲಕ್ಷಣವು.

**ಮೇಧಾವೀನಿಪುಣಮತಿರ್ವಿಗೃಹ್ಯವಕ್ತಾ ತೇಜಸ್ವೀ ಸಮಿತಿಷು ದುರ್ನಿವಾರವೀರ್ಯಃ ॥ ಸುಪ್ತಃ ಸನ್ ಕನಕಪಲಾಶಕರ್ಣಿ ಕಾರಾನ್ ಸಂಪಶ್ಯೇದಪಿಚಹುತಾಶವಿದ್ಯುದುಲ್ಕಾಃ ॥೬೯॥**

ಬುದ್ಧಿವಂತನು, ಜಾಣ್ಮೆಯುಳ್ಳವನು ಪ್ರತಿ ಶಬ್ದವನ್ನು ವಿಂಗಡಿಸಿ ವಿಶದವಾಗಿ ಹೇಳುವವನು, ಯುದ್ಧಗಳಲ್ಲಿ ಬಹು ಪರಾಕ್ರಮಿಯು, ನಿದ್ರೆ ಯಲ್ಲಿ ಭಂಗಾರ, ಮುತ್ತುಲ ಮರದ ಹೂವು, ಕರ್ಣಿಕಾರ ಹೂವು (ಕಮಲ ದಂತೆ ಹೂವಿದ್ದು ನಿರ್ಗಂಧವಾದದ್ದು) ಇವುಗಳನ್ನು ನೋಡುತ್ತಾನೆ. ಅಗ್ನಿ, ಮಿಂಚು, ಉಲ್ಕಾಪಾತ ಇವುಗಳನ್ನು ಸ್ವಪ್ನದಲ್ಲಿ ನೋಡುವವನು ಪಿತ್ತ ಪ್ರಕೃತಿಯ ಮನುಷ್ಯನು.

**ನಭಯಾತ್ಪ್ರಣಮೋದನತೀಷ್ವವ್ಯದುಃ ಪ್ರಣತೇಷ್ವಪಿಸಾಂತ್ವ ದಾನರುಚಿಃ॥ ಭವತೀಹಸದಾವ್ಯಥಿತಾಸ್ಯಗತಿಃ ಸಭವೇದಿವಪಿತ್ತ ಕೃತಪ್ರಕೃತಿಃ ॥೭॥**

ಭಯದಿಂದ ಬಗ್ಗದ, ಮತ್ತು ವಿನಯವಿಲ್ಲದವರಲ್ಲಿ ಕಠೋರವಾಗಿ ನಡೆಯುವನು, ವಿನಯವಿದ್ದವರಲ್ಲಿ ಅವರನ್ನು ಸಮಾಧಾನ ಪಡಿಸುವನು, ಅವರಿಗೆ ಬೇಕಾದ್ದನ್ನು ಕೊಡುವದರಲ್ಲಿ ಪ್ರೀತಿಯುಳ್ಳವನಿರುತ್ತಾನೆ. ವಿಶೇಷವಾಗಿ ಮುಖಪಾಕದಿಂದ ಮೋರೆಯು ದುಃಖಿತವಾದದ್ದಿರುತ್ತದೆ. ನಡೆಯುವ ತ್ರಾಸನ್ನು ಸಹಿಸಲಾರದವನಾದ್ದರಿಂದ ಕಷ್ಟದಿಂದ ನಡೆಯುವವನಾಗಿರುತ್ತಾನೆ. ಇವು ಪಿತ್ತಪ್ರಕೃತಿಯ ದೇಹ ಲಕ್ಷಣವು.

**ಭುಜಂಗೋಲೂಕಗಂಧರ್ವ ಯಕ್ಷಮಾರ್ಜಾರವಾನರೈಃ ॥**
**ವ್ಯಾಘ್ರರ್ಕ್ಷನಕುಲಾನೂಕೈಃ ಪೈತ್ತಿಕಾಸ್ತುನರಾಃ ಸ್ಮೃತಾಃ ॥**
**(ಸುಶ್ರುತ ॥೭೧॥)**

ಸರ್ಪ, ಉಲೂಕ, (ಕಾಗಿಗೆ ವೈರಿಯಾದ ಹಾಳೀಹದ್ದು) ಗಂಧರ್ವ, ಯಕ್ಷ, ಬೆಕ್ಕು, ಮಂಗ, ವ್ಯಾಘ್ರ (ಹುಲಿ) ಋಕ್ಷ (ಕರಡಿ) ಮುಂಗಲಿ, ಇವುಗಳ ಸ್ವಭಾವ ಗುಣದಂತೆಯಿರುವವನು ಪಿತ್ತ ಪ್ರಕೃತಿಯ ಮನುಷ್ಯನು.

## ಕಫ ಪ್ರಕೃಯ ಶರೀರ ಲಕ್ಷಣವು ॥೩॥

**ಶ್ಲೇಷ್ಮಪ್ರಕೃತಿಸ್ತು ದೂರ್ವೇಂದೀವರನಿಸ್ತ್ರಿಂಶಾದ್ರಾರಿಷ್ಟಕಶರಕಾಂಡಾನಾಮನ್ಯತಮವರ್ಣಃ ಸುಭಗಃ ಪ್ರಿಯದರ್ಶನೋ ಮಧುರಪ್ರಿಯಃ ಕೃತಜ್ಞೋಧೃತಿಮಾನ್ಸಹಿಷ್ಣುರಲೋಲುಪೋಬಲವಾಂಶ್ಚಿರಗ್ರಾಹೀ, ದೃಢವೈರಶ್ಚಭವತಿ ॥೭೨॥**

ದೂರ್ವೆ, ನೀಲ ಕಮಲ, ಖಡ್ಗ, ಅಂಟಾಳಕಾಯಿ, ಬಾಣದಬುಡ, ಇವುಗಳಲ್ಲಿ ಯಾವದಾದರೊಂದರಂತೆ ವರ್ಣವುಳ್ಳವನು, ನೋಡಲು ಸುಂದರನೂ, ಯೋಗ್ಯ ಸನ್ನಿವೇಶವುಳ್ಳ ದೇಹವುಳ್ಳವನೂ, ಸಿಹಿಯಲ್ಲಿ ಆಸಕ್ತಿಯುಳ್ಳವನೂ, ಕೃತಜ್ಞ, ಧೈರ್ಯವುಳ್ಳವನು, ಸಹನೆಯುಳ್ಳ, ಆಶೆಬುರುಕನಲ್ಲದವನೂ, ಬಲವಂತನೂ, ಬಲವಾದ ನೆನಪುಳ್ಳವನೂ ದೃಢ ವೈರವುಳ್ಳವನೂ, ಕಫ ಪಕೃತಿಯ ಮನುಷ್ಯನು.

**ಶುಕ್ಲಾಕ್ಷಃ ಸ್ಥಿರಕುಟಿಲಾಲಿನೀಲಕೇಶೋಲಕ್ಷ್ಮೀವಾನ್ ಜಲದ ಮೃದಂಗಸಿಂಹಘೋಷಃ॥ ಸುಪ್ತಃ ಸನ್ ಸಕಮಲಹಂಸಚಕ್ರವಾಕಾನ್ ಸಂಪಶ್ಯೇದಪಿಚ ಜಲಾಶಯಾನ್ ಮನೋಜ್ಞಾನ್ ॥**

ಶುಭ್ರವಾದ ಕಣ್ಣುಗಳುಳ್ಳವನು, ಘಟ್ಟಿಯಾದ ಉಂಗುರ ಗೂದಲಿನ ಅತಿ ಕಪ್ಪಾದ ಸಮೂಹವುಳ್ಳವನೂ, ಧನವುಳ್ಳವನೂ, ಮೃದಂಗ ಸಿಂಹ ಇವುಗಳಂತೆ ಸ್ವರವುಳ್ಳವನೂ, ನಿದ್ರೆಯಲ್ಲಿ ಕಮಲ, ಹಂಸ, ಚಕೋರ, ಮನೋಹರಜಲಾಶಯ ಇವುಗಳನ್ನು ನೋಡುವವನೂ, ಕಫ ಪ್ರಕೃತಿಯ ಮನುಷ್ಯನು.

**ರಕ್ತಾಂತನೇತ್ರಃ ಸುವಿಭಕ್ತಗಾತ್ರಃ ಸ್ನಿಗ್ಧಚ್ಛವಿಃ ಸತ್ವಗುಣೋಪಪನ್ನಃ ॥ ಕ್ಲೇಶಕ್ಷಮೋಮಾನಯಿತಾಗುರೂಣಾಂಜ್ಞೇಯೋಬಲಾಸಪ್ರಕೃತಿರ್ಮನುಷ್ಯಃ ॥೭೪॥ (ಸುಶ್ರುತ ೭೪)**

ಕಣ್ಣಿನ ಒಳಗಡೆ ಕೆಂಪುಳ್ಳವನೂ, ಒಳ್ಳೇ ಪರಿಪುಷ್ಟ ಸನ್ನಿವೇಶ ಯೋಗ್ಯ ದೇಹವುಳ್ಳವನೂ, ಸತ್ವಗುಣವುಳ್ಳವನೂ, ಕಷ್ಟ ಸಹಿಷ್ಣುವೂ, ಗುರುಗಳಿಗೆ ಮಾನ್ಯತೆ ಕೊಡುವವನೂ, ಕಫಪ್ರಕೃತಿಯ ಮನುಷ್ಯನು.

**ದೃಢಶಾಸ್ತ್ರಮತಿಃ ಸ್ಥಿರಮಿತ್ರಧನಃ ಪರಿಗಣ್ಯಚಿರಾತ್ ಪ್ರದದಾತಿಬಹು,॥ ಪರಿನಿಶ್ಚಿತವಾಕ್ಯಪದಃ ಸತತಂಗುರುಮಾನಕರಶ್ಚ ಭವೇತ್ ಸಸದಾ, ॥೭೫॥**

ಶಾಸ್ತ್ರದಲ್ಲಿದೃಢಬುದ್ಧಿಯೂ, ಸ್ಥಿರವಾದ ಮಿತ್ರಧನವುಳ್ಳವನೂ, ಬಹು ವಿಚಾರ ಮಾಡಿ ಬಹಳ ದಾನಮಾಡತಕ್ಕವನೂ, ನಿರ್ಣಯಯುಕ್ತವಾದ ಮಾತನ್ನೇ ಆಡುವವನೂ, ಯಾವಾಗಲೂ ಗುರುಗಳಿಗೆ ಮಾನಕೊಡತಕ್ಕವನೂ, ಕಫ ಪ್ರಕೃತಿಯವನು ಇರುತ್ತಾನೆ.

**ಬ್ರಹ್ಮರುದ್ರೇಂದ್ರವರುಣೈಃ ಸಿಂಹಾಶ್ವಗಜಗೋವೃಷೈಃ॥ ತಾರ್ಕ್ಷ್ಯಹಂಸಸಮಾನೂಕಾಃ ಶ್ಲೇಷ್ಮಪ್ರಕೃತಯೋನರಾಃ ॥**

ಬ್ರಹ್ಮ, ರುದ್ರ, ಇಂದ್ರ, ವರುಣ ಇವರಂತೆ, ಸಿಂಹ, ಕುದುರೆ, ಆನೆ, ಆಕಳು, ಎತ್ತು, ಗರುಡ, ಹಂಸ ಇವುಗಳಂತೆ ಗುಣವುಳ್ಳವನು, ಶ್ಲೇಷ್ಮ ಪ್ರಕೃತಿಯ ಮನುಷ್ಯನು. ವಾತಾದಿ ಪ್ರಕೃತಿಗಳ ದೇಹ ಲಕ್ಷಣಗಳು ಮುಗಿದವು.

## ದ್ವಿದೋಷ ತ್ರಿದೋಷ ಪ್ರಕೃತಿ

ದ್ವಯೋರ್ವಾತಿಸೃಣಾಂವಾಪಿಪ್ರಕೃತೀನಾಂತುಲಕ್ಷಣೈಃ
ಜ್ಞಾತ್ವಾಸಂಸರ್ಗಜಾವೈದ್ಯಃ ಪ್ರಕೃತೀರಭಿನಿರ್ದಿಶೇತ್ ॥೭೭॥

ಎರಡೆರಡು ದೋಷಗಳಿಗೊಂದರಂತೆ, ಮೂರು ಪ್ರಕೃತಿಗಳು. ಮೂರೂ ದೋಷಗಳುಳ್ಳದ್ದು ಒಂದು. ಹೀಗೆ ನಾಲ್ಕು (೪). ವಾತಾದಿ ಒಂದೊಂದರಂತೆ ಈ ಹಿಂದೆ ವಿವರಿಸಿದ ಪ್ರಕೃತಿ ಮೂರು (೩). ಒಟ್ಟು ಏಳು (೭). ವಾತಾದಿ ದೋಷ, ದ್ವಿದೋಷ, ತ್ರಿದೋಷಗಳಿಂದ ಯುಕ್ತವಾದ ಶರೀರ ಲಕ್ಷಣವನ್ನು ಹೇಳಿದ್ದಾರೆ. ದ್ವಿದೋಷ, ತ್ರಿದೋಷ ಪ್ರಕೃತಿಗಳನ್ನುಊಹಿಸಿ ತಿಳಿಯಬೇಕು.

## ಪ್ರಕೃತಿ ವಿಷಯದಲ್ಲಿಯ ವಿಶೇಷ

ಸತ್ವಾದಿಗುಣ ಭೇದಗಳಿಂದ ಚಿತ್ತ (ಮನಸ್ಸಿನ) ಪ್ರಕೃತಿಗಳನ್ನು ನಿರ್ದೆಶಿಸಿ, ನಂತರ ವಾತಾದಿಗಳು ಅವಶ್ಯವಾಗಿ ಶರೀರಾರಂಭಕ ಪ್ರಕೃತಿಗಳಾದ್ದರಿಂದ ನಿರ್ದೇಶಿಸಿದ್ದಾರೆ. ಇದು ಅಪ್ರಾಸಂಗಿಕವೆಂದೆನಿಸಬಹುದು. ಸೂಕ್ಷ್ಮವಾಗಿ ಶಾಸ್ತ್ರದೃಷ್ಟ್ಯಾ ವಿವೇಚಿಸುವ ವಿಷಯದಲ್ಲಿ ಅತ್ಯಂತ ಸಂಬಂಧ ಇರುವದರಿಂದ ಪ್ರಕೃತವಾಗಿ ಇದರ ವಿವೇಚನೆಬೇಕು:- ವಾತಾದಿ ಪ್ರಕೃತಿಗಳು ಭೂತಾತ್ಮಕವೆಂದು ಕೆಲವರು ಹೇಳುತ್ತಾರೆ. ಇದರಿಂದ ಭೌತಿಕ ವಿಚಾರದಿಂದಲೂ ಸಹ ವಿಶೇಷವಾಗಿ ವಾತಾದಿ ಪ್ರಕೃತಿಗಳನ್ನು ಗ್ರಹಿಸಲೇ ಬೇಕೆಂದು ಸೂಚಿತವಾಗುತ್ತದೆ. ಇದರ ವಿವರವು:—

## ಭೂತ ಪ್ರಕೃತಿ

ಪ್ರಕೃತಿಮಿಹನರಾಣಾಂಭೌತಿಕೀಂಕೇಚಿದಾಹುಃ :ಪವನದಹನ
ತೋಯೈಃ ಕೀರ್ತಿತಾಸ್ತಾಸ್ತುತಿಸ್ರಃ ॥ ಸ್ಥಿರವಿಪುಲಶರೀರಃ
ಪಾರ್ಥಿವಶ್ಚಕ್ಷಮಾವಾನ್ ಶುಚಿರಥಚಿರಜೀವೀನಾಭಸಃ ಖೈರ್ಮ
ಹದ್ಭಿಃ ॥ (ಸುಶ್ರುತ॥ ಶಾರೀರ॥ ಅ ೫ ಸೂ ೮೦)

ಮನುಷ್ಯರ ಪ್ರಕೃತಿಯು ಪಂಚಭೂತಾತ್ಮಕಗಳ ಪ್ರಕೃತಿಯಂತೇ ಇರುತ್ತದೆಂದು ಕೆಲವರು ಹೇಳುತ್ತಾರೆ. ಅವರ ಮತದಂತೆ ವಾಯು, ಅಗ್ನಿ, ಜಲ ಇವುಗಳು, ವಾತ, ಪಿತ್ತ, ಕಫಗಳೆಂಬ ದೇಹದಲ್ಲಿಯ ಪ್ರಕೃತಿ ಸ್ವರೂಪ ದಿಂದ ಈ ಹಿಂದೆ ಹೇಳಲ್ಪಟ್ಟಿರುತ್ತವೆ. ಇನ್ನುಳಿದವುಗಳೆಂದರೆ ಪೃಥಿವಿ, ಆಕಾಶಗಳು. ಅವುಗಳ ಗುಣಗಳು:—

**ಪಾರ್ಥಿವ ಪ್ರಕೃತಿ:—** ಸ್ಥಿರವಾಗಿಯೂ, ವಿಶಾಲವಾಗಿಯೂ, ಸಹ ನತೆಯುಕ್ತವಾಗಿಯೂ, ಶುಚಿಯಾಗಿಯೂ, ಚಿರಾಯುವಾಗಿಯೂ ಇರುವ ದೇಹವುಳ್ಳವನು, ಪೃಥಿವೀ ತತ್ವದ ಶರೀರವುಳ್ಳವನು.

**ಆಕಾಶತತ್ವ ಪ್ರಕೃತಿ:—** ಆಕಾಶವೆಂದರೆ ದೇಹದಲ್ಲಿಯ ಪೊಳ್ಳು ಭಾಗ, ಮತ್ತೂ ರಂಧ್ರಗಳು. ಕಿವಿ, ಮೂಗು ಮೊದಲಾದ ರಂಧ್ರಗಳು ವಿಸ್ತಾರವುಳ್ಳವುಗಳಾಗಿದ್ದರೆ ಆಕಾಶ ತತ್ವ ಬಹುಲವಾದ ಶರೀರವುಳ್ಳವನು. ಇವು ದೇಹದಲ್ಲಿಯ ಪಂಚಭೂತ ಲಕ್ಷಣಗಳು. ಯಾವದರ ಲಕ್ಷಣ ವಿಶೇಷ ಗೋಚರವಾಗುತ್ತದೆಯೋ ಆ ಭೂತಾತ್ಮಕ ದೇಹವುಳ್ಳವನೆಂದು ತಿಳಿಯ ಬೇಕು. ಅದು ಪ್ರಾಧಾನ್ಯವಾಗಿರುತ್ತದೆಂಬರ್ಥವು.

# (೧೩) ಬಯಕೆಯ ಲಕ್ಷಣ

## ದೌಹೃದ ಲಕ್ಷಣಾನಿ

ಗರ್ಭಿಣಿಯರಿಗೆ ೩ ತಿಂಗಳ ನಂತರ ಬಯಕೆಯಾಗುತ್ತದೆ. ಕೆಲವರಿಗೆ ಎರಡನೇ ತಿಂಗಳಲ್ಲಿಯೂ ಸಹ ಆರಂಭವಾಗುವದುಂಟು. ಕೆಲವರು ಬಯಕೆ ಲಕ್ಷಣವು ವಾಂತಿ ಮತ್ತೂ ಯಾವದಾದರೊಂದು ವಸ್ತುವಿನಲ್ಲಿ ವಿಶೇಷ ಅಭಿಲಾಷೆ ಉಂಟಾಗದವರು ಸಹ ದೃಷ್ಟಿಗೋಚರವಾಗುತ್ತಾರೆ. ಸಾಮಾ ನ್ಯತಃ ಮೂರು ತಿಂಗಳು ಕಳೆದ ನಂತರ, ನಾಲ್ಕನೆಯ ತಿಂಗಳಲ್ಲಿ ಬಯಕೆ ಯಾಗುವದನ್ನು ವಿವರಿಸಿದ್ದಾರೆ. ಬಯಕೆ ಉತ್ಪನ್ನವಾಗಲು ಕಾರಣ ವೇನಂದರೆ, ನಾಲ್ಕನೇ ತಿಂಗಳಿನಲ್ಲಿ ಗರ್ಭದ ಅಂಗಪ್ರತ್ಯಂಗಗಳು ಸ್ಫುಟ

ವಾಗಿ ಉತ್ಪನ್ನವಾಗುತ್ತವೆಯಾದ್ದರಿಂದ, ಗರ್ಭದ ಹೃದಯ ಸ್ಥಾನವು ಉಂಟಾಗುವದು. ಹೃದಯವೇಸ್ಥಾನವಾದ ಚೇತನಾಧಾತು ಅಭಿವ್ಯಕ್ತವಾಗುತ್ತದೆ. ಮನಸ್ಸಿಗೆ ಸ್ಥಾನ (ಆಶ್ರಯ) ವಾದ ಹೃದಯದ ಉತ್ಪತ್ತಿಯಿಂದ ಮನಸ್ಸು ಗರ್ಭದಲ್ಲಿ ಪ್ರಾದುರ್ಭವಿಸಿ, ತನಗೆ ಇಚ್ಛಿತವಾದ ವಸ್ತುವನ್ನು ಬಯಸುತ್ತದೆ. ಗರ್ಭವು ಗರ್ಭಿಣಿಯಾದ ತಾಯಿಯಿಂದಲೇ ಪೋಷಿತವಾಗುವದರಿಂದ, ಗರ್ಭಕ್ಕೆ ಅಪೇಕ್ಷಿತವಾದದ್ದನ್ನು ಸ್ವತಂತ್ರ ಗ್ರಹಿಸಲು ಬರುವದಿಲ್ಲ. ತನಗೆ ಬೇಕಾದ್ದನ್ನು ತಾಯಿಯ ಆಹಾರದಿಂದಲೇ ಪಡೆಯಬೇಕಾಗುತ್ತದೆ ಈ ಕಾರಣದಿಂದ ಬಯಕೆ ಆಗುವದೆಂದು ಸುಶ್ರುತಾಚಾರ್ಯರ ಸಿದ್ಧಾಂತವು.

**ಚತುರ್ಥೇಸರ್ವಾಂಗಪ್ರತ್ಯಂಗವಿಭಾಗಃ ಪ್ರವ್ಯಕ್ತೋಭವತಿ, ಗರ್ಭಹೃದಯಪ್ರಾದುರ್ಭಾವಾತ್ ಚೇತನಾಧಾತುರಭಿವ್ಯಕ್ತೋಭವತಿ, ಕಸ್ಮಾತ್? ತತ್ ಸ್ಥಾನತ್ವಾತ್ ತಸ್ಮಾದ್ಗರ್ಭಃ ಚತುರ್ಥೇ ಮಾಸ್ಯಭಿಪ್ರಾಯಮಿಂದ್ರಿಯಾರ್ಥೇಷುಕರೋತಿ, ದ್ವಿಹೃದಯಾಂಚನಾರೀಂ ದೌಹೃದಿನೀಮಾಚಕ್ಷತೆ ॥**

(ಸುಶ್ರುತ॥ ಶಾರೀರ॥ ಅ ೩ ಸೂ ೧೮)

ನಾಲ್ಕನೇ ತಿಂಗಳಿನಲ್ಲಿ ಸರ್ವಅಂಗಪ್ರತ್ಯಂಗ ವಿಭಾಗಗಳು, ಸ್ಪಷ್ಟವಾಗಿ ಉತ್ಪನ್ನವಾಗುತ್ತವೆ. ಗರ್ಭದಲ್ಲಿ ಹೃದಯ ಸ್ಥಾನ ನಿರ್ಮಾಣವಾಗುವದರಿಂದ ಚೇತನಾಧಾತು ಪ್ರಾದುರ್ಭವಿಸುತ್ತದೆ. ಇದರಿಂದ ಗರ್ಭವು ಇಂದ್ರಿಯಾರ್ಥ ವಿಷಯಗಳಲ್ಲಿ ಅಭಿಲಾಷೆಯುಕ್ತವಾದದ್ದಾಗುತ್ತದೆ. ಗರ್ಭದ ಹೃದಯ (ಮನಸ್ಸು) ಗರ್ಭಿಣೀಯ ಹೃದಯಗಳು! ಒಟ್ಟು ಎರಡು ಇರುವದರಿಂದ "ದ್ವಿಹೃದಯಾ, ದೌಹೃದಿನೀ" ಎಂದು, ಬಯಕೆ ಉತ್ಪನ್ನವಾದ ಸ್ತ್ರೀಯರ ಹೆಸರುಗಳು. ಅವುಗಳ ಸ್ವರೂಪವೇ, ದೌಹೃದ, ದ್ವೈಹೃದಯ್ಯವೆಂಬು ಶಾಸ್ತ್ರ ಪ್ರತಿಪಾದಿತವಾಗಿದೆ. ಬಯಕೆ ಉಳ್ಳವಳ ಸ್ವರೂಪ ಎಂಬರ್ಥವು

**ತದ್ಯಥಾ:-ಆರ್ತ್ತವಾದರ್ಶನಮಾಸ್ಯಸಂಸ್ರವಣಮನನ್ನಾಭಿಲಾಷಃ ಛರ್ದಿರರೋಚಕೋಽವ್ಲಕಾಮತಾ, ಚ ವಿಶೇಷೇಣಶ್ರದ್ಧಾಪ್ರಣಯನಮುಚ್ಚಾವಚೇಷು, ಭಾವೇಷುಗುರುಗಾತ್ರತ್ವಂಚಕ್ಷುಷೋಗ್ಲಾನಿಃ ಸ್ತನಯೋಃ ಸ್ತನ್ಯಮೋಷ್ಠಯೋಃಸ್ತನಮಂಡಲಯೋಶ್ಚಕಾರ್ಷ್ಣ್ಯಮತ್ಯರ್ಥಂಶ್ವಯಥುಃ ಪಾದಯೋರೀಷಲ್ಲೋಮರಾಜ್ಯುದ್ಗಮೋ, ಯೋನ್ಯಾಶ್ಚಾಟಾಲತ್ವಮಿತಿಗರ್ಭೇ ಪರ್ಯಾಗತೇರೂಪಾಣಿಭವಂತಿ ॥**

(ಚರಕ॥ ಶಾರೀರ॥ ಅ ೪ ಸೂ ೧೬)

ಮಾಸಿಕರಜಃ ಸ್ರಾವವು ಬಂದಾಗುತ್ತದೆ. ಬಾಯಲ್ಲಿ ನೀರೇಳುತ್ತಿರುವದು, ಅನ್ನದಲ್ಲಿ ವಿಶೇಷ ಅಭಿಲಾಷೆಯಿಲ್ಲದಿರುವದು, ವಾಂತಿಯಾಗೋಣ, ಹುಳಿಯಲ್ಲಿ ಅಪೇಕ್ಷೆಯು, ಅನೇಕ ವಿಧವಾದ (ಉಚ್ಚಾವಚಂ) ಮಾತಾಡುವ ವಿಷಯದಲ್ಲಿ ಹೆಚ್ಚಾಗಿ ಪ್ರೀತಿ ಉಂಟಾಗುವದು. ದೇಹ ಸ್ವರೂಪದಲ್ಲಿ ಸ್ವಲ್ಪ ಸ್ಥೂಲ ಅಥವಾ ಜಡತೆಯು ಉತ್ಪನ್ನವಾಗುವಿಕೆ, ಕಣ್ಣುಗಳಲ್ಲಿ ಗ್ಲಾನಿಯು ಸ್ತನಗಳಲ್ಲಿ (ಹಾಲು) ಸ್ತನ್ಯೋತ್ಪತ್ತಿಯು, ತುಟಿಗಳಲ್ಲಿ, ಸ್ತನಗಳ ಸುತ್ತಲಿನ ಭಾಗಗಳಲ್ಲಿ ಕಪ್ಪು ವರ್ಣವಾಗುವಿಕೆ, ಬಹಳವಾಗಿ ಕಾಲು ಮೊದಲಾದ ಅಂಗಗಳಲ್ಲಿ ಉಬ್ಬುವಿಕೆ (ಶ್ವಯಥುಃ), ಕಾಲುಗಳಲ್ಲಿ ಸ್ವಲ್ಪ ಪ್ರಮಾಣದಿಂದ ಕೂದಲುತ್ಪನ್ನವಾಗುವಿಕೆ, ಜನನೇಂದ್ರಿಯದ ವಿಕಾಸವು (ಅರಳುವದು), ಗರ್ಭವುಬೆಳೆಯುತ್ತಿರುವಾಗಮೂರನೆತಿಂಗಳಲ್ಲಿದೌಹೃದ (ಬಯಕೆ) ಲಕ್ಷಣವು ಇದರಂತೆಇರುತ್ತದೆ.

## ಬಯಕೆಯ ಲಕ್ಷಣಗಳನ್ನುತಿಳಿಯುವದರಿಂದ ಪ್ರಯೋಜನ

ಗರ್ಭಿಣೀಯರಿಗೆ ಗರ್ಭಕ್ಕನುಕೂಲವಾದ ಆಹಾರ ವಿಹಾರಗಳನ್ನು ಯೋಜಿಸುವದರಿಂದ, ಯೋಗ್ಯ ಸಮಯದಲ್ಲಿ ಶ್ರೇಷ್ಠ ಸಂತತಿಯನ್ನು; ಸುಖವಾಗಿಪ್ರಸವಿಸುತ್ತಾರೆ ತಾಯಿಯ ಆರೋಗ್ಯವೂ ಸಹ ಸಮಯ ಪ್ರಸವದಿಂದ ಯಥಾಯೋಗ್ಯವಾದದ್ದಾಗುತ್ತದೆ. ಗರ್ಭಾರಂಭ ಮೊದಲುಗೊಂಡು ಈ ಕ್ರಮಗಳ ಅವಶ್ಯಕತೆ ಇರುವದು. ಆದ್ದರಿಂದ ಗರ್ಭದಲ್ಲಿಯ

ಆಯಾಯ ತಿಂಗಳದ ಸ್ಥಿತಿ ಲಕ್ಷಣಗಳನ್ನು ಹೇಳುತ್ತಾರೆ. ಈ ಲಕ್ಷಣಗಳ ಹೊರತಾಗಿ ಅವ್ಯಕ್ತ, ಸೂಕ್ಷ್ಮ ಗರ್ಭವು, ಸ್ಫುಟವಾಗಿ ತಿಳಿಯುವದಿಲ್ಲ. ಬಯಕೆಯಾದ ಪದಾರ್ಥಗಳನ್ನು ಗರ್ಭಿಣಿಗೆ ಒದಗಿಸಿಕೊಡದಿದ್ದರೆ ಗರ್ಭವು ವಿಕೃತವಾಗುತ್ತದೆ ಗರ್ಭವು ಯಥಾಯೋಗ್ಯ ಬೆಳೆಯಲಿಕ್ಕೆ ಬಯಕೆಯ ಪೂರ್ಣತೆ (ತೃಪ್ತಿ) ಯಾಗಬೇಕು ಬಯಕೆಯನ್ನು ತಿಳಿದುಕೊಳ್ಳಬೇಕಾದರೆ, ಆದರ ಲಕ್ಷಣಬೇಕು. ಈ ಉದ್ದೇಶದಿಂದ ಬಯಕೆಯ ಲಕ್ಷಣವು ಪ್ರತಿಪಾದಿತವಾಗಿದೆ. ಇದನ್ನು ಕುರಿತು ಚರಕಾಚಾರ್ಯರ ಮತವು ಹೀಗಿದೆ.

**ತಸ್ಮಾಗರ್ಭಾಪತ್ತೇರ್ದ್ವೈರ್ಹೃದಯಸ್ಯಚವಿಜ್ಞಾನಾರ್ಥಂಲಿಂಗಾನಿಸಮಾಸೇನೋಪದೇಕ್ಷ್ಯಾಮಃ। ಉಪಚಾರಸಾಧನಂ ಹ್ಯಸ್ಯ ಜ್ಞಾನೆ, ಜ್ಞಾನಂಚಲಿಂಗತಃ, ತಸ್ಮಾದಿಷ್ಟೋಲಿಂಗೋಪದೇಶಃ**
**(ಚರಕ॥ ಶಾರೀರ॥ ಅ ೪ ಸೂ ೨೬)**

ಗರ್ಭಕ್ಕೆ ಬಯಸಿದ್ದು ದೊರೆಯದಿದ್ದರೆ ಆಪತ್ತಿಯನ್ನುಂಟುಮಾಡುವ, ಅಥವಾ ಗರ್ಭಕ್ಕೆ ದುಃಖವನ್ನುಂಟು ಮಾಡುವ, ಗರ್ಭಿಣಿಯ ಬಯಕೆಯನ್ನು ತಿಳಿದುಕೊಳ್ಳುವದಕ್ಕಾಗಿ ಆದರಲಕ್ಷಣಗಳನ್ನು ವಿಸ್ತಾರವಾಗಿ ಹೇಳುತ್ತೇವೆ. ಈ ಬಯಕೆಯ ಲಕ್ಷಣ ಜ್ಞಾನದಿಂದ ಉಪಚಾರ ಸಾಧನವಾದ ವಸ್ತುಗಳು ಯಾವವೆಂದು ತಿಳಿಯುತ್ತವೆ. ಆ ಜ್ಞಾನವು ಲಕ್ಷಣಗಳಿಂದ ತಿಳಿದು ಬರುತ್ತದೆ. ಆದ್ದರಿಂದ ಗರ್ಭಿಣಿಯ ಬಯಕೆಯನ್ನು ತಿಳಿಯಲು ಲಕ್ಷಣೋಪದೇಶವು (ಲಿಂಗೋಪದೇಶ) ಅತ್ಯಂತ ಅವಶ್ಯವಾಗಿದೆ.

## ಗರ್ಭವೆಂದು ಭಾಸವಾಗುವ ನಾಗೋದರ ಲಕ್ಷಣ

**ಉಪವಾಸವ್ರತಕರ್ಮಪರಾಯಾಃ ಪುನಃ ಕದಾಹಾರಾಯಾಃ ಸ್ನೇಹ ದ್ವೇಷಿಣ್ಯಾವಾತ ಪ್ರಕೋಪಣೋಕ್ತಾನ್ಯಾಸೇವಮಾನಾಯಾ ಗರ್ಭೋವೃದ್ಧಿಂ ನಪ್ರಾಹ್ನೋತಿ ಪರಿಶುಷ್ಕತ್ವಾತ್ । ಸಚಾಪಿ, ಕಾಲಮವತಿಷ್ಠತೇsತಿಮಾತ್ರಂ ಅಸ್ಪಂದನಶ್ಚಭವತಿ ತಂತುನಾಗೋದರಮಾ ಚಕ್ಷತೆ ॥**
**(ಚರಕ॥ ಶಾರೀರ॥ ಅ ೮ ಸೂ ೨೭॥)**

ಗರ್ಭಿಣಿಯು, ಉಪವಾಸಾದಿಗಳನ್ನು ಮಾಡುವದರಿಂದ, ರೂಕ್ಷ, ನೀರಸ, ತೀಕ್ಷ್ಣಆಹಾರ ಮೊದಲಾದವುಗಳಿಂದ, ಗರ್ಭವು ಬೆಳೆಯದೆ ಹಾಗೇಯಿರುತ್ತದೆ ಯಾಕಂದರೆ ಗರ್ಭವು ಒಣಗಿ ಹೋಗಿರುತ್ತದೆ. ಇದಾದರೂ ಹೊಟ್ಟೆಯಲ್ಲಿ ಬಹುಕಾಲ ಇರುತ್ತದೆ. ಹೊಟ್ಟೆಯಲ್ಲಿದ್ದರೂ ಚಲಿಸುವದಿಲ್ಲ. ಇದನ್ನು ನಾಗೋದರವೆಂದು ಹೇಳುತ್ತಾರೆ. "ತು" ಎಂಬ ಪದದಿಂದ ಹೇಳಿದ್ದರಿಂದ ವಿಕಲ್ಪವೆಂದು ತಿಳಿಯಬೇಕು ಹೀಗೆ ವಿಕಲ್ಪ ಸಿದ್ಧಾಂತದಿಂದ ಶುಷ್ಕ ಗರ್ಭರೂಪವಾದ ನಾಗೋದರ ( ಇಲ್ಲಿ ಗರ್ಭ ಬೆಳೆಯುವದಿಲ್ಲ ) ಮತ್ತೂ ರೋಗ ರೂಪವಾದ ನಾಗೋದರವೆಂದು ಭಿನ್ನವಾಗಿ ಅರ್ಥವನ್ನು ಕೆಲವರು ಮಾಡುತ್ತಾರೆ. ಅವರ ಮತದಂತೆ.— **ರೋಗ ರೂಪದ ಲಕ್ಷಣ:—**

**ನಾಗೋದರ ಲಕ್ಷಣ:—** ಸ್ತ್ರೀಯರಿಗೆ ನಾಗೋದರವೆಂಬರೋಗವಾಗುತ್ತದೆ. ಅದು ಹೊಕ್ಕಳ ಕೆಳಗೆ, ಬಸ್ತಿಯ ಮೇಲ್ಭಾಗದಲ್ಲಿರುವದರಿಂದ ಗರ್ಭವೆಂಬ ಭಾವನೆಯು ಬರುತ್ತದೆ. ಅತ್ಯಂತ ಹೊಟ್ಟೆ ಉಬ್ಬಿ ಕಾಲು ಕೈಗಳು ದುರ್ಬಲವಾಗುತ್ತ ಹೋಗಿ ಮಲಮೂತ್ರ ನಿರೋಧದಿಂದ, ಕ್ರಮೇಣ ರೋಗವುಳ್ಳವಳು ಮರಣ ಹೊಂದುತ್ತಾಳೆ. ಹೊಟ್ಟೆ ಉಬ್ಬುವಿಕೆಯಿದ್ದರೂ ಸ್ತನಪುಷ್ಟತೆ ವಮನ ಇತ್ಯಾದಿ ಬಯಕೆ ಮತ್ತೂ ಗರ್ಭಿಣಿಯ ಲಕ್ಷಣಗಳು ನಾಗೋದರದಲ್ಲಿ ಇರುವದಿಲ್ಲ. ಈ ಲಕ್ಷಣಗಳಿಲ್ಲದಿದ್ದರೆ ಗರ್ಭಿಣಿಯಿಲ್ಲವೆಂದು ನಿರ್ಣಯಿಸಲು ಲಕ್ಷಣ ಅವಶ್ಯವಾಗಿ ಬೇಕು. ಜಲೋದರ ಉದರ, ಮೊದಲಾದ ರೋಗಗಳಲ್ಲಿ, ಗರ್ಭಿಣಿಯ ಲಕ್ಷಣ ಉಂಟಾಗದಿರುವದರಿಂದಲೇ ಗರ್ಭವಲ್ಲವೆಂದು ನಿಶ್ಚಯಿಸಲು ಬರುತ್ತದೆ.

**ಗರ್ಭದಂತೆಯೇ ಇರುವ ರಕ್ತಗುಲ್ಮ ಲಕ್ಷಣ:—**

ಸ್ತ್ರೀಯರ ರಕ್ತಗುಲ್ಮವು ಅತ್ಯಂತ ಗರ್ಭಿಣೀ ಲಕ್ಷಣಗಳೆಲ್ಲದರಿಂದಲೂ ಯುಕ್ತವಾಗಿರುತ್ತದೆ.

**ಶೋಣಿತಗುಲ್ಮಸ್ತು ಖಲು ಸ್ತ್ರಿಯಾಏವಭವತಿನಪುರಷಸ್ಯ, ಗರ್ಭಕೋಷ್ಠಾರ್ತವಾಗಮನವೈಶೇಷ್ಯಾತ್ ।ಪಾರತಂತ್ರ್ಯಾದವೈಶಾರದ್ಯಾತ್ ಸತತಮುಪಚಾರಾನುರೋಧಾದ್ವಾ ವೇಗಾನುದೀರ್ಣಾನುಪರುಂಧತ್ಯಾಆಮಗರ್ಭೇವಾಪ್ಯಚಿರಪತಿತೇಽಥವಾಪ್ಯಚಿರ**

**ಪ್ರಜಾತಾಯಾ, ಋತೌವಾ ವಾತಪ್ರಕೋಪಣಾನ್ಯಾಸೇವಮಾ ನಾಯಾಃ ಕ್ಷಿಪ್ರಂ ವಾತಃ ಪ್ರಕೋಪಮಾಪದ್ಯತೆ, ॥**
(ಚರಕ॥ ನಿದಾನಸ್ಥಾನ॥ ಅ ೩ ಸೂ ೧೩)

ರಕ್ತಗುಲ್ಮವು ಸ್ತ್ರೀಯರಿಗೇ ಆಗುತ್ತದೆ. ಪುರುಷರಿಗೆ ಆಗುವದಿಲ್ಲ. ಗರ್ಭಾಶಯದಲ್ಲಿ ವಿಶೇಷ ರೀತಿಯಿಂದ ಆರ್ತವ ಆಗಮನ ವಾತ ಪ್ರಕೋಪ ಸ್ಥಿತಿಯಿಂದ ಅಥವಾ ಆರ್ತವ ಪ್ರತಿಬಂಧದಿಂದಲೂ ರಕ್ತಗುಲ್ಮವಾಗುವದು. ಸ್ತ್ರೀಯು ಪರತಂತ್ರಳಾದ್ದರಿಂದ ಯಾವಾಗಲೂ ಗೃಹಕೃತ್ಯಾದಿ ಉಪಚಾರ ಗಳಲ್ಲಿ ತೊಡಗಿ, ಅಜ್ಞಾನದಿಂದ, ಮಲಮೂತ್ರಾದಿ ವೇಗಗಳನ್ನು ಹೆಚ್ಚಾಗಿ ನಿರೋಧ ಮಾಡುವದರಿಂದಲೂ, ಅಥವಾ, ಸದ್ಯದಲ್ಲುಂಟಾದ ಗರ್ಭವುಳ್ಳವ ಳಿಗೂ, ಅಥವಾ ಸದ್ಯದಲ್ಲಿ ಗರ್ಭಪಾತವಾದವಳಿಗೂ, ಸ್ವಲ್ಪ ದಿನಗಳಲ್ಲಿ ಪ್ರಸವ ಹೊಂದಿದವಳಿಗೂ, ಅಥವಾ ಮಾಸಿಕ ಸ್ರಾವವಾಗುವ ದಿನಗಳಲ್ಲಿ ವಾತ ಪ್ರಕೋಪಕರವಾದ ಆಹಾರ, ವಿಹಾರ,ಆಚಾರಗಳಸೇವನೆಗಳಿಂದಲೂ, ತೀವ್ರವಾಗಿ ವಾಯುವು ಪ್ರಕೋಪ ಹೊಂದುತ್ತದೆ ಪ್ರಕೋಪ ಹೊಂದಿದ ವಾಯುವು ಗುಲ್ಮ ರೋಗವನ್ನುಂಟುಮಾಡುತ್ತದೆ.

**ಸಪ್ರಕುಪಿತೋ ಯೋನಿಮುಖಮನು ಪ್ರವಿಶ್ಯಾರ್ತವಮುಪರು ಣದ್ಧಿ, ಮಾಸಿ, ಮಾಸಿ, ತದಾರ್ತವಮುಪರುಧ್ಯಮಾನಂಕುಕ್ಷಿ ಮಭಿವರ್ಧಯತಿ,। ತಸ್ಯಾಃ ಶೂಲಕಾಸಾತೀಸಾರಛರ್ದ್ಯರೋ ಚಕಾವಿಪಾಕಾಂಗಮರ್ದನಿದ್ರಾಲಸ್ಯಸ್ತೈಮಿತ್ಯಕಫಪ್ರಸೇಕಾಃ ಸಮುಪಜಾಯಂತೆ, ಸ್ತನಯೋಶ್ಚಸ್ತನ್ಯಂ, ಓಷ್ಠಯೋಃ ಸ್ತನ ಮಂಡಲಯೋಶ್ಚಕಾರ್ಷ್ಣ್ಯಂ, ಅತ್ಯರ್ಥಂಗ್ಲಾನಿಶ್ಚಕ್ಷುಷೋಃ, ಮೂರ್ಛಾ, ಹೃಲ್ಲಾಸೋ, ದೋಹದಃ, ಶ್ವಯಥುಶ್ಚಪಾ ದಯೋಃ, ಈಷಚ್ಚೋದ್ಗಮೋರೋಮರಾಜ್ಯಾಃ, ಯೋನ್ಯಾ ಶ್ಚಾಟಾಲತ್ವಂ, ಅಪಿಚಯೋನ್ಯಾದೌರ್ಗಂಧ್ಯಮಾಸ್ರಾವಶ್ಚೋ ಪಜಾಯತೆ, ಕೇವಲಶ್ಚಾಸ್ಯಾಗುಲ್ಮಃ ಪಿಂಡಿತಏವಸ್ಪಂದತೆ, ತಾಮಗರ್ಭಾಂಗರ್ಭಿಣೀಮಿತ್ಯಾಹುಮರ್ೂಢಾಃ ॥**
(ಚರಕ॥ ನಿದಾನ॥ ಅ ೩ ಸೂ ೧೪)

ಹಿಂದೆ ಹೇಳಿದ ವೇಗವಿಧಾರಣ ಅಹಿತಾಹಾರ ಸೇವನೆಗಳಿಂದ ತೀವ್ರ ಪ್ರಕುಪಿತವಾದ ವಾಯುವು, ಯೋನಿಯನ್ನು (ಜನನೇಂದ್ರಿಯ) ಪ್ರವೇಶಿಸಿ ಮಾಸಿಕ (ಮುಟ್ಟು) ಸ್ರಾವವನ್ನು ತಡೆಯುತ್ತದೆ. ಪ್ರತಿ ತಿಂಗಳಲ್ಲಿ ತಡೆದು ಸಂಚಿತವಾದ ಆರ್ತವವು ಹೊಟ್ಟೆಯನ್ನುಬ್ಬಿಸುತ್ತದೆ. ಇಂಥ ಸ್ತ್ರೀಯರಿಗೆ ಶೂಲೆ, ಕೆಮ್ಮು, ಹೊಟ್ಟೆ ಝಾಡಿಸುವದು, ವಾಂತಿ, ಬಾಯಿರುಚಿ ಇಲ್ಲದಿರೋಣ, ಮುಖವಿಪಾಕಾದಿಗಳು, ಮೈಯಲ್ಲಿ ನೋವು, ನಿದ್ರೆ, ಆಲಸ್ಯ, ಜಡತೆ, ಕಫಪ್ರಸೇಕ, ಇವುಗಳುತ್ಪನ್ನವಾಗುತ್ತವೆ. ಮೊಲೆಗಳಲ್ಲಿಹಾಲು, ತುಟಿ, ಸ್ತನದ ಸುತ್ತಲಿನ ಭಾಗದಲ್ಲಿ ಕಪ್ಪು ಬಣ್ಣವು, ಕಣ್ಣುಗಳಲ್ಲಿ ಬಹಳ ಗ್ಲಾನಿಯು, ಮೂರ್ಛೆ, ಹೃದಯದಲ್ಲಿ ವೇದನೆ, ಬಯಕೆ, ಕಾಲುಗಳಲ್ಲಿ ಬಾವುಬರುವಿಕೆ, ಸ್ವಲ್ಪಮಟ್ಟಿಗೆ ರೋಮುಗಳ ಸಾಲುಂಟಾಗುವಿಕೆ, ಯೋನಿಯು ವಿಕಸಿತವಾಗೋಣ, ಮತ್ತು ಯೋನಿಯಲ್ಲಿ ದುರ್ಗಂಧ ಸ್ರಾವ, ಮೊದಲಾದವುಗಳೆಲ್ಲವೂ ಸಂಭವಿಸುತ್ತವೆ. ಕೇವಲ ಗುಲ್ಮವು ಹೊಟ್ಟೆಯಲ್ಲಿ ಸ್ಪಂದನ (ಚಲನ) ವನ್ನು, ವಾಯು ಪ್ರಕೋಪದಿಂದ ಹೊಂದುತ್ತದೆ. ಗುಲ್ಮದಿಂದ ಹೊಟ್ಟೆ ದೊಡ್ಡದಾಗಿರುವವರನ್ನು ಮೂಢರು ಗರ್ಭಿಣಿಯೆಂದು ಹೇಳುತ್ತಾರೆ. ಈ ಹಿಂದೆ ಬಯಕೆಯ ಲಕ್ಷಣದಲ್ಲಿ ಇವೇ ಲಕ್ಷಣಗಳನ್ನು ಹೇಳಿದ್ದರೂ, ಸುಗಮವಾಗಲೆಂದು ಸ್ಪಷ್ಟಪಡಿಸಿದ್ದಾರೆ. ಆದರ ಕ್ರಮ ಲಕ್ಷಣವನ್ನು ವಿಶದವಾಗಿ ಇದಕ್ಕೂ ಹೆಚ್ಚು ಸ್ಪಷ್ಟ ಪಡಿಸುತ್ತಾರೆ.

**ಋತಾವನಾಹಾರತಯಾಭಯೇನಪಿರೂಕ್ಷೈರ್ವೇಗವಿನಿಗ್ರಹೈಶ್ಚ ॥ ಸಂಸ್ತಂಭಿನೋಲ್ಲೇಖನಯೋನಿದೋಷೈರ್ಗುಲ್ಮಃ ಸ್ತ್ರೀಯಂ ರಕ್ತಭವೋಽಭ್ಯುಪೈತಿ ॥**
**( ಚರಕ ॥ ಚಿಕಿತ್ಸಾ ॥ ಅ. ೫ ಶ್ಲೋ. ೧೮ )**

ಪುಷ್ಪದರ್ಶನ ಕಾಲದಲ್ಲಿ ( ಮಾಸಿಕ ಸ್ರಾವ ದಿನಗಳಲ್ಲಿ ) ಎರಡನೇಯವರನ್ನು ಕೇಳಬೇಕಾಗುತ್ತದೆಂಬ ಭಯದಿಂದ ರೂಕ್ಷಾಹಾರ ಸೇವಿಸುವದು, ಅಥವಾ ಮಲಮೂತ್ರಾದಿ ವೇಗ ನಿರೋಧಮಾಡುವದು, ರಜಸ್ಸಿನ ಸ್ತಂಭನೆ, ಅಥವಾ ಸ್ತಂಭಕ, ವಾತಪ್ರಕೋಪಕಆಹಾರಾದಿ ಸೇವನೆ, ಬಹಳ ಸ್ರಾವದಿಂದ ರೂಕ್ಷವಾಗುವಿಕೆ, ಯೋನಿದೋಷ ಮೊದಲಾದವುಗಳಿಂದ, ಸ್ತ್ರೀಯರಿಗೆ ರಕ್ತಗುಲ್ಮವಾಗುವದು.

**ಯಃ ಸ್ಪಂದತೇಪಿಂಡಿತಏವನಾಂಗೈಶ್ಚಿರಾತ್ ಸಶೂಲಃ ಸಮ ಗರ್ಭಲಿಂಗಃ ॥ ಸರೌಧಿರಸ್ತ್ರೀಭವಏವಗುಲ್ಮೋಮಾಸೇವ್ಯತೀತೇದಶಮೇಚಿಕಿತ್ಸ್ಯಃ ॥**

( ಚರಕ ॥ ಚಿಕಿತ್ಸಾ ॥ ಅ. ೫ ಶ್ಲೋ. ೧೮ )

ಬಹಳ ದಿನಗಳಿಂದಲೂ ಶೂಲೆಯಿಂದ ಕೂಡಿರುತ್ತದೆ. ಗುಲ್ಮದ ಗಂಟು ಗರ್ಭದಂತೆ ಚಲಿಸುತ್ತದೆ. ಆದರೆ ಗರ್ಭದಂತೆ ಅಂಗೋಪಾಂಗಗಳಿರುವದಿಲ್ಲ. ಮತ್ತು ವಾಯುವಿನಿಂದ ಚಲಿಸುತ್ತದೆಯೇ ಹೊರತು, ಗರ್ಭದಂತೆ ಸ್ವತಃ ಚಲಿಸುವದಿಲ್ಲ. ಗರ್ಭಿಣಿಯ ಬಯಕೆ ಮೊದಲಾದ ಎಲ್ಲ ಚಿನ್ಹಗಳು ರಕ್ತ ಗುಲ್ಮದಲ್ಲಿ ತೋರುತ್ತವೆ. ರಕ್ತದಿಂದುಂಟಾಗುವ ಈ ಗುಲ್ಮ ರೋಗವು ಸ್ತ್ರೀಯರಿಗೇ ಆಗುತ್ತದೆ. ಹತ್ತುತಿಂಗಳು ಕಳೆದ ಮೇಲೆ ಚಿಕಿತ್ಸೆಮಾಡಬೇಕು. ಯಾಕಂದರೆ ರಕ್ತಗುಲ್ಮ ವಿಷಯದಲ್ಲಿ ಮಾತ್ರ ಯಾವದೇ ಲಕ್ಷಣಗಳಿಂದಲೂ ಗರ್ಭವಲ್ಲವೆಂದು ನಿಶ್ಚಯಿಸಲು ಬರುವದಿಲ್ಲ. ಗರ್ಭದಲ್ಲಿ ಸಂಭವಿಸುವ ಲಕ್ಷಣ ಗಳೆಲ್ಲವೂ ಇದರಲ್ಲಿರುತ್ತವೆ ಚಿಕಿತ್ಸೆ ಮಾಡಲು ನಿಶ್ಚಯವಾಗದಿರುವದರಿಂದ ಬಹಳೇ ದುಸ್ತರವು. ಹತ್ತುತಿಂಗಳ ನಂತರ ಗರ್ಭವಾದರೆ ಪ್ರಸವವಾಗುತ್ತದೆ. ಪ್ರಸವವಾಗದಿದ್ದರೆ ರಕ್ತಗುಲ್ಮದ ಚಿಕಿತ್ಸೆಯನ್ನು ಮಾಡಲು ಶಾಸ್ತ್ರವು ವಿಧಿ ಸುತ್ತದೆ. ಹತ್ತು ತಿಂಗಳ ನಂತರ ಗುಲ್ಮವು ಪಕ್ವ ಸ್ಥಿತಿಗೆ ಮುಟ್ಟಿರುವದರಿಂದ ಚಿಕಿತ್ಸೆ ಮಾಡಲು ಯೋಗ್ಯವಾಗುವದು. ಮೊದಲೇ ಅಪಕ್ವವಿದ್ದಾಗ ಚಿಕಿತ್ಸೆ ಮಾಡಿದರೆ ಬಹಳ ರಕ್ತಸ್ರಾವವೂ, ಗರ್ಭಾಶಯಕ್ಕೆ ಧಕ್ಕೆಯೂ, ಸಂಭವಿಸು ತ್ತದೆ. ದಶಮ ಮಾಸಾ ನಂತರ ಚಿಕಿತ್ಸೆಗೆ ಯೋಗ್ಯ ಕಾಲವಿರುವದರಿಂದ, ಗರ್ಭವಿದ್ದ ಪಕ್ಷದಲ್ಲಿ ಪ್ರಸವವಾಗುವದರಿಂದಲೂ, ರೋಗ ನಿಶ್ಚಯ ಚಿಕಿತ್ಸಾ ಸಮಯ ಇವೆರಡರ ಸನ್ನಿವೇಶವು ಯೋಗ್ಯ ದರ್ಶನಕ್ಕೆ ಅರ್ಹವಾಗುವದು.

**ವಿಶೇಷ ವಿಚಾರ:—**

ರಕ್ತಗುಲ್ಮ ಮತ್ತೂ ಗರ್ಭಲಕ್ಷಣ ಒಂದೇಇದ್ದರೂ ಸೂಕ್ಷ್ಮವಾಗಿ ಅವ ಲೋಕಿಸಲು ಸಾಧ್ಯವಿದೆ:- ಶಾಸ್ತ್ರಜ್ಞರೂ ಕರ್ಮಕುಶಲ ನಿಪುಣ ವೈದ್ಯರೂ ರಕ್ತಗುಲ್ಮವನ್ನು ತಿಳಿದುಕೊಳ್ಳಬಹುದು. ಗರ್ಭವು ನಾಲ್ಕುತಿಂಗಳಿನ ನಂತರ

ಅಂಗಅವಯವ ಉಳ್ಳದ್ದಾಗುತ್ತದೆ ಏಳನೇ ತಿಂಗಳಿನ ನಂತರ ಜೀವಬಂದ ಅವಯವ ಚಲನವಲನೆಸಹ ಆರಂಭವಾಗುತ್ತದೆ. ಗುಲ್ಮವು ಮಾತ್ರ ಮಣ್ಣಿನ ಮುದ್ದೆಯಂತಿರುತ್ತದೆ. ಸೂಕ್ಷ್ಮವಾಗಿ ಮನಗೊಟ್ಟು ಗರ್ಭ ಸ್ಥಾನದಲ್ಲಿ ಎಲ್ಲ ಕಡೆಗೂ ಸಾವಕಾಶ ಕೈಯಿಟ್ಟು ಒತ್ತಿನೋಡಿದರೆ ಅವಯುವಉಳ್ಳದ್ದೋ? ಅಥವಾ ಮುದ್ದೆಯಂತಿದೆಯೋ? ಎನ್ನುವದು ತಿಳಿಯುತ್ತದೆ. ಇಲ್ಲವೇ, ಆ ಸ್ಥಾನದಲ್ಲಿ ಕಿವಿಯಿಟ್ಟು ಕೇಳಿದರೆ ಅಂಗಾಂಗಚಲನವಲನ ಧ್ವನಿಯುಗೋಚರವಾಗುತ್ತದೆ ಈ ಪ್ರಕಾರ ಒಂದೇ ದಿನ ತಾಸಿಗೊಮ್ಮೆಯಂತೆ ೩-೪ ಸಲ ನೋಡಲು ಚಲನವಲನೆ ಕಂಡುಬಂದರೆ ಗರ್ಭವೆಂದು ತಿಳಿಯಬೇಕು. ಸ್ಪರ್ಶದಿಂದಮುದ್ದೆಯಂತೆ ಕಂಡುಬಂದು ಚಲನವಲನವನ್ನವಲೋಕಿಸಿದಾಗ ಯಾವದಾದರೊಂದುಸಲ, ವಾಯುಪ್ರಕೋಪದಿಂದ ಚಲಿಸುತ್ತಲಿದ್ದು ಅವಯುವಚಲನೆ, ಇತ್ಯಾದಿ ಇಲ್ಲದಿದ್ದರೆ ಗುಲ್ಮವೆಂದು ನಿಶ್ಚಯಿಸಬೇಕು.

"ಯಃಸ್ಪಂದತೆಪಿಂಡಿತಏವನಾಂಗೈಃ" ಮುದ್ದೆಯು ಚಲಿಸಿದಂತೆ ಚಲನವಾಗುತ್ತದೆ ಅವಯುವಗಳಿಂದ ಚಲಿಸುವದಿಲ್ಲ ಎಂದು ಹೇಳಿದ್ದರಿಂದ ಸೂಕ್ಷ್ಮ ಬುದ್ಧಿಯುವರಿಗೆ ಇದರಿಂದ ನಿಶ್ಚಯುಮಾಡಲು ಸಾಧ್ಯವೆಂದು ಈ ವಾಕ್ಯದಿಂದ ಧ್ವನಿತವಾಗುತ್ತದೆ

### ಬಹಳ ದಿನಕ್ಕೆ ಪ್ರಸೂತವಾಗುವ ಗರ್ಭ:—

**ಆಹಾರಮಾಪ್ನೋತಿಯದಾನಗರ್ಭಃ,ಶೋಷಂಸಮಾಪ್ನೋತಿಪರಿಸ್ರುತಿಂವಾ॥ ತಂಸ್ತ್ರೀಪ್ರಸೂತೆಸುಚಿರೇಣಗರ್ಭಂ, ಪುಷ್ಟೋಯದಾವರ್ಷಗಣೈರಪಿಸ್ಯಾತ್ ॥**

(ಚರಕ॥ ಶಾರೀರ॥ ಅ ೧ ಶ್ಲೋ ೧೫)

ಗರ್ಭವು ಬೆಳೆಯಲಿಕ್ಕೆ ಯೋಗ್ಯ ಆಹಾರವಿಲ್ಲದಿದ್ದರೆ, ಗರ್ಭವು ಕ್ಷೀಣವಾಗುತ್ತದೆ. ಅಥವಾ ಪತನವಾಗುತ್ತದೆ. ಕ್ಷೀಣವಾಗಿಯೂ ಪತನಹೊಂದದೆ ಸಾವಕಾಶ ಬೆಳೆಯಲಿಕ್ಕೆ ಹತ್ತಿದ ಗರ್ಭವು ಒಂದು ವರ್ಷ ಕಳೆದ ನಂತರ ಬೆಳೆಯಹತ್ತುತ್ತದೆ. ಇದರಿಂದ ಎರಡನೇ ಅಥವಾ ಮೂರನೇ ವರ್ಷಗಳ

ಜನನವಾಗುತ್ತದೆ. "ವರ್ಷಗಣ್ಯೈಃ" ಎಂದು ಹೇಳಿರುವದರಿಂದ ಮೂರು ವರ್ಷ ಮುಗಿಯುವ ವರೆಗೂ ಅವಧಿ ಇರುತ್ತದೆಂದು ಧ್ವನಿತವಾಗುವದು.

**ಉಪವಿಷ್ಟಕ ಗರ್ಭಲಕ್ಷಣ:—**

**ಯಸ್ಯಾಃ ಪುನರುಷ್ಣತೀಕ್ಷ್ಣೋಪಯೋಗಾದ್ಗರ್ಭಿಣ್ಯಾಮಹತಿ ಸಂಜಾತಸಾರೆ ಗರ್ಭೆಪುಷ್ಪದರ್ಶನಂ ಸ್ಯಾದನ್ಯೋವಾಯೋನಿ ಸ್ರಾವಸ್ತಸ್ಯಾ ಗರ್ಭೋವೃದ್ಧಿಂನಪ್ರಾಪ್ನೋತಿನಿಃಸ್ರುತತ್ವಾತ್, ಸಕಾಲಮವತಿಷ್ಠತೇಽತಿಮಾತ್ರಂತಮುಪವಿಷ್ಟಕಮಿತ್ಯಾಚಕ್ಷತೆ ಕೇಚಿತ್ ॥** (ಚರಕ॥ ಶಾರೀರ॥ ೨ ೮ ಸೂ ೨೬)

ಗರ್ಭಿಣಿಯು ಉಷ್ಣವಿರ್ಯ, ತೀಕ್ಷ್ಣಪದಾರ್ಥಗಳನ್ನು ಸೇವಿಸುವದರಿಂದ, ಯೋಗ್ಯವಾಗಿಗರ್ಭವುಆರಂಭವಾಗಿದ್ದರೂ, ಪುಷ್ಪದರ್ಶನ (ಮುಟ್ಟು) ವಾಗುತ್ತದೆ. ಅಥವಾ ಯೋನಿ ಸ್ರಾವ ಮೊದಲಾದವುಗಳುಂಟಾಗುತ್ತವೆ. ಈ ಕಾರಣದಿಂದ, ಗರ್ಭ ವೃದ್ಧಿಯು ಯೋಗ್ಯ ಕಾಲದಲ್ಲಿ ಆಗುವದಿಲ್ಲ. ಯಾಕಂದರೆ, ಎಲ್ಲ ಬೆಳವಣಿಗೆಗೆ ಬೇಕಾದ ಸತ್ವವು ಸ್ರಾವಹೊಂದಿರುತ್ತದೆ. ಇಂಥ ಗರ್ಭವುಬೆಳೆಯಲು ಬಹಳದಿನಗಳು ಬೇಕು ಕೆಲವರು ಇದಕ್ಕೆ"**ಉಪವಿಷ್ಟಕ**"ವೆಂದು ಅನ್ನುತ್ತಾರೆ. ಉಪವಿಷ್ಟಕದ ಅರ್ಥವು ಒಳಗೆಕೂತುಕೊಂಡಿರುವದು ಎಂದಾಗುತ್ತದೆ. ಬಯಕೆಯನ್ನು ತಿಳಿದುಕೊಳ್ಳುವದರಿಂದ ಪ್ರಯೋಜನವನ್ನು ಹೇಳುವ ಪ್ರಸಂಗದಿಂದ ಗರ್ಭದಂತೆಕಾಣುವ ರೋಗಗಳನ್ನುಗರ್ಭವಲ್ಲವೆಂದುನಿಶ್ಚಯಿಸಲು ಉಪಯೋಗವೆಂದು ವಿಸ್ತಾರವಾಗಿವಿವರಿಸಿದ್ದಾಗಿದೆ.

## (೧೫) ಬಯಕೆಯ ಮಹತ್ವವು

ಬಯಕೆಯಾಗುವಕಾರಣ ಲಕ್ಷಣಗಳನ್ನು ತಿಳಿಸಿದನಂತರ ಬಯಕೆಯ ತೃಪ್ತಿಯಿಂದಾಗುವ ಸುಪರಿಣಾಮ, ಬಯಕೆಯ ತಿರಸ್ಕಾರದಿಂದಾಗುವ ದುಷ್ಪರಿಣಾಮವನ್ನು ಬೋಧಿಸುತ್ತಾರೆ. ಹೀಗೆ ಸುಪರಿಣಾಮ ದುಃಖಕಾರಕ ಫಲವನ್ನುಂಟು ಮಾಡುವ ಬಯಕೆಯ ಹೆಚ್ಚಿನದಾದಪ್ರಭಾವಕ್ಕೆ ಬಯಕೆಯ ಮಹತ್ವವೆಂಬ ಹೆಸರು:—

**ಬಯಕೆಯ ತಿರಸ್ಕಾರದಿಂದಾಗುವ ದುಷ್ಪರಿಣಾಮ:—**

**ದೌಹೃದವಿಮಾನನಾತ್ ಕುಬ್ಜಂ ಕುಣಿಂ ಖಂಜಂ ಜಡಂ ವಾ ಮನಂ ವಿಕೃತಾಕ್ಷಮನಕ್ಷಂವಾ ನಾರೀಸುತಂ ಜನಯತಿ, ತಸ್ಮಾತ್ ಸಾಯದ್ಯದಿಚ್ಛೇತ್ತತ್ತಸ್ಯೈದಾಪಯೇತ್ ಲಬ್ಧದೌಹೃದಾಹಿತ್ ವೀರ್ಯವಂತಂ ಚಿರಾಯುಷಂಚಪುತ್ರಂಜನಯತಿ॥**

( ಸುಶ್ರುತ ॥ ಶಾರೀರ ॥ ಅ. ೩ ಸೂ ೧೮ )

ಬಯಕೆಯ ತಿರಸ್ಕಾರದಿಂದ ಗರ್ಭಿಣಿಯು, ಮುದುಡಿದ ಅವಯವವುಳ್ಳ (ಕುಬ್ಜಂ), ರೋಗಾದಿಗಳಿಂದ ಕೆಟ್ಟಿರುವ ಕೈಯುಳ್ಳ (ಕುಣಿಂ), ಕುಂಟನನ್ನು (ಖಂಜಂ), ಮಂದವಾದ ದೇಹ ಬುದ್ಧಿಯುಳ್ಳ (ಜಡಂ), ಗಿಡ್ಡನನ್ನು (ವಾಮನ), ವಿರೂಪವಾದ ಕಣ್ಣುಳ್ಳ (ವಿಕೃತಾಕ್ಷ), ಕುರುಡನನ್ನು (ಅನಕ್ಷ), ಇನ್ನೂ ಅನೇಕ ವಿಕಾರವುಳ್ಳ ಸಂತತಿಯನ್ನು ಪ್ರಸವಿಸುತ್ತಾಳೆ. ಈಪ್ರಕಾರ ಬಯಕೆಯ ತಿರಸ್ಕಾರದಿಂದಗರ್ಭವು ವಿಕೃತವಾಗುತ್ತದೆ.ಆದ್ದರಿಂದ ಗರ್ಭಿಣಿಯು ಏನನ್ನು ಬಯಸುವಳೋ ಅದನ್ನು ಕೊಡಬೇಕು. ಬಯಕೆಯ ತೃಪ್ತಿಯಾದರೆ ಬಲವಂತ ದೀರ್ಘಾಯುವಾದ ಪುತ್ರನನ್ನು ಹಡೆಯುತ್ತಾಳೆ. ಈ ಎಲ್ಲ ಕಾರಣಗಳನ್ನವಲೋಕಿಸಿ ಗರ್ಭಿಣಿಯರಿಗೆ ಆಪ್ತರು, ಇಷ್ಟರು, ತಮ್ಮ ಮನೆಗೆ ಕರೆದು ಬಯಕೆಯ ಪದಾರ್ಥಗಳನ್ನು ತಿಳಕೊಂಡು, ಉಣಬಡಿಸುವ, ಸಾಮಾಜಿಕ ಅಥವಾ ಧಾರ್ಮಿಕ ಪದ್ಧತಿಯನ್ನು, ರೂಢಿಯಲ್ಲಿ ತಂದಿದ್ದಾರೆ. ಇದು ಗಮನಿಸಬೇಕಾದ ವಿಷಯವೂ ಯೋಗ್ಯವೂ ಇರುತ್ತದೆ. ಯಾಕಂದರೆ, ಒಬ್ಬಳೇ ಆದ ಗರ್ಭಿಣಿಯು ತನ್ನ ಮನೆ ಕೆಲಸವನ್ನು ಪೂರೈಸಿ ತನಗೆ ಬೇಕಾದ್ದನ್ನು ಮಾಡಿಕೊಳ್ಳಲು ಶ್ರಮವಾಗುವದು. ಆದ್ದರಿಂದ ಬಂಧು ಬಾಂಧವರ ಭೆಟ್ಟಿಯೂ ವಿಶೇಷ ಶ್ರಮವಿಲ್ಲದೆ ಬಯಕೆಯ ಪೂರೈಕೆಯು ಸಾಮಾನ್ಯರಿಗೂ ದೊರೆಯಲೆಂಬ ವಿಶಾಲ ಭಾವನೆಯ ಹಿನ್ನೆಲೆಯೇ ಈ ರೂಢಿಯ ಜನಕವೆಂದು ಸ್ಪಷ್ಟವಾಗುವದು.

**ಬಯಕೆಯ ಅತೃಪ್ತಿಯಿಂದ ಸಂಭವಿಸುತ್ತಿರುವ ಗರ್ಭವಿಕೃತಿಯು:—**

**ಮಾತೃಜಂ ಚಾಸ್ಯಹೃದಯಂ ಮಾತೃಹೃದಯೇನ ಅಭಿಸಂಬದ್ಧಂಭವತಿರಸವಾಹಿನೀಭಿಃ ಸಂವಾಹಿನೀಭಿಃತಸ್ಮಾತ್ತಯೋಸ್ಸಾ**

**ಭಿರ್ಭಕ್ತಿಃ ಸಂಸ್ಪಂದತೇ। ತಚ್ಛೈವ ಕಾರಣಮವೇಕ್ಷಮಾಣಾ ನದ್ಯೈ ಹೃದಯಸ್ಯ ವಿಮಾನಿತಂ ಗರ್ಭಮಿಚ್ಛಂತಿ ಕರ್ತುಂ। ವಿಮಾನನೇ ಹ್ಯಸ್ಯ ದೃಶ್ಯತೇ ವಿನಾಶೋ ವಿಕೃತಿರ್ವಾ। ಸಮಾನಯೋಗಕ್ಷೇಮಾ ಹಿ ತದಾ ಭವತಿ ಗರ್ಭೇಣ ಕೇಷುಚಿದರ್ಥೇಷು ಮಾತಾ। ತಸ್ಮಾತ್ ಪ್ರಿಯಹಿತಾಭ್ಯಾಂ ಗರ್ಭಿಣೀಂ ವಿಶೇಷೇಣೋಪಚರಂತಿ ಕುಶಲಾಃ ॥** ( ಚರಕ ॥ ಶಾರೀರ ॥ ಅ. ೪ ಸೂ. ೧೫ )

ತಾಯಿಯಿಂದುತ್ಪನ್ನವಾದ ಗರ್ಭದ ಹೃದಯವು, ಮಾತೃ ಹೃದಯಕ್ಕೆ ಸಂಬಂಧವುಳ್ಳದ್ದಾಗುವದು. ಹ್ಯಾಗಂದರೆ ತಾಯಿಯ ಹೃದಯದಿಂದ ಹೊರಟ ರಸವಾಹಿನೀ ಸಿರಗಳು, ಗರ್ಭಾಶಯಕ್ಕೆ ಅಂಟಿಕೊಂಡು ರಸಾದಿಸತ್ವಗಳಿಂದ ಗರ್ಭಪೋಷಣೆ ಮಾಡುತ್ತವೆ. ಇದನ್ನು ಹಿಂದೆ ವಿವರಿಸಿದೆ. ರಸವಾಹಿನೀ ಸಂವಾಹಿನೀ (ಸಂಜ್ಞಾವಾಹಿ) ಸಿರಗಳು, ತಾಯೀ ಹೃದಯ ಗರ್ಭ ಹೃದಯಕ್ಕೆ ಸಂಬಂಧವನ್ನುಂಟುಮಾಡುತ್ತವೆ. ಆದ್ದರಿಂದ ಗರ್ಭವು ಬಯಸಿದ ವಸ್ತುವಿನಲ್ಲಿ ತಾಯಿಗೂ ಇಚ್ಛೆಯಾಗುವದು. ಹೀಗಿರುವದರಿಂಗಲೇ "ತಯೋಃ ಭಕ್ತಿಃ" ತಾಯಿ, ಗರ್ಭಗಳಿಬ್ಬರ ಇಚ್ಛೆಯು ಎಂಬ ಪದ ಪ್ರಯೋಗ ಮಾಡಿದ್ದಾರೆ. ಸಂವಾಹಿನೀ ಸಿರಗಳು ಬಯಕೆ ಪೂರೈಸಲ್ಪಡದ ಗರ್ಭವನ್ನು, ಬೆಳೆಸಲು (ಪೂರ್ಣ ಮಾಡಲು) ಇಚ್ಛಿಸುವದಿಲ್ಲ ಬಯಕೆಯ ತೃಪ್ತಿಯನ್ನೇ ಗುರಿಯಾಗಿಟ್ಟುಕೊಂಡು, ಅದನ್ನೇ ದಾರೀ ನೋಡುತ್ತಿರುವ, (ಅವೇಕ್ಷಮಾಣಾಃ) ರಸವಾಹಿನೀ ಸಿರಗಳು ಅದಿಲ್ಲವಾದರೆ ಪೋಷಣ ಕ್ರಮವನ್ನು ಶಿಥಿಲಮಾಡುತ್ತವೆ. ಬಯಕೆಯ ತಿರಸ್ಕಾರದಿಂದ ಗರ್ಭದ ನಾಶ ಅಥವಾ ವಿಕೃತಿಯಾಗುವದು ಅನುಭವಸಿದ್ಧವಾದದ್ದು. ಬಯಕೆಯ ವಸ್ತುವಿನ ನಿರಾಕರಣೆಯಿಂದ ಗರ್ಭನಾಶವೂ, ಬಯಕೆಯ ಅಪೂರ್ಣತೆ (ಸ್ವಲ್ಪ ತೃಪ್ತಿ) ಯಿಂದ ಗರ್ಭ ವಿಕೃತಿಯೂ ಆಗುತ್ತದೆ. ಕೆಲವಷ್ಟು ವಿಷಯಗಳಲ್ಲಿ ತಾಯಿಯ ಮತ್ತು ಗರ್ಭಗಳು, ಸಮಾನ ಸುಖದುಃಖ (ಯೋಗ್ಯಕ್ಷೇಮ) ವುಳ್ಳವು ಕೆಲವಷ್ಟು ವಿಷಯಗಳಲ್ಲಿ ಎಂದು ಹೇಳಿರುವದರಿಂದ, ತಾಯಿಯ ವಿಶೇಷವಾದ ದೈನಂದಿನಕ ಹಸಿವೆ, ನೀರಡಿಕೆಗಳು, ಗರ್ಭವನ್ನು ಬಾಧಿಸುವ

ದಿಲ್ಲ ಆದರೆ ಪ್ರಮಾಣ ಮೀರಿ ಉಪವಾಸ, ತೃಷಾನಿರೋಧವು ಅಹಿತಕಾರಕವು. ನಿತ್ಯದ ಆಹಾರ ಕ್ರಮದಲ್ಲಿ ಸ್ವಲ್ಪ ತಡವಾಗುವದರಿಂದ ಹಸಿವೆ ಹೆಚ್ಚಾಗುವದು ಸ್ವಾಭಾವಿಕವು. ಅದನ್ನು ಸಹ ಶಾಸ್ತ್ರಕಾರರು ಯೋಗ್ಯವಲ್ಲವೆಂದು ಹೇಳಿದ್ದಾರೆ. ಯುಕ್ತಾಹಾರ ವಿಹಾರವನ್ನು ಯೋಜಿಸಬೇಕೆಂದು ವಿಧಿಸಿದ್ದಾರೆ. ಆದ್ದರಿಂದಲೇ ಕುಶಲರು (ಅನುಭವಿಕ), ಗರ್ಭಿಣಿಯನ್ನು ಪ್ರಿಯವಾಗಿಯೂ, ಹಿತಕರ ಆಹಾರಾದಿಗಳನ್ನು ಯೋಜಿಸಿಯೂ, ವಿಶೇಷವಾಗಿ ಉಪಚರಿಸುತ್ತಾರೆ.

## ಗರ್ಭಿಣಿಯ ಆರೈಕೆ:—

**ಯೇಹ್ಯಸ್ಯಕುಕ್ಷೌವೃದ್ಧಿಹೇತುಸಮಾಖ್ಯಾತಾಭಾವಾಸ್ತೇಷಾಂವಿಪರ್ಯಯಾದುದರೆ ವಿನಾಶಮಾಪದ್ಯತೇ ಥವಾ ಚಿರಜಾತಃ ಸ್ಯಾತ್ ॥** (ಚರಕ॥ ಶಾರೀರ॥ ಅ ೪ ಸೂ ೨೯)

ಹೊಟ್ಟೆಯಲ್ಲಿ ಗರ್ಭಕ್ಕೆ ಬೆಳೆಯಲು ಯಾವ ಸೌಕರ್ಯಗಳು ಬೇಕೆಂದು, ವಿವರಿಸಿದ್ದಾರೆಯೋ, ಅದಿಲ್ಲವಾದರೆ ಅಥವಾ ವಿರುದ್ಧ ಉಪಚಾರ ಮಾಡಿದರೆ ಹೊಟ್ಟೆಯಲ್ಲಿಯೇ ನಾಶವಾಗುತ್ತದೆ. ಗರ್ಭವು ಒಣಗಿ ನಾಗೋದರ ಮೊದಲಾದವುಗಳಾಗುತ್ತವೆಯೆಂದು ಈ ಹಿಂದೆ ವಿವರಿಸಲಾಗಿದೆ. ಅಥವಾ ಗರ್ಭಪಾತ, ದಿನತುಂಬದೆ ಹಡೆಯುವ, ಸ್ಥಿತಿಸಹ ಬರುತ್ತದೆ.

## ಬಯಕೆಯ ವಿಷಯದಲ್ಲಿ ವಿಶೇಷ ವಿಚಾರವು:—

ಕೆಲವು ಗರ್ಭಿಣೀ ಸ್ತ್ರೀಯರಿಗೆ, ಬಯಕೆಆದಾಗ ಹುಳಿ, ಖಾರ, ಬೂದಿ, ಮಣ್ಣು, ಇದ್ದಲಿ ಮೊದಲಾದ ಅನೇಕ ಕೆಡಕನ್ನುಂಟುಮಾಡುವ ಪದಾರ್ಥಗಳಲ್ಲಿ ತೀವ್ರ ಇಚ್ಛೆಯಾಗುತ್ತದೆ. ಅಹಿತಕಾರಕ ಪದಾರ್ಥವನ್ನು ಕೊಡುವದರಿಂದಲೂ, ಅಥವಾ ಬಿಡುವದರಿಂದ ಬಯಕೆಪೂರೈಸದೆ, ಗರ್ಭಕ್ಕೆ ಹಾನಿಯಾಗುವದೆಂಬ ಆಕಾಂಕ್ಷೆ ಬರುವದು. ಬಿಟ್ಟರು ಕಷ್ಟಹಿಡಿದರೂ ಕಷ್ಟ ಹೇಗೆ ನಡೆಯಬೇಕೆನ್ನುವದರಲ್ಲಿ ನಿರ್ಣಯವು ಧರ್ಮ ಸಂಕಟವೆನಿಸುವದು. ಇದಕ್ಕೆ ಚರಕಾಚಾರ್ಯರ ಮತವು:— ಬಯಕೆಯ ತೀವ್ರತೆಯ ವಿಘಾತ

ದಿಂದಾಗುವ ಪರಿಣಾಮಕ್ಕಿಂತಲೂ, ಅಹಿತಪದಾರ್ಥ ಸೇವನೆಯಿಂದ (ಬಯಕೆಯ ತೃಪ್ತಿಯಿಂದ) ಸ್ವಲ್ಪ ಪ್ರಮಾಣದ ಹಾನಿಯನ್ನು ಲಕ್ಷಿಸಿ, ವಿರುದ್ಧವಾದದ್ದನ್ನು ಸಹಬಯಕೆಯಲ್ಲಿ ಅಪೇಕ್ಷಿಸಿದರೆ ಕೊಡಬೇಕೆಂದು ಹೇಳಿದ್ದಾರೆ.

**ತೀವ್ರಾಯಾಂತುಖಲುಪ್ರಾರ್ಥನಾಯಾಂಕಾಮಮಹಿತಮಪ್ಯಸ್ಯೈಹಿತೇನೋಪಹಿತಂದದ್ಯಾತ್ ಪ್ರಾರ್ಥನಾವಿನಯನಾರ್ಥಮ್| ಪ್ರಾರ್ಥನಾಸಂಧಾರಣಾದ್ಧಿವಾಯುಃ ಪ್ರಕುಪಿತೋಽಂತಃ ಶರೀರಮನುಚರನ್ ಗರ್ಭಸ್ಯಾಪದ್ಯಮಾನಸ್ಯ ವಿನಾಶಂ ವೈರೂಪ್ಯಂ ವಾಕುರ್ಯಾತ್ ||** (ಚರಕ|| ಶಾರೀರ|| ಅ ೪ ಸೂ ೧೯)

ಅಹಿತವಾದ ಪದಾರ್ಥಗಳಲ್ಲಿ ಗರ್ಭಿಣಿಗೆ ತೀವ್ರ ಬಯಕೆಯಾದರೆ, ಅಹಿತವಾದ ಪದಾರ್ಥವನ್ನು, ಹಿತಕರವಾದ ಪದಾರ್ಥಗಳ ಸಂಗಡ ಕೂಡಿಸಿ, ಅಥವಾ, ಸ್ವಲ್ಪವನ್ನೇ ವಿಚಾರವರಿತು ಯೋಜಿಸಬೇಕು. ತೀವ್ರವಾದ ಅಪೇಕ್ಷೆಯನ್ನು ತಡೆಹಿಡಿದು ನಿರರ್ಥಕ ಮಾಡಬಾರದು. ಯಾಕೆಂದರೆ, ಇದರಿಂದ ಗರ್ಭಕ್ಕೂ ಗರ್ಭಿಣಿಗೂ ಬಾಧೆಯುಂಟಾಗುವದು. ಬಯಕೆಯ ಪದಾರ್ಥಗಳನ್ನು ಕೊಡದಿದ್ದರೆ ಬಯಕೆಯ ಸಂಧಾರಣ (ಅಡ್ಡಿ) ವಾಗುವದು ಇದರಿಂದ ವಾಯುವು ಪ್ರಕುಪಿತವಾಗಿ ಶರೀರದಲ್ಲಿ ಪ್ರಚಲಿಸುವದು ಬಯಕೆಯ ನಿರೋಧದಿಂದ ದುಃಖಹೊಂದಿದ ವಾಯುವು ಗರ್ಭದ ನಾಶವನ್ನು ಅಥವಾ ಅಂಗಹೀನತೆ, ದೌರ್ಬಲ್ಯ ಮುಂತಾದ ವಿಕಾರಗಳನ್ನುಂಟು ಮಾಡುತ್ತದೆ. ಆದ್ದರಿಂದ ಅಹಿತ ಪದಾರ್ಥಗಳಲ್ಲಿ ಸಹ ತೀವ್ರವಾದ ಬಯಕೆ ಆದರೆ ಕ್ರಮವರಿತು ಯೋಜಿಸಬೇಕೆಂದು ಶಾಸ್ತ್ರನಿರ್ಣಯವು. ಇದನ್ನು ಕುರಿತು ಸುಶ್ರುತಾಚಾರ್ಯರು ಹೀಗೆ ಹೇಳಿದ್ದಾರೆ.

**ಇಂದ್ರಿಯಾರ್ಥಾಂಸ್ತು ಯಾನ್ ಯಾನ್ ಸಾಭೋಕ್ತುಮಿಚ್ಛತಿ ಗರ್ಭಿಣೀ||ಗರ್ಭಾಬಾಧಭಯಾತ್ತಾಂ ಸ್ತಾನ್ ಭಿಷಗಾಹೃತ್ಯದಾಪಯೇತ್ ||** ( ಸುಶ್ರುತ || ಶಾರೀರ || ಅ. ೩ ಶ್ಲೋ. ೧೯ )

ಗರ್ಭಿಣಿಯು ಯಾವ ವಸ್ತುಗಳನ್ನು ಇಚ್ಛಿಸುತ್ತಾಳಿಯೋ ಅವುಗಳನ್ನು ವೈದ್ಯನು ಯೋಜಿಸಬೇಕು. ಇಲ್ಲವಾದರೆ ಗರ್ಭಕ್ಕೆ ಬಾಧೆಯಾಗುವದು.

**ಸಾಪ್ರಾಪ್ತದೌಹೃದಾಪುತ್ರಂಜನಯೇತಗುಣಾನ್ವಿತಂ ॥**
**ಅಲಬ್ಧದೌಹೃದಾಗರ್ಭೇಲಭೇತಾತ್ಮನಿವಾಭಯಂ ॥೨೦॥**

ಬಯಕೆಯ ತೃಪ್ತಿಯನ್ನು ಹೊಂದಿದ ಗರ್ಭಿಣಿಯು ಯೋಗ್ಯ ಬಲಾನ್ವಿತ ಸಂತತಿಯನ್ನು ಪಡೆಯುತ್ತಾಳೆ. ಗರ್ಭ ವಿಷಯದಲ್ಲಿ ಅಥವಾ ತನ್ನ ವಿಷಯದಲ್ಲಿ ಬಯಕೆಯ ಪದಾರ್ಥಗಳನ್ನು ಪಡೆಯದ ಗರ್ಭಿಣಿಯು ಭಯವನ್ನು ಹೊಂದುತ್ತಾಳೆ. ಆ ಭಯವು ಯಾವದೆಂದರೆ, ಬಯಕೆಯ ತೃಪ್ತಿ ಆಗದಿರುವದರಿಂದ ತನಗೆ ಅಥವಾ ಗರ್ಭಕ್ಕೆ ಹಾನಿಯಾಗುವದೆಂಬ ಹೆದರಿಕೆಯು. ಹಿಂದಿನ ಕಾಲದಲ್ಲಿ ಇಂಥ ಸೂಕ್ಷ್ಮ ವಿಷಯಗಳೂ ಸಹ ಸಾಮಾನ್ಯರಲ್ಲಿಯೂ ಬಾಯ್ಮಾತಾಗಿತ್ತೆಂಬುದವದು ಇದರಿಂದ ಸ್ಪಷ್ಟವಾಗುತ್ತದೆ.

**ಯೇಷುಯೇಷ್ವಿಂದ್ರಿಯಾರ್ಥೇಷುದೌಹೃದೇವೈವಿಮಾನತಾ ॥**
**ಪ್ರಜಾಯೇತಸುತಸ್ಯಾರ್ತಿಸ್ತಸ್ಮಿಂಸ್ತಸ್ಮಿಂಸ್ತಥೇಂದ್ರಿಯೇ॥೨೧॥**

ಗರ್ಭಿಣಿಯ ಯಾವ ಇಂದ್ರಿಯಗಳ, ಯಾವ ವಿಷಯಗಳಲ್ಲಿಯ ಬಯಕೆಯು ತಿರಸ್ಕರಿಸಲ್ಪಡುತ್ತದೆಯೋ, ಗರ್ಭದಲ್ಲಿಯ ಶಿಶುವಿನ ಆಯಾವ ಇಂದ್ರಿಯಗಳಲ್ಲಿ ದುಃಖವು (ವಿಕೃತಿ) ಉತ್ಪನ್ನವಾಗುತ್ತದೆ.

ಉದಾ:— ಗರ್ಭಿಣಿಯು ಗಾಯನ ಕೇಳಬೇಕೆಂಬ ತೀವ್ರವಾದ ಬಯಕೆಯ ತಿರಸ್ಕಾರದಿಂದ ಗರ್ಭಸ್ಥ ಶಿಶುವಿನ ಕಿವಿಗಳಲ್ಲಿಯೂ, ರಮ್ಯಸ್ಥಳಾದಿಗಳನ್ನು, ನೋಡಬೇಕೆಂಬದರ ತಿರಸ್ಕಾರದಿಂದ ಗರ್ಭದಲ್ಲಿಯ ಶಿಶುವಿನ ಕಣ್ಣುಗಳಲ್ಲಿಯೂ, ವಿಕೃತಿಯುಂಟಾಗುತ್ತದೆ. ಇದರಂತೆ ಪ್ರತಿಯೊಂದನ್ನೂ ತಿಳಿಯಬೇಕು.

**ದೋಷಾಭಿಘಾತೈರ್ಗರ್ಭಿಣ್ಯಾ ಯೋಯೋಭಾಗಃ ಪ್ರಪೀಡ್ಯತೆ॥**
**ಸಸಭಾಗಃ ಶಿಶೋಸ್ತಸ್ಯಗರ್ಭಸ್ಥಸ್ಯಪ್ರಪೀಡ್ಯತೆ ॥೧೭॥**

ದೋಷ ಪ್ರಕೋಪಗಳಿಂದಲೂ ಅಥವಾ ಆಘಾತ ಹೊಡತ ಮೊದಲಾದವುಗಳಿಂದಲೂ ಗರ್ಭಿಣಿಯ ಶರೀರದ ಯಾವ ಭಾಗವು ವೇದನೆಯನ್ನು

ಹೊಂದುತ್ತದೆಯೋ, ಗರ್ಭದಲ್ಲಿಯ ಶಿಶುವಿನ ಆವಾವ ಭಾಗವು ಪೀಡೆಯನ್ನು ಹೊಂದುತ್ತದೆ. ಆದ್ದರಿಂದ ಗರ್ಭಿಣಿಯನ್ನು, ವಿಶೇಷ ಅಂಗಾಂಗಗಳಲ್ಲಿ ಆಘಾತವಾಗುವ ಕೆಲಸಗಳಲ್ಲಿ ನಿಯಮಿಸಬಾರದೆಂದು, ಸ್ಪಷ್ಟವಾಗುತ್ತದೆ. "ಗರ್ಭಿಣೀಂ ವಿಶೇಷೇಣೋಪಚರಂತಿಕುಶಲಾಃ" ಗರ್ಭಿಣಿಗೆ ದುಃಖ ಆಘಾತಗಳುಂಟಾದರೆ ಗರ್ಭಕ್ಕೆ ಹಾನಿಯಾಗುವದೆಂದು ತಿಳಿದು, ಜಾಣರು ಗರ್ಭಿಣಿಯನ್ನು ವಿಶೇಷ ಲಕ್ಷಪೂರ್ವಕವಾಗಿ ಉಪಚರಿಸುತ್ತಾರೆ.

## ಗರ್ಭಿಣಿಯ ಬಯಕೆಯಿಂದ ಗರ್ಭ ಲಕ್ಷಣ:—

**ರಾಜಸಂದರ್ಶನೇಯಸ್ಯಾದೌಹೃದಂಜಾಯತೇಸ್ತ್ರಿಯಾಃ ||**
**ಅರ್ಥವಂತಂಮಹಾಭಾಗಂ ಕುಮಾರಂಸಾಪ್ರಸೂಯತೇ ||**

(ಸುಶ್ರುತ|| ಶಾರೀರ|| ಅ ೩ ಶ್ಲೋ ೨೨)

ಯಾವ ಗರ್ಭಿಣೀ ಸ್ತ್ರೀಗೆ ರಾಜಸಂದರ್ಶನದಲ್ಲಿ ಬಯಕೆಯಾಗುತ್ತ ದೆಯೋ, ಅವಳು ಲಕ್ಷ್ಮೀವಂತನಾದ ಮಹಾ ಪುಣ್ಯವಂತ ಮಗನನ್ನು ಹಡೆಯುತ್ತಾಳೆ

**ದುಕೂಲಪಟ್ಟಕೌಶೇಯಭೂಷಣಾದಿಷುದೌಹೃದಾತ್ ||**
**ಅಲಂಕಾರೈಷಿಣಂ ಪುತ್ರಂ ಲಲಿತಂಸಾಪ್ರಸೂಯತೆ ||೨೩||**

ಸೂಕ್ಷ್ಮ ಮನೋಹರ ವಸ್ತ್ರದಲ್ಲಿಯೂ ಪೀತಾಂಬರದಲ್ಲಿಯೂಅಲಂಕಾ ರಾದಿ ಆಭರಣಗಳಲ್ಲಿಯೂ ಬಯಕೆಯಾದರೆ, ಅಲಂಕಾರವನ್ನು ಪ್ರೀತಿಸುವ ಮನೋಹರ ರಸಿಕ ಪುತ್ರನನ್ನು ಪಡೆಯುತ್ತಾಳೆ.

**ಆಶ್ರಮೇಸಂಯತಾತ್ಮಾನಂ ಧರ್ಮಶೀಲಂ ಪ್ರಸೂಯತೆ ||**

ಗರ್ಭಿಣಿಗೆ ತಪಸ್ವಿಗಳಿರುವ ಆಶ್ರಮದಲ್ಲಿ ವಾಸಿಸುವ ಇಚ್ಛೆ ಆದರೆ, ಸಂಯಮಿಯೂ ಸದ್ಗುಣಿಯೂ ಆದ ಮಗನನ್ನು ಪಡೆಯುವಳೆಂದು ತಿಳಿಯ ಬೇಕು.

**ದೇವತಾಪ್ರತಿಮಾಯಾಂತುಪ್ರಸೂತೇಪಾರ್ಷದೋಪಮಮ್ ||**

ದೇವ ದರ್ಶನದಲ್ಲಿಚ್ಛೆಯಾದರೆ, ದೇವತಾರಧಕನನ್ನೂ ಅಥವಾ ಸಭ್ಯನಾದ (ಸತ್ಯವಂತ) ಪುತ್ರನನ್ನು ಪ್ರಸವಿಸುತ್ತಾಳೆ.

**ದರ್ಶನೇವ್ಯಾಲಜಾತೀನಾಂ ಹಿಂಸಾಶೀಲಂಪ್ರಸೂಯತೆ ||೨೪||**

ಕ್ರೂರ ಮೃಗಾದಿಗಳನ್ನು ನೋಡುವ ಇಚ್ಛೆಯಾದರೆ, ಅಥವಾ, ಕ್ರೂರ ಮೃಗಗಳಂತೆ, ಅನ್ಯರಿಗೆ ತ್ರಾಸನ್ನು ಕೊಟ್ಟು ತಾನು ಸಂತೋಷ ಹೊಂದುವ ಬುದ್ಧಿ ಉಂಟಾದರೆ ಪರಹಿಂಸಕನಾದ ಕ್ರೂರ ಮೃಗದಂತಿರುವವನನ್ನು ಹಡೆಯುತ್ತಾಳೆ. ಎಷ್ಟೋ ಗರ್ಭಿಣಿಯರು ಸ್ವಭಾವತಃ ಶಾಂತರಿದ್ದೂ, ಗರ್ಭಾವಸ್ಥೆಯಲ್ಲಿ ಕ್ರೂರ ಸ್ವಭಾವವುಳ್ಳವರಾಗುತ್ತಾರೆ. ಇದಕ್ಕೆ ಹೊಟ್ಟೆಯಲ್ಲಿರುವ ಗರ್ಭದ ಭಾವನೆಯೇ ಕಾರಣವು ತಮ್ಮ ಆತ್ಮದಂತಿರುವ ಅತ್ಯಂತ ಪ್ರೀತಿಯುಳ್ಳ ಮಕ್ಕಳನ್ನು ಮೇಲಿಂದಮೇಲೆ ಹೊಡೆಯುತ್ತಾ ಇದರಿಂದ ತಾವು ಸಂತೋಷ ಹೊಂದುವರು. ಹೀಗೆ ನಾನಾಪ್ರಕಾರದ ವಿಲಕ್ಷಣ ವೈಚಿತ್ರ್ಯವನ್ನನುಲಕ್ಷಿಸಿ ಇವೆಲ್ಲಕ್ಕೂ ಜನ್ಮಾಂತರೀಯ ಕರ್ಮ ಗುಣಯುಕ್ತವಾದ; ಗರ್ಭವೇ ಕಾರಣವೆಂದು ಅನುಭವ ಪಟ್ಟಿದ್ದಾರೆ. ಇದರ ಸತ್ಯಾಽಸತ್ಯತೆಯು ಅನುಭವದಿಂದ ತಿಳಿಯುವದು.

**ಗೋಧಾಮಾಂಸಾಶನೆಪುತ್ರಂ ಸುಷುಪ್ಸುಂಧಾರಣಾತ್ಮಕಂ ||**

ನೀರಿನಲ್ಲಿರುವ ಹಲ್ಲಿಯಂಥ ಪ್ರಾಣಿಯು (ಗೋಧಾ) ಅದರ ಮಾಂಸದಲ್ಲಿ ಇಚ್ಛೆಯಾದರೆ ನಿದ್ರಾಳುವಾದ ಧಾರಣಾಶಕ್ತಿಯುಕ್ತ ಮಗನನ್ನು ಪಡೆಯುತ್ತಾಳೆ. ಅಥವಾ ಓಡುವ ಶೀಲವುಳ್ಳ (ಧಾವನಾತ್ಮಕ) ವನೆಂದೂ ಅರ್ಥ ಮಾಡುತ್ತಾರೆ. ಓಡುವ ಸ್ವಭಾವವೆಂದರೆ ಅಂಜುಬುರುಕನೆಂದಾಗುವದು. ಆಗ ಧಾರಣ ಶಬ್ದದ ಬದಲು ಧಾವನ ಶಬ್ದವನ್ನು ಹೇಳಿದ್ದಾರೆಂದು ತಿಳಿಯಬೇಕು.

**ಗವಾಂ ಮಾಸೇಂತುಬಲಿನಂ ಸರ್ವಕ್ಲೇಶ ಸಹಂತಥಾ ||೨೫||**

ಆಕಳ ಮಾಂಸದಲ್ಲಿ ಬಯಕೆಯಾದರೆ, ಸರ್ವ ದುಃಖವನ್ನು ಸಹಿಸುವ ಬಲಿಷ್ಠನಾದ ಮಗನನ್ನು ಪ್ರಸವಿಸುವಳು.

ಮಾಹಿಷೇದೌಹೃದಾತ್ ಶೂರಂರಕ್ತಾಕ್ಷಂಲೋಮಸಂಯುತಂ॥

ಕೋಣನ ಮಾಂಸದಲ್ಲಿ ಇಚ್ಛೆಯಾದರೆ, ಶೂರರನ್ನೂ ಕೆಂಪು ಕಣ್ಣುಳ್ಳವನನ್ನೂ ಬಹಳ ಕೂದಲುಳ್ಳ ಪುತ್ರನನ್ನೂ ಪಡೆಯುತ್ತಾಳೆ.

ವರಾಹಮಾಂಸಾತ್ ಸ್ವಪ್ನಾಲುಂಶೂರಂಸಂಜನಯೇತ್ಸುತಂ॥ ೨೬॥

ಹಂದಿಯ ಮಾಂಸದಲ್ಲಿ ಬಯಕೆಯಾದರೆ, ಬಹು ನಿದ್ರೆ ಮಾಡುವ, ಶೂರ ಮಗನನ್ನು ಪಡೆಯುತ್ತಾಳೆ.

ಮಾರ್ಗಾತ್ ವಿಕ್ರಾಂತಜಂಘಾಲಂ ಸದಾವನಚರಂ ಸುತಂ ॥

ಮೃಗ ಮಾಂಸದಲ್ಲಿ, ( ಚಿಗರಿ ವಗೈರೆ ) ಇಚ್ಛೆಯಾದರೆ, ಉದ್ಯೋಗ ಮಾಡುವ, ವೇಗವುಳ್ಳ, ಸದಾ ಅಡವಿಯಲ್ಲಿ ಸಂಚರಿಸುವ, ಮಗನನ್ನು ಪ್ರಸವಿಸುತ್ತಾಳೆ.

ಸೃಮರಾದ್ವಿಗ್ನಮನಸಂ ನಿತ್ಯಭೀತಂ ಚ ತೈತ್ತಿರಾತ್ ॥ ೨೭ ॥

ದೊಡ್ಡ ಹಂದಿ ಅಥವಾ ಬಹಳ ಕೂದಲಿರುವ ನಾಯಿಯಂಥ ಪ್ರಾಣಿ ಇವುಗಳ ಮಾಂಸದಲ್ಲಿ ಬಯಕೆ ಉಂಟಾದರೆ, ಉದ್ವಿಗ್ನಮನಸ್ಸುಳ್ಳ ಮಗನನ್ನು ಪಡೆಯುತ್ತಾಳೆ. ತಿತ್ತಿರ ಪಕ್ಷಿಯ ಮಾಂಸದಲ್ಲಿ ಅಭಿಲಾಷೆಯಾದರೆ, ಸದಾ ಹೆದರಿಕೆಯುಳ್ಳ ಅಥವಾ ಶೀಲವಂತನನ್ನು ಪಡೆಯುತ್ತಾಳೆ.

ಅತೋಽನುಕ್ತೇಷುಯಾನಾರೀಸಮಭಿಧ್ಯಾತಿದೌಹೃದಂ ॥
ಶರೀರಾಚಾರಶೀಲೈಃ ಸಾಸಮಾನಂ ಜನಯಿಷ್ಯತಿ ॥ ೨೮ ॥

ಇನ್ನು ಹೇಳದೇ ಇದ್ದಂಥ ಬೇರೆಬೇರೆ ಪ್ರಾಣಿಗಳ ಮಾಂಸವಿಷಯದಲ್ಲಿ ಗರ್ಭಿಣಿಯು ಇಚ್ಛೆಯನ್ನು ಮಾಡಿದರೆ, ಆ ಪ್ರಾಣಿಯ ಶರೀರ ಸೂಲ್ಕತೆ,

ಆಚಾರ, ಶೀಲಗಳಿಗೆ ಸಮಾನವಾದ, ಶರೀರಾದಿಗುಣಗಳುಳ್ಳ ಮಗನನ್ನು ಹಡೆಯುತ್ತಾಳೆ.

**ಕರ್ಮಣಾಚೋದಿತಂಜಂತೋರ್ಭವಿತವ್ಯಂಪುನರ್ಭವೇತ್॥ ಯಥಾ ತಥಾ ದೈವಯೋಗಾತ್ ದೌಹೃದಂಜನಯೇತ್ ಹೃದಿ ॥ ೨೯ ॥**

ಹೇಗೆ ಗರ್ಭಿಣಿಯ ಹೃದಯದಲ್ಲಿ ಅನಿರ್ವಚನೀಯವಾದ ಗರ್ಭಜೀವದ ಕರ್ಮಸಂಸ್ಕಾರ ರೂಪವಾದ ದೈವಯೋಗದಿಂದ ಬಯಕೆಯು ಉತ್ಪನ್ನವಾಗುತ್ತದೆಯೋ, ಅದರಂತೆ ಮುಂದೆ ಹುಟ್ಟುವಮನುಷ್ಯನ ಗುಣವಾದರೂ ಸಹ ಆ ಕರ್ಮಗಳಿಂದ ಕೂಡಿದ ಭವಿತವ್ಯವುಳ್ಳದ್ದಿರುವದು ಆದ್ದರಿಂದ ಹಿಂದೆ ವಿವೇಚಿಸಲ್ಪಟ್ಟ, ಮನುಷ್ಯನ ಕರ್ಮರೂಪವಾದ ಸಂಸ್ಕಾರವುಳ್ಳ, ಮನಸ್ಸೆಂಬ ಲಿಂಗ ಶರೀರವು, ಪ್ರತಿ ಜನ್ಮದಲ್ಲಿಯೂ ಪ್ರಕಟವಾಗುತ್ತದೆಂದು ತಿಳಿಯಬೇಕು ಹಿಂದಿನ ಜನ್ಮದಲ್ಲಿಯ ಸಂಸ್ಕಾರಯುಕ್ತ ಮನಸ್ಸು ಈ ಜನ್ಮದಲ್ಲಿಯೂ ಈಗಿನ ಜನ್ಮದಲ್ಲಿಯದು ಮುಂದೆಯೂ; ಹೀಗೆ ಕ್ರಮಶಃ ಚಕ್ರದಂತೆ ಪರಿವರ್ತನವುಳ್ಳದ್ದಿರುವದೆಂದು ತಿಳಿಯಬೇಕು.

## (೧೫) ಪ್ರತಿ ತಿಂಗಳದಲ್ಲಿಯ ಗರ್ಭದ ಅಂಗೋಪಾಂಗಗಳು

**ಮಾಸಿಮಾಸಿ ಗರ್ಭಸ್ಯ ಅಂಗೋಪಾಂಗ ನಿರ್ವೃತ್ತಿಃ ॥**

ಪ್ರತಿಯೊಂದು ತಿಂಗಳಿನಲ್ಲಿಯ ಗರ್ಭದ ಅಂಗೋಪಾಂಗ ಪರಿಪೂರ್ಣತೆಯ ಕ್ರಮವನ್ನು ಹೇಳುತ್ತಾರೆ.

**ತತ್ರಪ್ರಥಮೇಮಾಸಿಕಲಲಂಜಾಯತೆ, ಘ್ವಿತೀಯೇದಿನಃ, ದಿತ್ರತೀಯೇ ಹಸ್ತ, ಪಾದ, ಶಿರಸಾಂ, ಪಂಚಪಿಂಡಿಕಾನಿವರ್ತಂತೆ, ಅಂಗಪ್ರತ್ಯಂಗವಿಭಾಗಶ್ಚಸೂಕ್ಷ್ಮೋಭವತಿ, ಚತುರ್ಥೆಸರ್ವಾಂಗ ಪ್ರತ್ಯಂಗವಿಭಾಗಃ ಪ್ರವ್ಯಕ್ತೋಭವತಿ, ಪಂಚಮೇಮನಃ ಪ್ರತಿ**

**ಬುದ್ಧತರಂಭವತಿ, ಷಷ್ಠೇಬುದ್ಧಿಃ, ಸಪ್ತಮೇಸರ್ವಾಂಗಪ್ರತ್ಯಂಗ ವಿಭಾಗಃಪ್ರವ್ಯಕ್ತತರೋಭವತಿ, ಅಷ್ಟಮೇऽಸ್ಥಿರೀಭವತ್ಯೋಜಃ, ನವಮದಶಮೈಕಾದಶ ದ್ವಾದಶಾನಾಟಮನ್ಯತಥಿಮಸ್ಮಿನ್ ಜಾಯತೇ, ಅಥೋऽನ್ಯಥಾವಿಕಾರೀಭವತಿ ॥**

( ಸುಶ್ರುತ | ಶಾರೀರ | ಅ. ೩ ಸೂ. ೧೮-೩೦ )

ಗರ್ಭಾಶಯದಲ್ಲಿ ಶುಕ್ರಶೋಣಿತಸಂಯುಕ್ತವಾದ ಗುಂಪು **ಮೊದಲನೇ ತಿಂಗಳಿನಲ್ಲಿ** ನೊಸರಿನಂತೆ (ಕಲಲ) ಆಗುತ್ತದೆ. **ಎರಡನೇ ತಿಂಗಳಿನಲ್ಲಿ** ಘಟ್ಟಿಯಾಗಿ ಮುದ್ದೆಯಂತೆ (ಘನ) ಆಗುತ್ತದೆ. **ಮೂರನೇ ತಿಂಗಳಿನಲ್ಲಿ** ಕೈ, ಕಾಲು, ತಲೆಗಳ, ಐದು ಪಿಂಡಗಳು ಉತ್ಪನ್ನವಾಗುತ್ತವೆ. ಅದು ಹೇಗಂದರೆ:— ಐದು ಸಣ್ಣ ಸಣ್ಣ ಪಿಂಡಿಕೆಗಳು, ಆಯಾ ಸ್ಥಾನಗಳಲ್ಲಿ, ಉಂಟಾಗುತ್ತವೆ. ಮುಂದೆ ಅವೇ ಕೈ, ಕಾಲು, ತಲೆಗಳಾಗುತ್ತವೆ. ಐದು ಪಿಂಡಿಕೆಗಳೆಂದರೆ, ಕೈ, ಕಾಲು, ತಲೆಗಳ ಸೂಕ್ಷ್ಮ ಸ್ವರೂಪಗಳು ಮತ್ತು ಅಂಗಪ್ರತ್ಯಂಗ ವಿಭಾಗಗಳು ಸೂಕ್ಷ್ಮವಾಗಿ ಆರಂಭವಾಗಿರುತ್ತವೆ. **ನಾಲ್ಕನೇ ತಿಂಗಳಿನಲ್ಲಿ** ಸರ್ವಾಂಗ ಪ್ರತ್ಯಂಗ ವಿಭಾಗಗಳು ಪ್ರವ್ಯಕ್ತವಾಗುತ್ತವೆ. ಗರ್ಭದ ಹೃದಯ ಭಾಗವು ಉತ್ಪನ್ನವಾಗುವದರಿಂದ ಚೇತನಾಧಾತುವು ಅಭಿವ್ಯಕ್ತವಾಗುತ್ತದೆ. **ಐದನೇ ತಿಂಗಳಿನಲ್ಲಿ** ಮನಸ್ಸು ಪ್ರವ್ಯಕ್ತವಾಗುತ್ತದೆ **ಆರನೇ ತಿಂಗಳಿನಲ್ಲಿ** ಬುದ್ಧಿಯು ಉತ್ಪನ್ನವಾಗುತ್ತದೆ. **ಏಳನೇ ತಿಂಗಳಿನಲ್ಲಿ** ಸರ್ವ ಅಂಗಪ್ರತ್ಯಂಗಗಳು ಸ್ಫುಟವಾಗಿ ಉತ್ಪನ್ನವಾಗುತ್ತವೆ **ಎಂಟನೇ ತಿಂಗಳನಲ್ಲಿ** ಓಜಸ್ಸು ಅಸ್ಥಿರ (ಚಂಚಲ) ವಾಗುತ್ತದೆ. **ಓಂಭತ್ತನೇ ತಿಂಗಳು** ಅಥವಾ **ಹತ್ತು, ಹನ್ನೊಂದು, ಹನ್ನೆರಡನೇ ತಿಂಗಳಿನಲ್ಲಿ** ಯಾವದಾದರೊಂದು ತಿಂಗಳಲ್ಲಿ ಹಡೆಯುತ್ತಾಳೆ ಅದಕ್ಕೂ ಹೆಚ್ಚು ದಿನಗಳಾದರೆ ಗರ್ಭವು ವಿಕಾರಹೊಂದಿದೆಯೆಂದು ತಿಳಿಯಬೇಕು. ಹನ್ನೆರಡು ತಿಂಗಳ ನಂತರ ಹಡೆಯುವ ಗರ್ಭದಲ್ಲಿ ಪ್ರತಿಯೊಂದು ತಿಂಗಳಲ್ಲಿ ಹೇಳಿದ ಆಯಾವ ಅಂಗಪ್ರತ್ಯಂಗ ಸ್ಥಿತಿಗಳು ಆಯಾವ ತಿಂಗಳಂತೆಯೇ ಉತ್ಪನ್ನವಾಗಲಾರವು. ಹಾಗೆ ಶಾಸ್ತ್ರದಲ್ಲಿ ಹೇಳಿದಂತೆ, ಪ್ರತಿತಿಂಗಳ ಸ್ಥಿತಿಗಳಂತೆ ಗರ್ಭೋಪಕ್ರಮ ಸಾಗಿದರೆ; ಹೆಚ್ಚು ದಿನ ಹಿಡಿದರೂ ಒಂದು ವರ್ಷದಲ್ಲಿ ಜನನವಾಗ

ಲಿಕ್ಕೇಬೇಕು ಹಾಗೆ ಆಗದೆ ಇರುವ ಗರ್ಭದಲ್ಲಿ, ಕ್ರಮವಾದ ಬೆಳವಣಿಗೆ ಇಲ್ಲವೆಂಬುದು ಸ್ಪಷ್ಟ ನಿಶ್ಚಿತಾರ್ಥವಾದದ್ದಿರುತ್ತದೆ. ಇಂಥ ವರ್ಷ ಮೀರಿದ ಮೇಲೆ ಯಾವಾಗಲಾದರೂ ಹಡೆಯುವ ಗರ್ಭದಲ್ಲಿ; ಪ್ರತಿ ತಿಂಗಳಿನಂತೆ ಗರ್ಭದ ಅಂಗಪ್ರತ್ಯಂಗಕ್ರಮಗಳು ನಡೆಯುವದಿಲ್ಲವೆಂಬುವದೇ ಸ್ಪಷ್ಟಾರ್ಥವು.

## ೧. ಗರ್ಭ ವಿಷಯದಲ್ಲಿ ವಿಶೇಷ

ಗರ್ಭಿಣೀ ಸ್ಥಿತಿಯಲ್ಲಿ ಇರುವಾಗಿನ ಆಚಾರಾದಿ ವೈದಿಕಕ್ರಿಯೆಗಳನ್ನೂ, ಪುಂಸವನ ಮೊದಲಾದವುಗಳನ್ನೂ ಹೇಳಿರುತ್ತಾರೆ. ಮತ್ತೂ ವಿಶೇಷವಾದ ಗರ್ಭ ವಿಷಯಕ್ಕೆ ಸಂಬಂಧಿಸಿದ ವಿಚಾರಗಳನ್ನು ಹೇಳುತ್ತಾರೆ ಅವುಗಳು ಅಭ್ಯಾಸಿಗಳಿಗೆ ಒಂದೇ ಕಡೆಯಲ್ಲಿ ದೊರೆಯಲೆಂದು ಸಂಗ್ರಹಿಸಿ ಹೇಳುತ್ತೇನೆ. ವಿಷಯವನ್ನೇ ಅನುಸರಿಸಿ ಗ್ರಂಥ ರಚನೆಯನ್ನು ಕೈಕೊಂಡಿದ್ದರಿಂದ ವಿಷಯಕ್ಕೆ ಸಂಬಂಧ ಬರದಂಥವುಗಳನ್ನು ಇಲ್ಲಿ ಸಂಗ್ರಹಿಸಿರುತ್ತದೆ.

### ಋತುಕಾಲದಲ್ಲಿಯ ನಿಯಮ

**ಋತೌ ಪ್ರಥಮ ದಿವಸಾತ್ ಪ್ರಭೃತಿ ಬ್ರಹ್ಮಚಾರಿಣೀದಿವಾಸ್ವಪ್ನಾಂಜನಾಽಶ್ರುಪಾತಸ್ನಾನಾಽನುಲೇಪನಾಽಭ್ಯಂಗನಖಚ್ಛೇದನಪ್ರಧಾವನಹಸನಕಥನಾಽತಿಶಬ್ದ ಶ್ರವಣಾಽವಲೇಖನಾಽನಿಲಾಯಾಸಾನ್ ಪರಿಹರೇತ್ ॥ ಕಿಂಕಾರಣಂ? ದಿವಾಸ್ವಪಂತ್ಯಾಃ ಸ್ವಾಪಶೀಲಃ, ಅಂಜನಾದಂಧಃ, ರೋದನಾದ್ವಿಕೃತದೃಷ್ಟಿಃ, ಸ್ನಾನಾಽನುಲೇಪನಾತ್ ದುಃಖಶೀಲಃ, ತೈಲಾಭ್ಯಂಗಾತ್ ಕುಷ್ಠೀ, ನಖಾಽಪಕರ್ತನಾತ್ ಕುನಖೀ, ಪ್ರಧಾವನಾತ್ ಚಂಚಲಃ, ಹಸನಾಚ್ಛ್ಯಾವದಂತೌಷ್ಠತಾಲುಜಿಹ್ವಃ, ಪ್ರಲಾಪೀ ಚಾತಿಕಥನಾತ್, ಅತಿಶಬ್ದಶ್ರವಣಾದ್ಬಧಿರಃ, ಅವಲೇಖನಾತ್ ಖಲತಿಃ, ಮಾರುತಾಯಾಸಸೇವನಾದುನ್ಮತ್ತೋ ಗರ್ಭೋಭವತೀತ್ಯೇವಮೇತಾನ್ ಪರಿಹರೇತ್ ॥**

( ಸುಶ್ರುತ ॥ ಶಾರೀರ ॥ ಅ. ೨ ಸೂ. ೨೮ )

ಮಾಸಿಕ ಋತು (ರಜಸ್ರಾವ) ಕಾಲದಲ್ಲಿ ಸ್ತ್ರೀಯು ಮೊದಲನೇ ದಿವಸ ಮೊದಲುಗೊಂಡು ಬ್ರಹ್ಮಚಾರಿಣಿಯಾಗಿರಬೇಕು. ಹಗಲು ನಿದ್ರಿಸುವದು, ಅಂಜನವನ್ನು ಹಚ್ಚಿಕೊಳ್ಳುವದು, ಅಳುವದು, ಸ್ನಾನಮಾಡೋಣ, ಮೈಗೆ ಗಂಧಾದಿಗಳನ್ನು ಹಚ್ಚಿಕೊಳ್ಳುವಿಕೆ, ಅಭ್ಯಂಗ ಸ್ನಾನ ಮೊದಲಾದವುಗಳು, ಉಗುರು ಕತ್ತರಿಸುವದು, ಓಡುವದು, ನಗುವದು, ಶೃಂಗಾರಾದಿ ಕಥೆಗಳನ್ನು ಕೇಳುವದು ಮತ್ತು ಹೇಳುವದು, ಅತಿ ಮಾತಾಡುವದು ಅಥವಾ ಬಹಳ ಮಾತನ್ನು ಕೇಳುವದು ಇಲ್ಲವೇ ಬಹುದೊಡ್ಡ ಸಪ್ಪಳವನ್ನು ಕೇಳುವದು, ತಲೆ ಬಾಚಿಕೊಳ್ಳುವದು, ವಾತಪ್ರಕೋಪ ಮಾಡುವ ಆಹಾರ ಆಚಾರ ವಿಹಾರ ಗಳು ಅಥವಾ ಗಾಳಿಯಲ್ಲಿರುವದು, ಶ್ರಮಕರವಾದ ಕೆಲಸ ಇಲ್ಲವೇ ಕಷ್ಟಪ್ರದ ವಾದ ಕರ್ತವ್ಯ ಮೊದಲಾದವುಗಳನ್ನು ಬಿಡಬೇಕು.

ಯಾಕಂದರೆ:— ಹಗಲು ನಿದ್ರಿಸುವದರಿಂದ ನಿದ್ರಾಶೀಲನಾದ ಮಗನನ್ನು ಪಡೆಯುತ್ತಾಳೆ. ಅಂಜನವನ್ನು ಹಚ್ಚಿಕೊಳ್ಳುವದರಿಂದ ಕುರುಡನು, ಅಳುವದರಿಂದ ವಿಕಾರವಾದ ಕಣ್ಣುಳ್ಳವನು, ಸ್ನಾನಮಾಡುವದರಿಂದ ಮತ್ತು ಗಂಧಾದಿಲೇಪನಮಾಡಿಕೊಳ್ಳುವದರಿಂದ ದುಃಖಿಯು ಅಥವಾ ದುಷ್ಟಬುದ್ಧಿ ಯುಳ್ಳವನು, ತೈಲಾಭ್ಯಂಗದಿಂದ ಕುಷ್ಠರೋಗಿಯು, ಉಗುರು ಕತ್ತರಿಸಿ ಕೊಳ್ಳುವದರಿಂದ ಕೆಟ್ಟ ಉಗುರುಳ್ಳವನು, ಓಡುವದರಿಂದ ಚಂಚಲನು, ನಗು ವದರಿಂದ ಧೂಸರ ಕೆಂಪು ಬಣ್ಣವುಳ್ಳ, ಹಲ್ಲು ತುಟಿ ಕಾಲು ನಾಲಿಗೆಗಳಿಂದ ಕೂಡಿರುವವನು, ಬಹಳ ಮಾತಾಡುವದರಿಂದ ಪ್ರಲಾಪಿಯು, ಕರ್ಕಶ ಬಹು ದೊಡ್ಡ ಸಪ್ಪಳವನ್ನು ಕೇಳುವದರಿಂದ ಕಿವುಡನು, ಲೆತ ಬಾಚಿಕೊಳ್ಳುವದರಿಂದ ಬೋಳುತಲೆಯವನು, ಬಹಳ ವಾತಲ ಪದಾರ್ಥ ಸೇವನೆ ಅಥವಾ ವಾಯು ಸೇವನೆಯಿಂದ ಉನ್ಮತ್ತನು ಮೊದಲಾದ ಪುತ್ರೋತ್ಪತ್ತಿಯುಆಗುತ್ತದೆ. ಆದ್ದ ರಿಂದ ಯೋಗ್ಯ ಗರ್ಭ ಉತ್ಪತ್ತಿಯಾಗಬೇಕಾದರೆ ಇವೆಲ್ಲವುಗಳನ್ನು ಬಿಡ ಬೇಕು. ಈ ಶ್ಲೋಕದಲ್ಲಿ ನಿಷಿದ್ಧವಾದ ಆಚಾರಾದಿಗಳಿಂದ ಉತ್ಪನ್ನವಾಗುವ ವಿಕೃತಿಯುಕ್ತವಾದಗರ್ಭ ಸ್ವರೂಪವನ್ನು ಹೇಳಿದ್ದಾರೆ.

**ದರ್ಭಸಂಸ್ತರಶಾಯಿನೀಂಕರತಲಶರಾವಪರ್ಣಾನ್ಯತಮಭೋ**
**ಜಿನೀಂ ಹವಿಷ್ಯಂ, ತ್ರ್ಯಹಂ ಚ ಭರ್ತುಃ ಸಂರಕ್ಷೇತ್ ॥**

**ತತಃ ಶುದ್ಧಸ್ನಾತಾಂ ಚತುರ್ಥೇsಹನ್ಯಹತವಾಸಃ ಸಮಲಂಕೃ
ತಾಂಕೃತಮಂಗಲಸ್ವಸ್ತಿವಾಚನಾಂಭರ್ತಾರಂದರ್ಶಯೇತ್ ॥
ತತ್ ಕಸ್ಯಹೇತೋಃ? ॥**
( ಸುಶ್ರುತ ॥ ಶಾರೀರ ॥ ಅ ೨ ಸೂ ೨೫ )

ಧರ್ಭೆಯು ಚಾಪೆ ಮೊದಲಾದವುಗಳಲ್ಲಿ ಶಯನ ಮಾಡತಕ್ಕವಳಾಗಿಯೂ, ಕೈಯಲ್ಲಿಯೇ ಆಹಾರ ಪದಾರ್ಥಗಳನ್ನು ಹಾಕಿಸಿಕೊಂಡು ಊಟ ಮಾಡಬೇಕು. ಅಥವಾ ಹರಿವಾಣ, ಎಲೆ, ಮೊದಲಾದವುಗಳಲ್ಲಿ ಯಾವದಾದರೊಂದರಲ್ಲಿ ಹವಿಷ್ಯಾನ್ನವನ್ನು ಭುಂಜಿಸಬೇಕು. ಹೀಗೆ ಮುಟ್ಟಾದಾಗ ಮೂರು ದಿನ ನಿಯಮವತಿಯಾಗಿರುವವಳನ್ನು ಗಂಡನ ಸಕಾಶದಿಂದ ವೈದ್ಯನು ರಕ್ಷಣೇ ಮಾಡಬೇಕು. "ತ್ರ್ಯಹಂಚ" ಎಂದು ಹೇಳಿರುವದರಿಂದ ಮಾಸಿಕ ಸ್ರಾವದ ಅವಧಿಯು ಹೆಚ್ಚು ದಿನವಿದ್ದರೆ ಆ ದಿನಪರ್ಯಂತರವೂ, ಈ ವಿಧಿಗಳನ್ನನುಸರಿಸಬೇಕೆಂದು ಸೂಚಿತವಾಗುತ್ತದೆ.

ಮಾಸಿಕ ಸ್ರಾವ ಪೂರ್ತಿಯಾದ ನಂತರ (ಮುಗಿದ ಮೇಲೆ) ಸ್ನಾನಾದಿಗಳಿಂದ ಶುದ್ಧ ವಾದವಳನ್ನು ನಾಲ್ಕನೇ ದಿನ (ಶುದ್ಧ ಸ್ನಾತಳಾದ ನಂತರ) ದಲ್ಲಿ, ನವೀನ ವಸ್ತ್ರಗಳನ್ನೂ ಅಲಂಕಾರ ಆಭರಣಾದಿಗಳನ್ನೂ ಧರಿಸಿದಂಥವಳಿಗೆ, ಪುರೋಹಿತರು **"ಮಂಗಲ ಸ್ವಸ್ತಿವಾಚನ"** ಪೂರ್ವಕವಾಗಿ ಪತಿ ದರ್ಶನವನ್ನುಮಾಡಿಸಬೇಕು. ಪತಿ ದರ್ಶನವನ್ನೇ ಯಾಕೆಮಾಡಿಸಬೇಕೆಂದರೆ, ಋತು ಸ್ನಾತಳಾದ ಸ್ತ್ರೀಯು ಮೊದಲು ಯಾರನ್ನು ನೋಡುತ್ತಾಳೆಯೋ ಅಂಥ ಪುತ್ರನನ್ನೇ ಪಡೆಯುತ್ತಾಳೆ. ಆದ್ದರಿಂದ ಋತು ಸ್ನಾತಳಾದವಳು ಮೊದಲು ಪತಿ ದರ್ಶನವನ್ನೇ ಮಾಡಬೇಕೆಂದು ಶಾಸ್ತ್ರಕಾರರು ವಿಧಿಸಿದ್ದಾರೆ.

**ಪೂರ್ವಂ ಪಶ್ಯೇತ್ ಋತುಸ್ನಾತಾಯಾದೃಶಂನರಮಂಗನಾ ॥
ತಾದೃಶಂಜನಯೇತ್ ಪುತ್ರಂಭರ್ತಾರಂದರ್ಶಯೇದತಃ॥ ೨೬॥
ತತೋವಿಧಾನಂ ಪುತ್ರೀಯಮುಪಾಧ್ಯಾಯಃ ಸಮಾಚರೇತ್
ಕರ್ಮಾಂತೇಚಕ್ರಮಂ ಹ್ಯೇತಮಾರಭೇತವಿಚಕ್ಷಣಃ ॥**
(ಸುಶ್ರುತ॥ ಶಾರೀರ॥ ಅ ೨ ಶ್ಲೋ ೨೭)

ಮಾಸಿಕವಾದ ಋತುಸ್ನಾನಾನಂತರ ಸ್ತ್ರೀಯು ಮೊದಲು ಯಾರನ್ನು ನೋಡುತ್ತಾಳೆಯೋ ಅವನಂತೇ ಇರುವ ಪುತ್ರನನ್ನು ಪಡೆಯುತ್ತಾಳೆ. ಆದ ರಿಂದ ಪತಿ ದರ್ಶನವನ್ನೇ ಮಾಡಬೇಕೆಂದು ಹೇಳಿದ್ದಾರೆ. ಪತಿ ದರ್ಶನಾ ನಂತರದಲ್ಲಿ ಪುರೋಹಿತರು "ಪುತ್ರೀಯ" ವಿಧಾನವನ್ನು ಜರುಗಿಸಬೇಕು. "ಪುತ್ರೇಭ್ಯೋಹಿತಂ ಪುತ್ರೀಯಂ" ಪುತ್ರರಿಗೆ (ಸಂತತಿಗೆ) ಹಿತವಾಗು ವಂಥ ಮಂತ್ರಾರ್ಚನ ಹೋಮಾದಿ ವಿಧಾನಕ್ಕೆ "ಪುತ್ರೀಯ" ವೆಂಬ ಹೆಸರು. ಪುತ್ರೀಯ ವಿಧಾನಗಳ ಕರ್ಮಾಂತ್ಯದಲ್ಲಿ ಮುಂದೆ ವಿವರಿಸುವ ಕ್ರಮವನ್ನು ಅನುಸರಿಸಬೇಕು.

**ತತೋಽಪರಾಹ್ಣೇಪುಮಾನ್‌ಮಾಸಂಬ್ರಹ್ಮಚಾರೀಸರ್ಪಿಃ ಸ್ನಿಗ್ಧಃ ಸರ್ಪಿಃ ಕ್ಷೀರಾಭ್ಯಾಂ ಶಾಲ್ಯೋದನಂ ಭುಕ್ತ್ವಾಮಾಸಂಬ್ರಹ್ಮ ಚಾರಿಣೀಂ ತೈಲಸ್ನಿಗ್ಧಾಂ ತೈಲಮಾಷೋತ್ತರಾಹಾರಾಂ ನಾರೀ ಮುಪೇಯಾದ್ರಾತ್ರೌಸಾಮಭಿರಭಿವಿಶ್ವಾಸ್ಯ;ವಿಕಲ್ಪ್ಯೈವಂಚತು ರ್ಥ್ಯಾಂಷಷ್ಠ್ಯಾಮಷ್ಟಮ್ಯಾಂದಶಮ್ಯಾಂ ದ್ವಾದಶ್ಯಾಂಚೋಪೇ ಯಾದತಃ ಪರಂಮಾಸಾದುಪೇಯಾತ್, ಪುತ್ರಕಾಮಃ॥ ಲಬ್ಧ ಗರ್ಭಾಂನ್ನೈವಚ ॥** (ಸುಶ್ರುತ॥ ಶಾರೀರ॥ ಅ ೨ ಸೂ ೨೮)

ಮಾಸಿಕ ರಜೋದರ್ಶನದ ಕಾಲದಲ್ಲಿ ಬ್ರಹ್ಮಚರ್ಯವನ್ನೂ ನಿಯ ಮಾದಿಗಳನ್ನೂ ಆಯುರ್ವೇದಾಚಾರ್ಯರು ಸ್ವಯಂ ವಿಧಿಸಿರುತ್ತಾರೆ ಆದರೆ ವಿಶಿಷ್ಟ ಸಂತತಿಯನ್ನು ಪಡೆಯುವ ಸಲುವಾಗಿ ಪ್ರತ್ಯೇಕ ವಿಧಾನವಾದ "ಪುತ್ರೀಯ" ವಿಧಿಯನ್ನು ಅನುಸರಿಸುವಾಗ, ಋತು ಕಾಲದ ಪೂರ್ವದಲ್ಲಿ ಒಂದು ತಿಂಗಳು ಪತಿ ಪತ್ನಿಯರಿಬ್ಬರೂ ಬ್ರಹ್ಮಚರ್ಯ ನಿಯಮಾದಿಗಳನ್ನು ಪಾಲಿಸಬೇಕೆಂದು ಶಾಸ್ತ್ರವಿಧಿ ಇರುತ್ತದೆ ಸ್ತ್ರೀಯ ಋತುಸ್ನಾತ ಕ್ರಮ ಮುಗಿದ ಮೇಲೆ ಪುತ್ರೀಯ ವಿಧಾನದಂತೆ ಇರುವ ದಂಪತಿಗಳು ರಾತ್ರಿಯಲ್ಲಿ ಸಂಯೋಗವನ್ನು ಹೊಂದಬೇಕು. ಪುರುಷನು ಪೂರ್ವದಲ್ಲಿ ಒಂದು ತಿಂಗಳಿಂದಲೂ ಬ್ರಹ್ಮಚರ್ಯವನ್ನನುಸರಿಸಿ ಘೃತಪಾನಾದಿಗಳಿಂದ ಸ್ನಿಗ್ಧತೆಯುಳ್ಳವನಾಗಿ, ತುಪ್ಪ ಹಾಲು ಯುಕ್ತವಾದ ಶಾಲ್ಯೋದನವನ್ನು ಭುಂಜಿಸಬೇಕು. ಸ್ತ್ರೀಯಾದರೂ ವ್ರತದಿಂದ ಇದ್ದು ತೈಲದಿಂದ ಬಸಿ

ಮೊದಲಾದವುಗಳನ್ನು ತಕ್ಕೊಂಡು ಸ್ನಿಗ್ಧತೆಯುಳ್ಳವಳಾಗಿ, ತೈಲ ಮಾಷ ಯುಕ್ತ ಪದಾರ್ಥಗಳನ್ನು ಭೋಜನದ ಅಂತ್ಯ ಸಮಯದಲ್ಲಿ ಸೇವಿಸಬೇಕು. ಹೀಗೆ ನಿಯಮವನ್ನನುಸರಿಸಿದ ಪುರುಷನು ಸ್ತ್ರೀಯನ್ನುಸ್ನೇಹದಿಂದ ಸಂತೈಸಿ ಸಂಯೋಜಿತನಾಗಬೇಕು. ಪುತ್ರನನ್ನು ಪಡೆಯಬೇಕೆಂಬ ಇಚ್ಛೆಯುಳ್ಳವನು ಸ್ತ್ರೀಯು ಋತುಸ್ನಾನಾ ನಂತರ ನಾಲ್ಕನೇ ದಿನದಲ್ಲಿ ಸಂಯೋಗವನ್ನು ಮಾಡ ಬೇಕು. ಇದರಂತೆ ೬ನೇಯ ೮-೧೦-೧೨ ದಿನಗಳಲ್ಲಿ ಯುಕ್ತನಾಗಬೇಕು. ಸ್ತ್ರೀ ಸಂತತಿಯುನ್ನು ಇಚ್ಛಿಸುವವನು ೫-೭-೯-೧೧ ನೇಯ ದಿನಗಳಲ್ಲಿ ಸಂಯೋಗವನ್ನು ಹೊಂದಬೇಕು. ಋತುಸ್ನಾನಾ ನಂತರ ದ್ವಾದಶ ಶಾತ್ರಿ ಕಳೆದ ಮೇಲೆ ಸಂಭೋಗಿಸಬಾರದೆಂದು ನಿಯಮವಿರುತ್ತದೆ ನಂತರ ಮುಂದಿನ ಪುಷ್ಪ ದರ್ಶನಾ ನಂತರ ಸಂಯೋಗ ಮಾಡಬೇಕು. ಗರ್ಭ ಧರಿಸಿ ದರೆ ಸಂಭೋಗಿಸಬಾರದು.

> ಅತಃಪರಂ ಪಂಚಮ್ಯಾಂ ಸಪ್ತಮ್ಯಾಂ ನವಮ್ಯಾಮೇಕಾದಶ್ಯಾಂ
> ಚ ಸ್ತ್ರೀಕಾಮಃ; ತ್ರಯೋದಶೀಪ್ರಭೃತಯೋನಿಂದ್ಯಾಃ ||
> ( ಸುಶ್ರುತ || ಶಾರೀರ || ಅ. ೨ ಸೂ. ೩೦ )

ಸ್ತ್ರೀ ಸಂತತಿ ಇಚ್ಛೆಯುಳ್ಳವನು ಯಾವ ದಿವಸಗಳಲ್ಲಿ ಸಂಯೋಗ ಮಾಡಬೇಕೆನ್ನುವದನ್ನು ಹಿಂದೆ ವಿವರಿಸಿರುತ್ತದೆ. ಋತುಸ್ನಾನಾ ನಂತರ ಹದಿಮೂರನೇ ದಿನ ಮೊದಲುಗೊಂಡು ನಿಂದ್ಯವಾದ ದಿನಗಳು. ಆದ್ದರಿಂದ ನಿಂದ್ಯ ದಿನಗಳು ಸಂಭೋಗಕ್ಕೆ ಯೋಗ್ಯವಲ್ಲವೆಂದು ಹೇಳಿದ್ದಾರೆ

> ಏಷೂತ್ತರೋತ್ತರಂ ವಿದ್ಯಾದಾಯುರಾರೋಗ್ಯಮೇವಚ
> ಪ್ರಜಾಸೌಭಾಗ್ಯಮೈಶ್ವರ್ಯಂ ಬಲಂ ಚ ದಿವಸೇಷುವೈ ||
> ( ಸುಶ್ರುತ || ಶಾರೀರ || ಅ. ೨ ಶ್ಲೋ. ೨೯ )

ಪೂರ್ವೋಕ್ತವಾದ ದಿವಸ ನಿಯಮಗಳನ್ನು ಪಾಲಿಸುವದರಿಂದ ಉತ್ತ ರೋತ್ತರವಾಗಿ ಆಯುಷ್ಯ ಆರೋಗ್ಯಗಳ ಅಭಿವೃದ್ಧಿಯಾಗುತ್ತದೆ. ಸಂತತಿ ಸೌಭಾಗ್ಯ ಸಂಪತ್ತು ಬಲ ಮೊದಲಾದವುಗಳನ್ನು ಪಡೆಯಲು ಸಮರ್ಥರಾಗು ತ್ತಾರೆ. ಈ ನಿಯಮವನ್ನು ಅನುಸರಿಸುವದರಿಂದ ಆಯುರಾರೋಗ್ಯ ಬಲ ಯುಕ್ತರಾಗುತ್ತಾರೆಂಬ ಅಭಿಪ್ರಾಯವು.

**ಲಬ್ಧಗರ್ಭಾಯಾಶ್ಚೈತೇಷ್ವಹಃಸುಲಕ್ಷ್ಮಣಾ ವಟಶುಂಗ ಸಹ ದೇವಾ ವಿಶ್ವದೇವಾ ನಾಮನ್ಯತಮಾಂಕ್ಷೀರೇಣಾಭಿಷುತ್ಯತ್ರೀಂ ಶ್ಚತುರೋವಾಬಿಂದೂನ್‌ದದ್ಯಾದ್ದಕ್ಷಿಣೇ ನಾಸಾಪುಟೇ ಪುತ್ರ ಕಾಮಾಯೈನ ಚ ತಾನ್ನಿಷ್ಠೀವೇತ್** ॥

( ಸುಶ್ರುತ ॥ ಶಾರೀರ ॥ ಅ. ೨ ಸೂ. ೩೨ )

ಪೂರ್ವೋಕ್ತ ವಿಧಿಸಿದ ದಿನಗಳಲ್ಲಿ ಗರ್ಭವನ್ನು ಧರಿಸಿದ ಗರ್ಭಿಣಿಯು ಮೂಗಿನಲ್ಲಿ ಕೆಳಗೆ ಬರೆದ ಔಷಧ ರಸವನ್ನು ಹಾಕಬೇಕು. ಈ ಔಷಧ ಯೋಗದಿಂದ ಗಂಡು ಸಂತತಿ ಆಗುತ್ತದೆ.

"ಲಕ್ಷ್ಮಣಾ" ಬಿಳೀ ಹೂವಾಗುವ ಗುಳ್ಳದ ಗಿಡವು. "ವಟಶುಂಗ" ಆಲದ ಮುಗುಳು. "ಸಹದೇವಾ" ಹಳದೀ ಹೂವಾಗುವ ಬಲಾ ಎಂಬ ವನಸ್ಪತಿಯು. "ವಿಶ್ವದೇವಾ" ಬಿಳೀ ಹೂವಾಗುವ ಬಲಾ ಜಾತಿಯು ಇವುಗಳಲ್ಲಿ ಯಾವದಾದರೊಂದನ್ನು ಆಕಳ ಹಾಲಿನಲ್ಲಿ ತೆಯ್ದು (ಅಭಿಸುತ್ಯ) ಪುತ್ರ ಸಂತತಿಯನ್ನಪೇಕ್ಷಿಸುವ ಸ್ತ್ರೀಯಳ ಬಲಗಡೆಯ ಮೂಗಿನ ರಂಧ್ರದಲ್ಲಿ ಮೂರು ಅಥವಾ ನಾಲ್ಕು ಹನಿಗಳನ್ನು ಬಿಡಬೇಕು. ಮೂಗಿನಲ್ಲಿ ಹಾಕಿದ ಔಷಧವು ಬಾಯಿಯಲ್ಲಿ ಬಂದರೆ ಅದನ್ನು ಉಗುಳಬಾರದು. ನುಂಗಬೇಕೆಂದು ಶಾಸ್ತ್ರದಲ್ಲಿ ವಿಧಾನ ಮಾಡಿದ್ದಾರೆ.

**ಋತುಸ್ತು ದ್ವಾದಶರಾತ್ರಂ ಭವತಿ ದೃಷ್ಟಾರ್ತವಃ; ಅದೃಷ್ಟಾ ರ್ತವಾಪ್ಯಸ್ತೀತ್ಯೇಕೇಭಾಷಂತೆ** ॥

( ಸುಶ್ರುತ ॥ ಶಾರೀರ ॥ ಅ. ೩ ಸೂ. ೧೬ )

ಸ್ತ್ರೀ ಪುರುಷರಸಂಯೋಗದಿಂದ ಯಾವ ಕಾಲದಲ್ಲಿ ಗರ್ಭವು ಉತ್ಪನ್ನ ವಾಗುತ್ತದೆಯೋ, ಆಕಾಲಕ್ಕೆ "ಋತುಕಾಲ" ವೆಂದು ಹೇಳುತ್ತಾರೆ. ಯಾವ ಕಾಲದಲ್ಲಿ ಗರ್ಭಕಾರಕ ಆರ್ತವವು ಸ್ಫುಟವಿದ್ದು ಗರ್ಭವನ್ನುತ್ಪನ್ನ ಮಾಡುವ ಕಾಲವೋ ಅದಕ್ಕೆ "ದೃಷ್ಟಾರ್ತವ" ವೆಂಬ ಹೆಸರು. ಋತು ಸ್ನಾತಳಾದ ನಂತರ (೧೨) ರಾತ್ರಿಯ ಕಾಲಕ್ಕೆ "ಋತು ದೃಷ್ಟಾರ್ತವ"

ವೆಂದು ಹೇಳುತ್ತಾರೆ. ಆದ್ದರಿಂದ (೧೨) ದಿನಗಳ ನಂತರ ಗರ್ಭಗ್ರಹಣವಾಗುವದಿಲ್ಲವಾದ್ದರಿಂದ ಸಂಭೋಗಿಸಬಾರದೆಂದು ಹೇಳಿದ್ದಾರೆ. ಮತ್ತು ಒಂದು ವೇಳೆ ಪೂರ್ವದಲ್ಲಿ ಗರ್ಭಗ್ರಹಣವಾದದ್ದಿದ್ದರೆ, ಸಂಭೋಗ ಘರ್ಷಣದಿಂದ ಸದ್ಯೋಗೃಹಿತ ಗರ್ಭವು ಚ್ಯುತಿಯನ್ನು ಹೊಂದುತ್ತದೆ. ಆದ್ದರಿಂದ ದ್ವಾದಶ ರಾತ್ರಿಯ ನಂತರ ಪುನಃ ಋತುಸ್ನಾತಳಾಗುವ ವರೆಗೂ ಸಂಯೋಗಿಸಬಾರದೆಂದು ವಿಧಿಸಿದ್ದಾರೆ. ಗರ್ಭಧಾರಣೆಯಾಗಿದ್ದರಂತೂ ಸಂಭೋಗಿಸಲೇ ಕೂಡದೆಂದು ವಿಧಿಸಿದ್ದಾರೆ. ಆರ್ತವ ಸ್ರಾವಾದಿಗಳು (ಮಾಸಿಕ ರಜೋದರ್ಶನ) ಇಲ್ಲದಿರುವ "ಅದೃಷ್ಟಾರ್ತವಾ" ಸ್ತ್ರೀಯು ಸಹ ಇದ್ದಾಳೆಂದು ಕೆಲವರು ಹೇಳುತ್ತಾರೆ.

## ಅದೃಷ್ಟಾರ್ತವ ಸ್ತ್ರೀ ಲಕ್ಷಣ

ಪೀನಪ್ರಸನ್ನವದನಾಂ ಪ್ರಕ್ಲಿನ್ನಾತ್ಮಮುಖದ್ವಿಜಾಂ ||
ನರಕಾಮಾಂ ಪ್ರಿಯಕಥಾಂ ಸ್ರಸ್ತಕುಕ್ಷ್ಯಕ್ಷಿಮೂರ್ಧಜಾಂ||೭||
ಸ್ಫುರದ್ಭುಜಕುಚಶ್ರೋಣಿನಾಭ್ಯೂರುಜಘನಸ್ಫಿಚಾಂ|| ಹರ್ಷೌತ್ಸುಕ್ಯಪರಾಂಚಾಪಿವಿದ್ಯಾದೃತುಮತೀಂ ಸ್ತ್ರೀಯಂ ||
( ಸುಶ್ರುತ || ಶಾರೀರ || ಅ. ೩ ಶ್ಲೋ. ೮ )

ಗರ್ಭಧಾರಣೆಗೆ ಯೋಗ್ಯಳಾದ "ಅದಷ್ಟಾರ್ತವಾ"ಸ್ತ್ರೀಯ ಲಕ್ಷಣವು. ತುಂಬಿ ಬೆಳೆದ ಪ್ರಸನ್ನವಾದ ಮುಖವುಳ್ಳವಳೂ, ಸ್ನೇಹಭಾವದಿಂದ ಆರ್ದ್ರವಾಗುತ್ತಿರುವ, ಆತ್ಮಾ ಮುಖ ಹಲ್ಲುಗಳ ಆದಿ ಭಾಗಗಳು, ಸುಖಾದಿ ಭಾವ ಸ್ಮರಣೆಯಿಂದ ನೀರೊಡೆಯುವದರಿಂದ ಆದ್ರ್ರತೆವುಳ್ಳಂಥವಾಗುತ್ತವೆ ಪುರುಷರನ್ನು ಇಚ್ಛಿಸುವವಳೂ, ಪ್ರಣಯಜನಕ ಕಥೆಯನ್ನು ಕೇಳುವವಳೂ, ಹೊಟ್ಟೆಯು ಜೋಲುಬೀಳುತ್ತಿರುವದು, ಕಣ್ಣು ಚಂಚಲ ಅಥವಾ ವಿಶಾಲವಾಗೋಣ, ತಲೆ ಕೂದಲುಗಳು ವಿಶಾಲವಾಗುವಿಕೆ, ಕೂದಲ ಭಾಗದಿಂದ ತುರುಬು ಇಳಿಬಿದ್ದಿರೋಣ, ಭುಜಸ್ತನಕಟಿ ನಾಭಿ ತೊಡೆ ಟೊಂಕದ ಮುಂಭಾಗ (ಜಘನ) ಕಟಿಸ್ಥ ಮಾಂಸಪಿಂಡ (ಸ್ಫಿಚ) ಇವುಗಳಲ್ಲಿ ಸ್ಫುರಣೆಗಳುಂಟಾಗುತ್ತವೆ. ಆನಂದ ಲವಲವಿಕೆಯುಳ್ಳವಳು ಅಥವಾ ಪುರುಷ

ಸಂಸರ್ಗ ವಿಷಯದಲ್ಲಿ ಅತ್ಯಾತುರತೆಯುಳ್ಳವಳನ್ನು, ಋತುಮತಿಯಾಗಿರುವ ಳೆಂದು ತಿಳಿದುಕೊಳ್ಳಬೇಕು. ಪ್ರತ್ಯಕ್ಷವಾಗಿ ಮಾಸಿಕ ರಜಸ್ರಾವವಾಗದಿರುವಾಗ ಈ ಹಿಂದೆ ಹೇಳಿದ ಲಕ್ಷಣಗಳಿಂದ ಗರ್ಭಾಧಾನಕ್ಕೆ ಯೋಗ್ಯಳೆಂದು ತಿಳಿಯಬೇಕು.

## ಗರ್ಭಾಶಯ ಸಂಕೋಚವು

**ನಿಯತಂ ದಿವಸೇsತೀತೆ ಸಂಕುಚತ್ಯಂಬುಜಂ ಯಥಾ॥ ಋತೌ**
**ವ್ಯತೀತೇನಾರ್ಯಾಸ್ತು ಯೋನಿಃ ಸಂವ್ರಿಯತೆ ತಥಾ ॥**

( ಸುಶ್ರುತ ॥ ಶಾರೀರ ॥ ಅ ೩ ಶ್ಲೋ. ೯ )

ಹಗಲು ಕಳೆದ ನಂತರ ನಿಶ್ಚಯವಾಗಿಯೂ ಕಮಲವು ಹೇಗೆ ಮುದುಡಿಕೊಳ್ಳುತ್ತದೆಯೋ, ಅದರಂತೆ ಋತುಕಾಲವು (ಗರ್ಭಗ್ರಹಣದ ಅವಧಿಯು) ಕಳೆದ ಮೇಲೆ ಗರ್ಭಾಶಯವು ಸಂಕೋಚಹೊಂದುತ್ತದೆ. ಅರ್ಥಾತ್ ಗರ್ಭಾಶಯ ದ್ವಾರವು ಮುದುಡಿಕೊಳ್ಳುತ್ತದೆ ಆದ್ದರಿಂದ ಬೀಜಗ್ರಹಣವಾಗುವದಿಲ್ಲ. ಬೀಜ (ಶುಕ್ರ) ಪ್ರವೇಶವು ಗರ್ಭಾಶಯದಲ್ಲಿ ಆಗುವದಿಲ್ಲವೆಂದರ್ಥ

## ಸ್ತ್ರೀಪುಂನಪುಸಂಕಗರ್ಭೋತ್ಪತ್ತಿ

**ತತ್ರಶುಕ್ರ ಬಾಹುಲ್ಯಾತ್ ಪುಮಾನ್, ಆರ್ತವ ಬಾಹುಲ್ಯಾತ್**
**ಸ್ತ್ರೀ, ಸಾಮ್ಯಾತ್ ಉಭಯೋರ್ನಪುಸಂಕಮಿತಿ ॥**

( ಸುಶ್ರುತ ॥ ಶಾರೀರ ॥ ಅ ೩. ಶ್ಲೋ. ೫ )

ಗರ್ಭದ ಉತ್ಪತ್ತಿಯಲ್ಲಿ ಶುಕ್ರಾಧಿಕ್ಯವಾದರೆ ಗಂಡು, ಆರ್ತವಾಧಿಕ್ಯದಿಂದ ಸ್ತ್ರೀಯು, ಶುಕ್ರಾರ್ತವಗಳು ಸಮ ಪ್ರಮಾಣದಿಂದ ಯುಕ್ತವಾದರೆ ನಪುಸಂಕ ಸಂತತಿಯು ಉತ್ಪನ್ನವಾಗುತ್ತದೆ.

## ಸ್ತ್ರೀಯ ರಜೋಧಿಕ್ಯ ನ್ಯೂನತೆಯ ದಿನಗಳು

**ಯುಗ್ಮೇಷುತು ದಿನೇಷ್ವಾಸಾಂ ಭವತ್ಯಲ್ಪತರಂರಜಃ ॥**

**ಸಂಯೋಗಂ ತತ್ರಯಾಗಚ್ಛೇತ್ ಸಾಪುಮಾಂಸಂಪ್ರಸೂಯತೆ॥**
**ಅಯುಗ್ಮೇಷುದಿನೇಷ್ವಾಸಾಂಭವೇದ್ಬಹುತರಂ ರಜಃ ॥**
**ಸಂಯೋಗಂ ತತ್ರಯಾಗಚ್ಛೇತ್ ಸಾತುಕನ್ಯಾಂ ಪ್ರಸೂಯತೆ॥**
**(ವಿದೇಹೆ)**

ಸಮ ದಿನಗಳಲ್ಲಿ ಸ್ತ್ರೀಯರ ರಜಸ್ಸು ಕಡಿಮೆಯಾಗುತ್ತದೆ. ಆಗ ಸ್ತ್ರೀಯು ಸಂಯೋಗ ಹೊಂದಿದರೆ ಪುರುಷನ ಶುಕ್ರಾಧಿಕ್ಯವಾಗುವದರಿಂದ ಗಂಡು ಸಂತತಿಯನ್ನು ಪಡೆಯುತ್ತಾಳೆ. ವಿಷಮ ದಿನಗಳಲ್ಲಿ ಅಂದರೆ ೫-೭ ಇತ್ಯಾದಿ ದಿನಗಳಲ್ಲಿ ಸ್ತ್ರೀಯರಿಗೆ ಆರ್ತವವು ಹೆಚ್ಚಾಗುತ್ತದೆ. ಆದ್ದರಿಂದ ವಿಷಮ ದಿನಗಳಲ್ಲಿ ಸ್ತ್ರೀಯು ಸಂಯೋಗ ಹೊಂದಿದರೆ ಪುರಷರ ಶುಕ್ರವು ಕಡೆಮೆಯಾಗುವದರಿಂದ ಸ್ತ್ರೀ ಸಂತತಿಯಾಗುತ್ತದೆ. ಸಮ ವಿಷಮ ದಿನ ಗಳಲ್ಲಿಯ ಪುರುಷ ಸ್ತ್ರೀ ಗರ್ಭಗಳಿಗೆ ಆರ್ತವದ ಕಡಿಮೆ ಹೆಚ್ಚುವಿಕೆಯೇ ಕಾರಣವಾಗಿರುವದೆಂದು ದರ್ಶಿಸಿದ್ದಾರೆ.

**ಅಯುಗ್ಮೇಸ್ತ್ರೀಪುಮಾನ್ ಯುಗ್ಮೇಸಂ ಧ್ಯಯೋಸ್ತುನಪುಂಸ**
**ಕಂ॥ಶುಕ್ರಾಧಿಕತ್ವಾತ್ ಪುರುಷಃಪ್ರಮದಾರಜಸೋಽಧಿಕಾತ್॥**
**ಶುಕ್ರಶೋಣಿತಯೋಃ ಸಾಮ್ಯಾತ್ತೃತೀಯಾಪ್ರಕೃತಿರ್ಭವೇತ್॥**
**(ಭೋಜಸಂಹಿತಾಯಾಂ)**

ಸ್ತ್ರೀಯು ರಜಃ ಸ್ನಾತಳಾದ ನಂತರ ವಿಷಮ ದಿನ ಸಂಯೋಗದಿಂದ ಹೆಣ್ಣು ಸಂತತಿಯನ್ನೂ, ಸಮದಿನಗಳಲ್ಲಿ ಗಂಡು ಸಂತತಿಯನ್ನೂ, ವಿಷಮ ಸಮದಿನಗಳ ಸಂಧಿಗಳಲ್ಲಿ ನಪುಂಸಕ ಸಂತತಿಯನ್ನು ಪಡೆಯುತ್ತಾಳೆ. ಶುಕ್ರಾಧಿಕವಾಗುವದರಿಂದ ಗಂಡು, ರಜೋಽಧಿಕ್ಯದಿಂದ ಸ್ತ್ರೀಯು, ಶುಕ್ರ ಶೋಣಿತ ಗಳು ಸಮವಾಗಿರುವದರಿಂದ ನಪುಂಸಕನೂ, ಉತ್ಪನ್ನವಾಗುತ್ತಾರೆ.

## ಪುರುಷ ಸ್ತ್ರೀ ನಪುಂಸಕ ಗರ್ಭ ಲಕ್ಷಣ

**ತತ್ರಯಸ್ಯಾದಕ್ಷಿಣೆಸ್ತನೇಪ್ರಾಕ್ ಪಯೋದರ್ಶನಂ ಭವತಿ ದಕ್ಷಿ**
**ಣಕುಕ್ಷಿಮಹತ್ವಂಚಪೂರ್ವಂಚ ದಕ್ಷಿಣಂ ಸಕ್ಥ್ಯುತ್ಕರ್ಷತಿಬಾ**

**ಹುಲ್ಯಾಚ್ಚ ಪುಂನಾಮಧೇಯೇಷು ದ್ರವ್ಯೇಷು ದೌಹೃದಯಮ ಭಿಧ್ಯಾಯತಿ ಸ್ವಪ್ನೇಷು ಚೋಪಲಭತೇ ಪದ್ಮೋತ್ಪಲಕುಮು ದಾವಮ್ರಾತಕಾದೀನಿ ಪುನ್ನಾಮಾನ್ಯೇವ ಪ್ರಸನ್ನ ಮುಖವರ್ಣಾಚ ಭವತಿ ತಾಂ ಬ್ರೂಯಾತ್ ಪುತ್ರಮಿಯಂ ಜನಯಿಷ್ಯತೀತಿ, ತದ್ವಿ ಪರ್ಯಯೇ ಕನ್ಯಾಂ, ಯಸ್ಯಾಃ ಪಾರ್ಶ್ವದ್ವಯಮವನತಂ ಪು ರಸ್ತಾನ್ನಿರ್ಗತಮುದರಂ ಪ್ರಾಗಭಿಹಿತಂಚ ಲಕ್ಷಣಂಚ ತಸ್ಯಾ ನಪುಂಸಕಮಿತಿ ವಿದ್ಯಾತ್, ಯಸ್ಯಾ ಮಧ್ಯೇ ನಿಮ್ನಂ ದ್ರೋಣೀ ಭೂತಮುದರಂ ಸಾಯುಗ್ಮಂ ಪ್ರಸೂಯತೆ ಇತಿ ॥**

(ಸುಶ್ರುತ॥ ಶಾರೀರ॥ ಅ ೩ ಸೂ ೩೪)

ಗರ್ಭವು ಅಪ್ರತ್ಯಕ್ಷವಾದರೂ ಹಾಲು ಉತ್ಪನ್ನವಾಗುವ ಲಕ್ಷಣಾದಿಗ ಳಿಂದ ಸ್ತ್ರೀ ಪುಂ ನಪುಂಸಕ ಭೇದವನ್ನು ತಿಳಕೊಳ್ಳುವ ಕ್ರಮವನ್ನು ಹೇಳು ತ್ತಾರೆ. ಗರ್ಭಿಣಿಯ ಬಲಗಡೆಯ ಸ್ತನದಲ್ಲಿ ಮೊದಲು ಹಾಲು ತೋರಿದರೆ, ಬಲಗಡೆ ಹೊಟ್ಟೆಯು ಹೆಚ್ಚು ದೊಡ್ಡದಾದರೆ, ಮೊದಲು ಬಲಗಡೆಯ ತೊಡೆಯು ದೊಡ್ಡದಾದರೆ, ಹೆಚ್ಚಾಗಿ ಪುರುಷ ಹೆಸರುಳ್ಳ ದ್ರವ್ಯಗಳಲ್ಲಿ ಬಯ ಕೆಯಾಗುತ್ತದೆಯೋ, ಮತ್ತು ಸ್ವಪ್ನದಲ್ಲಿ ಇವುಗಳ ದರ್ಶನವಾದರೆ, ಗಂಡು ಗರ್ಭವೆಂದು ತಿಳಿಯಬೇಕು. ಇಲ್ಲಿ ಪದ್ಮಾದಿಗಳು ಪುರುಷ ಹೆಸರುಗಳನ್ನು ಹೊಂದಿರುವದರಿಂದ "**ಪುನ್ನಾಮಧೇಯ**" ವೆಂದು ಹೇಳುತ್ತಾರೆ. ಸ್ತ್ರೀ ನಾಮಧೇಯ ಹೊಂದಿದಲ್ಲಿ ಪದ್ಮಿನೀ ಮುಂತಾದ ರೂಪಗಳಾಗುತ್ತವೆ. "**ಪದ್ಮ**" ಕೆಂಪು ವರ್ಣವುಳ್ಳ ಸೂರ್ಯ ವಿಕಾಸೀ ಕಮಲವು. "**ಉತ್ಪಲ**" ನೀಲ ವರ್ಣವುಳ್ಳ ಕಮಲವು. "**ಕುಮುದ**" ಬಿಳೀ ವರ್ಣವುಳ್ಳ ಕಮಲವು. "**ಆಮ್ರಾತಕ**" ಪುಂಡಿಯ ಗಿಡದ ಹೂವು. ಅಥವಾ ಅಮಟೀ ಹೂವು. ಇವು ಗಳು ಪುರುಷ ಹೆಸರುಳ್ಳವುಗಳೆಂದು ಶಾಸ್ತ್ರಕಾರರು ಗ್ರಹೀತ ಮಾಡಿದ್ದಾರೆ. ಸ್ವಪ್ನದಲ್ಲಿ ಇವುಗಳ ದರ್ಶನವಾಗುವದು. ಅಥವಾ ಇವುಗಳಲ್ಲಿ ಬಯಕೆಯಾಗು ತ್ತದೆ. ಮುಖದಲ್ಲಿ ಸಂತೋಷದ ಕಳೆ ಬರುತ್ತದೆ. ಇಂಥ ಲಕ್ಷಣಯುಕ್ತ ಗರ್ಭಿ ಣಿಯು ಪುತ್ರ ಸಂತತಿಯನ್ನು ಪಡೆಯುತ್ತಾಳೆಂದು ಹೇಳಬೇಕು. ಪೂರ್ವೋಕ್ತ ಲಕ್ಷಣ ವಿರುದ್ಧವಿದ್ದಲ್ಲಿ ಕನ್ಯಾಗರ್ಭವೆಂದು ತಿಳಿಯಬೇಕು. ಗರ್ಭಿಣೀ

ಸ್ತ್ರೀಯಳ ಹೊಟ್ಟೆಯ ಎರಡೂ ಪಾರ್ಶ್ವಗಳು ಜೋತುಬಿದ್ದರೆ, ಮತ್ತು ಹೊಟ್ಟೆಯ ಮುಂಭಾಗವು ಪುಷ್ಟವಾಗಿ ಉಬ್ಬಿ ತುಂಬಿಕೊಂಡಿರದಿದ್ದರೆ, ಬಯಕೆ ಸ್ವಪ್ನ ಲಕ್ಷಣಗಳು ಸ್ತ್ರೀ ಪುರುಷರ ಲಕ್ಷಣಗಳೆರಡರಿಂದ ಯುಕ್ತವಾ ದರೆ, ನಪುಸಂಕ ಗರ್ಭವೆಂದು ತಿಳಿಯಬೇಕು. ಗರ್ಭಿಣಿಯ ಹೊಟ್ಟೆಯು ಚನ್ನಾಗಿ ತುಂಬಿ ಬೆಳೆದಿನ್ದು ಮಧ್ಯ ಭಾಗದಲ್ಲಿ ಕಾಲುವೆ ಅಥವಾ ದೋಣಿ ಯಂತೆ ತಗ್ಗಾಗಿದ್ದರೆ ಯುಗ್ಮ ( ಅವಳಿ ಮಕ್ಕಳು ) ಸಂತತಿಯಾಗುತ್ತದೆಂದು ತಿಳಿಯಬೇಕು.

## ಗರ್ಭದಲ್ಲಿ ವರ್ಣ ಸಂಭವವು

ತತ್ರತೇಜೋಧಾತುಃವರ್ಣಾನಾಂಪ್ರಭವಃ, ಸಯದಾಗರ್ಭೋ ತ್ಪತ್ತೌಅಬ್ಧಾತುಪ್ರಾಯೋಭವತಿತದಾಗರ್ಭಂಗೌರಂಕರೋತಿ, ಪೃಥಿವೀಧಾತುಪ್ರಾಯಃಕೃಷ್ಣಂ;ಪೃಥಿವ್ಯಾಕಾಶಧಾತುಪ್ರಾಯಃ ಕೃಷ್ಣಶ್ಯಾಮಂ, ತೋಯಾಕಾಶಧಾತು ಪ್ರಾಯೋಗೌರಶ್ಯಾ ಮಂ॥ 'ಯಾದೃಗ್ವರ್ಣಮಾಹಾರಮುಪಸೇವತೇಗರ್ಭಿಣೀತಾ ದೃಗ್ವರ್ಣಪ್ರಸವಾಭವತಿ, ಇತ್ಯೇಕೇಭಾಷಂತೇ॥ ತತ್ರದೃಷ್ಟಿಭಾ ಗಮಪ್ರತಿಪನ್ನಂತೇಜೋಜಾತ್ಯಂಧಂಕರೋತಿ, ತದೇವರಕ್ತಾ ನುಗತಂರಕ್ತಾಕ್ಷಂ, ಪಿತ್ತಾನುಗತಂ ಪಿಂಗಾಕ್ಷಂ, ಶ್ಲೇಷ್ಮಾನುಗ ತಂಶುಕ್ಲಾಕ್ಷಂ, ವಾತಾನುಗತಂ ವಿಕೃತಾಕ್ಷಮಿತಿ ॥
(ಸುಶ್ರುತ॥ ಶಾರೀರ॥ ಅ ೨ ಶ್ಲೋ ೩೫)

ಗರ್ಭಕ್ಕೆ ಬಣ್ಣವನ್ನುಂಟು ಮಾಡುವಂಥಾದ್ದು ತೇಜೋ ಧಾತುವಾಗಿ ರುತ್ತದೆ. ಗರ್ಭೋತ್ಪತ್ತಿಯಲ್ಲಿ ತೇಜೋ ಧಾತುವು, ಜಲ ಧಾತು ಅಧಿಕವುಳ್ಳ ದ್ದಾದರೆ ಗರ್ಭವನ್ನು ಬಿಳೀ ವರ್ಣವುಳ್ಳದ್ದನ್ನಾಗಿ ಮಾಡುತ್ತದೆ. ಪೃಥಿವೀ ಧಾತುವು ಅಧಿಕವಿದ್ದರೆ ಕಪ್ಪು ವರ್ಣವುಳ್ಳ, ಪೃಥಿವಿ ಆಕಾಶ ಧಾತು ಅಧಿಕ ವಾದರೆ ಕಪ್ಪು ನೀಲ ಮಿಶ್ರಿತ ವರ್ಣಯುಕ್ತವಾದ, ಜಲಧಾತು ಆಕಾಶ ಧಾತುತ್ವಾಧಿಕ್ಯವಿದ್ದರೆ ; ಶ್ವೇತ ನೀಲ ವರ್ಣವುಳ್ಳ ಗರ್ಭವನ್ನುತ್ಪನ್ನ ಮಾಡು ತ್ತದೆ. ಗರ್ಭಿಣಿಯು ಯಾವ ವರ್ಣವುಳ್ಳ ಆಹಾರವನ್ನು ಸೇವಿಸುತ್ತಾಳೋ,

ಆ ವರ್ಣವುಳ್ಳ ಗರ್ಭವು ಉತ್ಪನ್ನವಾಗುತ್ತದೆಂದು ಕೆಲವರು ಹೇಳುತ್ತಾರೆ ಗರ್ಭದ ದೃಷ್ಟಿ ಭಾಗದಲ್ಲಿ ತೇಜೋ ಧಾತುವು ಇರದಿದ್ದರೆ ಕುರುಡ ಗರ್ಭವನ್ನುಂಟು ಮಾಡುತ್ತದೆ. ಅದೇ ತೇಜೋ ಧಾತುವು ರಕ್ತಧಾತುಯುಕ್ತವಾದರೆ ಕೆಂಪು ಕಣ್ಣುಳ್ಳ ಗರ್ಭವನ್ನೂ, ಪಿತ್ತ ಸಹಿತವಾದರೆ ಪಿಂಗಾಕ್ಷವುಳ್ಳ, ಶ್ಲೇಷ್ಮ ಯುಕ್ತವಾದರೆ ಶುಕ್ಲಾಕ್ಷವುಳ್ಳ, ವಾತಯುಕ್ತವಾದರೆ ವಿಕೃತವಾದ ಕಣ್ಣುಳ್ಳ ಗರ್ಭವನ್ನೂ ಉತ್ಪನ್ನ ಮಾಡುತ್ತದೆ

**ಘೃತಪಿಂಡೋಯಥೈವಾಗ್ನಿಮಾಶ್ರಿತಃ ಪ್ರವಿಲೀಯತೆ॥ ವಿಸರ್ಪ ತ್ಯಾರ್ತವಂ ನಾರ್ಯಾಸ್ತಥಾಪುಂಸಾಂ ಸಮಾಗಮೇ ॥**
( ಸುಶ್ರುತ ॥ ಶಾರೀರ ॥ ಅ. ೨ ಶ್ಲೋ. ೩ )

ಘಟ್ಟಿಯಾದ ತುಪ್ಪವು ಅಗ್ನಿಯ ಸಂಯೋಗದಿಂದ ಕರಗಿ ದ್ರವವಾಗುವಂತೆ, ಪುರುಷರ ಸಮಾಗಮವಾಗುತ್ತಿರಲು ಸ್ತ್ರೀಯ ಆರ್ತವವು ದ್ರವಿಸುತ್ತದೆ

**ಯೋಷಿತೋಽಪಿಸ್ರವಂತ್ಯೇವಶುಕ್ರಂ ಪುಂಸಾಂ ಸಮಾಗಮೇ॥ ತನ್ನ ಗರ್ಭಸ್ಯ ಕಿಂಚಿತ್ತು ಕರೋತೀತಿನಚಿಂತ್ಯತೆ ॥**
( ವೃದ್ಧ ವಾಗ್ಭಟ ॥ ಅ. ಸಂ. ಶಾ. ಅ ೧ )

ಪುರುಷರ ಸಮಾಗಮದಿಂದ ಸ್ತ್ರೀಯ ಶುಕ್ರವು ಕೂಡಾ ಸ್ರವಿಸುತ್ತದೆ ಅದು ಗರ್ಭಕ್ಕೆ ಕಾರಣವಾಗುವದಿಲ್ಲವೋ ಅಥವಾ ಆಗುತ್ತದೆಯೋ ಎನ್ನುವದು ವಿಚಾರ ಮಾಡಲ್ಪಡುವದಿಲ್ಲ.

**ಬೀಜೇಽಂತರ್ವಾಯುನಾಭಿನ್ನೇ ದ್ವೌಬೀಜೌಕುಕ್ಷಿಮಾಗತೌ ॥ ಯಮಾವಿತ್ಯಭಿಧೀಯೇತೇ ಧರ್ಮೇತರಪುರಸ್ಸರೌ ॥**
( ಸುಶ್ರುತ॥ ಶಾರೀರ॥ ಅ ೨ ಶ್ಲೋ ೩೭)

ಬೀಜ ಶುಕ್ರವು ಅಂತರ್ವಾಯುವಿನಿಂದ ವಿಬಾಗ ಹೊಂದಿ ಎರಡಾಗಿ, ಗರ್ಭಾಶಯದಲ್ಲಿ ಬಂದು ಬೆಳೆಯುತ್ತವೆ. ಈ ಎರಡು ಗರ್ಭಕ್ಕೆ "**ಯಮೌ**" "**ಯಮಲ**." ಎಂದು ಅನ್ನುತ್ತಾರೆ. ಕನ್ನಡದಲ್ಲಿ "**ಅವಳಿ ಜವಳಿ**" ಯೆಂದು

ಹೇಳುವ ವಾಡಿಕೆ ಇರುತ್ತದೆ. ಇಂಥ ಗರ್ಭವು ಅಧರ್ಮದಿಂದ ಹುಟ್ಟಿರುತ್ತ ದೆಂದು ಶೃತಿ ಸ್ಮೃತಿಗಳ ಮತವು. ಆಯುರ್ವೇದ ಮತದಂತೆ ಗರ್ಭಗ್ರಹಣ ಕಾಲದಲ್ಲಿಯ ವಿಕೃತಿ ಇಲ್ಲವೇ ವೈದ್ಯಕದಲ್ಲಿ ಹೇಳಿದ ಸಂಭೋಗಕ್ಕೆ ವಿರುದ್ಧ ವಾದ ನಡತೆ ಅಥವಾ ಅತಿ ಸಂಭೋಗ ಮೊದಲಾದವುಗಳಿಗೆ ಅಧರ್ಮವೆಂದು ಹೇಳುತ್ತಾರೆ. ಇದರಿಂದ ಸಂಭವಿಸುವದರಿಂದ ಅಧರ್ಮ ಗರ್ಭವೆಂದು ಹೇಳಬಹುದು

**ಮಿಶ್ರೀಭಾವೇಯದಾಪುಂಸಾಂ ರೇತಸ್ತು ಬಹುನಿರ್ಮಲಂ**
**ತದಾಪ್ರಸೂಯತೇ ನಾರೀ ಗರ್ಭಿಣೀದಾರಕ ದ್ವಯಂ ॥**
**ಮಿಶ್ರೀಭಾವೇ ಸ್ತ್ರೀಯೋಶ್ಚೈವ ಬಹುಶುಕ್ರಂ ಯದಾಭವೇತ್ ॥**
**ಕನ್ಯಾದ್ವಯಂ ತದಾನಾರೀಸೂಯತೇನಾತ್ರ ಸಂಶಯಃ ॥**

(ಸುಶ್ರುತೇಽಧಿಕಃ ಪಾಠಃ)

ಸಂಯೋಗದಲ್ಲಿ ಪುರುಷವರೇತಸ್ಸು ಬಹಳವಾಗಿದ್ದರೆ, ಅಂಥ ಸಮಯ ದಲ್ಲಿ ಗರ್ಭಿಣಿಯಾದವಳು ಎರಡು ಗಂಡು ಶಿಶುಗಳನ್ನು ಹಡೆಯುತ್ತಾಳೆ. ಅದೇ ಸಂಯೋಗಕಾಲದಲ್ಲಿ ಸ್ತ್ರೀಶುಕ್ರವು ಬಹಳವಾದದ್ದಾರೆ ಅದರಿಂದ ಗರ್ಭ ವಾದಾಗ, ಎರಡು ಹೆಣ್ಣುಶಿಶುಗಳನ್ನು ನಿಶ್ಚಯವಾಗಿಯೂ ಹಡೆಯುತ್ತಾಳೆ.

**ಸ್ತ್ರೀಯರಿಬ್ಬರ ಸಂಯೋಗದಿಂದ ಗರ್ಭೋತ್ಪತ್ತಿಯು**
**ಯದಾನಾರ್ಯಾವುಪೇಯಾತಾಂ ವೃಷಸ್ಯಂತ್ಯೌಕಥಂಚನ ॥**
**ಮುಂಚತಃ ಶುಕ್ರಮನ್ಯೋಽನ್ಯಮನಸ್ಥಿಸ್ತತ್ರಜಾಯತೇ ॥**

(ಸುಶ್ರುತ॥ ಶಾರೀರ॥ ಅ ೨ ಶ್ಲೋ ೪೭)

ಯಾವಾಗ ಇಬ್ಬರು ಸ್ತ್ರೀಯರು ಸಂಯೋಗವನ್ನು ಮಾಡುತ್ತಾರೋ, ಆಗ ಪರಸ್ಪರವಾಗಿ ಶುಕ್ರವನ್ನು ಬಿಡುತ್ತಾರೆ. ಒಂದು ವೇಳೆಇದರಿಂದ ಗರ್ಭ ಸಂಭವಿಸಿದರೆ ಮೃದ್ವಸ್ಥಿಯುಳ್ಳ ಅಥವಾ ಅಸ್ಥಿರವಾದ ಮಾಂಸ ಪಿಂಡದಂತಿ ರುವ ಗರ್ಭವುಂಟಾಗುತ್ತದೆ.

**ಋತುಸ್ನಾತಾತುಯಾನಾರೀ ಸ್ವಪ್ನೇ ಮೈಥುನಮಾಹವೇತ್॥
ಆರ್ತವಂವಾಯುರಾದಾಯ ಕುಕ್ಷೌಗರ್ಭಂಕರೋತಿಹಿ॥೪೮॥**

ಋತುಸ್ನಾನ ಮಾಡಿದ ಸ್ತ್ರೀಯು ಸ್ವಪ್ನದಲ್ಲಿ ಮೈಥುನ ಮಾಡಿದಂತೆ ಅನಿಸಿ ಆರ್ತವವು ದ್ರವಿಸುತ್ತದೆ. ದ್ರವಿಸಿದ ಆರ್ತವವನ್ನು ವಾಯುವು ಗರ್ಭಾಶಯಕ್ಕೆ ಒಯ್ದು ಗರ್ಭವನ್ನುಂಟು ಮಾಡುತ್ತದೆ.

**ಮಾಸಿಮಾಸಿವಿವರ್ಧೇತಗರ್ಭಿಣ್ಯಾಗರ್ಭಲಕ್ಷಣಂ॥
ಕಲಲಂಜಾಯತೆ ತಸ್ಯಾವರ್ಜಿತಂ ಪೈತೃಕೈರ್ಗುಣೈಃ ॥೪೯॥**

ಸ್ವಪ್ನ ಮೈಥುನದಿಂದುತ್ಪನ್ನವಾದ ಗರ್ಭವುಪ್ರತಿತಿಂಗಳಲ್ಲಿಯೂ ಗರ್ಭಿಣಿಯ ಗರ್ಭ ಲಕ್ಷಣವನ್ನುಹೆಚ್ಚಿಸುತ್ತದೆ. ಗರ್ಭವು ಮಾತ್ರ ಪಿತೃಗುಣ ರಹಿತವಾಗಿ "ಕಲಲ" ದಂತೇ ಇರುತ್ತದೆ. ಕಲಲವೆಂದರೆ ಮೊಸರಿನಂತೆ ಇರುವ ಪದಾರ್ಥವು. ಸುಂಬಳದಂತೇ ಇರುತ್ತದೆಂದು ಟೀಕಾಕಾರರು ಹೇಳಿದ್ದಾರೆ

## ಸರ್ಪ ಮೊದಲಾದ ವಿಕೃತ ಗರ್ಭಗಳು.

**ಸರ್ಪವೃಶ್ಚಿಕಕೂಷ್ಮಾಂಡವಿಕೃತಾಕೃತಯಶ್ಚಯೇ॥
ಗರ್ಭಾಸ್ತ್ವೇತೇಸ್ತ್ರೀಯಾಶ್ಚೈವಜ್ಞೇಯೋಃಪಾಪಕೃತೋಭೃಶಂ॥**

(ಸುಶ್ರುತ ಶಾರೀರ॥ ಅ ೨ ಶ್ಲೋ ೫೦)

ಅತ್ಯಂತ ತೀವ್ರ ಪಾಪ ಮಾಡಿದ ಸ್ತ್ರೀಗೆ ಸರ್ಪ, ಚೇಳು, ಕುಂಬಳಕಾಯಂತಿರುವ ಗರ್ಭ, ವಿಕೃತಾಕೃತಿಯುಳ್ಳ, ರಾಕ್ಷಸ ಮೊದಲಾದ ಗರ್ಭಗಳು ಉತ್ಪನ್ನವಾಗುತ್ತವೆ. "ಸ್ತ್ರಿಯಾಶ್ಚ" ಎಂದು ಹೇಳಿದ್ದರಿಂದ "ಚ" ಸಮುದಾಯವಾಚಕವೆಂದು ಗ್ರಹಿಸಿ, ಪುರುಷನ ಅತ್ಯಂತ ತೀವ್ರ ಪಾಪದಿಂದಲೂ ಸರ್ಪಾದಿ ಗರ್ಭವುಂಟಾಗುತ್ತವೆಂದು ಹೇಳುತ್ತಾರೆ. ಮನುಷ್ಯರಲ್ಲಿ ಅನ್ಯ ಯೋನಿ ಗರ್ಭ ಸಂಭವ ಹೇಗಾಗುತ್ತದೆಂಬ ಆಕ್ಷೇಪ ಬರುತ್ತದೆ. ಪಾಪಕರ್ಮದ ವೈಚಿತ್ರ್ಯದಿಂದಲೇ ಹೀಗಾಗುತ್ತದೆಂದು ಆಚಾರ್ಯರು ಹೇಳುತ್ತಾರೆ.

**ಮಾತಾಪಿತ್ರೋಃಸ್ತು ನಾಸ್ತಿಕ್ಯಾದಶುಭೈಶ್ಚ ಪುರಾಕೃತೈಃ|| ವಾತಾದೀನಾಂ ಪ್ರಕೋಪೇಣ ಗರ್ಭೋಃವೈಕೃತಮಾಪ್ನುಯಾತ್ ||**

( ಸುಶ್ರುತ|| ಶಾರೀರ|| ಅ ೨ ಶ್ಲೋ೹ ೫೨ )

ತಾಯಿ ತಂದೆಗಳ ನಾಸ್ತಿಕತೆಯಿಂದಲೂ, ಗರ್ಭದಲ್ಲಿಯ ಜೀವದ ಜನ್ಮಾಂತರ ಪಾಪ ಕರ್ಮದಿಂದಲೂ, ಅಥವಾ ಈಗಿನ ಜನ್ಮದಲ್ಲಿಯ ಪಾಪ ಗಳಿಂದಲೂ, ಗರ್ಭವು ವಿಕೃತಿಯನ್ನು ಹೊಂದುತ್ತದೆ. ಮತ್ತು ತ್ರೀವ್ರವಾದ ವಾತಾದಿ ದೋಷ ಪ್ರಕೋಪಗಳಿಂದಲೂ ಗರ್ಭವಿಕೃತಿಯುಂಟಾಗುತ್ತದೆ.

# ಶರೀರ ಪರಮಾಣುಗಳು

**ಗರ್ಭೋತ್ಪತ್ತಿ ಕ್ರಮ ವಿಚಾರಣಾವಿಷಯೇ, ಪಂಚಭೂತಾತ್ಮಕ ದೇಹಾಣೂನಾಂ ಕರ್ಮಚ ||**

ಪಂಚಭೂತಾತ್ಮಕಗಳಲ್ಲಿ ಪೃಥಿವ್ಯಾದಿ (ಆಕಾಶವನ್ನು ಬಿಟ್ಟು) ಗಳನ್ನು ಅಣುಗಳ ಕಾರ್ಯ ರೂಪವೆಂದು ಹೇಳಿದ್ದಾರೆ. ಪಂಚಭೂತ ವಿಕಾರ (ರೂಪಾಂತರ ಹೊಂದಿದ ಪಂಚಭೂತಗಳ ಸ್ವರೂಪ) ವಾದ ದೇಹದಲ್ಲಿಯ ಅಣುಗಳನ್ನು ಹೇಳುತ್ತಾರೆ. **ಪೃಥಿವಿ, ಜಲ, ತೇಜಸ್ಸು ವಾಯು, ಆಕಾಶಗಳು** ದೇಹದಲ್ಲಿ ಯಾವಯಾವ ವಿಭಾಗ ಸ್ಥಿತಿ ಹೊಂದಿದವುಗಳೆನ್ನು ವದನ್ನು ಹಿಂದೆ ವಿವರಿಸಿರುತ್ತದೆ. ದೇಹದಲ್ಲಿ ಪಂಚಭೂತಗಳೆಂದರೆ ಮಣ್ಣು ಮೊದಲಾದವುಗಳಲ್ಲ. ಪೃಥಿವ್ಯಾದಿಗಳ ಗುಣವುಳ್ಳ ರೂಪಾಂತರ ಹೊಂದಿದ ಸ್ಥಿತಿಯುಳ್ಳವುಗಳು. ಪೃಥಿವ್ಯಾದಿಗಳ ಕಾರ್ಯ ರೂಪಕ್ಕೆ(ಸ್ಥೂಲಕ್ಕೆ) ಅಣುಗಳು ಹೀಗೆ ಕಾರಣವಾಗಿರುತ್ತವೆಯೋ, ಅದರಂತೆ ಕಾರ್ಯರೂಪವಾದ ದೇಹಕ್ಕೂ ಸಹ ಅಣುಗಳೇ ಕಾರಣವಾಗುತ್ತವೆ. ಶರೀರ ಶಾಸ್ತ್ರವಾದ್ದರಿಂದ "**ದೇಹ ದಲ್ಲಿಯ ಅಣು ಸ್ವರೂಪಗಳನ್ನು**" ಅಲ್ಲಲ್ಲಿ ಹೇಳಿದ್ದಾರೆ. ಅವುಗಳನ್ನು ಹಿಂದೆ (೪೨-೪೩ ನೇ ಪುಟದಲ್ಲಿ) ವಿವರಿಸಿ ಹೇಳಿರುವದರಿಂದ ಈಗ ನಿದರ್ಶನಕ್ಕಾಗಿ ಅವುಗಳ ಸಂಗ್ರಹವನ್ನು ಮಾತ್ರ ಸೂಚಿಸುತ್ತೇನೆ.

**"ಸಶಬ್ಧಾರ್ಚಿರ್ಜಲಸಂತಾನವದಣುನಾವಿಶೇಷೇಣ"**
(॥ಶಾ. ವಿಜ್ಞಾನ॥ ಪು. ೬೩)

**"ಭೂತಾನಾಂ ಸಾನ್ನಿಧ್ಯಂ ಅಸ್ತ್ಯಣುನಾವಿಶೇಷೇಣ"**
(ಶಾ. ವಿ. ೯೭)

ಆಯುರ್ವೇದ ಶಾಸ್ತ್ರದಲ್ಲಿ ದೇಹದಲ್ಲಿಯ ಪಂಚಭೂತಾತ್ಮಕ ಅಣು ಸ್ವರೂಪವನ್ನು ಹೇಳಿರುತ್ತಾರೆ. ಅನೇಕ ಅಸಂಖ್ಯಾತ ಅಣುಗಳ ಸಂಯೋಗದಿಂದ ದೇಹವು ಉತ್ಪನ್ನವಾಗಿರುವದೆಂದೂ, ಅಸಂಖ್ಯ ಅಣುಸಂಯೋಗವುಳ್ಳ ಅವಯವಗಳಿಂದ ದೇಹವು ಯುಕ್ತವಾಗಿರುವದೆಂದೂ "ಚರಕಾರ್ಯ"ರ ಮತವಾಗಿರುತ್ತದೆ ತಾರ್ಕಿಕರ ಈ ಸಿದ್ಧಾಂತವನ್ನು ಯೋಗ್ಯವೆಂದು ಗ್ರಹಿಸಿ ಸ್ವತಃ ಚರಕ ಸಂಹಿತೆಯಲ್ಲಿ ವಿವರಿಸಿದ್ದಾರೆ.

**ಶರೀರಾವಯವಾಸ್ತು ಪರಮಾಣುಭೇದೇನಾಽಪರಿಸಂಖ್ಯೇಯಾಭವಂತ್ಯತಿ ಬಹುತ್ವಾದತಿಸೌಕ್ಷ್ಮ್ಯಾದತೀಂದ್ರಿಯತ್ವಾಚ್ಚ॥ ತೇಷಾಂ ಸಂಯೋಗವಿಭಾಗೇಪರಮಾಣೂನಾಂ ಕಾರಣಂನಾಯುಃಕರ್ಮಸ್ವಭಾವಶ್ಚ ॥** (ಚರಕ॥ ಶಾರೀರ॥ ಅ ೭ ಸೂ ೧೭)

ಶರೀರದ ಅವಯವಗಳಾದ ಪರಮಾಣುಗಳು ಭಿನ್ನವಾಗಿ ಭೇದಯುಕ್ತವಾದವುಗಳಿರುವದರಿಂದ ಅಸಂಖ್ಯಾತವಾಗಿರುತ್ತವೆ. ಅವು ಅತಿ ಬಹಳವೂ, ಅತಿ ಸೂಕ್ಷ್ಮವೂ, ಇಂದ್ರಿಯ ಗೋಚರವಲ್ಲದವುಗಳೂ ಇರುತ್ತವೆ. ಇಂಥ ಪರಮಾಣುಗಳ ಸಂಯೋಗ ವಿಭಾಗಗಳನ್ನು ಮಾಡಲಿಕ್ಕೆ ಕರ್ಮ ಸ್ವಭಾವ ಉಳ್ಳವಾಯುವು ಕಾರಣವಾಗುತ್ತದೆ ವಾಯುವು ಪರಮಾಣುಗಳ ಸಂಯೋಗ ವಿಯೋಗಗಳನ್ನು ಮಾಡುತ್ತದೆಂಬರ್ಥವು "ಕರ್ಮ ಸ್ವಭಾವವುಳ್ಳ" ದೇಹದಲ್ಲಿಯ ಪರಮಾಣುಗಳ ಘಟವಿಘಟನಾತ್ಮಕ ಕಾರ್ಯವನ್ನು ಮಾಡುವ ವಾಯುವನ್ನೇ ಇಲ್ಲಿ ಗ್ರಹಿಸಿದ್ದಾರೆ. ಕೇವಲ ವಾಯುವನ್ನು ಗ್ರಹಿಸಿರುವದಿಲ್ಲ.

**ಯದಾಸಂಯೋಜಕ ಸ್ವಭಾವೇನ ಕರ್ಮಣಾಪರಿಗೃಹೀತೋ ವಾಯುರ್ಭವತಿ ತದಾಪರಮಾಣೂನಾಂ ಸಂಯೋಗಂಕುರ್ವ**

ನ್ ಶರೀರಮಾರಭತೇ॥ ಯದಾತುವಿಯೋಜನಸ್ವಭಾವೇನಕರ್ಮ ಣಾವಾಯುಃ ಪರಿಗೃಹೀತೋಭವತಿ ತದಾವಿಭಾಗಂ ಪರಮಾ ಣೂನಾಂ ವಿನಾಶರೂಪಂ ಜನಯತಿ ॥ (ಚರಕ ಟೀಕಾ)

ಸಂಯೋಜಕ ಧರ್ಮವುಳ್ಳ ವಾಯುವು ಕರ್ಮದಿಂದ ಯುಕ್ತವಾಗಿ (ಕರ್ಮಕಾರಿಯಾಗಿ) ಪರಮಾಣುಗಳ ಸಂಯೋಗವನ್ನು ಮಾಡುತ್ತ ಶರೀರ ವನ್ನು ಉಂಟು ಮಾಡುತ್ತದೆ. ವಿಘಟನಾತ್ಮಕ ಧರ್ಮವುಳ್ಳ ವಾಯುವು ಕರ್ಮ ಕಾರಿಯಾಗಿ ಪರಮಾಣುಗಳ ಸ್ಥೂಲರೂಪದ ವಿಭಾಗವನ್ನು ಮಾಡುತ್ತ ವಿನಾಶವನ್ನುಂಟು ಮಾಡುತ್ತದೆ ಪರಮಾಣುಗಳ ಸಂಯೋಗ ರೂಪದಿಂದ ಉತ್ಪನ್ನವಾದ ಕಾರ್ಯವು ಸಂಯೋಗವಿರುವ ವರೆಗೆ ಇರುತ್ತದೆ. ಸಂಯೋಗ ವಿರುದ್ಧವಾದ ವಿಘಟನೆಯುಂಟಾಗಲು ಸ್ಥೂಲರೂಪ ಕಾರ್ಯವು ನಾಶ ಹೊಂದುತ್ತದೆ. ಆದ್ದರಿಂದ ವಾಯುವು ಪರಮಾಣುಗಳ ಘಟವಿಘಟನಾತ್ಮಕ ಕರ್ಮಗಳನ್ನು ಸಂಯೋಗ ವಿಯೋಗ ಧರ್ಮವುಳ್ಳದ್ದಾಗಿ ಮಾಡುತ್ತದೆಂದು ವಿವರಿಸಿದ್ದಾರೆ. ಒಂದೇವಾಯುವು ಸಂಯೋಗ ಧರ್ಮದಿಂದ ಉತ್ಪತ್ತಿಯನ್ನೂ, ವಿಯೋಗ ಧರ್ಮದಿಂದ ನಾಶವನ್ನೂ, ಹೇಗೆ ಮಾಡುತ್ತದೆಂಬ ಆಕ್ಷೇಪ ಬರು ತ್ತದೆ. ಆದ್ದರಿಂದ ವಾಯುವು ಕರ್ಮ ಸ್ವಭಾವಯುಕ್ತವಾಗಿ ಸಂಯೋಗ ವಿಭಾಗವನ್ನನುಸರಿಸುತ್ತದೆಂದು ನಿರ್ಣಯಿಸಿ, ಕೇವಲ ವಾಯುವಿನ ಕಾರ್ಯ ವಲ್ಲದೆ; ಕರ್ಮ ಸ್ವಭಾವ ಪರಿಗೃಹಿತ ವಾಯುವಿನ ಕರ್ತವ್ಯವೆಂದು ಸಿದ್ಧಾಂತ ಪಡಿಸಿರುತ್ತಾರೆ. ವಾಯುವು ಸದಾ ಇರುತ್ತಿದ್ದು ಪರಮಾಣುಗಳೂ ಸಹ ಇದ್ದೇಇರುತ್ತವೆ. ಆದ್ದರಿಂದ ಘಟವಿಘಟನಾತ್ಮಕ ಕಾರ್ಯಗಳು ಸದಾ ಆಗುತ್ತಾ ಅದರಂತೆ ನಾಶವೂಸಹನಡೆಯುತ್ತಿರಬೇಕೆಂಬ ಆಕ್ಷೇಪಬರುತ್ತದೆ ಪರಮಾಣು ಗಳ ಸಂಯೋಗವಿಯೋಗಗಳು ವಾಯುಕೃತವಾಗಿದ್ದರೂ ವಾಯುವು ಆತ್ಮನ ಇಚ್ಛಾನುವರ್ತಿಯಾಗಿರುತ್ತದೆ. ತರ್ಕಶಾಸ್ತ್ರದಲ್ಲಿ ಪರಮಾಣುಗಳ ಸಂಯೋಗಾ ದಿಗಳಿಗೆ ಈಶ್ವರ ಇಚ್ಛೆಯೇ ಕಾರಣವೆಂದು ಹೇಳಿದ್ದಾರೆ. ಈಶ್ವರೇಚ್ಛೆಯು ಉತ್ಪತ್ತಿ ಮಾಡಬೇಕೆಂದು ಪ್ರವೃತ್ತಿಹೊಂದಿದಕೂಡಲೇ, ಪರಮಾಣೀಗಳಲ್ಲಿ ಸಂಯೋಗಾರಂಭವಾಗಿಭೂತಾದಿಗಳುಉತ್ಪನ್ನವಾಗುತ್ತವೆ. ಇದರಂತೆಇಚ್ಛಾ ನಿವೃತ್ತಿಯಾದಾಗ ವಿಭಾಗಹೊಂದಿ ಪರಮಾಣುಗಳ ಸ್ಥಿತಿಹೊಂದುತ್ತವೆ.

**"ಆಯುರ್ವೇದದಲ್ಲಿ"** ಶರೀರಾದ್ಯುತ್ಪತ್ತಿಯನ್ನು ಕುರಿತು ವಾಯು ಕರ್ಮಕಾರಿ ಇರುವದರಿಂದ ಪಂಚಮಹಾಭೂತ ವಿಕಾರವುಳ್ಳ, ಶರೀರಾರಂಭ ಕಾಣುಗಳು ಸಂಯೋಗವಿಯೋಗ ಹೊಂದುತ್ತವೆಂದು ನಿರ್ದೇಶಿಸಿದ್ದಾರೆ **"ಕರ್ಮ ಸ್ವಭಾವ"** ಪರಿಗೃಹೀತವೆಂದು ಹೇಳುವದರಿಂದ ಆತ್ಮಾಧೀನ ವಾಗಿಯೇ ಉತ್ಪತ್ತಿನಾಶ ಸಂಭವವೆಂದು ಸಿದ್ಧವಾಗುತ್ತದೆ. ಅಥವಾ, ಕರ್ಮ ಸ್ವಭಾವ ರಹಿತವಾದವುಗಳ ಉತ್ಪತ್ತಿಆಗದೆ ಸ್ವಸ್ಥಿತಿಯಲ್ಲಿರುತ್ತವೆ. ಕರ್ಮಾ ದಿಗಳು (ಉಪಾಧಿ) ಇದ್ದರೆ ದೇಹಾದಿ ಉತ್ಪತ್ತಿಯಾಗುತ್ತದೆಂದು ಇದರಿಂದ ಹೇಳಿದಂತಾಗುತ್ತದೆ. ಹೀಗೆ ಪಂಚಭೂತ ವಿಕಾರವಾದ ದೇಹದ ಉತ್ಪತ್ತಿ ನಾಶಗಳಲ್ಲಿಯು, ಪರಮಾಣುಗಳ ಸಂಯೋಗ ವಿಭಾಗಗಳನ್ನು ಪ್ರತಿಪಾದಿಸಿ ದ್ದಾರೆ. ದೇಹವೆಲ್ಲದರ ಉತ್ಪ್ರತ್ಯಾದಿಗಳನಿಮಿತ್ತ ಸ್ವರೂಪವನ್ನವಲೋಕಿಸಿ ಅದಕ್ಕೆ ಕಾರಣನೊಬ್ಬನಿರುವನೆಂದು ಶಾಸ್ತ್ರಕಾರರು ನಿರ್ಣಯಿಸಿದ್ದಾರೆ.

**"ಪರಮಾಣೂನಾಂ ಘಟವಿಘಟನಾತ್ಮಕಂ ಕರ್ಮಯದ್ಯೇವಂ ಚಲತಿಕಸ್ಮಾತ್"**

ಪರಮಾಣುಗಳ ನಿಯಮಿತ ಕಾರ್ಯವು ನಡೆಯುತ್ತಿರುತ್ತದೆ. ಇದಕ್ಕೆ ಕಾರಣವೇನು? ಅಥವಾ ಇದಕ್ಕೆಕಾರಣಯಾರು? ಎಂದು ಉದ್ಘೋಷಿಸಿದ್ದಾರೆ.

# ೧೬. ಗರ್ಭಾಶಯದಲ್ಲಿ ಗರ್ಭದ ಇರುವಿಕೆ

**ಗರ್ಭಶಯ್ಯಾಯಾಂ ಗರ್ಭಸ್ಥಿತಿ ಸ್ವರೂಪ ವರ್ಣನಂ ||**

ಗರ್ಭಾಶಯದಲ್ಲಿ ಗರ್ಭವು ಹೇಗಿರುತ್ತದೆಂದು ಇರುವಿಕೆ ಸ್ವರೂಪಗ ಳನ್ನು ವಿವರಿಸುತ್ತಾರೆ. ಈ ಗರ್ಭ ಸ್ಥಿತ್ಯಾದಿಗಳಿಂದ ಪ್ರಸವಕಾಲದಲ್ಲಿಯು ಗತಿ ಸ್ವರೂಪ ತಿಳಿಯುವದರಿಂದ ಇದರ ವಿವರಣೆಯು ಅವಶ್ಯವಾದದ್ದಾಗಿರುತ್ತದೆ.

**ಗರ್ಭಸ್ತು ಖಲು ಮಾತುಃ ಪೃಷ್ಠಾಭಿಮುಖ ಊರ್ಧ್ವಶಿರಾಃ ಸಂಕುಚ್ಯಾಂಗಾನ್ಯಾಸ್ತೇಽಂತಃ ಕುಕ್ಷೌ ||**
**( ಚರಕ || ಶಾರೀರ || ಅ. ೬ ಸೂ. ೨೨ )**

ಗರ್ಭಾಶಯದಲ್ಲಿ ಗರ್ಭವು ತಾಯಿಯ ಪೃಷ್ಠದ ಕಡೆಗೆ ಮುಖವುಳ್ಳದ್ದಾಗಿರುತ್ತದೆ ತಲೆಯನ್ನು ಮೇಲ್ಗಡೆ ಮಾಡಿಕೊಂಡು ಅಂಗಗಳೆಲ್ಲವನ್ನೂ ಮುದುಡಿಸಿ ಗುಂಪಾದದ್ದಾಗಿರುತ್ತದೆ

## ಸುಶ್ರುತ ಮತದಂತೆ ಗರ್ಭಸ್ಥಿತಿಯು

**ಆಭುಗ್ನೋಽಭಿಮುಖಃ ಶೇತೇಗರ್ಭೋಽಗರ್ಭಾಶಯೇಸ್ತ್ರಿಯಾಃ॥**
**ಸಯೋನಿಂ ಶಿರಸಾಯಾತಿಸ್ವಭಾವಾತ್ ಪ್ರಸವಂಪ್ರತಿ ॥**

(ಸುಶ್ರುತ॥ ಶಾರೀರ॥ ಅ ೫ ಶ್ಲೋ ೪೫)

ಸ್ತ್ರೀಗರ್ಭಾಶಯದಲ್ಲಿ ಗರ್ಭವು ನಿರ್ಗಮನ ದ್ವಾರಕ್ಕೆ ಅಭಿಮುಖವಾಗಿ ಅಂಗಾಂಗಗಳನ್ನೆಲ್ಲ ಸಂಕೋಚ (ಆಭುಗ್ನ) ಮಾಡಿಕೊಂಡು ಇರುತ್ತದೆ ಸ್ವಾಭಾವಿಕವಾದ (ಯೋಗ್ಯ) ಪ್ರಸವ ಸಮಯದಲ್ಲಿ ತಲೆಯನ್ನು ಮುಂದೆ ಮಾಡಿಕೊಂಡು ಯೋನಿ ಮಾರ್ಗವನ್ನು ಹೊಂದುತ್ತದೆ.

## ಗರ್ಭ ನಿರ್ಗಮನ (ಪ್ರಸೂತಿ)

**ಸಚೋಪಸ್ಥಿತಕಾಲೇಜನ್ಮನಿಪ್ರಸೂತಿ ಮಾರುತಯೋಗಾತ್ ಪರಿವೃತ್ಯಾವಾಕ್ ಶಿರಾನಿಷ್ಕ್ರಾಮತ್ಯಪತ್ಯಪಥೇನ, ಏಷಾಪ್ರಕೃತಿಃ, ವಿಕೃತಿಃ ಪುನರತೋಽನ್ಯಥಾ॥ ಪರಂತ್ವತಃ ಸ್ವತಂತ್ರವೃತ್ತಿರ್ಭವತಿ ॥** (ಚರಕ॥ ಶಾರೀರ॥ ಅ ೭ ಸೂ. ೨೪)

ಪ್ರಸವ (ಪ್ರಸೂತಿ) ಕಾಲದಲ್ಲಿ, ಗರ್ಭವು ಪ್ರಸೂತಿ ವಾಯುವಿನ ಸಹಯೋಗದಿಂದ ಹೊರಳಿ ಕೆಳಗಡೆಗೆ ತಲೆಯಾಗಿ ಯೋನಿ ಮಾರ್ಗದಿಂದ ಹೊರಗೆ ಬರುತ್ತದೆ. ಯೋನಿ ದ್ವಾರದಿಂದ ತಲೆ ಕೆಳಗಾಗಿ ಹೊರಗೆ ಬರುತ್ತದೆಂಬರ್ಥವು. ತಲೆಯು ಮೊದಲು ಬರುವದೇ ಪ್ರಸವ ಸ್ಥಿತಿಯಲ್ಲಿ ಸ್ವಾಭಾವಿಕವಾದದ್ದೆಂದು ತಿಳಿಯಬೇಕು. ತಲೆಯ ಹೊರತಾಗಿ ಒಂದು ಕಾಲು ಒಂದು ಕೈ ಮುಂತಾದವು ಮೊದಲಾಗಿ ಬಂದರೆ ಸ್ವಾಭಾವಿಕವಲ್ಲದ್ದು (ವಿಕೃತಿ) ಯೆಂದು ತಿಳಿಯಬೇಕು. ಕಾಲುಗಳೆರಡೂ ಮುಂದಾಗಿ ಪ್ರಸೂತಿಯಾಗು

ವಾಗ ಒಮ್ಮೊಮ್ಮೆ ಕುತ್ತಿಗೆಯ ವರೆಗೆ ಹೊರಬಂದ ನಂತರ, ತಲೆಯು ದೊಡ್ಡ ದಿರುವದರಿಂದ ತಡೆದು ನಿಲ್ಲುತ್ತದೆ. ಕುತ್ತಿಗೆಯು ಸಣ್ಣದಿರುವದರಿಂದ ಯೋನಿ ದ್ವಾರವು ಸಂಕುಚಿತವಾಗುವದು. ಆದ್ದರಿಂದ ತಲೆಯು ಹೊರಗೆ ಬರದೆ ದ್ವಾರವು ಸಣ್ಣದಿರುವದರಿಂದ ಅಲ್ಲಿಯೇ ತಡೆಯುವ ಸಂಭವವೂ ಇರುತ್ತದೆ. ಕಾಲು ಮುಂದಾಗಿ ಬರುವದು ತಲೆ ಮೊದಲು ಬಂದಷ್ಟು ಸುಲಭವಲ್ಲದ್ದ ರಿಂದಲೂ, ಒಮ್ಮೊಮ್ಮೆ ಹಿಂದೆ ಹೇಳಿದಂತೆ ಕುತ್ತಿಗೆಯ ಭಾಗದಲ್ಲಿ ಯೋನಿ ಮಾರ್ಗದ ಆಕುಂಚನದಿಂದ ತಲೆಯು ಸಿಕ್ಕಿಕೊಳ್ಳುವದರಿಂದಲೂ, ವಿಕೃತಿ ಯೆಂದು ಹೇಳಿದ್ದಾರೆ. ತಲೆ ಮುಂದಾಗಿ ಬರುವದು ಸ್ವಾಭಾವಿಕವೂ ಸುಖ ಪ್ರಸವವೂ ಆಗಿರುತ್ತದೆ. ಹೀಗಿರುವದರಿಂದಸ್ವಾಭಾವಿಕ ಪ್ರಸವ ಸ್ಥಿತಿಯ ಹೊರತಾಗಿರುವದೆಲ್ಲವೂ ವಿಕೃತಿಯೆಂದು ಹೇಳಿರುತ್ತಾರೆ ಅವುಗಳಲ್ಲಿ ಮುಂದೆ ಮೂಢ ಗರ್ಭಾದಿಗಳೆಂದು ನಿರ್ದೇಶಿಸುವಂಥವುಗಳು ಕಷ್ಟಪ್ರದವೂ ಮತ್ತು ಅಸಾಧ್ಯವೂ ಇರುತ್ತವೆ ಮೂಢ ಗರ್ಭದಲ್ಲಿ ಕಾಲಹರಣ ಮಾಡುವದು ಮಾರಕವಾಗಿರುತ್ತದೆ ಆಗಿಂದಾಗ ಉಪಾಯವನ್ನು ಕೈಕೊಂಡರೆ ಮಾತ್ರ ಗರ್ಭಿಣಿಯು ಬದುಕುವ ಸಂಭವವಿರುತ್ತದೆ ಪ್ರಸವ ಕಾಲದಲ್ಲಿ ಮೊದಲು ಸ್ವಾಭಾವಿಕ ಪ್ರಸವವೋ? ವಿಕೃತಿಯೋ? ಎನ್ನುವದನ್ನು ವಿಚಾರಿಸುವದು ಆದ್ಯ ಕರ್ತವ್ಯವಾಗಿರುತ್ತದೆ. ಸ್ವಾಭಾವಿಕ ಪ್ರಸವವಲ್ಲದಿದ್ದರೆ ವಿಶೇಷ ಲಕ್ಷ ಕೊಡಬೇಕು. ಒಂದು ಕಾಲು ಅಥವಾ ಕೈ ಬರುವ "**ಮೂಢಗರ್ಭ**" ಪ್ರಸವ ವಿಷಯದಲ್ಲಿ ತತ್‌ಕ್ಷಣ ಚಿಕಿತ್ಸಾ ಕ್ರಮ ನಡೆದರೆ ಮಾತ್ರ ಜೀವಿಸುವ ಸಂಭವ ವಿರುತ್ತದೆ. ಆದ್ದರಿಂದ ಸದ್ಯ ಪ್ರತೀಕಾರ ಸಮಯದಲ್ಲಿ ಕಾಲವಿಲಂಬವು ಘಾತವಾದದ್ದೆಂದು ಶಾಸ್ತ್ರಕಾರರು ಎಚ್ಚರಿಸಿ ಬೋಧಿಸಿದ್ದಾರೆ. ಪ್ರಸವ ವಿಷಯದಲ್ಲಿ ಪ್ರತಿಯೊಂದು ಕುಟುಂಬದಲ್ಲಿಯೂ ಸ್ತ್ರೀಯರಿಗೆ ವಿಶೇಷ ಜ್ಞಾನ ವಿರಲಿಕ್ಕೇಬೇಕು. ಜ್ಞಾನವಿದ್ದರೆ ಪ್ರಸವ ಸ್ಥಿತಿಯಲ್ಲಿ ಸಾಮಾನ್ಯವಾಗಿ ನಿವಾ ರಿಸಬಹುದಾದ ಕಷ್ಟ ಸ್ಥಿತಿಯನ್ನು ಹೋಗಲಾಡಿಸಬಹುದು. ಸಾಮಾನ್ಯ ನಿವಾರಿಸಲು ಬರುವ ಸ್ಥಿತಿಯೂ ಸಹ ಅಜ್ಞತೆಯಿಂದ ಉಪೇಕ್ಷಿಸಿ ಅಥವಾ ಹೆದರಿ ಸುಮ್ಮನಿದ್ದರೆ ಅದೇ ಪ್ರಾಣಹಾರಕವಾಗಿ ಸಂಭವಿಸುತ್ತದೆ. ಪ್ರಸವ ವಿಷಯದಲ್ಲಿ ಚನ್ನಾಗಿ ಅರಿತ ಸ್ತ್ರೀಯರಿದ್ದರೆ ಇಂಥ ಪ್ರಸಂಗಗಳಲ್ಲಿ ತತ್ಕಾಲ

ಪ್ರತೀಕಾರ ದೊರೆಯುತ್ತದೆಯಾದ್ದರಿಂದ ಅದರಿಂದೊದಗುವ ಕಠಿಣ ಪರಿಸ್ಥಿತಿ ಬರುವ ಆಸ್ಪದವೇ ಇರುವದಿಲ್ಲ. ತೀವ್ರ ಪರಿಸ್ಥಿತಿಯಲ್ಲಿ ಶಸ್ತ್ರಚಿಕಿತ್ಸಕರೇ ನಿರ್ವಹಿಸುವ ಕರ್ತವ್ಯವಾಗಿದೆ. ಅನ್ಯಥಾ ಪ್ರಯೋಜನವಿಲ್ಲ. ಅಷ್ಟೇ ಅಲ್ಲ ಸ್ಥಿತಿಯು ಕೈಮೀರಿದ ಮೇಲೆ "ಸದ್ಯ ಪ್ರಾಣಹರಣವಿರುವದರಿಂದ" ಅಸಾಧ್ಯವೇ ಇರುತ್ತದೆ. ಆದ್ದರಿಂದ ದುರ್ಬಲ, ರೋಗಪೀಡಿತ, ಅಶಕ್ತ ಗರ್ಭಿಣಿಯರಿದ್ದಲ್ಲಿ ಮೊದಲೇ ಚಿಕಿತ್ಸಕರ ಸಹಾಯ ವ್ಯವಸ್ಥೆಗಳನ್ನು ನಿರ್ವಹಿಸಿಟ್ಟಿರಬೇಕಾದ್ದು, ಸಮಯೋಚಿತವಾಗಿರುತ್ತದೆ. ತಾಯಿಯ ಹೊಟ್ಟೆಯಲ್ಲಿರುವ ಪರ್ಯಂತವಾಗಿ ಗರ್ಭವು ತಾಯಿಯು ಸೇವಿಸಿದ ಆಹಾರ ರಸದಿಂದಲೇ ಅಭಿವೃದ್ಧಿಯನ್ನು ಹೊಂದುತ್ತದೆ. ತಾಯಿಯನ್ನೇ ಅನುಸರಿಸಿ ಅಭಿವೃದ್ಧಿಯನ್ನೂ ಜೀವನವನ್ನೂ ನಿರ್ವಹಿಸುತ್ತಿರುವದರಿಂದ ಪರಾಧೀನ ವೃತ್ತಿಯುಳ್ಳದ್ದೆಂದು ಹೇಳಿದ್ದಾರೆ. ಪ್ರಸವದ ನಂತರ "ಶಿಶು" ಸ್ವತಃ ತನ್ನ ಬಾಯಿಯಿಂದಲೇ ಆಹಾರವನ್ನು ಗ್ರಹಿಸಿ ಜೀರ್ಣಿಸಿ ಪೋಷಣೆಯನ್ನು ಹೊಂದುವದರಿಂದ, ಸ್ವತಂತ್ರ ವೃತ್ತಿಯುಳ್ಳದ್ದೆಂದು ಹೇಳಿರುವರು. ಪ್ರಸವದ ನಂತರವಾದರೂ ತಾಯಿಯ ಹಾಲಿನಿಂದಲೇ "ಶಿಶು"ವಿನ ಜೀವರಕ್ಷಣೆಯು ಪ್ರಶಸ್ತವಾದ್ದರಿಂದ ತಾಯಿಗೆ ಯೋಗ್ಯವಾದ ಸ್ತನ್ಯಕರ ಆಹಾರವನ್ನು ಯೋಜಿಸಬೇಕು. ತಾಯಿಯ ಹಾಲು ದೂಷಿತವಾಗಿದ್ದರೆ ಅಥವಾ ಪ್ರಸೂತಿ ನಂತರ ವ್ಯಾಧಿಗ್ರಸ್ತಳಾದರೆ ಆಕಳ ಹಾಲನ್ನು ಉಪಯೋಗಿಸಬೇಕು. ದೂಷಿತ ಹಾಲಿನಿಂದ ರೋಗ ಸಂಭವಿಸುವದರಿಂದ ಮೊಲೆ ಕುಡಿಸಬಾರದು. ತಾಯಿಯ ಆರೋಗ್ಯ ಚನ್ನಾಗಿದ್ದು ದೋಷರಹಿತ ಹಾಲಿರುತ್ತಿದ್ದಾಗ ಎರಡನೇಯದೇನನ್ನೂ ಉಪಯೋಗಿಸುವ ಅವಶ್ಯಕತೆಯೇ ಇಲ್ಲ. ಸ್ವಾಭಾವಿಕವಾಗಿ ಪ್ರಾಣಿ ಮಾತ್ರದ ಜೀವನೋಪಾಯವೆಂದು ನಿರ್ಮಿಸಿದ ತಾಯಿಯ ಹಾಲಿನಷ್ಟು, ಹಿತಕರವೂ ಸಾತ್ಮ್ಯವೂ ಸುಲಭವಾಗಿ ದೊರೆಯುವಂಥದೂ ಮತ್ತಾವದೂ ಇಲ್ಲವೆನ್ನುವದು ಸ್ಪಷ್ಟವಾಗಿ ತೋರುವ ವಿಷಯವೇ ಆಗಿರುತ್ತದೆ. ಪ್ರಸೂತಿಯಾದ ನಂತರ "ತಾಯಿ ಶಿಶುಗಳ" ಇಬ್ಬರ ವಿಷಯದಲ್ಲಿಯೂ ವಿಶೇಷ ಆಸ್ಥೆಯನ್ನು ವಹಿಸಬೇಕಾಗುತ್ತದೆ. ಅಂದರೆ ಆರಂಭವಾದ ಗರ್ಭಸ್ಥಿತಿಯು ಸುಖದಾಯಕವಾಗುವದು.

# ಗರ್ಭಾಶಯವಿರುವ ಸ್ಥಾನ

**ಗರ್ಭಾಶಯೋಽಷ್ಟಮಃ ಸ್ತ್ರೀಣಾಂ ಪಿತ್ತಪಕ್ವಾಶಯಾಂತರೇ ||**
(ವಾಗ್ಭಟ|| ಶಾರೀರ|| ಅ ೩ ||)

ಎಂಟನೇ ಆಶಯವಾದ "**ಗರ್ಭಾಶಯವು**" ಸ್ತ್ರೀಯರಿಗೆ ಪಿತ್ತಾಶಯ ಮಲಾಶಯಗಳ ಮಧ್ಯಭಾಗದಲ್ಲಿರುತ್ತದೆ.

**ಯಥಾರೋಹಿತಮತ್ಸ್ಯಸ್ಯಮುಖಂ ಭವತಿರೂಪತಃ ||**
**ತತ್ಸಂಸ್ಥಾನಾಂತಥಾರೂಪಾಂಗರ್ಭಶಯ್ಯಾಂ ವಿದುರ್ಬುಧಾಃ||**
(ಸುಶ್ರುತ|| ಶಾರೀರ|| ಅ ೫ ಶ್ಲೋ ೪೪)

ರೋಹಿತವೆಂಬ ಮೀನದ ಮುಖದಂತೆ ತದ್ವತ್ ಗರ್ಭಾಶಯದ ಆಕೃತಿ ಸ್ವರೂಪಗಳು ಇರುತ್ತವೆಂದು ಪಂಡಿತರ ಮತವು. ರೋಹಿತ ಮೀನದ ಮುಖವು ಮುಂದೆ ಸಣ್ಣದಾಗಿದ್ದು ಅನಂತರ ದೊಡ್ಡದಾಗಿಯೂ, ಒಳಗೆ ಪೊಳ್ಳು ಭಾಗವು ಅಧಿಕವಾಗಿಯೂ ಇರುತ್ತದೆ. ಇದರಂತೆಯೇ ಗರ್ಭಾಶಯ ವಿರುತ್ತದೆಂದು ತಿಳಿಯಬೇಕು.

### ಗರ್ಭಾಶಯ ದ್ವಾರವು

**ಶಂಖನಾಭ್ಯಾಕೃತಿರ್ಯೋನಿಃ ತ್ರ್ಯಾವರ್ತಾಸಾಪ್ರಕೀರ್ತಿತಾ ||**
**ತಸ್ಯಾಃ ತೃತೀಯೇತ್ವಾವರ್ತೇಗರ್ಭಶಯ್ಯಾಪ್ರತಿಷ್ಠಿತಾ ||**
(ಸುಶ್ರುತ|| ಶಾರೀರ|| ಅ ೫ ಶ್ಲೋ ೪೩)

ಶಂಖದ ನಾಭಿಯ ಆಕಾರದಂತೆ (ಶಂಖದ ನಾಭೀ ರಂಧ್ರದಂತೆ) ಯೋನಿಯು ಇರುತ್ತದೆ. ಮೂರು ಆವರ್ತ (ಮುರಿಗೆ) ಗಳಿಂದ ಕೂಡಿರುತ್ತದೆ. ಮೂರನೇ ಆವರ್ತದಲ್ಲಿ "**ಗರ್ಭಾಶಯವು**" ಅಂಟಿಕೊಂಡಿರುತ್ತದೆ. ಶಂಖದ ದ್ವಾರದಂತೆ ಆವರ್ತ (ಮುರಿಗೆ)ಗಳಿಂದ ಕೂಡಿದ ಯೋನಿದ್ವಾರವು, ನಂತರ ಶಂಖದ ಒಳಗಡೆಯ ದೊಡ್ಡದಾದ ಪೊಳ್ಳು ಭಾಗದಂತೆ ಗರ್ಭಾಶ

ಯದ ಒಳಭಾಗವಿರುತ್ತದೆ. ಅಲ್ಲಿಯೇ ಗರ್ಭವು ಆರಂಭವಾಗಿ ಬೆಳೆಯುತ್ತದೆ. ಮೂಢ ಗರ್ಭಾದಿಗಳಲ್ಲಿ ಗರ್ಭ ನಿರ್ಗಮನ ಮಾರ್ಗವನ್ನು ನಿರ್ದೇಶಿಸಲು ಯೋನಿದ್ವಾರ ಸ್ವರೂಪವನ್ನು ಸ್ಪಷ್ಟಪಡಿಸಿದ್ದಾರೆ.

## ಗರ್ಭಾಶಯದಲ್ಲಿ ಗರ್ಭಸ್ವರೂಪ

**ಮಲಾಲ್ಪತ್ವಾದಯೋಗಾಚ್ಚ ವಾಯೋಃ ಪಕ್ವಾಶಯಸ್ಯಚ ||**
**ವಾತಮೂತ್ರಪುರೀಷಾಣಿನಗರ್ಭಸ್ಥಃ ಕರೋತಿಹಿ ||**
(ಸುಶ್ರುತ|| ಶಾರೀರ|| ಅ ೨ ಶ್ಲೋ ೫೩)

ಗರ್ಭಾಶಯಸ್ಥ ಗರ್ಭದಲ್ಲಿ ಮಲವು ಅಲ್ಪವಿರುವದರಿಂದ ಅಥವಾ ಜೀವನ ಸ್ಥಿತಿಗೆ ಅರ್ಹವಾದ ರಸಸತ್ವವನ್ನೇ ಗ್ರಹಿಸುವದರಿಂದ ಮಲದ ಯೋಗವೇ ಇರುವದಿಲ್ಲ. "**ಮಲಾಲ್ಪತ್ವಾತ್**" ಎಂದು ಹೇಳಿದ್ದರಿಂದ ರಸ ಸತ್ವದ ಮಲವು ಸೂಕ್ಷ್ಮ ಸ್ಥಿತಿಯಲ್ಲಿರುತ್ತದೆಂದು ಧ್ವನಿತವಾಗುತ್ತದೆ. ಜನನವಾದ ಮೇಲೆ ಪ್ರತ್ಯಕ್ಷ ಆಹಾರ ಸ್ವೀಕಾರಮಾಡಿ ಪಚನವಾದ ನಂತರ ದಲ್ಲಿಯ, ಕಿಟ್ಟ ಭಾಗವಾದ ಮಲದಂತೆ ಸ್ಥೂಲವಾದದ್ದಲ್ಲ. ರಸಸತ್ವವನ್ನೇ ಗ್ರಹಿಸುವದರಿಂದ ಕಿಟ್ಟ ರೂಪ ಮಲವು ಸಂಭವಿಸಲಾರದು. ಆದ್ದರಿಂದ "**ಅಯೋಗಾತ್**" ಎಂದು ಹೇಳಿದ್ದಾರೆ ಇಲ್ಲವೇ ಪಕ್ವಾಶಯದಲ್ಲಿಯ ವಾಯುವಿನ ಯೋಗವಿಲ್ಲದಿರುವದರಿಂದಲೂ ಗರ್ಭಾಶಯಸ್ಥ ಶಿಶುವು, ವಾತ, ಮೂತ್ರ ಮಲಗಳ ವಿಸರ್ಜನೆಯನ್ನು ಮಾಡುವದಿಲ್ಲ. ಮಲ ಮೂತ್ರಗಳ ವಿಸರ್ಜನೆ ಇಲ್ಲದಿರುವದು ಮಲಾಲ್ಪತೆ (ಸೂಕ್ಷ್ಮತೆ) ಯಿಂದ ಸ್ವಾಭಾವಿಕ ವಾಗಿರುತ್ತದೆ. ಆದರೆ ವಾಯು ಸಂಚಾರವಿಲ್ಲದಿದ್ದರೆ ಗರ್ಭವು ಹೇಗೆ ಬದು ಕುತ್ತದೆಂಬ ವಿಚಾರವುಂಟಾಗುತ್ತದೆ ಮತ್ತು ಶಿಶುವಿಗೆ ಶ್ವಾಸೋಚ್ಛ್ವಾಸ ವಿಲ್ಲದಿದ್ದರೆ ಪ್ರಾಣವಿರುವದೆಂದು ಹೇಗೆ ತಿಳಿಯಬೇಕು. ಜೀವವಿದ್ದರೆ ಉಸು ರಾಡಿಸುವದು ಅವಶ್ಯವೇ ಆಗಿರುತ್ತದೆ. ಇದಕ್ಕೆ ಶಾಸ್ತ್ರಕಾರ ಮತವೇನೆಂದರೆ ಸ್ಥೂಲಭೂತ ಶಬ್ದಾದಿಗಳನ್ನು ಹೊರಡಿಸುವ ವಾಯು ಸಂಚಾರವಿಲ್ಲೆಂದೂ ಸೂಕ್ಷ್ಮವಾದ ವಾಯು ಸಂಚಾರ ಇದ್ದೇಇದೆಯೆಂದೂ ಹೇಳಿದ್ದಾರೆ.

(ವಾಯು ಸಂಚಾರ ಸ್ಥಿತಿಯನ್ನು ಮುಂದೆ ವಿವರಿಸುತ್ತಾರೆ)

**ಜರಾಯುಣಾಮುಖೇಚ್ಛನ್ನೇಕಂಠೇಚ ಕಫವೇಷ್ಟಿತೆ ||**
**ವಾಯೋರ್ಮಾರ್ಗನಿರೋಧಾಚ್ಚನಗರ್ಭಸ್ಥಪ್ರರೋದಿತಿ ||**
**(ಸುಶ್ರುತ|| ಶಾರೀರ|| ಅ ೩ ಶ್ಲೋ ೫೮)**

ಗರ್ಭವೇಷ್ಟನಪರದೆಯಿಂದ (ಜರಾಯುಣಾ) ಮುಖವು ಮುಚ್ಚಿರುವದರಿಂದಲೂ, ಕುತ್ತಿಗೆಯ ದ್ವಾರದಲ್ಲಿ ಕಫವು ವ್ಯಾಪಿಸಿರುವದರಿಂದಲೂ ವಾಯು ಸಂಚಾರ ಮಾರ್ಗನಿರೋಧವಾಗಿರುವದರಿಂದಲೂ, ಗರ್ಭಾಶಯದಲ್ಲಿ ಶಿಶುವು ರೋದಿಸುವದಿಲ್ಲ.

"ವಾಯು ಸಂಚಾರ ಮಾರ್ಗ ನಿರೋಧವಾಗಿರುವದರಿಂದ" ಎಂದು ಹೇಳಿರುತ್ತಾರೆ. ಗರ್ಭದಲ್ಲಿ ವಾಯು ಸಂಚಾರ ಬಂದಾದರೆ ಗರ್ಭವು ಹೇಗೆ ಜೀವಿಸುತ್ತದೆಂದು ಕೇಳಬಹುದು? ಇಲ್ಲಿ ರೋದನ ವಿಷಯವನ್ನು ಕುರಿತು ವಿವೇಚನೆ ಮಾಡಿರುವದರಿಂದ ಶಬ್ದ(ಘೋಷ)ವನ್ನುಂಟು ಮಾಡುವ ವಾಯುವಿನ ಮಾರ್ಗ ನಿರೋಧವೆಂದು ತಿಳಿಯಬೇಕು ಆದ್ದರಿಂದ ಅಳೋಣವು (ರೋದನ) ಇರುವದಿಲ್ಲೆಂದು ಪ್ರತಿಪಾದಿಸಿದ್ದಾರೆ. ನಿಶ್ವಾಸಾದಿ ರೂಪವುಳ್ಳ ವಾಯುವು ಸಂಚರಿಸುತ್ತಿರುತ್ತದೆ. ನಿಶ್ವಾಸಾದಿಗಳನ್ನುಂಟು ಮಾಡುವ ವಾಯುನಿರೋಧ ಇಲ್ಲವೇ ಅಭಾವವಾದರೆ, ಜೀವವು ಇರಲಾರದು. ಆದ್ದರಿಂದ ಜೀವನ (ಬದುಕುವಿಕೆಯು) ವ್ಯಾಪಾರವಾದ ನಿಃಶ್ವಾಸೋಚ್ಛ್ವಸಗಳನ್ನು ವಹಿಸಿರುವ ವಾಯುವಿನ ಸಂಚಾರವು ನಡೆದಿರುತ್ತದೆಂದು ತಿಳಿಯಬೇಕು. ಗರ್ಭಾಶಯದ ಒಳಗೆ ಆವರಣೆಯಲ್ಲಿರುವ ಗರ್ಭವು ನಿಃಶ್ವಾಸಾದಿಗಳನ್ನು ಹೇಗೆ ಮಾಡುತ್ತದೆಂದು ಅನಿಸಬಹುದು ಇಲ್ಲಿಯೇ ಮುಂದಿನ ಶ್ಲೋಕದಲ್ಲಿ ಆ ವಿಷಯವನ್ನು ವಿವರಿಸಿ ಹೇಳುತ್ತಾರೆ.

**ನಿಃಶ್ವಾಸೋಚ್ಛ್ವಸಸಂಕ್ಷೋಭಸ್ವಪ್ನಾನ್ ಗರ್ಭೋಽಧಿಗಚ್ಛತಿ||**
**ಮಾತುರ್ನಿಶ್ವಸಿತೋಚ್ಛ್ವಸಸಂಕ್ಷೋಭಸ್ವಪ್ನಸಂಭವಾನ್ ||**
**(ಸುಶ್ರುತ|| ಶಾರೀರ|| ಅ ೩ ಶ್ಲೋ ೫೫)**

ತಾಯಿಯ ಶ್ವಾಸೋಚ್ಛ್ವಸ, ಸಂಚಲನ, ನಿದ್ರಾದಿಗಳನ್ನನುಸರಿಸಿ, ಗರ್ಭವು ಶ್ವಾಸೋಚ್ಛ್ವಸ, ಸಂಚಲನ, ನಿದ್ರೆಗಳನ್ನು ಹೊಂದುತ್ತದೆ.

ಅರ್ಥಾತ್ ತಾಯಿಯು ನಿಶ್ವಾಸಾದಿ ಯಾವ ಕರ್ತೃವ್ಯವನ್ನು ಮಾಡುತ್ತಾಳೋ, ಗರ್ಭವೂ ಕೂಡ ಅದನ್ನೇ ಮಾಡುತ್ತದೆಂಬರ್ಥವು. ಹೀಗೆ ಗರ್ಭಿಣಿಯು ಪ್ರತಿ ಜೀವದಂತೆ ಗರ್ಭವು ಅನುಸರಿಸಿ ನಡೆಯುವದರಿಂದ, ಗರ್ಭಿಣಿಯು ಸುಖ ದುಃಖ, ರೋಗವೊದಲಾದವುಗಳನ್ನು ಹೊಂದುತ್ತದೆ. ಆದ್ದರಿಂದ ಗರ್ಭಿಣಿಯು ದುಃಖ ವೊದಲಾದವುಗಳು ಗರ್ಭವಿಕೃತಿಕಾರಕವಾಗಿರುತ್ತವೆ. ತಾಯಿಯಂತೆ ಸುಖದುಃಖವನ್ನು ಗರ್ಭವು ಅನುಭವಿಸುವದರಿಂದ ಜಾಗರ ಅತಿಚಲನವಲನೆ ಗಳನ್ನು ಇನ್ನೂ ಅನೇಕ ಶ್ರಮದಾಯಕಕೆಲಸಗಳನ್ನು ವರ್ಜಿಸಬೇಕು. ಆದ್ದರಿಂದ ಅತಿಶ್ರಮಚಿಂತೆ ಉಪವಾಸ ರೂಕ್ಷ ಉಷ್ಣಾಹಾರಸೇವನೆ ವೊದಲಾದವುಗಳು ಗರ್ಭಕ್ಕೆ ದುಃಖಕಾರಕವಾಗಿರುತ್ತವೆ. ಗರ್ಭ ಮತ್ತು ಗರ್ಭಿಣಿಯು ಹಿತ ದೃಷ್ಟಿಯಿಂದ ಅಹಿತಕಾರಕ ವಿಕೃತಿಯನ್ನುಂಟು ಮಾಡುವ ಆಹಾರ ವಿಹಾ ರಾದಿಗಳಿಂದ ಉತ್ಪನ್ನವಾದ ದುಷ್ಪರಿಣಾಮವನ್ನು ಅವಲೋಕಿಸಿ, ಪ್ರತ್ಯಕ್ಷ ಅನುಭವ ಪಡೆದು ವಿಮರ್ಶೆಯಿಂದ ನಿರ್ಣಯಮಾಡಿ; ಅಹಿತಕಾರಿಯಾದವುಗಳ ನಿಷೇಧವನ್ನೂ, ಪೋಷಕ ಹಿತಕರವಾದವುಗಳ ಸಮಯೋಚಿತ ಯೋಜನೆ ಯನ್ನೂ, ವಿಧಿಸಿದ್ದಾರೆ. ನಿಷೇಧ ವಿಧಾನಗಳಲ್ಲಿಯ ಅಹಿತಕಾರಿ ಹಿತವನ್ನುಂ ಮಾಡುವ ವಿಭಾಗಗಳನ್ನು ಅವಲೋಕಿಸಿದರೆ ಸಾಮಾನ್ಯರಿಗೂ ಗರ್ಭಿಣೀ ಉಪಚಾರ ಕ್ರಮಗಳು ತಿಳಿಯುವಂತಿವೆ.

## ಶರೀರಾವಯವಗಳ ರಚನೆಯು

**ಸನ್ನಿವೇಶಃ ಶರೀರಾಣಾಂದಂತಾನಾಂ ಪತನೋದ್ಭವೌ ॥**
**ತಲೇಷ್ವಸಂಭವೋಯಶ್ಚ ರೋಮ್ಣಾಮೇತತ್ ಸ್ವಭಾವತಃ ॥**

(ಸುಶ್ರುತ॥ ಶಾರೀರ॥ ಅ ೨ ಶ್ಲೋ ೫೬)

ಶರೀರಾವಯವಗಳ ರಚನೆಯು (ಸಂನ್ನಿವೇಶಃ) ಕರಚರಣಾದಿಗಳ ಸಮೋಚಿತವಾದ ಹೊಂದಿಕೆ ವೊದಲಾದವುಗಳು ಸ್ವಾಭಾವಿಕವಾಗಿಯೇ ಜರಗುತ್ತವೆ. ಇದರಂತೆ ಹಲ್ಲುಗಳ ಬಿದ್ದುಹುಟ್ಟುವಿಕೆ (ಒಮ್ಮೆ ಬಂದ ಹಲ್ಲು ಬಿದ್ದು, ಪುನಃ ಹುಟ್ಟೋಣ), ಅಂಗೈಪಾದ ತಲಗಳಲ್ಲಿ ಕೂದಲುಬಾರದೇ

ಇರುವದು, ಸ್ವಾಭಾವಿಕವಾದದ್ದಾಗಿರುತ್ತದೆ. ಅರ್ಥಾತ್ ಇವುಗಳುಯಾವದೇ ಒಂದು ಕಾರಣದಿಂದ ಆಗಿಲ್ಲವಾದ್ದರಿಂದ ಸ್ವಾಭಾವಿಕ ಸ್ಥಿತಿಯೇ ಹೀಗೆಂದು ತಿಳಿಯಬೇಕು

**ದೃಷ್ಟಿಶ್ಚರೋಮಕೂಪಾಶ್ಚನವರ್ಧಂತೇಕದಾಚನ ॥ ಧ್ರುವಾಣ್ಯೇತಾನಿಮರ್ತ್ಯಾನಾಮಿತಿ ಧನ್ವಂತರೇರ್ಮತಂ ॥**

( ಸುಶ್ರುತ ॥ ಶಾರೀರ ॥ ಅ ೪ ಶ್ಲೋ ೬೦ )

ಕಣ್ಣಿನ ದೃಷ್ಟಿ ಮತ್ತು ರೋಮಕೂಪಗಳು ಎಂದೂ ವೃದ್ಧಿಹೊಂದುವ್ವದಿಲ್ಲ. ಮನುಷ್ಯರಿಗೆ ಇವುಗಳು ನಿಶ್ಚಲ (ನಿಶ್ಚಿತ) ವಾಗಿರುವದರಿಂದ ಅಭಿವೃದಿ ಹೊಂದುವದಿಲ್ಲೆಂದು ಧನ್ವಂತರಿಯ ಮತವು.

**ಶರೀರೇಕ್ಷೀಯಮಾಣೇsಪಿವರ್ಧೇತೇದ್ವಾವಿಮೌಸದಾ ॥ ಸ್ವಭಾವಂ ಪ್ರಕೃತಿಂ ಕೃತ್ವಾನಖ ಕೇಶಾವಿತಿಸ್ಥಿತಿಃ ॥**

( ಸುಶ್ರುತ ॥ ಶಾರೀರ ॥ ಅ. ೪ ಶ್ಲೋ. ೬೧ )

ಶರೀರವು ಕ್ಷೀಣವಾಗುತ್ತಿದ್ದರೂ ಉಗುರು(ನಖ)ಕೂದಲುಗಳೆರಡು ಸ್ವಾಭಾವಿಕವಾಗಿ (ಸ್ವಭಾವ ಪ್ರಕೃತಿಯಿಂದ) ಯಾವಾಗಲೂ ವೃದ್ಧಿಹೊಂದುತ್ತವೆ. ಅರ್ಥಾತ್ ಇವುಗಳ ಸ್ವಭಾವವು ವೃದ್ಧಿಹೊಂದುವ ಸ್ಥಿತಿಯುಳ್ಳದ್ದಿರುವದು.

(ಹಿಂದೆ ವಿವರಿಸಿದ ಸ್ವಭಾವ ಪ್ರಕೃತಿ ವಾದಿಗಳ ಮತವಾಗಿರುತ್ತದೆ)

**ಅಂಗಪ್ರತ್ಯಂಗನಿರ್ವೃತ್ತಿಃ ಸ್ವಭಾವಾದೇವಜಾಯತೆ ॥ ಅಂಗ ಪ್ರತ್ಯಂಗನಿರ್ವೃತ್ತೌಯೇಭವಂತಿಗುಣಾಗುಣಾಃ॥ತೇತೇಗರ್ಭಸ್ಯ ವಿಜ್ಞೇಯಾ ಧರ್ಮಾಧರ್ಮ ನಿಮಿತ್ತಜಾಃ॥**

( ಸುಶ್ರುತ ॥ ಶಾರೀರ ॥ ಅ. ೩ ಶ್ಲೋ. ೩೬ )

ಅಂಗಪ್ರತ್ಯಂಗಗಳ ಉತ್ಪತ್ತಿ ಪರಿಪೂರ್ಣತೆಯು ಸ್ವಾಭಾವಿಕವಾಗಿಯೇ ಆಗುತ್ತದೆ. ಉತ್ಪತ್ತಿ ಮತ್ತು ರಚನೆಯಲ್ಲಿಯ ಗುಣದೋಷಗಳು ಗರ್ಭವ ಧರ್ಮಾಧರ್ಮಗಳಿಂದುಂಟಾಗಿರುತ್ತವೆಂದು ತಿಳಿಯಬೇಕು. ಜನ್ಮಾಂತರದಲ್ಲಿ

ಮಾಡಿದ ಪಾಪ ಕರ್ಮ ಫಲವನ್ನು ಭೋಗಿಸಬೇಕಾದ್ದರಿಂದ, ಗರ್ಭವು ದುಃಖವನ್ನುಂಟು ಮಾಡುವ ವಿಕೃತಿ ಅಂಗಹೀನತೆ ಮೊದಲಾದವುಗಳನ್ನು ಹೊಂದುತ್ತದೆ ಜೀವದ ಕರ್ಮಜ ( ಸೂಕ್ಷ್ಮ ಶರೀರ ) ವಾದ ಮನಸ್ಸು ದುಷ್ಕರ್ಮಫಲವನ್ನನುಭೋಗಿಸಲು ಯೋಗ್ಯವಾದ ಶರೀರವನ್ನುಪಡೆಯುತ್ತದೆ.

ಶರೀರ ರಚನೆಯನ್ನುಕುರಿತು ಶರೀರೋತ್ಪತ್ತಿಯಲ್ಲಿಯ ವಿಶೇಷಗಳನ್ನು ಸ್ವಾಭಾವಿಕವೆಂದು ವಿವರಿಸಿದ್ದಾರೆ. ಇದರಂತೆ ದೇಹಕ್ಕೆ ಚೈತನ್ಯವನ್ನುಂಟು ಮಾಡುವ ಆತ್ಮನ ಗುಣವಾದ ಬುದ್ಧಿಯ ಭಾವನಾಧಿಕ್ಯದಿಂದುಂಟಾಗುವ ವಿಶೇಷಗಳನ್ನು ನಿರ್ದೇಶಿಸುತ್ತಾರೆ:—

## ಆತ್ಮನ ಭಾವನಾಧಿಕ್ಯವುಳ್ಳ ಬುದ್ಧಿ ವೈಶಿಷ್ಟ್ಯವು

ಭಾವಿತಾಃ ಪೂರ್ವದೇಹೇಷುಸತತಂ ಶಾಸ್ತ್ರಬುದ್ಧಯಃ ||
ಭವಂತಿಸತ್ವಭೂಯಿಷ್ಠಾಃ ಪೂರ್ವಜಾತಿಸ್ಮರಾನರಾಃ ||

(ಸುಶ್ರುತ|| ಶಾರೀರ|| ಅ ೨ ಶ್ಲೋ ೫೭)

ಹಿಂದಿನ ಜನ್ಮದಲ್ಲಿಯ ದೇಹಾವಸ್ಥೆಗಳಲ್ಲಿ, ಯಾವಾಗಲೂ ಶಾಸ್ತ್ರದಲ್ಲಿ ಭಾವನಾರೂಪದಿಂದ ಸ್ಥಿರವಾದ ವಿಚಾರವುಳ್ಳ ಬುದ್ಧಿಯುಕ್ತರಾದವರು; ಸಂಸ್ಕಾರ ಬಲದಿಂದ ಶಾಸ್ತ್ರ ಬುದ್ಧಿಯುಳ್ಳವರಾಗುತ್ತಾರೆ. ಹೀಗೆ ಸಂಸ್ಕಾರ ಯುಕ್ತಭಾವನಾ ವಿಶೇಷವುಳ್ಳವರು ಕಡಿಮೆ ತರಗತಿಯದಾಗಿರುವ ರಜಸ್ತಮೋಗುಣಗಳ ಅಭಾವದಿಂದ ಅಥವಾ ಅಲ್ಪತೆಯಿಂದ, ಕೇವಲ ಸತ್ವಗುಣವುಳ್ಳವರು ಇಲ್ಲವೇ ಸತ್ವಾಧಿಕ್ಯ (ಸತ್ವಗುಣ ಪ್ರಧಾನ) ವುಳ್ಳವರಾಗುತ್ತಾರೆ ಸಾತ್ವಿಕ ಬುದ್ಧಿ ವಿಶೇಷದಿಂದ ನಿರಾವರಣ ಜ್ಞಾನವಿರುತ್ತದೆ. ಇದರಿಂದ ಪೂರ್ವಜನ್ಮ ಸ್ಮೃತಿ (ನೆನಪು) ಉಳ್ಳವರಿರುತ್ತಾರೆ. ಅರ್ಥಾತ್ ಶಾಸ್ತ್ರಾದಿ ಸಚ್ಚರಿತ ಭಾವನಾವಿಶಿಷ್ಟ ಬುದ್ಧಿಯಿಂದ ಸತ್ವಗುಣಾಧಿಕ್ಯರಾಗಿ ನಿರಾವರಣ ಜ್ಞಾನದಿಂದ ಪೂರ್ವ ಜನ್ಮಗಳನ್ನು ತಿಳಿಯುತ್ತಾರೆ ಇದರ ವಿರುದ್ಧವಾದ ಭಾವನಾ ವಿಶಿಷ್ಟ ಸಂಸ್ಕಾರವುಳ್ಳ ಬುದ್ಧಿಯೂ ಸಹ ರಜಸ್ತಮಾವಿಷ್ಟವಾಗಿ, ದುಷ್ಕರ್ಮ ಮದಮಾನಾದಿಯುಕ್ತವಾಗುತ್ತದೆ. ಆವರಣ ರೂಪವಾದ್ದರಿಂದ

ಇಲ್ಲಿ ಸಾತ್ವಿಕಗುಣರಾಹಿತ್ಯದಿಂದ ಪೂರ್ವಜನ್ಮ ಸ್ಮರಣಾದಿಗಳಿರುವದಿಲ್ಲ. ಹೀಗೆ ಸ್ವಾಭಾವಿಕವಾಗಿರುವ ಆತ್ಮನ ಗುಣವಾದ ಬುದ್ಧಿ ವಿಶೇಷವನ್ನು ನಿರ್ದೇಶಿಸಿದ್ದಾರೆ.

## ಪ್ರಕೃತಿ ವಿಕಾರ ಪುರುಷರಲ್ಲಿಯ ವಿಶೇಷವು

ದೇಹದಲ್ಲಿಯ ರಚನಾ (ಸನ್ನಿವೇಶ) ವಿಶೇಷಗಳ ಸ್ವಾಭಾವಿಕತೆ, ಗರ್ಭೋತ್ಪತ್ತಿಯಲ್ಲಿಯ ದೋಷ ಪ್ರಕೋಪ ಆಹಾರಾಚಾರ ವಿಹಾರಗಳಿಂದ ಕುಬ್ಜಖಂಜತ್ವಾದಿಗಳು, ವಾಗಿಂದ್ರಿಯ ವಿಕೃತಿಯಿಂದ ಮೂಕ ಮಿನ್ಮಿಣಗದ್ಗದತ್ವಾದಿಗಳು, ಮನಸ್ಸು ಬುದ್ಧಿಗಳ ಸಾತ್ವಿಕ ಸಂಸ್ಕಾರ ಸ್ಥಿರತೆಯಿಂದ ಶಾಸ್ತ್ರಜ್ಞಾನ ಪೂರ್ವಜನ್ಮ ಸ್ಮರಣೆಯು, ಮೊದಲಾದ ಸರ್ವವೂ ಸ್ವಾಭಾವಿಕ ಸಿದ್ಧವಾದವುಗಳಾಗಿದ್ದರೂ ಕರ್ಮಗಳಿಂದಲೆ ಸಂಭವಿಸಿರುತ್ತವೆಂದು ಹೇಳುತ್ತಾರೆ ಅರ್ಥಾತ್ ಸ್ವಭಾವಾದಿ ಸರ್ವವೂ ಕರ್ಮದಿಂದಲೇ ಆ ಸ್ಥಿತಿಯನ್ನು ಪಡೆದಿರುವದರಿಂದ ಕರ್ಮವೇ ಪ್ರಧಾನವೆಂದು ನಿರ್ದೇಶಿಸುತ್ತಾರೆ.

**ಕರ್ಮಣಾಚೋದಿತೋಯೇನತದಾಪ್ನೋತಿಪುನರ್ಭವೇ॥ ಅಭ್ಯಸ್ತಾಃ ಪೂರ್ವದೇಹೆಯೇತಾನೇವಭಜತೇಗುಣಾನ್ ॥**

( ಸುಶ್ರುತ ॥ ಶಾರೀರ ॥ ಅ. ೨ ಶ್ಲೋ. ೫೮ )

ಜನ್ಮಾಂತರದಲ್ಲಿ ಯಾವ ಕರ್ಮದಿಂದ ಸಂಸ್ಕಾರಹೊಂದಿದವನು (ಚೋದಿತನು) ಆಗುತ್ತಾನೆಯೋ, ನಂತರವಾದ ಜನ್ಮದಲ್ಲಿ ಅದನ್ನೇ ಅನುಸರಿಸುತ್ತಾನೆ. ಕರ್ಮಯೋಗದಿಂದ ಯಾವದು ಪಡೆಯಲ್ಪಟ್ಟಿರುವದೋ, ಅಥವಾ ಯಾವದು ಅಭ್ಯಾಸ ಮಾಡಲ್ಪಟ್ಟಿರುವದೋ, ಆ ಗುಣಗಳನ್ನೇ ಹೊಂದುತ್ತಾನೆ. ಆದ್ದರಿಂದ ಸ್ವಭಾವಾದಿಗಳು ಸಹ ಕರ್ಮ ಸಹಾಯದಿಂದ ಅಭ್ಯಸ್ತವಾದ್ದರಿಂದ ಕರ್ಮವೇ ಮೂಲವೆಂದು ಅನ್ನುತ್ತಾರೆ ಒಮ್ಮೆ ಗುಣ, ಮನಸ್ಸು, ಬುದ್ಧಿ, ಸ್ವಭಾವ, ಕರ್ಮ ಮೊದಲಾವುಗಳನ್ನು ಪ್ರತಿಯೊಂದು ಮುಖ್ಯವಾದದ್ದೆಂದು ಹೇಳುತ್ತಾ ಹೋಗಿರುವದದರಿಂದ ವಾಚಕರಿಗೆ ಅನವಸ್ಥಿತವೆಂದೆನಿಸುವದು ಸ್ವಾಭಾವಿಕವಾಗಿದೆ

ಉದಾ:— ಒಂದು ಮನೆಯಲ್ಲಿ ಬೇರೆ ಬೇರೆ ವಿಭಾಗಗಳಲ್ಲಿಯ ಮಹತ್ವವನ್ನು ಹೇಳಿದಾಗ ಅಲ್ಲಲ್ಲಿಯ ಶ್ರೇಷ್ಠತೆಯನ್ನು ನಾವು ತಿಳಿಯುತ್ತೇವೆಯೋ ಅದರಂತೇ, ಸಾತ್ವಿಕಾದಿ ಗುಣವಿಶೇಷಗಳನ್ನು ಹೇಳಿದಾಗ ಶಾಸ್ತ್ರಬುದ್ಧಿ ಮೊದಲಾದವುಗಳ ಮಹತ್ವವನ್ನೂ, ರಜಸ್ತಮೋ ಗುಣಾಧಿಕ್ಯದಲ್ಲಿ ಮನೋದೋಷ ಪ್ರಾಬಲ್ಯದಿಂದ ಮನಸ್ಸಿನ ಹಿರಿಮೆಯನ್ನೂ, ಮೋಕ್ಷ ಪ್ರಾಪ್ತಿ ಮೊದಲಾದವುಗಳಲ್ಲಿ ಆತ್ಮಾಧಿಕರಣ ಬುದ್ಧಿಯ ಹೆಚ್ಚುವಿಕೆಯನ್ನೂ, ದೇಹ ರಚನೆ ಅಂಗಾಂಗಗಳ ಸಂನಿವೇಶಗಳಲ್ಲಿ ಸ್ವಭಾವ ಪ್ರಧಾನತೆಯನ್ನೂ, ಆಯಾವ ಸಂದರ್ಭಾನುಸಾರ ಮಹತ್ವವುಳ್ಳವುಗಳಾಗಿರುತ್ತವೆಂದು ತಿಳಿಯಬೇಕು. ಸಾಮಾನ್ಯತಃ ಇವೆಲ್ಲವುಗಳು ವಿಶೇಷವಾಗಿ ಪೂರ್ವ ಕರ್ಮಗಳಿಂದ ಅಭ್ಯಸ್ತವಾಗಿರುವದರಿಂದ ಕರ್ಮವೇ ಪ್ರಧಾನವೆಂದು ನಿರ್ಣಯಿಸಿರುವದು ಯೋಗ್ಯವೇ ಇರುತ್ತದೆ ಯಾಕಂದರೆ ತಮೋಽಧಿಕವುಳ್ಳವನು ಕ್ರೋಧಾದಿಗಳನ್ನು ತಡೆದು ಸ್ವಪ್ರಯತ್ನ ರೂಪವಾದ ಕರ್ಮಗಳಿಂದ ಸತ್ವಗುಣ ಪಡೆಯಬಹುದು. ಆದ್ದರಿಂದ ಕರ್ಮವೂ ಪ್ರಾಧಾನ್ಯವೆನ್ನುವದು ಸಮಂಜಸವಾಗಿರುತ್ತದೆ. ಬಹು ಸೂಕ್ಷ್ಮ ಜಟಿಲ ಸಮಸ್ಯೆಯಾದ್ದರಿಂದ ವಿರೋಧಾಭಾಸವೆನಿಸುವದೇ ಹೊರತು ವಸ್ತುತಃ ವಿರೋಧ ಬರುವದಿಲ್ಲ.

# ಪ್ರಸವಾವಸ್ಥೆಯಲ್ಲಿಯ ಬಂಧ ವಿಮೋಚನೆಯು

**ಕಾಲಸ್ಯಪರಿಣಾಮೇನಮುಕ್ತಂ ವೃಂತಾದ್ಯಥಾಫಲಂ ॥ ಪ್ರಪದ್ಯತೆ ಸ್ವಭಾವೇನನಾನ್ಯಥಾಪತಿತುಂ ಧ್ರುವಂ॥**

(ಸುಶ್ರುತ॥ ನಿದಾನ॥ ಅ ೮ ಶ್ಲೋ ೭)

ಯೋಗ್ಯ ಕಾಲದಿಂದ ಪಕ್ವಸ್ಥಿತಿಹೊಂದಿದ ಫಲವು ಹೇಗೆ ತೊಂಬಿನಿಂದ (ದೇಟಿನಿಂದ) ಬೇರೆಯಾಗಿ ಕೆಳಗೆ ಬೀಳುತ್ತದೆಯೋ? ಆದರಂತೆ ಯೋಗ್ಯ ರೀತಿಯಿಂದ ಕಾಲ ಪರಿಣಾಮವುಳ್ಳ ಗರ್ಭವು ಸ್ವಾಭಾವಿಕವಾಗಿ ಹೊರಬೀಳು

ತ್ತದೆ. ಹೀಗೆ ಆಗುವದು ಯೋಗ್ಯವಾದದ್ದೇ ಹೊರತು ಪತನವೆಂದು ಹೇಳಿಸಿಕೊಳ್ಳಲಾರದು ಯೋಗ್ಯವಾದ ಪ್ರಸವಕಾಲದ ಹೊರತಾಗಿ ಆಘಾತಾದಿಗಳಿಂದ ಜನನವಾದರೆ ಪತನವು.

**ಏವಂ ಕಾಲಪ್ರಕರ್ಷೇಣಮುಕ್ತೋನಾಡೀನಿ ಬಂಧನಾತ್ ॥**
**ಗರ್ಭಾಶಯೆಸ್ಥೋಯೋ ಗರ್ಭೋಜನನಾಯಪ್ರಪದ್ಯತೆ ॥೮॥**

ಹೀಗೆ ಯೋಗ್ಯಕಾಲದಲ್ಲಿ ಪರಿಣಾಮಹೊಂದಿದ ಗರ್ಭವು ನಾಡೀಬಂಧನದಿಂದ ಮುಕ್ತವಾಗಿ ಗರ್ಭಾಶಯದಲ್ಲಿ ಜನನಕ್ಕೋಸ್ಕರ ಸಿದ್ಧವಾಗುತ್ತದೆ.

## ಗರ್ಭಪತನದ ಕಾರಣಗಳು

**ಕೃಮಿವಾತಾಭಿಘಾತೈಸ್ತುತ ದೇವ್ರೋಪದ್ರುತಂ ಫಲಂ ॥ ಪತತ್ಯಕಾಲೇಽಪಿಯಥಾ ತಥಾಸ್ಯಾದ್ಗರ್ಭವಿಚ್ಯುತಿಃ ॥೯॥**

( ಸುಶ್ರುತ ॥ ನಿದಾನ ॥ ಅ. ೮ ಶ್ಲೋ ೯ )

ಕೃಮಿಗಳಿಂದ ಅಥವಾ ಗಾಳಿ ಪೆಟ್ಟು ತಾಗೋಣ ಮೊದಲಾದ ಆಘಾತಗಳಿಂದ, ಇಲ್ಲವೇ ತನ್ನಿಂದ ತಾನೇ ಕೆಟ್ಟಂಥ ಫಲವು ಚನ್ನಾಗಿ ಬೆಳೆದು ಪಕ್ವವಾಗದೆ ಅಕಾಲದಲ್ಲಿ ಪತನ ಹೊಂದುತ್ತದೆ. ಅದರಂತೇ ಗರ್ಭವೂ ಸಹ ಆಘಾತಾದಿಗಳಿಂದ ಪರಿಪೂರ್ಣವಾಗದೇನೇ ಪತನಹೊಂದುವದು ಇದಕ್ಕೆ ಗರ್ಭವಿಚ್ಯುತಿ ಅಥವಾ ಗರ್ಭಪಾತವೆಂದು ಹೆಸರು.

**ಆಚತುರ್ಥಾತ್ತತೋಮಾಸಾತ್ ಪ್ರಸ್ರವೇದ್ಗರ್ಭವಿದ್ರವಃ ॥**
**ತತಃ ಸ್ಥಿರಶರೀರಸ್ಯಪಾತಃ ಪಂಚಮಷಷ್ಠಯೋಃ ॥**

(ಸುಶ್ರುತ॥ ನಿದಾನ॥ ಅ ೮ ಶ್ಲೋ ೧೦)

ನಾಲ್ಕು ತಿಂಗಳು ಮುಗಿಯುವದರೊಳಗೆ ಯಾವದೇ ಮಾಸದಲ್ಲಾಗಲೀ,ಗರ್ಭಚ್ಯುತಿಯಾದರೆ ಅದಕ್ಕೆ ಗರ್ಭಸ್ರಾವವೆಂಬ ಹೆಸರು. ಯಾಕಂದರೆ ನಾಲನೇ ತಿಂಗಳಿನ ವರೆಗೆ ಗರ್ಭವು ಘನ (ಘಟ್ಟ) ಸ್ವರೂಪವನ್ನು ಹೊಂದಿ

ರುವದಿಲ್ಲ ದ್ರವ ರೂಪದಲ್ಲಿರುವದರಿಂದ ಸ್ರಾವವೆಂದು ಹೇಳುತ್ತಾರೆ. ನಂತರ ಐದನೇ ಆರನೇ ತಿಂಗಳಿನಲ್ಲಿ ಗರ್ಭವು ಸ್ಥಿರ (ಘಟ್ಟಿ) ಶರೀರವಿರುವ ದರಿಂದ ಪಾತವೆ-ದೂ ಹೆಸರು. ಹೀಗಿರುವದರಿಂದ ನಾಲ್ಕನೇ ತಿಂಗಳ ಪೂರ್ವದಲ್ಲಿ ದ್ರವರೂಪದಿಂದ ಸ್ರಾವವಾದ ಮೂಢಗರ್ಭವು ಬಾಧಿಸಲಾರದು.

### ಗರ್ಭಸ್ರಾವ ವಿಷಯದಲ್ಲಿ ಭೋಜಮತವು:—

ಆತೃತೀಯಾತ್ತತೋಮಾಸಾತ್ ಗರ್ಭಃ ಸ್ರವತಿಶೋಣಿತಂ ॥
ಊರ್ಧ್ವಂಸಂಯಾವಭೂತಸ್ತುಗರ್ಭೋಪತತಿಯೋಷಿತಾಂ॥

ಮೂರನೇ ತಿಂಗಳಿನ ಮೊದಲು ಸ್ರಾವವಾಗುವ ಗರ್ಭಕ್ಕೆ ದ್ರವ ರೂಪ ವಿರುವದರಿಂದ, ಶೋಣಿತ ಸ್ರಾವವೆಂದು ಹೇಳಬೇಕು ಅನಂತರ ನಾಲ್ಕನೇ ತಿಂಗಳ ಪರ್ಯಂತರದಲ್ಲಿ ಅತಿ ಮೃದುವಲ್ಲದೆಯೂ, ಕಠಿಣವಲ್ಲದೆಯೂ ಸಂಯಾವ (ಗುಡಪಿಷ್ಟಭಕ್ಷ್ಯ) ದಂತಿರುವ ಗರ್ಭವು ಬೀಳುತ್ತದೆ. ಸಾಮಾನ್ಯ ಮೃದುವಾಗಿರುವದರಿಂದ ಸ್ರಾವವೆಂದು ಗ್ರಹಿಸಿದ್ದಾರೆ. ಆಮೇಲೆ ಅಂಗಪ್ರತ್ಯಂಗಗಳು ಪ್ರವ್ಯಕ್ತವಾಗಿ ಘನ ಸ್ವರೂಪ ಹೊಂದಿರುವದರಿಂದ ಗರ್ಭಪತನವೆಂದು ಹೇಳುತ್ತಾರೆ. ಮೂಢ ಗರ್ಭವಿದ್ದರೆ ಪತನವು ಕಷ್ಟ ತರವಾಗುವದು

### ಕಾಶ್ಯಪಸಂಹಿತೆಯಲ್ಲಿಯ ಮತವು:—

ಆಚತುರ್ಥಾತ್ತತೋಮಾಸಾತ್ ಪ್ರಸ್ರುತಂಶೋಣಿತಂಮತಂ ॥
ತತಃ ಸ್ಥಿರಶರೀರಸ್ತುಮೂಢಃ ಪತಿತಕೃಚ್ಛ್ರತಃ ॥

ನಾಲ್ಕನೇ ತಿಂಗಳ ಮೊದಲು ಸ್ರಾವವಾಗುವದಕ್ಕೆ ಶೋಣಿತವೆಂದು ಅಭಿಪ್ರಾಯವು. ನಂತರ ಗರ್ಭ ಶರೀರವು ಸ್ಥಿರ (ಘಟ್ಟಿ) ವಾಗುವದರಿಂದ ಮೂಢ ಗರ್ಭವು ಕಷ್ಟದಿಂದ ಪತನವಾಗುತ್ತದೆ

**ಸ್ವಾಭಾವಿಕ ಪ್ರಸವಾರಂಭ ಲಕ್ಷಣವು:—**

**ಜಾತೇಹಿಶಿಥಿಲೇಕುಕ್ಷೌಮುಕ್ತೇಹೃದಯಬಂಧನೇ ||**
**ಸಶೂಲೇಜಘನೇನಾರೀಜ್ಞೇಯಾಸಾತುಪ್ರಜಾಯಿನೀ ||**

(ಸುಶ್ರುತ|| ಶಾ|| ಅ ೧೦ ಶ್ಲೋ ೬)

ಹೊಟ್ಟೆಯು ಜೋಲು ಬೀಳುವಂತೇ ಆಗುತ್ತಿರಲು (ಶಿಥಿಲ) ಹೃದಯ ಸ್ಥಾನದಲ್ಲಿ ಗಭಾ೯ಶಯಕ್ಕೆ ಅಂಟಿಕೊಂಡ ಧಮನಿಗಳ ಬಂಧನವು ಸಡಿಲಾದ ನಂತರ, ಕಟಿ ಪ್ರದೇಶವಲ್ಲಿ ಶೂಲೆ ಉತ್ಪನ್ನವಾಗಲು ಗಭಿ೯ಣಿಯು ಪ್ರಸವಿಸುತ್ತಾಳೆಂದು ತಿಳಿಯಬೇಕು

**ತತ್ರೋಪಸ್ಥಿತಪ್ರಸವಾಯಾಃ ಕಟೀಪೃಷ್ಠಂ ಪ್ರತಿಸಮಂತಾದ್ವೇದನಾಭವತ್ಯಭೀಕ್ಷ್ಣಂ ಪುರೀಷಪ್ರವೃತ್ತಿಮೂ೯ತ್ರಂಪ್ರಸಿಚ್ಯತೇ ಯೋನಿಮುಖಾತ್ ಶ್ಲೇಷ್ಮಾಚ ||**

(ಸುಶ್ರುತ| ಶಾರೀರ| ಅ ೧೦ ಸೂ ೭)

ಪ್ರಸವ ಸಮೀಪಿಸಿದ ಸ್ತ್ರೀಯಳಿಗೆ ಟೊಂಕ ಬೆನ್ನಿನಲ್ಲಿ ಎಲ್ಲಾ ಕಡೆ ವೇದನೆಯಾಗುತ್ತದೆ. ತೀವ್ರವಾದ ಮಲ ಪ್ರವೃತ್ತಿಯೂ ಮೂತ್ರ ಪ್ರವರ್ತನೆಯೂ ಜನನೇಂದ್ರಿಯದಿಂದ ಶ್ಲೇಷ್ಮ (ಜಿಗುಟಾದ ಲೋಳೆಯಂಥಪದಾರ್ಥ) ಹೊರಬೀಳೋಣವೂ ಮೊದಲಾದವುಗಳು ಸಂಭವಿಸುತ್ತವೆ.

## ಮೂಢಗಭ೯ವು ತಡೆದುನಿಲ್ಲುವ ಸ್ಥಿತಿ

**ಫಲಮಿವವೃಂತಬಂಧನಾದಭಿಘಾತವಿಶೇಷೈಃ; ಸವಿಮುಕ್ತಬಂಧನೋ ಗಭಾ೯ಶಯಮತಿಕ್ರಮ್ಯ ಯಕೃತ್ ಪ್ಲೀಹಾಂತ್ರವಿವರೈರವಸ್ರಂಸಮಾನಃ ಕೋಷ್ಠಸಂಕ್ಷೋಭಮಾಪಾದಯತಿ||**

( ಸುಶ್ರುತ |. ನಿ. ಅ. ೮ ಸೂ ೧೩ )

ಪೆಟ್ಟು ತಾಗಿದ ಫಲವು ಹೇಗೆ ತುಂಬಿನಿಂದ ಬೇರ್ಪಡುತ್ತದೆಯೋ, ಅದರಂತೆ ಆಘಾತಾದಿಗಳಿಂದ ಗರ್ಭವು ಸ್ಥಾನಚ್ಯುತಿಯನ್ನುಹೊಂದುತ್ತದೆ. ಚ್ಯುತಿಯನ್ನುಹೊಂದಿದನಂತರ ಹೊರಗೆ ಬರದೆ ಗರ್ಭಾಶಯ ದ್ವಾರದಲ್ಲಿಯೇ ತಡೆಯಲ್ಪಡುತ್ತದೆ. ಗರ್ಭಾಶಯದಿಂದ ವಿಸ್ರಂಸನವಾಗಿ ಹೊರಗೆ ಬರುವ ದ್ವಾರದಲ್ಲಿ ಅಡ್ಡಿಯಾಗುತ್ತದೆ ಅಥವಾ ದ್ವಾರದಲ್ಲಿ ವಿಕೃತ ಕ್ರಮದಿಂದ ಗರ್ಭವು ಹೊರಗೆ ಕೈ ಮೊದಲಾದ ರೀತಿಯಿಂದ ಬಂದು ಸಿಕ್ಕಿಕೊಳ್ಳುತ್ತದೆ. ಗರ್ಭವು ಮೊದಲು ಬಂಧನಾದಿಗಳಿಂದ ವಿಮುಕ್ತವಾಗುತ್ತದೆ ಬಂಧನವೆಂದರೆ ಗರ್ಭಾಶಯಕ್ಕೆ ಪ್ರತಿಬದ್ಧವಾಗಿ ಅಂಟಿಕೊಂಡ ಧಮನೀ ಪೇಶಿಗಳು. ಗರ್ಭಾಶಯಕ್ಕೆ ಸುತ್ತಿಕೊಂಡ ಬಳ್ಳಿಯಂತಿರುವ ಧಮನ್ಯಾದಿಗಳು ಸಡಿಲಾಗಿಬಿಟ್ಟ ಕೂಡಲೇ, ಗರ್ಭವು ಗರ್ಭಾಶಯದಿಂದ ಹೊರಗೆಬರುವ ದ್ವಾರಕ್ಕೆ ಬರುತ್ತದೆ. ಪೂರ್ಣ ಹೊರಗೆ ಬರಲು ಸಾಧ್ಯವಿಲ್ಲದೆ ದ್ವಾರದಲ್ಲಿ ಸಿಕ್ಕಿಕೊಳ್ಳುತ್ತದೆ. ಧಮನ್ಯಾದಿಗಳ ಹಿಡಿತ (ಬಂಧನ) ತಪ್ಪಿದ ಕೂಡಲೇ ಕರುಳಿನ ಮಧ್ಯ ಪೊಳ್ಳು ಭಾಗದಲ್ಲಿರುವ ಗರ್ಭಾಶಯವನ್ನು ಒತ್ತುತ್ತವೆ ಆದ್ದರಿಂದ ಗರ್ಭವು ಗರ್ಭಾಶಯದಿಂದ ಸರಿಯುತ್ತದೆ ಹೀಗೆ ವಿರುದ್ಧ ಕ್ರಮದಿಂದ ಪೂರ್ಣ ಹೊರಗೆ ಬರದೇ ಇರುವದರಿಂದ ಕೋಷ್ಠವು ಪ್ರಕ್ಷುಬ್ಧವಾಗುತ್ತದೆ.

ಉದಾ:— ನೀರಿನಲ್ಲಿಳಿದ ಮನುಷ್ಯನು ಹೊರಗೆ ಬರದೆ ಅಲ್ಲಿಯೇ ಅತ್ತಿಂದಿತ್ತ ಚಲಿಸುತ್ತಿದ್ದರೆ, ತೆರೆಗಳೆದ್ದು ಜಲಾಶಯವು ಹೇಗೆ ಪ್ರಕ್ಷೋಭ ಹೊಂದುವದೋ ಅದರಂತೇಯೆಂದು ತಿಳಿಯಬೇಕು.

### ಕೋಷ್ಠ ಲಕ್ಷಣವು:—

**ಸ್ಥಾನಾನ್ಯಾಮಾಗ್ನಿ ಪಕ್ವಾನಾಂ ಮೂತ್ರಸ್ಯರುಧಿರಸ್ಯ ಚ ||**
**ಹೃದುಂಡುಕಂ ಫುಪ್ಫುಸಶ್ಚ ಕೋಷ್ಠ ಇತ್ಯಭಿಧೀಯತೆ ||**

ಆಮಾಶಯ, ಅಗ್ನ್ಯಾಶಯ, ಪಕ್ವಾಶಯ, ಮೂತ್ರಾಶಯ ಇವುಗಳ ಸ್ಥಾನಗಳೂ ಹೃದಯ, ಉಂಡುಕ, ಫುಪ್ಫುಸ ಮೊದಲಾದವುಗಳು. ಇವೆಲ್ಲವುಗಳ ಸ್ಥಾನಕ್ಕೆ "ಕೋಷ್ಠ" ವೆಂಬ ಹೆಸರು. ಸ್ತ್ರೀಯರಿಗೆ ಕೋಷ್ಠ ಮಧ್ಯದಲ್ಲಿ ಗರ್ಭಾಶಯವಿರುತ್ತದೆ.

### ಕೋಷ್ಠ ಸಂಕ್ಷೋಭದಿಂದ ಗರ್ಭ ನಾಶವು.—

**ತಸ್ಯಾ ಜಠರಸಂಕ್ಷೋಭಾದ್ವಾಯುರಪಾನೋಮೂಢಃ ಪಾರ್ಶ್ವ ಬಸ್ತಿಶೀರ್ಷೋದರಯೋನಿಶೂಲಾನಾಹಮೂತ್ರಸಂಗಾನಾಮ ನ್ಯತಮಮಾಪಾದ್ಯಗರ್ಭಂಚ್ಯಾವಯತಿ ( ವ್ಯಾಪಾದಯತಿ ) ತರುಣಂಶೋಣಿತಸ್ರಾವೇಣ,ತಮೇವಕದಾಚಿದ್ವಿವೃದ್ಧಮಸಮ್ಯ ಗಾಗತಮಪತ್ಯಪಥಮನುಪ್ರಾಪ್ತಮನಿರಸ್ಯಮಾನಂ ವಿಗುಣಾ ಪಾನಸಂಮೋಹಿತಂ ಗರ್ಭಂ ಮೂಢಗರ್ಭಮಿತ್ಯಾಚಕ್ಷತೆ ॥**

(ಸುಶ್ರುತ॥ ನಿದಾನ॥ ಅ ೮ ಸೂ ೩)

ಗರ್ಭಿಣಿಯ ಜಠರ (ಹೊಟ್ಟೆ) ಕ್ಷೋಭದಿಂದ ಅಪಾನವಾಯುವು ಗತಿನಿ ರುದ್ಧವಾಗಿ ಬಸ್ತಿಯ ಆದಿಭಾಗ ಹೊಟ್ಟೆ ಜನನೇಂದ್ರಿಯ ಶೂಲೆ ವಾಯು ನಿರೋಧ, (ಆನಾಹ) ಮೂತ್ರ ನಿರೋಧ ಇವುಗಳನ್ನುಂಟು ಮಾಡುತ್ತದೆ ಪ್ರಬಲವಾಗಿ ಇವುಗಳಲ್ಲಿ ಒಂದು, ಎರಡು ಅಥವಾ ಎಲ್ಲವುಗಳೂ ಸಂಭವಿಸ ಬಹುದು. ಇದರಿಂದ ಗರ್ಭವು ನಾಶಹೊಂದುವದು ಗರ್ಭವು ಪೂರ್ಣ ಸ್ಥಿತಿ ಯಲ್ಲಿರದಿದ್ದರೆ, ಕಷ್ಟವಿಲ್ಲದೆ ಸ್ರಾವವಾಗಿ ಹೋಗುತ್ತದೆ ಒಂದು ವೇಳೆ ಗರ್ಭವು ಅಂಗಾಂಗಗಳಿಂದ ವೃದ್ಧಿ ಹೊಂದಿದ್ದರೆ ಹೊರಗೆ ಬರುವದಿಲ್ಲ. ಯೋಗ್ಯವಾಗಿ ಬರದೆ ವಕ್ರವಾಗಿ ಬರುವದರಿಂದ ಯೋನಿ ದ್ವಾರಕ್ಕೆ ಬಂದು ಹೊರಗೆಬೀಳದೇ, ಅಪಾನವಾಯುವಿನ ವಿಗುಣ (ಪ್ರಕೋಪ) ತೆಯಿಂದ ತಡೆ ಯುವದರಿಂದ ಮೂಢ ಗರ್ಭವೆಂದು ಹೇಳುತ್ತಾರೆ.

## ಮೂಢಗರ್ಭದ ಪ್ರಕಾರಗಳು

**ತತಃಸಂಕೀಲಃ ಪ್ರತಿಖುರೋಬೀಜಕಃ ಪರಿಘಇತಿ।ತತ್ರಊರ್ಧ್ವ ಬಾಹುಶಿರಃ ಪಾದೋಯೋ ಯೋನಿಮುಖಂ ನಿರುಣದ್ಧಿ ಕೀಲ ಇವಸಂಕೀಲಃ, ನಿಃಸೃತಹಸ್ತಪಾದಶಿರಾಃ ಕಾಯಸಂಗೀಪ್ರತಿ ಖುರಃ, ಯೋನಿರ್ಗಚ್ಛತ್ಯೇಕಶಿರೋಭುಜಃ ಸಬೀಜಕಃ, ಯಸ್ತು**

**ಪರಿಘ ಇವಯೋನಿಮುಖವಮಾವೃತ್ಯತಿಷ್ಠತಿಸಪರಿಘಃ, ಇತಿಚ ತುರ್ವಿಧೋಭವತೀತ್ಯೇಕೇಭಾಷಂತೇ॥ ತತ್ತ್ವನಸಮ್ಯಕ್, ಕಸ್ಮಾತ್? ಸಯುದಾವಿಗುಣಾನಿಲಪ್ರಪೀಡಿತೋಽಪತ್ಯಪಥಮನೇಕಧಾಪ್ರಪದ್ಯತಿ ತದಾಸಂಖ್ಯಾಹೀಯತೆ॥** (ಸು। ನಿ। ಅ ೮ ಸೂ ೪)

ಗರ್ಭಾಶಯು ದ್ವಾರದಲ್ಲಿ ಸಿಕ್ಕಿಕೊಂಡು ಹೊರಗೆ ಬರದೆ ಕಷ್ಟದಾಯಕವಾದ ಮೂಢ ಗರ್ಭವು ನಾಲ್ಕು ಪ್ರಕಾರದ್ದಾಗಿರುತ್ತವೆ. **ಸಂಕೀಲ, ಪ್ರತಿಖುರ, ಬೀಜಕ, ಪರಿಘ** ಎಂಬ ಹೆಸರುಳ್ಳವುಗಳು.

**೧. ಸಂಕೀಲ:—** ಯಾವ ಮೂಢ ಗರ್ಭದಲ್ಲಿ ಶಿಶುವಿನ ಎರಡೂ ಕಾಲು ಕೈಗಳು ತಲೆಗೆ ಹೊಂದಿಕೊಂಡು, ಊರ್ಧ್ವ (ಮೇಲಕ್ಕೆ) ವಾಗಿರುವದೋ ಅದು ಸಂಕೀಲವು. ಕೀಲದಂತೆ (ಬೆಣೆ) ಗರ್ಭ ನಿರ್ಗಮನ ದ್ವಾರವನ್ನು ಬಂದು ಮಾಡುವದರಿಂದ ಅದಕ್ಕೆ ಸಂಕೀಲವೆಂಬ ಹೆಸರು.

**ಸಂಕೀಲದಲ್ಲಿ:—** ಶಿಶುವಿನ ತಲೆಯು ಗರ್ಭಾಶಯುದ ಮೇಲ್ಭಾಗದಲ್ಲಿದ್ದು, ಅದಕ್ಕೆ ಎರಡು ಕಾಲು ಕೈಯ್ಗಳು ತಾಗಿಕೊಂಡಿರುತ್ತವೆ ಹೀಗಿರುವದರಿಂದ ಗರ್ಭಾಶಯುದ ದ್ವಾರದಲ್ಲಿ ಶಿಶುವಿನ ಮುಕುಳಿ (ಸ್ಫಿಚ) ಸಿಕ್ಕಿಕೊಳ್ಳುತ್ತದೆ. ತಿಕವು (ಸ್ಫಿಚ) ಹೊರಗೆ ಬರುವಷ್ಟು ಗರ್ಭಾಶಯುದ ದ್ವಾರವು ವಿಸ್ತಾರವಾಗುವದಿಲ್ಲ. ಆದ್ದರಿಂದ ಬೆಣೆಯಂತೆ ಸ್ಥಿರವಾಗುತ್ತದೆ. ಹೀಗಿರುವದರಿಂದ ಸಂಕೀಲವು ಯೋನಿ ದ್ವಾರದ ಮುಖವನ್ನು ಬಂದು ಮಾಡುತ್ತದೆ.

**೨. ಪ್ರತಿಖುರ:—** ಕೈಕಾಲು ತಲೆಗಳು ಕೂಡಿದ ಗುಂಪು, ಯೋನಿ ದ್ವಾರದಲ್ಲಿ ಸಿಕ್ಕಿಕೊಳ್ಳುವದು; ಪ್ರತಿಖುರವೆಂಬ ಹೆಸರಿನ ಮೂಢ ಗರ್ಭವು. ದೇಹದ ಮೇಲ್ಭಾಗ ದೊಡ್ಡದಿರುವದರಿಂದ ಹೊರಗೆ ಬರುವದಿಲ್ಲ.

**ಪ್ರತಿಖುರದಲ್ಲಿ:—** ಕೈಕಾಲುಗಳು ತಲೆಗೆ ಹತ್ತಿಕೊಂಡು, ಕೆಳಮುಖವಾಗಿ ಗರ್ಭ ದ್ವಾರದಲ್ಲಿ ಬರುತ್ತದೆ ಒಬ್ಬ ಮನುಷ್ಯನು ನಿಂತುಕೊಂಡು ಮುಂದೆ ಬಗ್ಗಿ ಭೂಮಿಗೆ ತನ್ನ ಎರಡೂ ಕೈಗಳನ್ನು ಹಚ್ಚಿ ನಿಂತರೆ, ಕೆಳಭಾಗವು ಸಣ್ಣದಿದ್ದು ಮೇಲ್ಭಾಗವು ವಿಸ್ತಾರ (ದೊಡ್ಡ) ದ್ದಾಗಿರುವದು ಸ್ಪಷ್ಟ

ವಾಗುತ್ತದೆ. ಅಥವಾ "ಖುರ"ವೆಂದರೆ ದನವಿನ ಕಾಲಿನ ಕೊಳಗ. ಅದು ಭೂಮಿಯಲ್ಲಿಡುವಭಾಗವು ದೊಡ್ಡದಾಗಿಯೂ ಮೇಲ್ಭಾಗವು ಸಣ್ಣದಾಗಿಯೂ ಇರುತ್ತದೆ. "ಪ್ರತಿಖುರ" ವೆಂದರೆ ಈ ಖುರ (ಗೊರಸು)ದ ಮೇಲ್ಭಾಗವನ್ನು ಕೆಳಗೆ (ವಿರುದ್ಧ) ಮಾಡಿ ಇಡುವದು. ಹೀಗಿಟ್ಟರೆ ಭೂಮಿಯಲ್ಲಿಯ ಭಾಗವು ಸಣ್ಣದಾಗಿಯೂ ಮೇಲ್ಭಾಗವು ದೊಡ್ಡದಾಗಿಯೂ ಆಗುತ್ತದೆ. ಇದರಂತೆಯೇ ಪ್ರತಿಖುರ ಮೂಢಗರ್ಭವು ಇರುತ್ತದೆ

**೩. ಬೀಜಕ:—** ಯಾವ ಗರ್ಭವು, ಒಂದು ಕಾಲು ತಲೆ, ಅಥವಾ ಒಂದು ಕೈ ತಲೆ, ಕೂಡಿಕೊಂಡು ಹೊರಗೆ ಬರುತ್ತದೆಯೋ ಅದಕ್ಕೆ ಬೀಜಕ ಮೂಢ ಗರ್ಭವೆಂಬ ಹೆಸರು. "ಏಕಶಿರೋಭುಜಃ" ಎಂದು ನಿರ್ದೇಶಿಸಿರುವದರಿಂದ, ಒಂದು ಕೈ, ಅಥವಾ ಒಂದು ಕಾಲು, ಬಂದರೂ ಸಹ ಕಷ್ಟತರವೆಂದು ತಿಳಿಯಬೇಕು. ಈ ಒಂದೊಂದು ಅವಯುವಗಳಿಂದ, ಯುಕ್ತವಾದ ಶಿರ (ತಲೆ) ವೆಂದು ತಿಳಿಸಲು ಶಿರ ಶಬ್ದದ ಗ್ರಹಣ ಮಾಡಿದ್ದಾರೆ. ಕೇವಲ ತಲೆಯು ಒಂದೇ ಬರುವದು ಸ್ವಾಭಾವಿಕ ಪ್ರಸವವೆಂದು ಹಿಂದೆ ವಿವರಿಸಲ್ಪಟ್ಟದೆ.

**ಬೀಜಕದಲ್ಲಿ:—** ಒಂದು ಕೈ ತಲೆ ಹೊರಗೆ ಬಂದರೆ, ಮತ್ತೊಂದು ತೋಳಿನಿಂದ ಅಡ್ಡಿಯಾಗುತ್ತದೆ. ಒಂದು ಕಾಲು ತಲೆ ಹೊರಗೆ ಬಂದರೆ, ಮತ್ತೊಂದು ಕಾಲಿನಿಂದ ತಡೆಯಲ್ಪಡುವದು. ಕೇವಲ ಒಂದು ಕೈ ಹೊರಗೆ ಬಂದರೆ, ಗರ್ಭವು (ಶಿಶು) ಅಡ್ಡವಿರುವದೆಂದು ತಿಳಿಯಬೇಕು. ಒಂದು ಕಾಲು ಮಾತ್ರ ಬಂದರೂ ಅಡ್ಡವಾಗಿರುವದೆಂದು ತಿಳಿಯಬೇಕು.

**೪. ಪರಿಘ:—** ಯಾವ ಮೂಢ ಗರ್ಭವು ಪರಿಘದಂತೆ (ಅಗಳಿ) ಗರ್ಭಾಗಮನ ದ್ವಾರವನ್ನು ಬಂದು ಮಾಡಿರುತ್ತದೆಯೋ, ಅದು ಪರಿಘವೆಂಬ ಮೂಢ ಗರ್ಭವು. **"ಪರಿಘೋऽರ್ಗಲದಂಡಃ"**

**ನಾಗಾರ್ಜುನೀಯಮತದಲ್ಲಿ, ಪರಿಘವು:—**

**ಯೋನಿಮಾವೃತ್ಯಯಸ್ತಿಷ್ಠೇತ್ ಪರಿಘೋಗೋಪುರಂಯಥಾ||**

ಯೋನಿ ದ್ವಾರವನ್ನು ಆವರಿಸಿ ಯಾವ ಗರ್ಭವು ಗೋಪುರದಂತೆ ಇರುತ್ತದೆಯೋ, ಅದಕ್ಕೆ ಪರಿಘವೆಂಬ ಹೆಸರು. ಗರ್ಭ ದ್ವಾರಕ್ಕಿಂತಲೂ ದೊಡ್ಡದಾಗಿ ಹೊರಗೆ ಬರದೆ ಗೋಪುರದಂತೇ ಇರುತ್ತದೆ ಹಿಂದೆ ಹೇಳಿದ ಲಕ್ಷಣವು (ಅರ್ಗಲದಂಡ) ಎನ್ನುವದರಿಂದ ಅಗಳಿಯಂತೆ ಅಡ್ಡವಾಗಿ ಗರ್ಭ ದ್ವಾರವನ್ನು ತಡೆಯುವದೆಂದು ತಿಳಿಯಬೇಕು.

ಗೋಪುರದಂತೆ ಎಂದು ತಿಳಿದಾಗ ಗೋಪುರದಂತೆ ವಿಸ್ತಾರ (ದೊಡ್ಡ) ವಿದ್ದು, ಗರ್ಭ ನಿರ್ಗಮ ದ್ವಾರದಲ್ಲಿ ಬರದೇ ಇರುವದೆಂದು ತಿಳಿಯಬೇಕು. ಹೀಗೆ ಎರಡೂ ಲಕ್ಷಣಗಳನ್ನು ಸಮನ್ವಯಿಸಿ ನೋಡಬೇಕು ಈ ರೀತಿಯಾಗಿ ಗರ್ಭದ ಗತಿ ವೈಚಿತ್ರ್ಯಗಳಿಂದ ನಾಲ್ಕು ವಿಧವಾದ ಮೂಢ ಗರ್ಭವೆಂದು ಕೆಲವರು ಹೇಳುತ್ತಾರೆ.

## ಮೂಢಗರ್ಭದಲ್ಲಿಯ ವಿಶೇಷವು

ಮೂಢ ಗರ್ಭವು ನಾಲ್ಕು ವಿಧವಾಗಿರುವದೆಂದು ಕೆಲವರು ಅನ್ನುತ್ತಾರೆ. ಅದು ಸಮಂಜಸವಾದದ್ದಲ್ಲ. ಯಾಕಂದರೆ ಮೂಢ ಗರ್ಭವೆಂದರೆ ವಿಚಿತ್ರ ವಿಕೃತಗತಿಯುಳ್ಳ ಗರ್ಭವು. ಗತಿ ವಿಶೇಷ ದೋಷ ಪ್ರಕೋಪ ಇವುಗಳಿಂದ ಗರ್ಭ ಗತಿಯು ವಿರುದ್ಧವಾಗುವದು. ಗರ್ಭ ನಿರ್ಗಮನ ಗತಿಯ ಲಕ್ಷಣದಿಂದಲೇ ಆಯಾವ ಮೂಢ ಗರ್ಭವನ್ನು ಹೇಳಿರುವದರಿಂದ, ಗರ್ಭ ಗತಿಯ ವಿಲಕ್ಷಣವೇ ಮೂಢ ಗರ್ಭವು. ಮೂಢ ಗರ್ಭವೆಂಬ ನಾಲ್ಕು ವಿಧವಾದ ಗರ್ಭವು, ಉತ್ಪನ್ನವಾಗುವದೆಂದು ಯಾರೂ ತಿಳಿಯಬಾರದು. ಮೂಢ ಗರ್ಭವಾದರೂ, ತೀವ್ರಪ್ರಕೋಪ ಹೊಂದಿದ ವಾಯುವಿನಿಂದ ಪೀಡಿತವಾಗಿ, ಅನೇಕಸಲ ಮೇಲೆ, ಅಡ್ಡ, ವಿಲಕ್ಷಣವಾಗಿ ಚಲಿಸುತ್ತ ಎಷ್ಟೋ ಸಲ ಗರ್ಭ ದ್ವಾರಕ್ಕೆ ಬಂದು ಹೋಗಿ, ಮಾಡುತ್ತದೆ. ಹೀಗಿರುವದರಿಂದ, ಒಮ್ಮೆ "**ಸಂಕೀಲ**" ಸ್ಥಿತಿಯಲ್ಲಿದ್ದ ಮೂಢ ಗರ್ಭವು ಚಲಿಸಿ, ಗತಿ ವೈಶಿಷ್ಟ್ಯದಿಂದ "**ಪ್ರತಿಖುರ**" ಲಕ್ಷಣವುಳ್ಳದ್ದಾಗಬಹುದು. ಆದ್ದರಿಂದ ಮೂಢ ಗರ್ಭ ಸಂಖ್ಯೆಯು ನಿಶ್ಚಿತವಲ್ಲವೆಂದು ಸುಶ್ರುತಾಚಾರ್ಯರ ಮತವು. ಮೂಢ ಗರ್ಭದಲ್ಲಿ ಗತಿ ವೈಶಿಷ್ಟ್ಯವೇ ಪ್ರಾಧಾನ್ಯವು.

# ಎಂಟುವಿಧವಾದಮೂಢಗರ್ಭಗತಿಯು

**ತತ್ರಕಶ್ಚಿತ್ ದ್ವಾಭ್ಯಾಂಸಕ್ಥಿಭ್ಯಾಂ ಯೋನಿಮುಖಂ ಪ್ರತಿಪದ್ಯತೆ; ಕಶ್ಚಿದಾಭುಗ್ನೈಕಸಕ್ಥಿರೇಕೇನ; ಕಶ್ಚಿದಾಭುಗ್ನಸಕ್ಥಿ ಶರೀರಃಸ್ಫಿಗ್ದೇಶೇನತಿರ್ಯಗಾಗತಃ; ಕಶ್ಚಿದುರಃ ಪಾರ್ಶ್ವಪೃಷ್ಠಾನಾಮನ್ಯತಮೇನಯೋನಿದ್ವಾರಂ ಪಿಧಾಯಾವತಿಷ್ಠತೆ; ಅಂತಃ ಪಾರ್ಶ್ವಾಪವೃತ್ತಶಿರಾಃ ಕಶ್ಚಿದೇಕೇನಬಾಹುನಾ; ಕಶ್ಚಿದಾಭುಗ್ನಶಿರಾ ಬಾಹುದ್ವಯೇನ; ಕಶ್ಚಿದಾಭುಗ್ನಮಧ್ಯೋಹಸ್ತಪಾದಶಿರೋಭಿಃ; ಕಶ್ಚಿದೇಕೇನಸಕ್ಥ್ನಾಯೋನಿಮುಖಂ ಪ್ರತಿಪದ್ಯತೇಽಪರೇಣಪಾಯುಮರ್; ಇತ್ಯಷ್ಟವಿಧಾ ಮೂಢಗರ್ಭಗತಿರುದ್ದಿಷ್ಟಾಸಮಾಸೇನ ||** (ಸುಶ್ರುತ|| ನಿದಾನ|| ಅ ೮ ಸೂ ೫)

೧ **ಪ್ರಥಮಗತಿ:—** ಎರಡು ತೊಡೆಗಳು ಕೂಡಿಕೊಂಡು, ಯೋನಿ ದ್ವಾರದ ಮುಖದಲ್ಲಿ ಬರುವದು.

೨ **ದ್ವಿತೀಯಗತಿ:—** ಒಂದು ತೊಡೆಯು ವಕ್ರವಾಗಿ (ಅಡ್ಡವಾಗಿ) ನಿಂತು ಮತ್ತೊಂದು ತೊಡೆಯು ದ್ವಾರದಲ್ಲಿ ಬರುವದು.

೩ **ತೃತೀಯಗತಿ:—** ತೊಡೆಗಳು ಶರೀರವು ಅಡ್ಡವಾಗಿ, ಒಂದು ಪಕ್ಕದ ತಿಕ (ಪೃಷ್ಠ) ದಿಂದ ಯೋನಿ ಮುಖವು ತಡೆಯಲ್ಪಡುತ್ತದೆ.

೪ **ಚತುರ್ಥಗತಿ:—**ಒಮ್ಮೆ ಎದೆ ಪಕ್ಕ (ಎಡಪಾರ್ಶ್ವ-ಬಲಪಾರ್ಶ್ವ) ಬೆನ್ನು ಇವುಗಳಲ್ಲಿ ಯಾವದಾದರೊಂದರಿಂದ,ಯೋನಿ ಮಾರ್ಗವನ್ನು ಬಂದು ಮಾಡಿ ತಡೆದು ನಿಲ್ಲುತ್ತದೆ.

೫ **ಪಂಚಮಗತಿ:—** ತಲೆಯನ್ನು ಒಂದು ಪಕ್ಕದಲ್ಲಿ (ಪಾರ್ಶ್ವ) ಹೊರಳಿಸಿ ಇದ್ದು, ಒಂದೇ ಕೈ ಹೊರಗೆ ಬರುತ್ತದೆ.

೬ **ಷಷ್ಠಗತಿ:—** ತಲೆಯು ಅಡ್ಡವಾಗಿ (ಮುಖವು) ನಿಂತು ಎರಡೂ ಕೈಗಳು ದ್ವಾರದಲ್ಲಿ ಬರುತ್ತವೆ.

೭ ಸಪ್ತಮಗತಿ:— ಮಧ್ಯ ಭಾಗವು ಬಗ್ಗಿದ್ದಾಗಿ, ಹಸ್ತ, ಪಾದ, ತಲೆಗಳಿಂದ ಕೂಡಿ ಯೋನಿ ದ್ವಾರದಲ್ಲಿ ಬಂದು ಸಿಕ್ಕಿಕೊಳ್ಳುತ್ತದೆ. ಈ ಪ್ರಕಾರವಾದ ೭ ನೇ ಗತಿಯು ಅಸಾಧ್ಯವಾದ ಮೂಢ ಗರ್ಭಗತಿಯು.

೮ ಅಷ್ಟಮಗತಿ:— ಒಂದು ಕಾಲು ಯೋನಿ ಮಾರ್ಗದಲ್ಲಿ ಬರುತ್ತದೆ. ಎರಡನೇ ಕಾಲಿನಿಂದ ಗುದ ಮಾರ್ಗವನ್ನು ಬಂದು ಮಾಡುತ್ತದೆ ಈ (೮) ನೇ ಮೂಢ ಗರ್ಭಗತಿಯು ಅಸಾಧ್ಯವಾಗಿರುವದು. ಸಾಮಾನ್ಯವಾಗಿ ಮೂಢ ಗರ್ಭದ ಗತಿಗಳನ್ನು ಅನುಲಕ್ಷಿಸಿ, ಎಂಟು ವಿಧವೆಂದು ನಿರ್ಣಯಿಸಿದ್ದಾರೆ ಇನ್ನು ಅನೇಕ ಪ್ರಕಾರವಾಗಿ, ಅಡ್ಡವಾಗಿ, ಪಾರ್ಶ್ವದಿಂದ ಕುತ್ತಿಗೆಯಿಂದ ತಡೆದು, ತೊಡೆಯು ಅಡ್ಡವಾಗಿ, ಮೊಳಕಾಲು ಸಿಕ್ಕಿಕೊಂಡು, ಮೊದಲಾದ ರೀತಿಯ ಗತಿ ವಿಶೇಷಗಳಿಂದ ಮೂಢ ಗರ್ಭಗಳು ಅಸಂಖ್ಯವಾಗಿರುವವು ಸಾಮಾನ್ಯತಃ ಎಂಟು ಮೂಢ ಗರ್ಭ ಸ್ಥಿತಿಗಳು ದರ್ಶಿಸಲ್ಪಟ್ಟಿರುತ್ತವೆ.

### ಮೂಢ ಗರ್ಭಗಳ ಸಾಧ್ಯಾಸಾಧ್ಯ ವಿಚಾರ:—

> ತತ್ರದ್ವಾವಂತ್ಯಾವಸಾಧ್ಯೌಮೂಢಗರ್ಭೌ, ಶೇಷಾನಪಿವಿಪರೀ
> ತೇಂದ್ರಿಯಾರ್ಥಾಕ್ಷೇಪಕ ಯೋನಿಭ್ರಂಶಸಂವರಣಮಕ್ಕಲ್ಲ
> ಶ್ವಾಸಕಾಸಭ್ರಮನಿಪೀಡಿತಾನ್ ಪರಿಹರೇತ್॥ (ಸು॥ನಿ॥೮ಸೂ೭)

ಅಂತ್ಯದ್ದಾದ ಕಡೇ ಎರಡು (೭-೮)ಮೂಢ ಗರ್ಭ ಗತಿಗಳು ಅಸಾಧ್ಯವಾಗಿರುತ್ತವೆ. ಉಳಿದ (೬) ಮೂಢ ಗರ್ಭಗತಿಗಳು ವಿಪರೀತೇಂದ್ರಿಯಾರ್ಥಗಳಿಂದ ಕೂಡಿದ್ದರೆ, (ಮೂಗು ವಾಸನೆಯನ್ನು ಯೋಗ್ಯ ಗ್ರಹಿಸದೆ, ಅಥವಾ ಸುವಾಸನೆಯನ್ನು ದುರ್ವಾಸನೆಯನ್ನಾಗಿ ತಿಳಿಯುವದು, ಇದರಂತೆ ಎಲ್ಲ ಇಂದ್ರಿಯಗಳನ್ನು ತಿಳಿಯಬೇಕು.) ಪ್ರಕೋಪ ಹೊಂದಿದ ಆಕ್ಷೇಪಕಾದಿ ವಾತವಿಕಾರವುಳ್ಳ, ಯೋನಿ ಭ್ರಂಶವುಳ್ಳ, ಯೋನಿದ್ವಾರ ಆಕುಂಚನವಾಗೋಣ, ಮಕ್ಕಲ್ಲವೆಂಬ ವಾಯುಶೂಲೆ, ಶ್ವಾಸ, ಕಾಸ, ಭ್ರಮ, (ಬಡಬಡಿಸೋಣ) ಇವುಗಳಿಂದ ಕೂಡಿ ಪೀಡಿತವಾದ, "ಉಪದ್ರವ" ರೂಪವಾದ ವ್ಯಾಧಿಗಳುಂಟಾದರೆ, ಅಂಥಾ ಈ (೬) ಮೂಢ ಗರ್ಭಗಳು ಸಹ ಚಿಕಿತ್ಸೆಗೆ, ಅಸಾಧ್ಯವೆಂದು ತಿಳಿಯಬೇಕು.

## ಅಸಾಧ್ಯ ಮೂಢಗರ್ಭವುಳ್ಳ ಗರ್ಭಿಣೀ ಲಕ್ಷಣವು

ಪ್ರವಿಧ್ಯತಿಶಿರೋಯಾತುಶೀತಾಂಗೀನಿರಪತ್ರಪಾ ॥
ನೀಲೋದ್ಧತಶಿರಾಹಂತಿಸಾ ಗರ್ಭಂ ಸಚತಾಂ ತಥಾ ॥
( ಸು। ನಿ। ಅ. ೮ ಸೂ ೧೧ )

ಯಾವ ಗರ್ಭಿಣಿಯು ತಲೆಯು ಕೆಳಗೆ ಬಗ್ಗಿರುತ್ತದೆಯೋ, ಅವಯುವಗಳೆಲ್ಲ ತಣ್ಣಗಾಗಿ ದೇಹದಲ್ಲಿ ಎಚ್ಚರಿಕೆಯಿಲ್ಲದ್ದರಿಂದ ನಾಚಿಕೆ ಇಲ್ಲದೇ ಇರೋಣವು, ನೀಲವರ್ಣದ ಶಿರಗಳು ಗರ್ಭಾಶಯು ಸ್ಥಾನದಲ್ಲಿ ಮೇಲೆ ಸ್ಫುಟವಾಗಿ ಎದ್ದು ಕಾಣುತ್ತಿರುವದೋ ಈ ಮೊದಲಾದ ಲಕ್ಷಣವುಳ್ಳ ಗರ್ಭಿಣಿಯು ಗರ್ಭವು ನಾಶಹೊಂದುತ್ತದೆ. ಇಂಥ ನಾಶಹೊಂದಿದ ಗರ್ಭವು ಗರ್ಭಿಣಿಯನ್ನು ನಾಶಪಡಿಸುತ್ತದೆ

## ಮೃತಗರ್ಭ ಲಕ್ಷಣವು

ಗರ್ಭಾಸ್ಪಂದನಮಾವೀನಾಂ ಪ್ರಣಾಶಃ ಶ್ಯಾವಪಾಂಡುತಾ
ಭವತ್ಯುಚ್ಛ್ವಾಸಪೂತಿತ್ವಂ ಶೂಲಂ ಚಾಂ ತರ್ಮೃತೆಶಿಶೌ ॥
( ಸುಶ್ರುತ। ನಿ। ಅ. ೮ ಶ್ಲೋ. ೧೩ )

ಗರ್ಭದ ಸ್ಪಂದನೆಯಾಗದೇ ಇರೋಣ, ಹಡೆಯುವ ಬೇನೆಯು (ಆವೀ) ಉತ್ಪನ್ನವಾಗದಿರೋಣ, ಗರ್ಭಿಣಿಯು ನಿಸ್ತೇಜವಾಗೋಣ, ಬೂದಿಗೆಂಪು ಬಿಳೀ ವರ್ಣವುಂಟಾಗೋಣ, ಶ್ವಾಸವು ದುರ್ಗಂಧವುಳ್ಳದ್ದು, ಪೀಡನೆಯಾಗುವದು, ಮೊದಲಾದವುಗಳು **"ಶಿಶುವು ಗರ್ಭಾಶಯದಲ್ಲಿ ಮೃತವಾದರೆ"** ಇವೆಲ್ಲ ಲಕ್ಷಣಗಳು ಸಂಭವಿಸುತ್ತವೆ

**ಅನ್ಯಮತವು:—** ಒಳಗೆ ಮೃತವಾದಗರ್ಭವು ಉಬ್ಬಿದ ಬಸ್ತಿಯಂತೆ ತಡೆಯಲ್ಪಡುತ್ತದೆ. ಹೀಗೆ ತಡೆಯೋಣದರಿಂದ ಸ್ತ್ರೀಯ ಹೊಟ್ಟೆಯು ಅತ್ಯಂತವಾಗಿ ಜಡವಾಗುತ್ತದೆ. (ಆನಾಹ) ಅವಯುವಗಳು ಕೀಳಲ್ಪಡುವಂತೆ ಆಗುತ್ತವೆ. ಮೂತ್ರಾಶಯುಬಸ್ತಿ ಸ್ಥಾನವು ಒಡೆದಂತೆಯಾಗುತ್ತದೆ. ಕ್ಲೋಮ, ಪ್ಲೀಹ, ಯಕೃತ್, ಪುಪ್ಪುಸ, ಹೃದಯು, ಇವುಗಳು ಅತ್ಯಂತವಾಗಿ ಗರ್ಭ

ದಿಂದ ಪೀಡೆಹೊಂದಿದವುಗಳಾಗಿ ಮೇಲೇರಿದವುಗಳಾಗುತ್ತವೆ. ಆಗ ಗರ್ಭಿಣೀ ಸ್ತ್ರೀಯು ನಿಶ್ಚೇಷ್ಟಿತಳಾಗುತ್ತಾಳೆ. ಮೋಹಹೊಂದು (ಎಚ್ಚರಗಪ್ಪು) ತ್ತಾಳೆ. ಅಥವಾ ಕಷ್ಟದಿಂದ ಶ್ವಾಸಗತಿ ನಿರೋಧವಾಗುವದರಿಂದ ಬಹಳೇ ತ್ರಾಸಾಗಿ ಶ್ವಾಸೋಚ್ಛ್ವಾಸವಾಗುತ್ತದೆ. ಆ ಶ್ವಾಸವು ಬಹಳ ದುರ್ಗಂಧವುಳ್ಳದ್ದಿರುತ್ತದೆ. ಮೈಯಲ್ಲಿ ಬೆವರುಂಟಾಗುತ್ತದೆ. ನಾಲಿಗೆ ತಾಲು ಇವುಗಳು ಒಣಗುತ್ತವೆ. ನಡಗುತ್ತಾಳೆ. ಬಡಬಡಿಸುತ್ತಾಳೆ. ಜೀವವು ತಡೆದು ನಿಲ್ಲುತ್ತದೆ. ಇವೆಲ್ಲ ಲಕ್ಷಣಗಳಿಂದ ವೈದ್ಯನು ಹೊಟ್ಟೆಯಲ್ಲಿ ಮೃತವಾದ ಗರ್ಭಸ್ವರೂಪವನ್ನು ತಿಳಿದುಕೊಳ್ಳಬೇಕು.

**ಗರ್ಭಿಣಿಯುಮೃತಳಾಗಿಗರ್ಭವುಜೀವಂತವಿರುವಲಕ್ಷಣವು:—**

**ಬಸ್ತಮಾರ ವಿಪನ್ನಾಯಾಃ ಕುಕ್ಷಿಃ ಪ್ರಸ್ಪಂದತೇಯದಿ ॥**
**ತತ್ ಕ್ಷಣಾತ್ ಜನ್ಮಕಾಲೇತಂ ಪಾಟಯಿತ್ವೋದ್ಧರೇದ್ಭಿಷಕ್॥**

( ಸು॥ ನಿ॥ ಅ. ೮ ಶ್ಲೋ. ೯ )

ಆಡನ್ನು ಕೊಲ್ಲುವಂತೆ (ಬಸ್ತಮಾರ) ತತ್ ಕ್ಷಣವೇ ಮೃತಳಾದ ಗರ್ಭಿಣಿಯು, ಗರ್ಭದ ಆಶ್ರಯವಾದ ಹೊಟ್ಟೆಯಲ್ಲಿಯು ಸ್ಪಂದನವು ಹಾರುತ್ತಿದ್ದರೆ (ಪ್ರಸ್ಪಂದನ)ಗರ್ಭವು ಜೀವಂತವಿದೆಯೆಂದು ತಿಳಿಯಬೇಕು "**ಬಸ್ತಮಾರ**" ವೆಂದರೆ ಯಜ್ಞದಲ್ಲಿ ಯಾಜ್ಞಿಕರು ಹೋತನ್ನು ಶ್ವಾಸೋಚ್ಛ್ವಾಸವಾಗದಂತೆ ಬಿಗಿಯಾಗಿ ಬಾಯಿಕಟ್ಟಿ, ಅತ್ಯಂತ ಕ್ರೂರ ರೀತಿಯಿಂದ ನಾಶಮಾಡುತ್ತಾರೆ. ಬಾಯಿ ಬಂದು ಮಾಡಿದ ನಂತರ ಒಂದೇ ಕ್ಷಣದಲ್ಲಿ ಒದ್ದಾಡಿ ಸಾಯುತ್ತದೆ. ಇದರಂತೆ ವಿಕೃತ ಗರ್ಭದಿಂದ ಗರ್ಭಿಣಿಯು ಶ್ವಾಸ ಬಂದಾಗಿ, ತತ್ ಕ್ಷಣ ಸಾಯುವದರಿಂದ "**ಬಸ್ತಮಾರ**" ಉದಾಹರಣೆಯನ್ನು ಕೊಟ್ಟಿದ್ದಾರೆ. ಹೀಗೆ ಗರ್ಭಿಣಿಯ ಮರಣ ಸಂಭವಿಸಿದಲ್ಲಿ ಕ್ವಚಿತ್ ಗರ್ಭವು ಜೀವಂತವಿರುತ್ತದೆ. ಗರ್ಭಿಣಿಯು ಮೃತಳಾದರೂ ಗರ್ಭಸ್ಥಾನ ಲಕ್ಷಣದಿಂದ ( ಹಿಂದೆ ವಿವರಿಸಿದಂತೆ ) ಗರ್ಭ ಬದುಕಿರುವದು ನಿಶ್ಚಿತವಾದರೆ, ಗರ್ಭಸ್ಥಾನವನ್ನು ವಿದಾರಣ ಮಾಡಿ ಜೀವಂತವಿರುವ ಶಿಶುವನ್ನು ಹೊರತೆಗೆದು ಬದುಕಿಸಬೇಕು ಇಲ್ಲವಾದರೆ ಆ ಕ್ಷಣವೇ ಗರ್ಭಸ್ಥ ಶಿಶುವು ನಾಶಹೊಂದುವದು. ಗರ್ಭಿಣಿಯು ಮೃತ

ಳಾಗಿರುವದರಿಂದ ಶಸ್ತ್ರಕ್ರಿಯೆಯಿಂದ ಹಾನಿಯೇನೂ ಇಲ್ಲ ಆದರೂ ಗರ್ಭ ಜೀವಂತವಿದ್ದ ಲಕ್ಷಣವನ್ನು ಚನ್ನಾಗಿ ತಿಳಿದುಕೊಳ್ಳದಿದ್ದರೆ ವ್ಯರ್ಥ ಶಸ್ತ್ರ ಕ್ರಿಯೆಯನ್ನುಮಾಡಿ ಶ್ರಮಪಡಬಾರದೆಂದು ನಿಷ್ಕರ್ಷವಮಾಡಿದ್ದಾರೆ.

**ಸೂಚನೆ:—**

ಗರ್ಭಿಣಿಯ ಪ್ರಸೂತಿ ಸಮಯದಲ್ಲಿಯ ಕಠಿಣ, ಅಸಾಧ್ಯ ಪರಿಸ್ಥಿತಿಗಳನ್ನು ಸಾಮಾನ್ಯರೂ ತಿಳಿಯಲೆಂದು ವಿವರಿಸಿರುವೆನು. ಅಂಥಸ್ಥಿತಿಯು ತತ್ಕ್ಷಣ ಮಾರಕವೂ, ತೀವ್ರವೂ ಇರುವದರಿಂದ ತಡಮಾಡದೆ, ಉಪಾಯವನ್ನು ಕೈಕೊಳ್ಳಬೇಕು. ಸುಜ್ಞರಾದವೈದ್ಯರಿಂದಲೇ ಸಾಧ್ಯವಿರುವದರಿಂದ, ಸ್ವಪ್ರಯತ್ನ ಅಜ್ಞಪ್ರಯತ್ನಗಳು ಘಾತಕವಾಗಿರುವವು. ಅಸಾಧ್ಯ ಸ್ಥಿತಿಯಂತೂ "ಶಸ್ತ್ರವೈದ್ಯ" ರಿಂದಲೇ ಸಾಧಿಸತಕ್ಕದ್ದು. ಆದ್ದರಿಂದ ವಿಶೇಷ ಗಮನಿಸತಕ್ಕ ವಿಷಯವು. ದುರ್ಬಲ, ಕ್ಷೀಣ, ದೀರ್ಘರೋಗಿಯಾದ ಗರ್ಭಿಣಿಯವಿಷಯದಲ್ಲಿ ಪೂರ್ವದಲ್ಲಿಯೇ ಸುಜ್ಞ ಚಿಕಿತ್ಸಕರನ್ನು ಬರಮಾಡಿಕೊಂಡಿರಬೇಕು. ಆಯುರ್ವೇದದಲ್ಲಿ ಮೂಢಗರ್ಭಾದಿಗಳನ್ನು ಸಮಸ್ಥಿತಿಗೆತರುವ, ಕ್ರಿಯಾತ್ಮಕಯೋಗಗಳನ್ನೂ ಶಸ್ತ್ರಚಿಕಿತ್ಸೆ ಮೊದಲಾದವುಗಳನ್ನೂ ಬಹು ವಿಸ್ತಾರವಾಗಿ ತೀಕ್ಷ್ಣ ಬುದ್ಧಿಯಿಂದ ವಿವರಿಸಿದ್ದಾರೆ. ಅದು ಚಿಕಿತ್ಸಾ ವಿಷಯವಾದ್ದರಿಂದಲೂ, ನುರಿತ ಚಿಕಿತ್ಸಾನುಭವವುಳ್ಳವರಿಂದಲೇ ಸಾಧ್ಯ ಇರುವದರಿಂದ,ಆ ವಿಷಯಗಳ ಉಪಯೋಗ ದೃಷ್ಟಿಯಿಂದ ವಿವರಣೆಯು; ಪ್ರಯೋಜನಕಾರಿಯಲ್ಲವೆಂದು ವಿವರಿಸಿಲ್ಲ. ಓದಿ ತಿಳಕೊಳ್ಳಬೇಕೆನ್ನುವವರು ಸುಶ್ರುತದಲ್ಲಿಯ ಮೂಢಗರ್ಭ ಚಿಕಿತ್ಸಾಧ್ಯಾಯವನ್ನುನೋಡಿರಿ. (ಸುಶ್ರುತ॥ ಚಿಕಿತ್ಸಾ॥ ಅ. ೧೫ ನೋಡಿರಿ)

# (೧೭) ಗರ್ಭೋದಕ ಉಲ್ಬಗಳಸ್ವರೂಪ

**ಗರ್ಭೋದಕ, ಉಲ್ಬಯೋಃ ಸ್ವರೂಪಂ ॥**

**ಗರ್ಭೋರುಣದ್ಧಿಸ್ರೋತಾಂಸಿರಸರಕ್ತವಹಾನಿವೈ ॥**
**ರಕ್ತಾಜ್ಜರಾಯುರ್ಭವತಿ ನಾಡೀಚೈವರಸಾತ್ಮಿಕಾ ॥**
( ಸುಶ್ರುತ॥ ಶಾರೀರ॥ ಅ ೩ ಸೂ. ೩೨ ರಲ್ಲಿ ಟೀಕಾ )

ಗರ್ಭವು ಸ್ರೋತಸ್ಸುಗಳನ್ನು ತಡೆಯುತ್ತದೆ. ಆ ಸ್ರೋತಸ್ಸುಗಳು ಯಾವವೆಂದರೆ ರಸ ರಕ್ತಗಳನ್ನು ಒಯ್ಯುವಂಥವುಗಳು. ಗರ್ಭದಿಂದ ತಡೆಯಲ್ಪಟ್ಟ ರಕ್ತವು ಗರ್ಭಕ್ಕೆ ವೇಷ್ಟನವಾಗಿ ( ತೆಳ್ಳಗಿನ ಪರದೆಯಂತೆ ) "ಜರಾಯು" "ಉಲ್ಬ" ಎಂದು ಹೇಳಿಸಿಕೊಳ್ಳಲ್ಪಡುತ್ತದೆ. ಶಿಶು ಜನನ ನಂತರದಲ್ಲಿ ಈ ತೆಳ್ಳಗಿನ ಪರದೆಯು ಮುದ್ದೆಯಾಗಿ, ಒಳಗೆ ಗರ್ಭೋದಕ ವಗೈರೆ ತುಂಬಿ ಬಸ್ತಿ ಆಕಾರದಂತಿದ್ದು ಹೊರಗೆ ಬರುತ್ತದೆ. ಇದಕ್ಕೆ "**ನೀರಿನ ಬುಡ್ಡೆ**" "**ವಾರ**" ಮೊದಲಾದ ವ್ಯವಹಾರಿಕ ಹೆಸರುಗಳು ಇರುತ್ತವೆ. ರಕ್ತದಿಂದ ಉಲ್ಬವು ( ಗರ್ಭವೇಷ್ಟನ ಪರದೆ ) ಆಗುತ್ತದೆ. ಗರ್ಭ ನಾಡೀ (ಹೊಕ್ಕಳಹುರಿ) ರಸದಿಂದುಂಟಾಗುತ್ತದೆ

# ಗರ್ಭೋದಕ

ಪ್ರಸವಕಾಲದ ಆದಿಯಲ್ಲಿ ಅಥವಾ ಪ್ರಸವಾನಂತರದಲ್ಲಿಯೂ ಕೂಡಾ, ಗರ್ಭಾಶಯದಿಂದ ದ್ರವ ರೂಪವಾದ ನೀರಿನಂಥ ಪದಾರ್ಥವು ಸ್ರವಿಸುತ್ತದೆ. ಅದಕ್ಕೆ "**ಗರ್ಭೋದಕವೆಂಬ**" ಹೆಸರು. ಅದು ಗರ್ಭಾಶಯದಲ್ಲಿ ಸಂಚಿತವಾಗಿದ್ದು ಪ್ರಸೂತಿಯ ಮೊದಲೂ ನಂತರದಲ್ಲಿಯೂ ಸ್ರವಿಸುತ್ತದೆ "**ಪ್ರಸೇಕಶ್ಚ ಗರ್ಭೋದಕಸ್ಯ**" (**ಚರಕ**॥ ಶಾರೀರ॥ ಅ ೮ **ಸೂ ೨೬**) ಪ್ರಸವದಲ್ಲಿ ಗರ್ಭೋದಕ ಸ್ರಾವವಾಗುತ್ತದೆ ಎಂದು ಹೇಳಿದ್ದಾರೆ.

ಗರ್ಭದ ಬೆಳವಣಿಗೆಗೆ ಬೇಕಾದ ಸತ್ವರೂಪವಾದ ದ್ರವವನ್ನು, ಧಮನಿಗಳು ಗರ್ಭಕ್ಕೆ ಒದಗಿಸಿಕೊಡುತ್ತವೆ. ಆ ಸತ್ವದ ಉಪಸ್ನೇಹದಿಂದ ಗರ್ಭವು ಬೆಳೆಯುತ್ತದೆ. ತನ್ನ ನಾಭಿನಾಲ ಲೋಮಛಿದ್ರ ( ರೋಮರಂಧ್ರ ) ಗಳಿಂದ ಗರ್ಭವು ಕೇವಲ ಸತ್ವವನ್ನು ಹೀರಿಕೊಳ್ಳುತ್ತದೆ ಗರ್ಭಾಶಯದಲ್ಲಿಯ ಶಿಶುಪೋಷಕ ದ್ರವಸಂಚಯವೇ ಗರ್ಭೋದಕವು. ರಸದ ಕೇವಲ ಸತ್ವ ಭಾಗವೂ ನಿಯಮಿತ ಸಂಚಯವೂ ಇರುವದರಿಂದ ಈ ದ್ರವದಿಂದ ಮಲವು ಸಂಭವಿಸುವದಿಲ್ಲ. ಸತ್ವಭಾಗವು ಗರ್ಭಪೋಷಕವಾಗಿದ್ದು ಅದರ ನಿಯಮಿತ ಸಂಚಯವು ಗರ್ಭಾಶಯದಲ್ಲಿ ಬಾಧಕವಾಗಿರುವದಿಲ್ಲ.

# (೧೪) ಶರೀರ ವರ್ಣನೆಯು

## ಇವು ಶರೀರ ಪರ್ಯಾಯ ಶಬ್ದಗಳು:—

ಕಲೇವರಂ, ಗಾತ್ರಂವಪುಃ ಸಂಹನನಂ ಶರೀರಂ
ವರ್ಷ್ಮವಿಗ್ರಹಃ ॥ ಕಾಯೋದೇಹಃ ಕ್ಲೀಬಪುಂಸೋಃ ಸ್ತ್ರಿಯಾಂ
ಮೂರ್ತಿಸ್ತನು ಸ್ತನೂಃ ॥
( ಅಮರ॥ )

(೧) ಕಲಿರೇತಸಿಪ್ರಿಯತೆಉಪಯುಜ್ಯತೆಇತಿ ॥ ॥ಕಲೇವರಂ॥
ರೇತಸ್ಸಿನಿಂದ (ಶುಕ್ರ) ವ್ಯಾಪಿಸಲ್ಪಡುತ್ತದಾದ್ದರಿಂದ "ಕಲೇವರ" ವೆಂಬ ಹೆಸರು.

(೨) ಗಾಜ್‌ಗತೌ॥ ಗಾತೇಗಚ್ಛತೀಗಾತ್ರಂ ॥

ಬಂದಂಥಾ ದೇಹವು ಅನಿತ್ಯವಿರುವದರಿಂದ ಹೋಗುತ್ತದೆ. ಆದ್ದರಿಂದ "ಗಾತ್ರ" ವೆಂಬ ಹೆಸರು.

(೩) ವಪತಿಉಪ್ಯತೇವಾವಪುಃ॥ ಡುವಪ್‌ಬೀಜಸಂತಾನೆ ॥

ಹುಟ್ಟಿಸಲ್ಪಡುತ್ತದೆ,ಹುಟ್ಟಿಸುತ್ತದೆಯಾದ್ದರಿಂದ"ವಪು"ವೆಂಬ ಹೆಸರು.

(೪) ಸಂಹಂತಿ, ಸಂಹನ್ಯತೆವಾ, ಸಂಹನನಂ॥ ಯದ್ವಾಸಂಹ
ನ್ಯಂತ್ಯೆಸ್ಮಿನ್‌ಭೂತಾನಿಇತಿಸಂಹನನಂ ॥

ಕೂಡಿ ಗುಂಪಾಗಿರುತ್ತದೆ. ಅಥವಾ ಕೂಡಲ್ಪಡುತ್ತದೆ. ಪಂಚಮಹಾ ಭೂತಗಳು ದೇಹದಲ್ಲಿ ಸಂಯೋಜಿತವಾಗಲ್ಪಡುತ್ತವೆಯಾದ್ದರಿಂದ "ಸಂಹ ನನ" ವೆಂಬ ಹೆಸರು.

(೫) ಶ್ರೂಹಿಂಸಾಯಾಂ॥ ಶ್ರೃಣಾತಿಶೀರ್ಯತೇವಾಶರೀರಂ,॥

ದುಃಖವನ್ನು ಹೊಂದುತ್ತದೆ. ದುಃಖವು ಹೊಂದಿಸಲ್ಪಡುತ್ತದೆಂದೂ ಅಥವಾ, ಕ್ಷೀಣವಾಗುವದರಿಂದ "ಶರೀರ" ವೆಂಬ ಹೆಸರು ಬಂದಿರುತ್ತದೆ.

(೬) **ವೃಷುಸೇಚನೆ॥ ವರ್ಷತಿವೃಷ್ಯತೆವಾವರ್ಷ್ಮ,॥**

ಶುಕ್ಲಾದಿಗಳನ್ನು ಸುರಿಸುತ್ತದೆ ಅಥವಾ ಆನಂದವನ್ನು ಹೊಂದಿಸಲ್ಪಡುತ್ತದೆಂದು "**ವರ್ಷ್ಮ**" ವೆಂದು ಹೇಳುತ್ತಾರೆ.

(೭) **ವಿವಿಧಂ ಸುಖಾದಿಗೃಹ್ಣಾತಿ, ವಿವಿಧೈರ್ವ್ಯಾಧಿಭಿರ್ಗೃಹ್ಯತೆ ಇತಿವಿಗ್ರಹಃ ॥**

ದೇಹವು ನಾನಾರೀತಿಯುಳ್ಳ ಸುಖವನ್ನು ಗ್ರಹಿಸುತ್ತದೆ. ವಿವಿಧ ರೋಗಗಳಿಂದ ವ್ಯಾಪಿಸಲ್ಪಡುತ್ತದೆ. ಆದ್ದರಿಂದ "**ವಿಗ್ರಹ**" ವೆಂಬ ಹೆಸರು.

(೮) **ಚಿಞ್ ಚಯನೆಚೀಯತೆ ಅನ್ನಾದಿಭಿಃ ಇತಿಕಾಯಃ,॥**

ಅನ್ನಾದಿ ಆಹಾರಗಳಿಂದ ಅಭಿವೃದ್ಧಿ ಹೊಂದುವದರಿಂದ "**ಕಾಯ**" ವೆಂಬ ಹೆಸರು.

(೯) **ದಿಹಉಪಚಯೆದಿಹ್ಯತೆಇತಿದೇಹಃ ॥**

ಅಭಿವೃದ್ಧಿಯನ್ನುಹೊಂದುವದು,ಆವರಿಸಿವ್ಯಾಪಿಸಿರುವದರಿಂದ"**ದೇಹ**" ವೆಂಬ ಹೆಸರು.

(೧೦) **ಮೂರ್ಚ್ಛಾವೋಹಸಮುಚ್ಛ್ರಾಯಯೋಃ, ಮೂರ್ಚ್ಛತೀತಿಮೂರ್ತಿಃ ॥**

ಅತ್ಯಂತ ಧೃಡವಾದ ಆವರಣೆಯುಳ್ಳ ಆಶ್ರಯವಾಗಿರುವದರಿಂದ "**ಮೂರ್ತಿ**" ಯೆಂಬ ಹೆಸರು.

(೧೧) **ತನೋತಿ, ತನ್ಯತೇವಾತನುಃ ॥**

ಸಂತತ್ಯಾದಿಗಳಿಂದ ಅಥವಾ ಬೆಳೆಯುವದರಿಂದ, ವಿಸ್ತಾರವಾಗುತ್ತದೆ ವಿಸ್ತಾರಹೊಂದಿಸಲ್ಪಡುತ್ತದೆ. ಆದ್ದರಿಂದ "ತನು" ವೆಂಬ ಹೆಸರು ಬಂದಿರುತ್ತದೆ. ಇವು ಶರೀರವಾಚಕ ಪರ್ಯಾಯಶಬ್ದಗಳು.

## ಅವಯುವಗಳು

**ಅಂಗಂ ಪ್ರತೀಕೋಽವಯುವಃ ಅಪಘನಃ ॥**

ಇವು ಅವಯುವಗಳ ಪರ್ಯಾಯವಾಚಕ ಶಬ್ದಗಳು

(೧) **ಅಗಿಗತೌಅಗತಿಗಚ್ಛತೀತಿಅಂಗಂ ॥**

ದೇಹವನ್ನು ಕುರಿತು ಹೋಗುತ್ತದೆ, ಅಂದರೆ ಅಂಟಿಕೊಳ್ಳುತ್ತದೆಂಬ ಧರ್ಮವು ಅಥವಾ ನಾಶಾತ್ಮಕವಾದ್ದರಿಂದ ನಾಶ ಹೊಂದುತ್ತದೆ ದೇಹಕ್ಕೆ ಅಂಗಗಳು ಗಮನಾದಿಗಳನ್ನುಂಟು ಮಾಡಲು ಸಾಧನಗಳಾಗುತ್ತವೆ. ಆದ್ದರಿಂದ "**ಅಂಗ**" ವೆಂದು ಅನ್ನುತ್ತಾರೆ

(೨) **ಇಣ್ ಗತೌ॥ ಪ್ರತ್ಯೇತಿಪ್ರತೀಯತೇವಾ, ಪ್ರತೀಕಃ ॥**

ವಿಷಯಗಳ ಪ್ರಯೋಜನವನ್ನು ಹೊಂದುತ್ತದೆ, ಹೊಂದಿಸುತ್ತದೆಂದು "**ಪ್ರತೀಕ**"ವೆಂಬ ಹೆಸರು.

(೩) **ಯುಊಮಿಶ್ರಣೆ, ಅವಯೌತಿ ಇತಿಅವಯುವಃ ॥**

ಶರೀರದಲ್ಲಿ ಮಿಶ್ರವಾಗುತ್ತದೆ, ಶರೀರಕ್ಕೆ ಬೇಕಾಗುವದನ್ನು ಹೊಂದಿಸುವ ಸಾಧನಗಳು, ಆದ್ದರಿಂದ "**ಅವಯುವ**" ವೆಂಬ ಹೆಸರು.

(೪) **ಅಪಘನಃ ಅಪಹನ್ಯತೆಇತಿಅಪಘನಃ ॥**

ಯೋಗ್ಯ ಸಾಧನಸಂಗ್ರಹಾದಿ ಕರ್ತವ್ಯಗಳಿಂದ, ಸೌಲಭ್ಯ ಲಭಿಸಿ, ದುಃಖವನ್ನು ಹೊಡೆದುಹಾಕಿ, ದೂರ ಮಾಡುವ ಸಾಧನವಾದ್ದರಿಂದ "**ಅಪಘನ**"ವೆಂಬ ಹೆಸರು. ಇವು ಶರೀರಾವಯುವವಾಚಕ ಪರ್ಯಾಯ ಶಬ್ದಗಳು.

# ಶರೀರವೆಂದರೇನು?

**ತತ್ರಶರೀರಂನಾಮ ಚೇತನಾಧಿಷ್ಠಾನಭೂತಂ ಪಂಚಮಹಾ ವಿಕಾರ ಸಮುದಾಯಾತ್ಮಕಂ ಸಮಯೋಗವಾಹಿ ||**
( ಚರಕ| ಶಾರೀರ| ಅ. ೬ ಸೂ ೪ )

**ಶರೀರವೆಂದರೆ:—** ಆತ್ಮನಿಗೆ ಅಧಿಷ್ಠಾನ (ಆಶ್ರಯ) ವಾಗಿಯೂ, ಪಂಚಮಹಾಭೂತಗಳ ರೂಪಾಂತರ (ವಿಕಾರ) ವುಳ್ಳ ಸಮುದಾಯಾತ್ಮಕ ವಾಗಿಯೂ, ಇವೆಲ್ಲವುಗಳ ಸಮಯೋಚಿತ ಯೋಗ್ಯ (ಸಮ) ಧಾರಣೆಯನ್ನು ಮಾಡುವದರಿಂದ "**ಶರೀರ**"ವೆಂಬ ಶಾಸ್ತ್ರೀಯ ಹೆಸರು ಬಂದಿರುತ್ತದೆ

**ಶರೀರ ವಿಷಯದಲ್ಲಿಯ ವಿಶೇಷ:—** ಚೇತನಾ ಆತ್ಮನಲ್ಲಿಯೇ ಇರುವದರಿಂದ ದೇಹವು ಚೈತನ್ಯವಿಶಿಷ್ಟವಾದ್ದರಿಂದ, ಶರೀರವು ಆತ್ಮಕ್ಕೆ ಅಧಿ ಷ್ಠಾನಭೂತವಾಗಿರುತ್ತದೆಂದು ಸ್ಪಷ್ಟವಾಗುತ್ತದೆ. ನಿಶ್ಚಿತಾರ್ಥವೆಂದರೆ ಚೇತ ನೆಯು ಆತ್ಮನನ್ನು ಆಶ್ರಯಮಾಡಿಕೊಂಡಿರುತ್ತದೆ. ಈ ಚೈತನ್ಯದಿಂದಲೇ ಅಗೋಚರ ಆತ್ಮವನ್ನು ಲಕ್ಷಿಸಿ ಸಿದ್ಧಾಂತಮಾಡಿರುತ್ತಾರೆ. ಪಂಚಮಹಾ ಭೂತಾದಿಗಳ ವಿಕಾರವಾದ ಶರೀರಾರಂಭಕ ಧಾತುಗಳ (ರಸಾದಿಗಳ) ಸಮು ದಾಯವು ಶರೀರವು ಇಲ್ಲಿ ಕೇವಲ ಗುಂಪೆಂದು ಅರ್ಥಮಾಡಬಾರದು. ಯಾಕಂದರೆ ಶರೀರಾರಂಭಕ ಧಾತುಗಳ ಸಮುದಾಯ (ಗುಂಪು)ಮಾಡಿದರೆ, ಅದರಿಂದ ಶರೀರವು ತಯಾರಾಗಲಾರದು. ಆತ್ಮವು ಶರೀರಾರಂಭಕ ಕ್ರಿಯೆ ಯಲ್ಲಿ ಕಾರಣ (ಮಿಶ್ರ) ವಾಗಿದ್ದರೆ ಮಾತ್ರ ದೇಹೋತ್ಪತ್ತಿಯಾಗುವದು. ಆದ್ದರಿಂದ ಇದಕ್ಕೆ ಅಲೌಕಿಕಮೇಲಕವೆಂದು ಅನ್ನುತ್ತಾರೆ. ಸಮಯೋಚಿತ ಪ್ರಮಾಣದಿಂದ ಇವೆಲ್ಲವುಗಳ, ಧಾತುಗಳ ಸಂಮಿಲನ ಚನ್ನಾಗಿ ಯಥಾ ಯೋಗ್ಯವಾಗಿರಲು ಅದಕ್ಕೆಶರೀರವೆಂಬ ಹೆಸರು. ಆದ್ದರಿಂದ "**ಸಮಯೋಗ ವಾಹಿ**" ಎಂಬ ಶಬ್ದವನ್ನು ಯೋಜಿಸಿದ್ದಾರೆ.

**ಸುಶ್ರುತಮತವು:—** ಶುಕ್ರ, ಶೋಣಿತಗಳಗುಂಪು ತನ್ನ ಸ್ವಾಭಾವಿಕ ಸ್ಥಿತಿ ವಿಕಾರಗಳಿಗನುಗುಣವಾಗಿ ಆಯಾವಸ್ವರೂಪಹೊಂದಿಕೊಂಡು, ಮುಂದೆ

ಬೆಳವಣಿಗೆಗೆ ಅನುಗುಣವಾಗಿರುವದೇ "ಗರ್ಭ"ವು. ಈ ಗರ್ಭವು ಬೆಳೆದು ಅಂಗೋಪಾಂಗ ಉತ್ಪನ್ನವಾಗಲು ಅದಕ್ಕೆ "ಶರೀರ"ವೆಂಬ ಹೆಸರು.

**ಏವಂ ವಿವರ್ಧಿತಃ ಸಯದಾ ಹಸ್ತ ಪಾದ ಜಿಹ್ವಾಘ್ರಾಣ ಕರ್ಣ ನಿತಂಬಾದಿಭಿರಂಗೈರುಪೇತಸ್ತದಾಶರೀರಂಇತಿಸಂಜ್ಞಾಂಲಭತೆ॥**

( ಸುಶ್ರುತ। ಶಾರೀರ। ಅ. ೫ ಸೂ. ೩ )

ಗರ್ಭವು ಬೆಳೆದು ಯಾವಾಗ ಕೈ ಕಾಲು ನಾಲಿಗೆ ಮೂಗು ಕಿಕ (ನಿತಂಬ) ಮೊದಲಾದ ಅಂಗಗಳಿಂದ ಯುಕ್ತವಾಗಲು "**ಶರೀರ**" ವೆಂಬ ಹೆಸರುಳ್ಳದ್ದಾಗುತ್ತದೆ.

**ಶರೀರ ಸ್ವರೂಪ ವರ್ಣನೆಯು:—** ಶರೀರದಲ್ಲಿ ದೃಢವಾದ ಅಸ್ಥಿ ಪಂಜರಕ್ಕೆ, ಕ್ರಮಾನುಸಾರವಾಗಿ ಮಾಂಸಮೊದಲಾದವುಗಳು ಅಂಟಿಕೊಂಡಿರುತ್ತವೆ. ಮಾಂಸಕ್ಕೆ ಸ್ಥಿರವಾದಸ್ನಾಯುವಿನ ಬಂಧನವಿರುತ್ತದೆ. ಸ್ನಾಯುವು ಬಳ್ಳಿಯಂತೆ ಅಥವಾ ಪಟ್ಟದಂತೆ ( ಮರದ ತೊಗಟೆ ) ಸ್ಥಾನೋಚಿತ ಬಂಧನಕ್ಕನುಗುಣವಾಗಿರುತ್ತದೆ. ಸ್ನಾಯುಗಳ ಬಿಗಿತ (ಹಿಡಿತ) ವಿರುವದರಿಂದ ಮಾಂಸವು ಪರಿಪುಷ್ಟವಾಗಿ,ತನ್ನ ಸ್ಥಾನದಿಂದ ಕದಲದೆ ರಕ್ಷಣೆಹೊಂದುತ್ತದೆ. ಮನೆ ನಿಲ್ಲಲಿಕ್ಕೆ ಕಂಭ ಮೊದಲಾದ ಧಾರಕ ಆಧಾರಗಳಿರುತ್ತವೆಯೋ, ಅದರಂತೇ "ಶರೀರವೆಂಬ **ಗೃಹಕ್ಕೆ**" ಅಸ್ಥಿಗಳ ಸಮಯೋಚಿತ ಸನ್ನಿವೇಶವಾದ ಅಸ್ಥಿಪಂಜರವೇ ಸ್ತಂಭವಾಗಿರುತ್ತದೆ ಇದಿಲ್ಲದಿದ್ದರೆಶರೀರವು ಒಂದುಮಾಂಸ ಪಿಂಡದಂತೆ ಆಗುತ್ತಿತ್ತು. ಚಲನವಲನೆಗಳು ಅದರಿಂದ ಸಾಧ್ಯವಾಗುತ್ತಿದ್ದಿಲ್ಲ. ಮತ್ತೂ ಸ್ಥಿರವಾಗಿ ನಿಲ್ಲಲೂ, ಭಾರವಹನಾದಿಗಳೂ ಆಗುತ್ತಿದ್ದಿಲ್ಲ. ಹೀಗಿರುವದರಿಂದ ದೇಹಕ್ಕೆ ಆಧಾರವೆಂದರ ಅಸ್ಥಿಪಂಜರವು. ಅಸ್ಥಿಗಳೆಲ್ಲವೂ ಅಖಂಡವಾಗಿದ್ದರೆ ಮಣಿಯಲು, ಆಕುಂಚನಹೊಂದಲು ಬರುತ್ತಿದ್ದಿಲ್ಲ. ಅದಕ್ಕಾಗಿ ಅಲ್ಲಲ್ಲಿ ವ್ಯವಸ್ಥಿತ ಸಂದು (ಸಂಧಿ) ಗಳಿದ್ದು ನಿಯಮಿತ, ಆಕುಂಚನ ಪ್ರಸಾರಣಕ್ಕೆ ಅನುಕೂಲವಾಗಿವೆ. ಆಯಾವ ಸ್ಥಳಗಳಲ್ಲಿಯ ಕ್ರಿಯಾನುರೂಪ ಬೇರೆ ಬೇರೆ ರೀತಿಯುಳ್ಳ ಸಂಧಿಗಳು ಇರುತ್ತವೆ.

ಉದಾ:— ಒಂದು ವಸ್ತುವನ್ನು ಕೈಯಲ್ಲಿ ಮುಷ್ಟಿಮಾಡಿ ಹಿಡಿಯಬೇಕಾದರೆ, ಕೈಬೆರಳುಗಳು ಮುದುಡಿಕೊಳ್ಳಬೇಕಾಗುತ್ತದೆ. ಸಂಧಿಗಳಿಲ್ಲದಿದ್ದರೆ ಆಕುಂಚನೆಯಾಗುತ್ತಿದ್ದಿಲ್ಲ. ಯಾವ ವಸ್ತುಗಳನ್ನೂ ಸ್ಥಿರವಾಗಿ ಧರಿಸಲು ಸಹ ಬರುತ್ತಿದ್ದಿಲ್ಲ. ಅಥವಾ ಬೆರಳುಗಳು ಹಿಂದೂ ಮಡಚುವಂತಿದ್ದರೆ ಭಾರವಾದ ವಸ್ತುವನ್ನು ಹಿಡಿದಾಗ ಹಿಂದೂ ಬಗ್ಗಿ, ವಸ್ತುವು ಕೈಯಿಂದ ಬಿದ್ದು ಹೋಗಬೇಕಿತ್ತು. ಇವು ಯಾವವೂ ಸಂಭವಿಸುವದಿಲ್ಲವಾದ್ದರಿಂದ ಸಂಧಿಯು ಕ್ರಿಯಾನುರೂಪ ಸಂನಿವೇಶವುಳ್ಳದ್ದಾಗಿ, ಬೇರೆಬೇರೆ ರೀತಿಯುಳ್ಳದ್ದೆಂದು ಸ್ಪಷ್ಟವಾಗುತ್ತದೆ. ಇದರಂತೇ ದೇಹಕ್ಕೆ ಆಧಾರಭೂತವಾದ, ಅಖಂಡವಾಗಿ ತೋರುವ "**ಅಸ್ಥಿಯಂತ್ರ**"ವು ಸಮಯೋಚಿತ ಬೇರೆಬೇರೆ ಸಂಧಿಗಳಿಂದ ಯೋಚಿತವಾಗಿದೆಯೆಂದು ತಿಳಿಯಬೇಕು.

## ಅಸ್ಥಿಪಂಜರ ವರ್ಣನೆಯು

ದುಂಡಾಗಿರುವ ತಲೆಯು ಅತ್ಯಂತ ಬಿರುಸು ಧೃಢತೆಯುಳ್ಳ ಎಲುಬಿನಿಂದ ನಿರ್ಮಿತವಾಗಿದೆ. ಇದು ಟೆಂಗಿನ ಕರಟೆ (ಚಿಪ್ಪು) ಯಂತೆ ದುಂಡಗಾಗಿರುವ, ಸಾಮಾನ್ಯತಃ ತೆಳುವಾದ ಎಲುಬಿನ ಆವರಣವೆಂದು ಹೇಳಬಹುದು ಇದರ ಒಳಭಾಗದಲ್ಲಿ ಬಹಳೇ ಮೃದುವಾದ ಮಸ್ತಿಷ್ಕ(ಮಿದುಳು) ಇರುತ್ತದೆ. **ಕಣ್ಣು, ಕಿವಿ, ಮೂಗು, ಬಾಯಿ**ಗಳು ಶೀರ್ಷಾಸ್ಥಿರಂಧ್ರಗಳಲ್ಲಿ ಭದ್ರವಾದ ರಕ್ಷಣೆಹೊಂದಿರುತ್ತವೆ. ಈ ಶಿರವು ಮಧ್ಯಭಾಗದಎಲುಬಿನ ಕೋಲಿಗೆ ಹೊಂದಿಕೊಂಡಿರುತ್ತದೆ. ತಲೆಯನ್ನು ಧಾರಣೆಮಾಡಿದ ಅಸ್ಥಿದಂಡವು ಬೇರೆಬೇರೆ ತುಣುಕುಗಳಿಂದ ಕೂಡಿದ ಸರಪಣಿಯಂತೆ ಇರುತ್ತದೆ. ಇವಕ್ಕೆ ಕುತ್ತಿಗೆ ಕೆಳಭಾಗದಲ್ಲಿ ಪ್ರತಿಯೊಂದು ಗಣಲಿಗೆ (ಕೊಂಡಿ) ಒಂದರಂತೆ, ಎರಡೂ ಬದಿಯಿಂದ ತೆಳುವಾದ ಎಲುಬಿನ ದಬ್ಬೆ (ಪಟ್ಟಿ) ಗಳು ಹೊರಡುತ್ತವೆ. ಅವು ಮುಂಭಾಗದಲ್ಲಿರುವ, ಎದೆಯ (ಉರೊಮಧ್ಯ) ನಡುವಿರುವ ತೆಳ್ಳಗೆ ಪಟ್ಟಿಯಂತಿರುವ, ಎಲುಬಿಗೆ ಕೂಡಿಕೊಳ್ಳುತ್ತವೆ. ಇದರಿಂದ ಎದೆಯ ಸ್ಥಳವು ಅಸ್ಥಿದಂಡಕ್ಕೆ ಒಂದು ಬುಟ್ಟೀ ಕಟ್ಟಿದಂತೆ ಕಾಣುತ್ತದೆ. ನಿಜವಾಗಿಯೂ ಈ ಈ ಉರೋಽಸ್ಥಿಗಳು ಮಾನವನ ಮುಖ್ಯ ಜೀವಿತವಾದ "**ಹೃದ**"ವನ್ನು

ಸುತ್ತಲೂ ಧೃಢವಾಗಿ ರಕ್ಷಿಸುತ್ತವೆ. ಭದ್ರವಾದ ಖಜಾನೆಯು ಹಣವನ್ನು ರಕ್ಷಿಸುವಂತೆ ಹೃದಯವನ್ನು ಕಾಪಾಡುತ್ತವೆ. ಈ ಅಸ್ಥಿರೂಪವಾದ ಪಂಜರದ ಮಧ್ಯದಲ್ಲಿ, ಆಘಾತರಹಿತವಾಗಿ ಹೃದಯವು ಇರುತ್ತದೆ. ಮನುಷ್ಯನ ಬದುಕು ವಿಕೆಗೆ ಮುಖ್ಯವಾದ ಹೃದಯುವನ್ನು ಈ ಎಲುಬಿನ ಪೆಟ್ಟಿಗೆಯು ಭದ್ರವಾಗಿ ಡುತ್ತದೆ. ಉರೋsಸ್ಥಿಯ ಆದಿ ಭಾಗದಲ್ಲಿ ಎರಡೂ ಕೈಗಳ ಎಲುಬುಗಳು ಸಂಧಿತವಾಗುತ್ತವೆ. ಅಸ್ಥಿದಂಡದ ಕೊನೆಯು ತ್ರಿಕಾಸ್ಥಿಗೆ ( ಮೂರು ಸಂಧಿತ ವಾಗುವ ಅಸ್ಥಿ ) ಹೊಂದಿಕೊಂಡಿದೆ. ಮತ್ತು ಎರಡೂ ಕಾಲಿನ ಅಸ್ಥಿಗಳು ಕೂಡಾ ತ್ರಿಕಾಸ್ಥಿಗೆ ಸಂಧಿತವಾಗಿವೆ. ಹೀಗೆ ಅಸ್ಥಿದಂಡ, ಎರಡು ತೊಡೆಯು ಅಸ್ಥಿಗಳು ಹೊಂದಿಕೆಯಾಗುವದರಿಂದ "ತ್ರಿಕಾಸ್ಥಿ"ಯೆಂಬ ಹೆಸರು ಬಂದಿರು ತ್ತದೆ. ತ್ರಿಕಾಸ್ಥಿಯು ಬಲವಾದದ್ದೂ, ಇವೆಲ್ಲವುಗಳನ್ನು ಧೃಢವಾಗಿ ಧಾರಣೇ ಮಾಡುವಷ್ಟು ಸಮರ್ಥವಾದದ್ದಿರುತ್ತದೆ. ಮುಖ್ಯವಾಗಿ **ತಲೆ, ಮಧ್ಯಭಾಗ, ಎರಡು ಕೈಗಳು, ಎರಡು ಕಾಲುಗಳು** ಹೀಗೆ ಆರು ಮುಖ್ಯ ಅಸ್ಥಿ ವಿಭಾಗಗಳು ದೇಹದಲ್ಲಿ ಇರುತ್ತವೆ ಇವಕ್ಕೆ ಅಂಗಗಳೆಂದೂ ಅಥವಾ ಮುಖ್ಯಾಂಗಗಳೆಂದೂ ಅನ್ನುತ್ತಾರೆ. ಘಟ್ಟಿಯಾಗಿರುವ ಈ ಎಲುವಿನ ಪಂಜ ರಕ್ಕೆ ಹೊಂದಿಕೊಂಡೇ, ದೇಹದಲ್ಲಿಯ ಮಾಂಸಾದಿ ಸರ್ವ ಪದಾರ್ಥಗಳು ಇರುತ್ತವೆ. ಹೀಗಿರುವದರಿಂದ ಶರೀರದಲ್ಲಿಯ ಎಲ್ಲ ವಸ್ತುಗಳಿಗೆ ಆಧಾರವಾ ದದ್ದು ಅಸ್ಥಿಪಂಜರವೆಂದು ಹೇಳುತ್ತಾರೆ.

## ಶರೀರದಲ್ಲಿಯ ಪದಾರ್ಥಗಳು

**ಚರ್ಮ, ಕಲಾ, ಧಾತು, ಮಲ, ದೋಷ, ಯಕೃತ್, ಪ್ಲೀಹ, ಫುಪ್ಫುಸ, ಉಂಡುಕ, ಹೃದಯ, ಆಶಯಗಳು, ಅಂತ್ರ** (ಕರುಳು), **ವೃಕ್ಕ** (ಮಾಂಸಪಿಂಡ), **ಸ್ರೋತಸ್ಸು, ಕಂಡರ** (ದೊಡ್ಡ ಸ್ನಾಯು), **ಜಾಲ, ಕೂರ್ಚ, ರಜ್ಜು** (ಹುರಿಯಂತಿರುವ ಮಾಂಸದ ಹಗ್ಗವು), **ಸೇವನೀ, ಸಂಘಾತ, ಸೀಮಂತ, ಅಸ್ಥಿ, ಸಂಧಿ, ಸ್ನಾಯು, ಪೇಶೀ, ಮರ್ಮ, ಸಿರಾ, ಧಮನೀ, ಯೋಗವಾಹೀ ಸ್ರೋತಸ್ಸುಗಳು;** ಹೀಗೆ ಶರೀರದಲ್ಲಿ, ಬೇರೆಬೇರೆಕಾರ್ಯಸ್ಥಿತಿಗಳಿಗೆ ಪ್ರಯೋಜನವುಳ್ಳದ್ರವ್ಯಾದಿಗಳು ಇರುತ್ತವೆ. ಇವೆಲ್ಲವುಗಳು ಆವಾವ ಸ್ಥಳದಲ್ಲಿ ಸನ್ನಿಹಿತವಾಗಿ ಯೋಗ್ಯ

ವಾಗಿ ಸಂಯೋಜಿತವಾಗಿರುತ್ತವೆ. ಇವುಗಳ ಪ್ರತಿಯೊಂದರ ವರ್ಣನೆಯು ಮುಂದೆ ಬರುತ್ತದೆ. ಸದ್ಯ ಶರೀರ ವರ್ಣನೆಯಲ್ಲಿ ಹೆಸರನ್ನು ಮಾತ್ರ ಹೇಳಿರುತ್ತದೆ.

# ಇಂದ್ರಿಯಗಳ ವಿಭಾಗ

## ಜ್ಞಾನೇಂದ್ರಿಯಗಳು (೫)

**ಕಿವಿ, ಸ್ಪರ್ಶನೇಂದ್ರಿಯ, ಕಣ್ಣು, ನಾಲಿಗೆ, ನಾಸಿಕಾ,** ಇವು ಶಬ್ದ ಮೊದಲಾದವುಗಳನ್ನು ಗ್ರಹಿಸಿ ಜ್ಞಾನ ಮಾಡಿಕೊಡುತ್ತವೆ. ಆದ್ದರಿಂದ ಇವುಗಳಿಗೆ ಜ್ಞಾನೇಂದ್ರಿಯವೆಂಬ ಹೆಸರು.

## ಕರ್ಮೇಂದ್ರಿಯಗಳು (೫)

**ಮಾತಾಡುವ ಇಂದ್ರಿಯ, ಹಸ್ತ, ಪಾದ, ಜನನೇಂದ್ರಿಯ, ಗುದ,** ಇವುಗಳು ಮಾತಾಡುವದು ಮೊದಲಾದ ಕೆಲಸವನ್ನು ಮಾಡುವದರಿಂದ ಕರ್ಮೇಂದ್ರಿಯಗಳೆಂಬ ಹೆಸರು.

**ಮನಸ್ಸು** — ಮನಸ್ಸು, ಜ್ಞಾನೇಂದ್ರಿಯ, ಕರ್ಮೇಂದ್ರಿಯಗಳೆರಡರಲ್ಲಿಯೂ ಇದ್ದುಕೊಂಡು ಇಂದ್ರಿಯಗಳಿಂದಾಗುವ ಜ್ಞಾನ ಮತ್ತು ಕರ್ಮಗಳಿಗೆ, ಪ್ರಚೋದಕ ಮತ್ತು ಗ್ರಾಹಕವಾಗಿರುತ್ತದೆ. ಮನಸ್ಸು ಯೋಗ್ಯಸ್ಥಿತಿಯಲ್ಲಿರದಿದ್ದರೆ ಜ್ಞಾನೇಂದ್ರಿಯಗಳು ಸರಿಯಾಗಿ ವಿಷಯವನ್ನು ಗ್ರಹಿಸಿ ಜ್ಞಾನ ಮಾಡಲಾರವು ಮನಸ್ಸು ಎರಡನೇ ಕಡೆಯಿದ್ದಾಗ ಎದುರಿನಲ್ಲಿ ಒಬ್ಬನು ಹೋದರೂ ನಮಗೆ ಗೊತ್ತಾಗುವದಿಲ್ಲ. ಇದರಿಂದ ಮನಸು ಇಂದ್ರಿಯಗಳಲ್ಲಿದ್ದು ಗ್ರಹಿಸತಕ್ಕದ್ದನ್ನು ಜ್ಞಾನವಾಗುವಂತೆ ಮಾಡುತ್ತದೆಂದು ಇದರಿಂದ ಸಿದ್ಧವಾಗುತ್ತದೆ ದೇಹದಲ್ಲಿರುವ ವಿಶೇಷ ವಿಭಾಗಗಳನ್ನು ವರ್ಣನಾ ರೂಪದಿಂದ ಹೀಗೆ ನಿರ್ದೇಶಿಸಿದ್ದಾರೆ. ಸಂಪೂರ್ಣ ದೇಹದಲ್ಲಿರುವ ಪದಾರ್ಥಗಳೆಂದರೆ ಈಗ ನಿರ್ದೇಶಿಸಿದವುಗಳು ಸಾಮಾನ್ಯತಃ ಎಷ್ಟು ರೀತಿಯ ದ್ರವ್ಯಗಳು ಮತ್ತು ವಿಭಾಗಗಳಿವೆಯೆಂದು ನಿರ್ದೇಶ ಮಾಡಲಿಕ್ಕಾಗಿ ಕೇವಲ ಹೆಸರನ್ನು ಹೇಳಿದ್ದೇನೆ. " **ಶಾರೀರದಲ್ಲಿ** " ವಿಶೇಷ ವಿವೇಚನೆ ವಿಚಾರಮಾಡಬೇಕಾದವುಗಳೆಂದರೆ ಈ ಪೂರ್ವೋಕ್ತ ವಿಭಾಗಗಳು.

## ಶರೀರದಲ್ಲಿಯ ವಿಶೇಷ

**ಅಗ್ನಿಃ ಸೋಮೋವಾಯುಃ ಸತ್ವಂ ರಜಸ್ತಮಃ ಪಂಚೇಂದ್ರಿಯಾಣಿ ಭೂತಾತ್ಮೇತಿ ಪ್ರಾಣಾಃ॥** (ಸುಶ್ರುತ॥ ಶಾರೀರ॥ ಅ೩ ಸೂ೩)

**ಅಗ್ನಿ** (ಪಿತ್ತ, ಪಾಚಕಾಗ್ನಿ ಮೊದಲಾದವು), **ಸೋಮ** (ಶ್ಲೇಷ್ಮ), **ವಾಯು, ಸತ್ವ, ರಜೋಗುಣ, ತಮಸ್ಸು** (ಪ್ರಕೃತಿಯ ಗುಣಗಳು), **ಭೂತಾತ್ಮಾ** (ಕರ್ಮ ಪುರುಷ), **ಇಂದ್ರಿಯಗಳು, ಮನಸ್ಸು,** ಇವುಗಳು ಜೀವನ ನಿರ್ವಹಣೆಯನ್ನುಮಾಡುವದರಿಂದ, ಇವೆಲ್ಲವುಗಳಿಗೂ "**ಪ್ರಾಣಾಃ**" ಎಂದು ಹೇಳಿದ್ದಾರೆ. ಅರ್ಥಾತ್ ಪ್ರಾಣದಷ್ಟೇ ಮುಖ್ಯವಾದವುಗಳು ಅಥವಾ ಇವುಗಳ ಸಾನ್ನಿಧ್ಯಗಳಿಂದ ಜೀವಯಾತ್ರೆಯು ಸುಗಮವಾಗುವದರಿಂದ ಮುಖ್ಯವೆಂದು ಅನ್ನುತ್ತಾರೆ. ಇಲ್ಲವೇ "**ಆತ್ಮವನ್ನೂ**" ಇಲ್ಲಿ ಹೇಳಿದ್ದರಿಂದ ಆತ್ಮಾಧಿಷ್ಠಾನವಾಗಿ ಮನಸ್ಸು ಮೊದಲಾದವುಗಳು ಸುಖ ದುಃಖ ಸಾಕ್ಷಾತ್ಕಾರಾದಿಗಳಿಂದ ದೇಹಧಾರಣೆಯ ವಿಷಯದಲ್ಲಿ ಬಹಳೇ ಮಹತ್ವವಾಗಿರುತ್ತವೆ

### (೧) ಅಗ್ನಿ

**ಅಗ್ನಿರತ್ರಪಾಚಕ ಭ್ರಾಜಕ ಆಲೋಚಕ ರಂಜಕ ಸಾಧಕಾನಾಂ ಪಾಂಚಭೌತಿಕಾನಾಂ ಸರ್ವಧಾತ್ವನುಗತಾನಾಂ ಚೋಷ್ಮಣಾಂ ಶಕ್ತಿರೂಪ ತಯಾವಸ್ಥಿತೋವಾಚೋsಧಿದೈವತ್ವನಾಪನ್ನೋ ಬೋದ್ಧವ್ಯಃ ॥** ( ಸುಶ್ರುತ ಟೀಕಾ )

**ದೇಹದಲ್ಲಿಯ ಅಗ್ನಿ ಯಾವದೆಂದರೆ:—** ಪಾಚಕ, ಭ್ರಾಜಕ, ಆಲೋಚಕ, ರಂಜಕ, ಸಾಧಕ ಮೊದಲಾದವುಗಳು. ಪಿತ್ತರೂಪವಾದ ಅಗ್ನಿಗಳಿಗೆ ಮತ್ತು ಪಂಚಭೂತಾತ್ಮಕವಾದ ಸರ್ವ ರಸಾದಿ ಧಾತುಗಳಲ್ಲಿರುವ ಅಗ್ನಿಗಳಿಗೆ ಉಷ್ಣತೆಯನ್ನು ಕೊಡುವದಾಗಿಯೂ ಇವೆಲ್ಲಕ್ಕೂ ಶಕ್ತಿರೂಪವಾಗಿರುವದು. ಮತ್ತು ವಾಣಿಗೆ ಅಧಿದೈವತವಾಗಿರುವದು. ಈ ಪೂರ್ವೋಕ್ತವಾದದ್ದೇ ಶರೀರವನ್ನು ಧಾರಣೆಮಾಡುವ "**ಅಗ್ನಿ**"ಯು ದೇಹದಲ್ಲಿಯ ಆಹಾರಾದಿಗಳನ್ನು ಪಚನಮಾಡುತ್ತದೆ.

## (೨) ಸೋಮ

**ಶ್ಲೇಷ್ಮರಸ ಶುಕ್ರಾದೀನಾಂ ತೋಯಾತ್ಮಕಾನಾಂ ಭಾವಾನಾಂ ರಸನೇಂದ್ರಿಯಸ್ಯ ಚ ಶಕ್ತಿರೂಪತಯ್ಯಾವಸ್ಥಿತೋ ಮನಸೋ ಽಧಿದೈವತ್ವಮಾಪನ್ನಃ ಸೋಮ ಇತಿ ||**

( ಸುಶ್ರುತ ಟೀಕಾ )

"**ಸೋಮವು**" ಕಫ ರಸ ಶುಕ್ರ ಮೊದಲಾದ ಜಲಾತ್ಮಕವಾದವುಗಳಿಗೆ ಮತ್ತು ರಸನೇಂದ್ರಿಯಕ್ಕೆ ಶಕ್ತಿಯನ್ನು ಕೊಡತಕ್ಕದ್ದಾಗಿಯೂ, ಸೋಮಾತ್ಮಕವಾದ್ದರಿಂದ ತಂಪು ಆಹ್ಲಾದ ಹುಟ್ಟಿಸುವದಾಗಿಯೂ ಇರುತ್ತದೆ. ಇದೇ ಮನಸ್ಸಿಗೆ ಅಧಿದೈವತವಾದ "ಸೋಮವು" ಇದು ದೇಹಕ್ಕೆ ಆಹ್ಲಾದ ಕೊಟ್ಟು ದೇಹಧಾರಣೆಯನ್ನುಮಾಡುತ್ತದೆ. ರಸಾದಿ ಎಲ್ಲ ಸೌಮ್ಯ ಧಾತುಗಳನ್ನು ಪೋಷಿಸುತ್ತದೆ.

## (೩) ವಾಯು

**ಪಂಚಾತ್ಮಕಃ ಪ್ರಾಣಾದಿಭೇದೇನ|| ವಾಯುಶ್ಚದೋಷ ಧಾತು ಮಲಾದೀನಾಂ ಸಂಚಾರಣೋಚ್ಛ್ವಾಸನಿಃಶ್ವಾಸಾಭ್ಯಾಂ ಚ ||**

( ಸುಶ್ರುತ ಟೀಕಾ )

"**ವಾಯುವು**" ಪ್ರಾಣಾಪಾನಾದಿ ಭೇದದಿಂದ ಐದು ಪ್ರಕಾರವಾಗಿರುತ್ತದೆ. ಪಿತ್ತಕಫ ಮೊದಲಾದ ದೋಷಗಳನ್ನೂ, ರಸರಕ್ತಾದಿಧಾತುಗಳನ್ನೂ ದೇಹದಲ್ಲಿ ಸಂಚರಿಸುವಂತೆ ಮಾಡುತ್ತದೆ. ವಾಯುವಿನ ಸಹಾಯದಿಂದಲೇ ಜಡವಾದ ರಸಾದಿಗಳೆಲ್ಲವೂ ದೇಹದಲ್ಲಿ ಸಂಚರಿಸುತ್ತವೆ. ಮತ್ತು ಉಚ್ಛ್ವಾಸ ನಿಃಶ್ವಾಸ (ಮುಖದಿಂದ ಒಳಗೆ ಹೊರಗೆ ಸಂಚರಿಸುವದು) ಗಳನ್ನು ಮಾಡಿಸುತ್ತದೆ ಪೂರ್ವೋಕ್ತವಾದ ಕರ್ಮಗಳನ್ನು ದೇಹದಲ್ಲಿ "**ವಾಯುವು**" ಮಾಡುತ್ತಾ ದೇಹವನ್ನು ರಕ್ಷಿಸುತ್ತದೆ.

## (೪) ಸತ್ವಾದಿಗುಣಗಳು

**ಸತ್ವರಜಸ್ತಮಾಂಸಿತು ಪ್ರಕೃತೇರಷ್ಟ ರೂಪಾಯಾಗುಣಾಃ ॥ ಸತ್ವಾದೀನಿ ಮನೋರೂಪತಯಾ ಪರಿಣತಂ ಭೂತಾತ್ಮನಃ ಶರೀರಾಂತರಗ್ರಹಣಮೋಕ್ಷಣೇಹೇತುರಿತಿತದಪಿಪ್ರಾಣಯತಿ॥**
( ಸುಶ್ರುತ ಟೀಕಾ )

"ಸತ್ವರಜತಮಸ್ಸುಗಳು" ಅಷ್ಟರೂಪ ಪ್ರಕೃತಿಯ ಗುಣಗಳು. ಭೂತಾತ್ಮನಿಗೆ (ಪುರುಷನಿಗೆ) ಮನೋರೂಪದಿಂದ ಸತ್ವರಜಸ್ತಮಸ್ಸುಗಳು ಬೇರೆ ಬೇರೆ ದೇಹವನ್ನುಹೊಂದಲಿಕ್ಕೂ, ಮೋಕ್ಷಕ್ಕೂ ಕಾರಣವಾದ್ದರಿಂದ ಅವು ಕೂಡ ಮುಖ್ಯವಾದವುಗಳು ಪ್ರಾಣಧಾರಣೆಯನ್ನು ಮಾಡುತ್ತವೆಂದು ಹೇಳಿದ್ದಾರೆ.

## (೫) ಇಂದ್ರಿಯಗಳು

**"ಇಂದ್ರಿಯಾಣಿ" ಶ್ರವಣದರ್ಶನ ಸ್ಪರ್ಶನರಸನ ಘ್ರಾಣಾನಿ ಪಂಚ॥ ಚಕ್ಷುರಾದೀನಿಜ್ಞಾನೇಂದ್ರಿಯಾಣಿ ರೂಪಾದಿಗ್ರಹಣ ಕರ್ಮಣಾ ಪ್ರಾಣಯಂತಿ ॥** (ಸುಶ್ರುತ ಟೀಕಾ)

"**ಜ್ಞಾನೇಂದ್ರಿಯಗಳು**" **ಶ್ರೋತ್ರ, ನೇತ್ರ, ಸ್ಪರ್ಶೇಂದ್ರಿಯ, ರಸನೇಂದ್ರಿಯ, ಘ್ರಾಣೇಂದ್ರಿಯಗಳು.** ಇವು ರೂಪಾದಿಗಳನ್ನು ಗ್ರಹಿಸುವ ಕಾರ್ಯದಿಂದ ದೇಹವನ್ನು ಬದುಕಿಸುತ್ತವೆ. ಅರ್ಥಾತ್ ಜೀವನಕ್ಕೆ ಅತಿ ಮುಖ್ಯವಾದ ಕಾರ್ಯಗಳು ಇವುಗಳಿಂದ ಆಗುತ್ತವೆಂದರ್ಥವು

## (೬) ಭೂತಾತ್ಮಾ

**"ಭೂತಾತ್ಮಾ" ಶುಭಾಽಶುಭಕರ್ಮಭಿಃ ಪರಿಗೃಹಿತಃ ಕರ್ಮ ಪುರುಷಃ॥ ಸೋಽಪ್ಯಶೇಷಸ್ಯೈವಕರ್ಮರಾಶೇಶ್ಚೇತನಾಹೇತು ರಿತಿಪ್ರಾಣಯತಿ ॥ ಏತೇಚಾಗ್ನೀಷೋಮಾದಯಃ ಪ್ರಾಣ ಯಂತಿಜೀವಯಂತೀತಿಪ್ರಾಣಾಃ ॥** (ಸುಶ್ರುತ ಟೀಕಾ)

"**ಭೂತಾತ್ಮನು**" ಸತ್ಕರ್ಮ ಅಥವಾ ದುಷ್ಕರ್ಮವೊದಲಾದವುಗಳಿಂದ ದೇಹವನ್ನು ಪಡೆದು ದೇಹಕ್ಕೆ ಆತ್ಯಂತಿಕ ಸಂಬಂಧದಿಂದ (ಪರಿಗ್ರಹೀತ) ಅಂಟಿಕೊಂಡು, ಅವನೇ ಈ ಕರ್ಮ ಫಲವನ್ನು ಭೋಗಿಸುವ ಶರೀರಕ್ಕೆ ಚೈತನ್ಯ ಕಾರಣನಾಗಿರುವದರಿಂದ ಚೈತನ್ಯಾತ್ಮಕನಾಗಿ ಶರೀರವನ್ನು ಬದುಕಿಸುತ್ತಾನೆ ಕಲ್ಲಿ "**ಭೂತಾತ್ಮಾ ಮನಶ್ಚ**" ಎನ್ನುವ ಪಾಠವೂ ಇರುವದರಿಂದ ಮನಸ್ಸು ಸಹ "ಕರ್ಮ ಪುರುಷನಿಗೆ" ಮುಖ್ಯವಾಗಿ ಎಲ್ಲವನ್ನೂ ತನ್ನ ಗ್ರಹಣ ಸಾಮರ್ಥ್ಯದಿಂದ ಇಂದ್ರಿಯಗಳ ಮುಖಾಂತರವಾಗಿ, ವಿಷಯಗಳನ್ನು ಸ್ವೀಕಾರ ಮಾಡಿಸುತ್ತದೆ ಹೀಗಿರುವದರಿಂದ ಮನಸ್ಸೂ ಸಹ ಮುಖ್ಯವಾದದ್ದಾಗಿ ಪ್ರಾಣಯಾತ್ರೆಗೆ ಯೋಗ್ಯವಾಗಿರುತ್ತದೆ.

"**ಅಗ್ನಿಷೋಮಾದಿಗಳು**" ದೇಹಕ್ಕೆ ಒದುಕುವ ವಿಷಯದಲ್ಲಿ ಮುಖ್ಯತಃ ಪ್ರಾಣವೇ ಆಗಿರುವದರಿಂದ ಇವುಗಳಿಗೆ "**ಪ್ರಾಣಾಃ**" ಎಂದು ಸುಶ್ರುತಾಚಾರ್ಯರು ಹೇಳಿದ್ದಾರೆ ಇವುಗಳು ವಿಶೇಷವಾದ ಕರ್ಮಗಳಿಂದ ಶರೀರವನ್ನು ಬದುಕಿಸುತ್ತವೆಯಾದ್ದರಿಂದ ಪ್ರಾಣಗಳು.

# ಶರೀರಾವಯವ ಸಂಖ್ಯಾವಿಭಾಗವು

**ಅಥಾತಃ ಶರೀರಸಂಖ್ಯಾವ್ಯಾಕರಣಂ ಶಾರೀರಂ ವ್ಯಾಖ್ಯಾಸ್ಯಾಮಃ॥** (ಸುಶ್ರುತ॥ ಶಾರೀರ॥ ಅ ೫)

**ಯಥೋವಾಚಭಗವಾನ್ ಧನ್ವಂತರಿಃ ॥೨॥**

ಶರೀರದ ಉತ್ಪತ್ತಿ ಮೊದಲುಗೊಂಡು ಗರ್ಭದಲ್ಲಿಯ ಬೆಳವಣಿಗೆ ಮೊದಲಾದವುಗಳನ್ನು ಹೇಳಿ, ನಂತರ ಅಂಗೋಪಾಂಗಾದಿಗಳ ವಿಭಾಗಗಳನ್ನೂ ಶರೀರದಲ್ಲಿರುವ ಸರ್ವ ದ್ರವ್ಯಾದಿ ವಿಭಾಗಗಳನ್ನೂ ಹೇಳುತ್ತಾರೆ ಅದಕ್ಕೆ "**ಶರೀರಸಂಖ್ಯಾ ವ್ಯಾಕರಣ**"ವೆಂಬ ಹೆಸರು. ಇದನ್ನು ಸುಶ್ರುತಾಚಾರ್ಯರು ಗುರುಗಳಾದ ಶ್ರೀ ಭಗವಾನ್ ಧನ್ವಂತರಿಯ ಮತಾನುಸಾರವಾಗಿ ಹೇಳುತ್ತಾರೆ

## ಅಂಗಗಳು

**ತಚ್ಚ ಷಡಂಗಂ:- ಶಾಖಾಚತಸ್ರೋ, ಮಧ್ಯಂ ಪಂಚಮಂ, ಷಷ್ಠಂ ಶಿರಇತಿ ||**

(ಸುಶ್ರುತ|| ಶಾರೀರ|| ಅ ೫ ಸೂ ೩)

**ಶರೀರದ ಆರು ಅಂಗಗಳು.**— ದೇಹದ ಶಾಖಾ (ಟೊಂಗೆ) ರೂಪವಾದ **ಬಾಹು** (೨), **ಕಾಲು** (೨), ಹೀಗೆ ಶಾಖೆಗಳು ನಾಲ್ಕು (೪). **"ಮಧ್ಯಭಾಗವು"** ಐದನೇದು (೫). ಆರನೇದು **ಶಿರಸ್ಸು** (ತಲೆ) (೬) ಹೀಗೆ ಶರೀರಕ್ಕೆ ಆರು (೬) ಮುಖ್ಯವಾದ ಅಂಗಗಳಿರುತ್ತವೆ

## ಉಪಾಂಗ (ಪ್ರತ್ಯಂಗ)ಗಳು

**ಅತಃಪರಂಪ್ರತ್ಯಂಗಾನಿವಕ್ಷ್ಯಂತೆ:-ಮಸ್ತಕೋದರಪೃಷ್ಠನಾಭಿಲಲಾಟನಾಸಾಚಿಬುಕಬಸ್ತಿಗ್ರೀವಾಇತ್ಯೇತಾಏಕೈಕಾಃ|| ಕರ್ಣನೇತ್ರಭ್ರೂಶಂಖಾಂಸಗಂಡಕಕ್ಷಸ್ತನವಂಕ್ಷಣವೃಷಣಪಾರ್ಶ್ವಸ್ಫಿಕ್‌ಜಾನುಕೂರ್ಪರಬಾಹೂರುಪ್ರಭೃತಯೋದ್ವೇ|| ವಿಂಶತಿರಂಗುಲಯಃ|| ಸ್ರೋತಾಂಸಿವಕ್ಷ್ಯಮಾಣಾನಿ (ನವ)|| ಏಷಪ್ರತ್ಯಂಗವಿಭಾಗಉಕ್ತಃ ||**

(ಸುಶ್ರುತ|| ಶಾರೀರ|| ಅ ೫ ಸೂ ೪)

ಅಂಗಗಳನ್ನು ನಿರ್ದೇಶಿಸಿದ ನಂತರ ಪ್ರತ್ಯಂಗಗಳನ್ನು ಹೇಳುತ್ತಾರೆ ಪ್ರತ್ಯಂಗವೆಂದರೆ "ಉಪಾಂಗಗಳು" ಅವುಗಳಲ್ಲಿ ಒಂದೊಂದೇ ಇರುತ್ತಿರುವವುಗಳನ್ನೂ ಎರಡು ಇರುವವುಗಳನ್ನೂ ವಿಭಾಗಿಸಿ ಹೇಳಿರುವರು.

೧. **ಮಸ್ತಕ** (ತಲೆ), ೨. **ಉದರ** (ಹೊಟ್ಟೆ), ೩. **ಪೃಷ್ಠ** (ಬೆನ್ನು), ೪ **ನಾಭಿ** (ಹೊಕ್ಕಳು), ೫. **ಲಲಾಟ** (ಹಣೆ), ೬ **ನಾಸಾ** (ಮೂಗು),

೭. **ಚಿಬುಕ** (ತುಟಿಯ ಕೆಳಭಾಗ ಗದ್ದ), ೮. **ಬಸ್ತಿ** (ನಾಭಿಯ ಕೆಳಗಿರುವ ಮೂತ್ರಾಶಯ), ೯. **ಗ್ರೀವಾ** (ಕುತ್ತಿಗೆ), ಇವುಗಳು ಒಂದೊಂದಿರುವ ಉಪಾಂಗಗಳು.

೧ **ಕರ್ಣ** (ಕಿವಿಗಳು), ೨ **ನೇತ್ರ** (ಕಣ್ಣುಗಳು), ೩ **ಶಂಖ** (ಕಣ್ಣು ಹುಬ್ಬುಗಳ ಕೊನೆಯಮೇಲ್ಭಾಗಗಳ, ಕಿವಿ ಹಣೆಗಳ ಮಧ್ಯ ಭಾಗಗಳಲ್ಲಿ "**ಶಂಖ**"ವು ಇರುತ್ತವೆ. ಇವಕ್ಕೆ ಮೆಲಕು ಅನ್ನುತ್ತಾರೆ), ೪ **ಭ್ರೂ** (ಕಣ್ಣು ಹುಬ್ಬು ಅಥವಾ ಕಣ್ಣಿನ ಮೇಲ್ಭಾಗ ಹುಬ್ಬು ಇರುವ ಸ್ಥಳವು), ೫ **ಅಂಸ** (ಹೆಗಲು, ಬಾಹುವಿನ ಬುಡಗಳು), ೬ **ಗಂಡ** (ಕಪೋಲಗಳು), ೭ **ಕಕ್ಷ** (ಬಗಲಿನ ತಗ್ಗು ಭಾಗಗಳು), ೮ **ಸ್ತನ** (ಮೊಲೆ ಅಥವಾ ಸ್ತನ ಭಾಗಗಳು), ೯ **ವಂಕ್ಷಣ** (ತೊಡೆಯ ಎಲುಬು ಕೂಡುವ ಸಂಧಿಗಳು), ೧೦ **ವೃಷಣ** (ಪುರುಷರ ಅಂಡಕೋಶ ವಿಭಾಗಗಳು), ೧೧ **ಪಾರ್ಶ್ವ**(ಪಕ್ಕ, ಎಡ ಬಲ ಪಕ್ಕಗಳು) ೧೨ **ಸ್ಫಿಕ್** (ತಿಕ, ಕಟಿಪ್ರದೇಶಗಳಲ್ಲಿಯ ಉಬ್ಬಿದ ಮಾಂಸ ಪಿಂಡಗಳು), ೧೩ **ಜಾನು** (ಮೊಣಕಾಲ ಮೇಲಿನ ಸಂಧಿ ಭಾಗಗಳು), ೧೪ **ಕೂರ್ಪರ** (ಬಾಹು ಮಧ್ಯದಲ್ಲಿಯ ಸಂಧಿಗಳು), ೧೫ **ಬಾಹು** (ತೋಳುಗಳು), ೧೬ **ಊರು** (ತೊಡೆಗಳು), ಇವು ಮೊದಲಾದವುಗಳು ಎರಡಿರುವ ಉಪಾಂಗಗಳು. "**ಪ್ರಭೃತಯಃ**" ಮೊದಲಾದವುಗಳು ಎಂದು ಹೇಳಿದ್ದರಿಂದ ಮುಂದೆ ಬರುವ "ಓಷ್ಠ" ಮೊದಲಾದವುಗಳು ಗ್ರಹಣವಾಗುತ್ತವೆ.

**ಪ್ರಭೃತಿ ಗ್ರಹಣಾತ್ ಚೌಷ್ಠ ಸೃಕ್ಕಣೀ ಕುಕುಂದರಾಣಾಮ ವರೋಧಃ ||**

**( ಸುಶ್ರುತ ಟೀಕಾ )**

೧೭ **ಓಷ್ಠ** (ತುಟಿಗಳು), ೧೮ **ಸೃಕ್ಕಣೀ** (ತುಟಿಗಳ ಎಡಬಲಗಳಲ್ಲಿಯ ಕಟಬಾಯಿ ಅಂತ್ಯಭಾಗಗಳು), ೧೯ **ಕುಕುಂದರ** (ನಿತಂಬದ ಕೆಳಭಾಗಗಳಲ್ಲಿರುವ ತಗ್ಗು ಭಾಗಗಳು). ಇವು ಗ್ರಹಣವಾಗ ತ್ತವೆ.

(೯) "**ಸ್ರೋತಾಂಸಿ**" **ಶ್ರವಣ**, ಕಿವಿಗಳು (೨), "**ನಯನ**" ಕಣ್ಣುಗಳು (೨), "**ಘ್ರಾಣ**" ಮೂಗಿನ ರಂಧ್ರಗಳು (೨), ಒಟ್ಟು (೬). "**ವದನ**" ಬಾಯಿರಂಧ್ರವು (೭), (೮) **ಗುದ** ಮಲ ವಿಸರ್ಜನೆಯ ಅಂಗದ ರಂಧ್ರವು, (೯) **ಮೇಢ್ರ** ಮೂತ್ರವಿಸರ್ಜನಾಂಗ, ಪುರುಷ ಜನನೇಂದ್ರಿಯ ರಂಧ್ರವು. ಸ್ತ್ರೀಯರಿಗೆ ಮೂರು ರಂಧ್ರಗಳು ಹೆಚ್ಚಿಗೇ ಇರುತ್ತವೆ "**ಸ್ತನ**" ಮೊಲೆಗಳಲ್ಲಿ ಹಾಲು ಹೊರಗೆ ಬರಲಿಕ್ಕೆ ಇರುವ ರಂಧ್ರಗಳು (೨), "**ಅಧಸ್ತಾದ್ರಕ್ತವಹಂ**" ಪ್ರತಿಮಾಸಿಕ ರಜಸ್ಸನ್ನು ಹೊರಗೆ ಹಾಕುವ ರಂಧ್ರವು (೧), **ಹೀಗೆ ಪುರುಷರಲ್ಲಿ** (೯), **ಸ್ತ್ರೀಯರಲ್ಲಿ** (೧೨) ರಂಧ್ರಗಳು ಬಹಿರ್ಮುಖವಾಗಿರುತ್ತವೆ.

# ಶರೀರದ ಅಂಗೋಪಾಂಗಗಳು

## ಮುಖ್ಯಾಂಗಗಳು

**ಅಂಗಗಳು:— ಕಾಲು** (೨), **ಬಾಹು** (೨), **ಮಧ್ಯಭಾಗ** (೧), **ಶಿರಸ್ಸು** (೧) ಹೀಗೆ ಮುಖ್ಯಾಂಗಗಳು (೬).

## ಉಪಾಂಗಗಳು

"**ಮಸ್ತಕಾದಿ**" ಒಂದೊಂದಿರುವ ಪ್ರತ್ಯಂಗಗಳು (೯), "**ಕರ್ಣಾದಿ**" ಎರಡಿರುವ ಪ್ರತ್ಯಂಗಗಳು (೩೮), "**ಅಂಗುಲಿ**" ಕೈಕಾಲುಗಳ ಬೆರಳುಗಳು (೨೦), "**ಸ್ರೋತಸ್ಸು**" ರಂಧ್ರಗಳು (೯), ಸ್ತ್ರೀಯರ ಅಧಿಕರಂಧ್ರಗಳು (೩)

## ಶರೀರದ ಒಟ್ಟು ಅಂಗ ಪ್ರತ್ಯಂಗಗಳ ಸಂಖ್ಯೆಯು

**ಮುಖ್ಯ ಅಂಗಗಳು** (೬) **ಮಸ್ತಕಾದಿ** (೯) **ಕರ್ಣಾದಿ** (೩೮) **ಅಂಗುಲಿ** (೨೦) **ರಂಧ್ರಗಳು** (೯) ಸ್ತ್ರೀಯ ಅಧಿಕ ರಂಧ್ರಗಳು (೩) ಅಂಗಪ್ರತ್ಯಂಗಗಳ ಸಂಖ್ಯೆಗಳು ಒಟ್ಟು (೮೫) ಇರುತ್ತವೆ.

## ಚರಕ ಮತದಂತೆ ಅಂಗಪ್ರತ್ಯಂಗಗಳು

### ಅಂಗಗಳು

ತತ್ರಾಯಂ ಶರೀರಸ್ಯಾಂಗವಿಭಾಗಃ; ತದ್ಯಥಾದ್ವೌಬಾಹೂ, ದ್ವೇಸಕ್ಥಿನೀ, ಶಿರೋಗ್ರೀವಂ, ಅಂತರಾಧಿಃ, ಇತಿಷಡಂಗಮಂಗಮ್ ॥ (ಚರಕ॥ ಶಾರೀರ॥ ಅ ೭ ಸೂ ೫)

ಶರೀರದಅಂಗವಿಭಾಗವು "ದ್ವೌಬಾಹೂ" (ಎರಡುತೋಳುಗಳು)(೨), "ದ್ವೇಸಕ್ಥಿನೀ" (ಎರಡು ತೊಡೆಗಳು) (೨), "ಶಿರೋಗ್ರೀವಂ" ತಲೆಯಿಂದ ಸಹಿತವಾದ ಕುತ್ತಿಗೆಯು. ೬ "ಅಂತರಾಧಿಃ" ದೇಹದ ಮಧ್ಯಭಾಗವು. ಇವು ಆರು (೬) ಶರೀರದ ಅಂಗಗಳು.

### ಪ್ರತ್ಯಂಗಗಳು

ಷಟ್‌ಪಂಚಾಶತ್‌ಪ್ರತ್ಯಂಗಾನಿಷಟ್‌ಸ್ವಂಗೇಷೂಪನಿಬದ್ಧಾನಿ, ಯಾನ್ಯಪರಿಸಂಖ್ಯಾತಾನಿಪೂರ್ವಮಂಗೇಷು ಪರಿಸಂಖ್ಯಾಯಮಾನೇಷು, ತಾನ್ಯನ್ಯೈಃ ಪರ್ಯಾಯೈರಿಹಪ್ರಕಾಶ್ಯಾನಿಭವಂತಿ ॥ ತದ್ಯಥಾ:- ದ್ವೇಜಂಘಾಪಿಂಡಿಕೆ, ದ್ವೇಊರುಪಿಂಡಿಕೆ, ದ್ವೌಸ್ಫಿಚೌ, ದ್ವೌವೃಷಣೌ, ಏಕಂಶೇಫಃ, ದ್ವೇಉಖೆ, ದ್ವೌವಂಕ್ಷಣೌ, ದ್ವೌಕುಕುಂದರೌ, ಏಕಂಬಸ್ತಿಶೀರ್ಷಂ, ಏಕಂಉದರಂ, ದ್ವೌಸ್ತನೌ, ದ್ವೌಶ್ಲೇಷ್ಮಭುವೌ, ದ್ವೇಬಾಹುಪಿಂಡಿಕೆ, ಚಿಬುಕಮೇಕಂ, ದ್ವಾವೋಷ್ಠೌ, ದ್ವೇಸೃಕ್ಕಣ್ಯೌ, ದ್ವೌದಂತವೇಷ್ಟಕೌ, ಏಕಂತಾಲು, ಏಕಾಗಲಶುಂಡಿಕಾ, ದ್ವೇಉಪಜಿಹ್ವಿಕೆ, ಏಕಾಗೋಜಿಹ್ವಿಕಾ, ದ್ವೌಗಂಡೌ, ದ್ವೇಕರ್ಣಶಷ್ಕುಲಿಕೆ, ದ್ವೌಕರ್ಣಪುತ್ರಕೌ, ದ್ವೇಅಕ್ಷಿಕೂಟೆ, ಚತ್ವಾರ್ಯಕ್ಷಿವರ್ತ್ಮಾನಿ, ದ್ವೇಅಕ್ಷಿಕನೀನಿಕೆ, ದ್ವೇಭ್ರುವೌ, ಚತ್ವಾರಿಪಾಣಿಪಾದಹೃದಯಾನಿ, ॥

(ಚರಕ॥ ಶಾರೀರ॥ ಅ ೭ ಸೂ ೧೧)

**ಐವತ್ತಾರು (೫೬) ಪ್ರತ್ಯಂಗಗಳು,** ಆರು (೬) ಮುಖ್ಯಾಂಗಗಳಲ್ಲಿ ಸಂಬದ್ಧವಾಗಿರುತ್ತವೆ. ಈಗ ಪ್ರತ್ಯಂಗವಾಗಿ ಹೇಳಬೇಕಾದಂಥವುಗಳು ಮೊದಲು ಅಂಗಗಳನ್ನು ಹೇಳಿದ್ದರಿಂದ ಗ್ರಹಣವಾಗುತ್ತಿದ್ದರೂ, ಇಲ್ಲಿ ಪ್ರತ್ಯಂಗಗಳನ್ನು ಪರ್ಯಾಯವಾಗಿ ಹೇಳಬೇಕಾದ್ದರಿಂದ ಪ್ರಕಾಶಿತವಾಗಿರುತ್ತವೆ. ಅರ್ಥಾತ್ ಹಸ್ತಪಾದಾದಿ ಷಡಂಗಗಳನ್ನು ಹೇಳಿರುವದರಿಂದಲೇ ಅವುಗಳಲ್ಲಿರುವ "**ಜಂಘಾಪಿಂಡಿಕಾದಿಗಳು**" ಹೇಳಲ್ಪಟ್ಟಿರುತ್ತವೆ. ಅವಯವ ವಿಶೇಷವಾದ "**ಪ್ರತ್ಯಂಗಗಳನ್ನು**" ಹೇಳಬೇಕಾದ್ದರಿಂದ ಪ್ರತ್ಯೇಕ ವ್ಯವಹಾರಕ್ಕಾಗಿ ವಿಶದೀಕರಿಸುತ್ತಾರೆ

೧ "**ಜಂಘಾಪಿಂಡಿಕೆ**" ಮೊಣಕಾಲುಗಳಲ್ಲಿ ಹಿಂದಿರುವ ಉಬ್ಬಿದ ಮಾಂಸಪಿಂಡಗಳು (೨), (೨) "**ಊರುಪಿಂಡಿಕೆ**" ತೊಡೆಗಳಲ್ಲಿರುವ ಮಾಂಸಪಿಂಡಗಳು (೨), (೩) "**ಸ್ಫಿಚೌ**" ಕಟಿಪ್ರದೇಶದಲ್ಲಿರುವ ಮಾಂಸಪಿಂಡಗಳು (೨), (೪) "**ವೃಷಣೌ**" ಪುರುಷರ ಅಂಡಬೀಜಗಳು (೨), (೫) "**ಶೇಫಃ**" ಪುರುಷನ ಜನನೇಂದ್ರಿಯ (೧), (೬) "**ಉಖೆ**" ಬಗಲುಗಳಲ್ಲಿಯ ತಗ್ಗು ಪ್ರದೇಶಗಳು (೨), (೭) "**ವಂಕ್ಷಣೌ**" ತೊಡೆಯ ಎಲವುಗಳ ಸಂಧಿಗಳು (೨), (೮) "**ಕುಕುಂದರೌ**" ನಿತಂಬದ ಕೆಳಗಡೆಯಿರುವ ತಗ್ಗು ಪ್ರದೇಶಗಳು (೨), (೯) "**ಬಸ್ತಿಶೀರ್ಷಂ**" ಬಸ್ತಿಯ ಬುಡ ನಾಭಿಯ ಕೆಳಭಾಗವು (೧), (೧೦) "**ಉದರಂ**" ಹೊಟ್ಟೆಯು (೧), (೧೧) "**ಸ್ತನೌ**" ಮೊಲೆಗಳು (೨), (೧೨) "**ಶ್ಲೇಷ್ಮಭುವೌ**" ಕುತ್ತಿಗೆಯ ಎಡಬಲ ಪಾರ್ಶ್ವಗಲ್ಲಿರುವ ವ್ಯವಸ್ಥಿತವಾದ ಕಫದಭಾಗಗಳು (೨), (೧೩) "**ಬಾಹುಪಿಂಡಿಕೆ**" ತೋಳಿನ ಮೊಳಕೈ ಮತ್ತು ಮೇಲ್ಭಾಗಕ್ಕಿರುವ ಮಾಂಸದ ಪಿಂಡಿಕೆಗಳು (೨), (೧೪) "**ಚಿಬುಕಂ**" ತುಟಿಯ ಕೆಳಭಾಗ ಗದ್ದವು (೧), (೧೫) "**ಓಷ್ಠೌ**" ಮೇಲಿ ಕೆಳಗಿನ ತುಟಿಗಳು (೨), (೧೬) "**ಸೃಕ್ಕಣ್ಯೌ**" ತುಟಿಗಳ ಅಂತ್ಯಭಾಗವಾದ "**ಕಟಬಾಯಿಗಳು**" ಅಥವಾ ಎರಡೂ ಕಟಬಾಯಿಗಳ ಎಡಬಲಗಳಲ್ಲಿರುವ ಒಳಗಿನ ಭಾಗಗಳು (೨),(೧೭) "**ದಂತವೇಷ್ಟಕೌ**" ದಂತಪಂಗ್ತಿಗಳ ಬುಡದಲ್ಲಿರುವ ಮಾಂಸವೇಷ್ಟನ "ವಸಡಿಗಳು" (೨), (೧೮) "**ತಾಲು**" ನಾಲಿಗೆಯ ಮೇಲ್ಭಾಗದಲ್ಲಿರುವ ಭಿತ್ತಿಪ್ರದೇಶ "ಅಂಗಳವು" (೧), [೧೯] "**ಗಲಶುಂಡಿಕಾ**" ತಾಲು ಮೂಲದಲ್ಲಿ ನಾಲಿಗೆಗೆಹತ್ತಿಕೊಂಡಿರುವ, ಕಂಠ ರಂಧ್ರ

ದಲ್ಲಿಯ ಸೂಕ್ಷ್ಮವಾದ ಮಾಂಸಪಿಂಡವು, ಇದು ಕಿರುನಾಲಿಗೆಅಲ್ಲ [೧], [೨೦] "**ಉಪಜಿಹ್ವಿಕೆ**" ನಾಲಿಗೆಯ ಮೇಲ್ಭಾಗದಲ್ಲಿರುವ ಕಿರುನಾಲಿಗೆ, ಮತ್ತು ನಾಲಿಗೆಯ ಕೆಳಗೆ ಹತ್ತಿಕೊಂಡಿರುವ ನಾಲಿಗೆ ಕೆಳಪ್ರದೇಶ, ಉಪ ಜಿಹ್ವೆಗಳು [೨], [೨೧] "**ಗೋಜಿಹ್ವಿಕಾ**" ಮಾತಾಡಲಿಕ್ಕೆ ಕಾರಣವಾದ ಪ್ರಧಾನಜಿಹ್ವೆ "ನಾಲಿಗೆಯು" [೧], [೨೨] "**ಗಂಡೌ**" ಎಡಬಲಗಳಲ್ಲಿರುವ "ಕಪೋಲಗಳು" [೨], [೨೩] "**ಕರ್ಣಶಷ್ಕುಲಿಕೆ**" ಕಿವಿರಂಧ್ರಗಳ ಮುರಿಗೆ ಗಳು [೨], [೨೪] "**ಕರ್ಣಪುತ್ರಕೌ**" ರಂಧ್ರದ ಸುತ್ತಲೂ ಬಹಿರ್ಭಾಗ ದಲ್ಲಿರುವ "ಕಿವಿಗಳು" [೨], [೨೫] "**ಅಕ್ಷಿಕೂಟೆ**" ಅಕ್ಷಿಗೋಲಕ "ಕಣ್ಣು ಗುಡ್ಡೆಗಳು" [೨], [೨೬] "**ಅಕ್ಷಿಕನೀನಿಕೆ**" ಮೂಗಿನ ಆದಿಯಲ್ಲಿ ಹತ್ತಿ ಕೊಂಡಿರುವ ಎರಡೂ ಕಣ್ಣುಗಳ ಸಂಧಿ ಭಾಗಗಳು [೨], [೨೭] "**ಭ್ರುವೌ**" ಹುಬ್ಬು, ಕಣ್ಣಿನಮೇಲ್ಭಾಗಗಳು [೨], ಈಗ ಹೇಳಿದ ೪ ಕ್ಕೆ "**ಅಕ್ಷಿವರ್ತ್ಮ**" ವೆಂಬ ಹೆಸರು. [೨೮] "**ಅವಟುಃ**" ಕುತ್ತಿಗೆ ತಲೆಗಳೆರಡೂ ಕೂಡುವ ಹಿಂಬದಿಯ ಸಂಧಿ ಭಾಗದಲ್ಲಿರುವ ಗಂಟು, ಅಥವಾ, ಹಿಂಬದಿಯಲ್ಲಿ ಎರಡೂ ಭುಜಗಳ ಸರಿಯಾಗಿ ಮಧ್ಯದಲ್ಲಿರುವ ಕುತ್ತಿಗೆಯ ಸಂಧಾನಕವಾದ ಗಂಟು, ಇಲ್ಲವೇ, ಕುತ್ತಿಗೇ ಸಂಧಿಯ ನಂತರವಾದ ಭಾಗವು [೧], [೨೯] "**ಪಾಣಿ ಪಾದಹೃದಯಾನಿ**" ಹಸ್ತಪಾದಗಳ ತಳಭಾಗಗಳಲ್ಲಿಯ ಮಧ್ಯ ಪ್ರದೇಶವು [೪], **ಹೀಗೆ ಅಂಗಗಳು**[೬], **ಉಪಾಂಗಗಳು** [೫೬] ಚರಕ ಮತದಂತೆ ಇರುತ್ತವೆ.

## ಶರೀರವಿಭಾಗ ನಿರ್ದೇಶವು

**ತಸ್ಯ ಪುನಃ ಸಂಖ್ಯಾನಂ :— ತ್ವಚಃ ಕಲಾಧಾತವೋಮಲಾ ದೋಷಾ ಯಕೃತ್ ಪ್ಲೀಹಾನೌ ಫುಪ್ಫುಸ ಉಂಡುಕೋಹೃದ ಯಮಾಶಯಾ ಅಂತ್ರಾಣಿವೃಕ್ಕೌ ಸ್ರೋತಾಂಸಿಕಂಡರಾಜಾ ಲಾನಿಕೂರ್ಚಾರಜ್ಜವಃ ಸೇವನ್ಯಃ ಸಂಘಾತಾಃ ಸೀಮಂತಾ ಅಸ್ಥೀನಿ ಸಂಧಯಃ ಸ್ನಾಯವಃ ಪೇಶ್ಯೋಮರ್ಮಾಣಿಸಿರಾಧ ಮನ್ಯೋ ಯೋಗವಹಾನಿ ಸ್ರೋತಾಂಸಿ ಚ ||**

( ಸುಶ್ರುತ|| ಶಾರೀರ|| ಅ. ೫ ಸೂ. ೫ )

(೧) "**ತ್ವಚಃ**" ಚರ್ಮಗಳು. (೨) "**ಕಲಾ**" ಆಶಯಗಳ ಸ್ಥಾನಗಳ ಸುತ್ತಲಿರುವ ಪ್ರದೇಶಗಳು (೩) "**ಧಾತವಃ**" ರಸದಿಂದಾರಂಭಿಸಿ ಶುಕ್ರ ಪರ್ಯಂತವಾದ ಧಾತುಗಳು. (೪) "**ಮಲಾ**" ಮಲಮೂತ್ರ ಸ್ವೇದಾದಿಗಳು. (೫) "**ದೋಷಾಃ**" ವಾತ ಪಿತ್ತ ಕಫಗಳು. (೬) "**ಯಕೃತ್‌ಪ್ಲೀಹಾನೌ**" ಯಕೃತ್‌ಖಂಡ, ಪ್ಲೀಹಗಳು. (೭) "**ಫುಪ್ಫುಸಃ**" ಎಡಬಲದ ಎರಡು ಭಾಗಗಳುಳ್ಳ ಫುಪ್ಫುಸವು. (೮) "**ಉಂಡುಕಃ**" ಕೋಷ್ಠದ ಒಳಗಿನ ಭಾಗದಲ್ಲಿದ್ದು ಮಲಮೂತ್ರಗಳನ್ನು ವಿಭಾಗಿಸುತ್ತದೆ. (೯) "**ಹೃದಯಂ**" ಹೃದಯವು ಜೀವಿಸಲಿಕ್ಕೆ ಅತಿಮುಖ್ಯವಾದದ್ದೂ ಸತ್ವಮಯವೂ ಚೇತನಾಧಿಷ್ಠಾನವೂ ಆಗಿರುತ್ತದೆ. (೧೦) "**ಆಶಯಾಃ**" ವಾತಾಶಯಾದಿ ಏಳು ಆಶಯಗಳು, ಸ್ತ್ರೀಯರಿಗೆ ಗರ್ಭಾಶಯವು ಅಧಿಕವಿರುತ್ತದೆ. (೧೧) "**ಅಂತ್ರಾಣಿ**" ದೊಡ್ಡ ಕರುಳು ಸಣ್ಣ ಕರುಳುಗಳೆಂಬ ಭೇದವುಳ್ಳ ಕರುಳುಗಳು. (೧೨) "**ವೃಕ್ಕೌ**" ಹೊಟ್ಟೆಯಲ್ಲಿರುವ ಮಾಂಸದ ಪಿಂಡಗಳು "**ಕುಕ್ಷಿಗೋಲಕೌ**" ಎಂದು ಹೇಳುತ್ತಾರೆ. (೧೩) "**ಸ್ರೋತಾಂಸಿ**" ಕಿವಿ ಮೊದಲಾದ ರಂಧ್ರಗಳು. (೧೪) "**ಕಂಡರಾಃ**" ಕಂಡರವೆಂದರೆ ಮಹಾಸ್ನಾಯುಗಳು. (೧೫) "**ಜಾಲಾನಿ**" ಮಾಂಸ ಶಿರಾಸ್ನಾಯು ಅಸ್ಥಿಗಳ ಪರಸ್ಪರವಾಗಿ ಕೂಡಿ ಹೆಣೆಯಲ್ಪಟ್ಟ ಜಾಳಿಗೆ (ಬಲೆ) ಯಂತೆ ಇರುತ್ತವೆ. ಆದ್ದರಿಂದ "ಜಾಲಾನಿ" ಎಂದು ಹೇಳಿದ್ದಾರೆ. (೧೬) "**ಕೂರ್ಚಾ**" ಬೇರೆಬೇರೆಯಾದ ಬೆರಳು ಮೊದಲಾದವುಗಳು ಕೂಡಿ ಒಟ್ಟಾದ ಭಾಗವು. ಕುಂಚದಂತೆ ಕಾಣುತ್ತಿರುತ್ತವೆ (೧೭) "**ರಜ್ಜವಃ**" ಹಗ್ಗದಂತಿರುವ ಮಾಂಸ ರಜ್ಜುಗಳು (೧೮) "**ಸೇವನ್ಯಃ**" ಹೊಲಿಗೆಗಳು ಎರಡು ವಿಭಾಗಗಳನ್ನು ಕೂಡಿಸಿ ಹೊಲಿದಂತೆ ಇರುವ ಸ್ಥಳಗಳು. (೧೯) "**ಸಂಘಾತಾಃ**" ಅಸ್ಥಿಗಳು ಗುಂಪಾಗಿ ಕೂಡಿದ ಭಾಗಗಳು. (೨೦) "**ಸೀಮಂತಾಃ**" ಅಸ್ಥಿಗಳ ಕೂಡುವಿಕೆಯ ಮಧ್ಯವು, ಬೈತಲೆಯಂತೇ ಇರುವದರಿಂದ "ಸೀಮಂತ"ವೆಂದು ಹೇಳಿದ್ದಾರೆ. (೨೧) "**ಅಸ್ಥೀನಿ**" ಎಲುವುಗಳು. (೨೨) "**ಸಂಧಯಃ**" ಅಸ್ಥಿಗಳು ಒಂದಕ್ಕೊಂದು ಕೂಡಿದಸ್ಥಳ ಸಂಧಿಗಳು ಕನ್ನಡದಲ್ಲಿ "**ಎಲುಬುಗಳ ಕೀಲುಗಳೆಂದು**" ಅನ್ನುತ್ತಾರೆ. (೨೩) "**ಸ್ನಾಯವಃ**" ದೇಹದಲ್ಲಿಯ ಅಸ್ಥಿಗೆ ಹೊಂದಿದ ಮಾಂಸಾದಿಗಳನ್ನು ಕದಲದಂತೆ ಆಯಾವ ಸ್ಥಳದಲ್ಲಿ ಬಿಗಿಯಾಗಿ ಕಟ್ಟುವ ಬಂಧನಗಳೇ ಸ್ನಾಯುಗಳು. ಬಿರುಸಾದ ಮಾಂಸದ ಪಟ್ಟಿಯಂತೇ

ಇರುತ್ತವೆ. (೨೪) "ಪೇಶ್ಯಃ" ಮಾಂಸದಚೀಲಗಳು (೨೫) "ಮರ್ಮಾಣಿ":- ಮ್ರಿಯತೆಅನೇನೇತಿ ಮರ್ಮ ॥ ಯಾವ ಸ್ಥಳದಲ್ಲಿ ಪೆಟ್ಟು ತಾಗಿದರೆ ಸಾಯುವದು ಅಥವಾ ಅತ್ಯಂತ ನೋವಾಗುವದೋ, ಅದು ಮರ್ಮವು (೨೬) "ಸಿರಾಃ":— **ಸರಣಾತ್ ಸಿರಾಃ** ॥ ರಸರಕ್ತಾದಿಗಳನ್ನು ಶರೀರದ ಎಲ್ಲ ಭಾಗಕ್ಕೂ ಒಯ್ಯಲು, ಪಸರಿಸಿದ "**ನರಗಳು**" ಅವುಗಳಿಗೆ "**ಸಿರಾ**" ಎಂಬ ಹೆಸರು (೨೭) "**ಧಮನ್ಯಃ**":— **ಧ್ಮಾನಾದ್ಧಮನ್ಯಃ** ॥ ಬಾಹ್ಯವಾದ ರಸ ಮೊದಲಾದವುಗಳನ್ನು ತಕ್ಕೊಂಡು ತುಂಬಿಕೊಂಡು ಪಸರಿಸುವದರಿಂದ, ಧಮನಿಗಳೆಂಬ ಹೆಸರು. (೨೮) "**ಯೋಗವಹಾನಿಸ್ರೋತಾಂಸಿಚ**" ಧಮನೀ ವ್ಯಾಕರಣದಲ್ಲಿ ಹೇಳುವ, ಪ್ರಾಣೋದಕ ಅನ್ನವಾಹಿಗಳಾದ ಅಂತ ರ್ಮುಖ ಸ್ರೋತಸ್ಸುಗಳು. ಹಿಂದೆ ಹೇಳಿರುವವು "**ಬಹಿರ್ಮುಖ**" ಬಾಯಿ ಮೊದಲಾದವುಗಳು.

**ಧ್ಮಾನಾದ್ಧಮನ್ಯಃ, ಸ್ರವಣಾತ್ಸ್ರೋತಾಂಸಿ, ಸರಣಾತ್ ಸಿರಾಃ॥**
**( ಚರಕ॥ ಸೂತ್ರ. ಸ್ಥಾ. ಅ. ೩೦ ಸೂ. ೧೨ )**

ಆಹಾರ ರಸಾದಿಗಳನ್ನು ಹೊರಗಿನಿಂದ ತನ್ನಲ್ಲಿ ತುಂಬಿಕೊಂಡು ನಡೆ ಸುತ್ತದೆಯೆಂದು "ಧಮನಿ"ಯೆಂಬ ಹೆಸರು. ಪೋಷಕ ರಸಾದಿಗಳ ಸ್ರವಣದಿಂದ "ಸ್ರೋತಸ್ಸೆಂಬ" ಹೆಸರು. ದೇಹದಲ್ಲಿ ಎಲ್ಲ ಕಡೆಗೂ ರಸಾದಿಗಳನ್ನು ಪ್ರಸರಣ ಮಾಡುವದರಿಂದ "ಸಿರಾ" ಎಂದನ್ನುವರು.

ಮುಖ್ಯವಾಗಿ ಶರೀರ ವಿಭಾಗಗಳ ನಾಮ ನಿರ್ದೇಶಾತ್ಮಕವಾಗಿ (೨೯) ಇರುತ್ತವೆ. "ಯಕೃತ್‌ಪ್ಲೀಹ" ಎಂಬಲ್ಲಿ ಎರಡು ಸಂಖ್ಯೆಯನ್ನುಗ್ರಹಿಸಬೇಕು.

**ಶರೀರ ವಿಭಾಗಗಳ ಸಂಖ್ಯಾ ನಿರ್ದೇಶವು.**

**ತ್ವಚಃಸಪ್ತ, ಕಲಾಃಸಪ್ತ, ಆಶಯಾಃಸಪ್ತ, ಧಾತವಃಸಪ್ತ, ಸಪ್ತ ಸಿರಾಶತಾನಿ,ಪಂಚಪೇಶೀಶತಾನಿ, ನವಸ್ನಾಯುಶತಾನಿ,ತ್ರೀಣ್ಯ ಸ್ಥಿಶತಾನಿ, ದ್ವೇದಶೋತ್ತರೇಸಂಧಿಶತೆ,ಸಪ್ತೋತ್ತರಂ ಮರ್ಮ ಶತಂ, ಚತುರ್ವಿಂಶತಿರ್ಧಮನ್ಯಃ, ತ್ರಯೋದೋಷಾಃ, ತ್ರಯೋ**

ಮಲಾಃ, ನವಸ್ರೋತಾಂಸಿ, ಷೋಡಶಕಂಡರಾಃ, ಷೋಡಶ ಜಾಲಾನಿ, ಷಟ್ ಕೂರ್ಚಾಃ, ಚತಸ್ರೋರಜ್ಜವಃ, ಸಪ್ತಸೇವನ್ಯಃ, ಚತುರ್ದಶ ಸಂಘಾತಾಃ, ಚತುರ್ದಶ ಸೀಮಂತಾಃ, ದ್ವಾವಿಂಶತಿರ್ಯೋಗವಹಾನಿ ಸ್ರೋತಾಂಸಿ, ದ್ವಿಕಾನ್ಯಂತ್ರಾಣಿ, ಚೇತಿಸಮಾಸಃ॥ [ ಸುಶ್ರುತ॥ ಶಾರೀರ॥ ಅ. ೫ ಸೂ. ೬ ]

೧] ಚರಕ ಮತದಂತೆ:— ತ್ವಚೆಗಳು [೬]
"ತ್ವಚಃ" ಚರ್ಮಗಳು [೭]
೨] "ಕಲಾಃ" ಕಲಾಸ್ಥಾನಗಳು [೭]
೩] "ಆಶಯಾಃ" ವಾತಾದಿ ಆಶಯಗಳು [೭]
೪] "ಧಾತವಃ" ರಸಾದಿ ಧಾತುಗಳು [೭]
೫] "ಸಿರಾಃ" ದೇಹದಲ್ಲಿ ರಸರಕ್ತಾದಿಗಳನ್ನು ಸಂಚಾರ ಮಾಡಿಸುವ ನರಗಳು [೭೦೦]
೬] "ಪೇಶ್ಯಃ" ಮಾಂಸ ಚೀಲಗಳು [೫೦೦]
೭] "ಸ್ನಾಯವಃ" ಸ್ನಾಯುಗಳು [೯೦೦]
೮] "ಅಸ್ಥೀನಿ" ಅಸ್ಥಿಗಳು [೩೦೦]
೯] "ಸಂಧಯಃ" ಸಂಧಿಗಳು [೨೧೦]
ಅತ್ರೇಯ ಮತದಂತೆ:— ಸಂಧಿಗಳು [೨೦೦೦]
೧೦] "ಮರ್ಮಾಣಿ" ಮರ್ಮಗಳು [೧೦೭]
೧೧] "ಧಮನ್ಯಃ" ಧಮನಿಗಳು [೨೪]
೧೨] "ದೋಷಾಃ" ವಾತ ಪಿತ್ತ ಕಫಗಳು [೩]
೧೩] "ಮಲಾಃ" ಮಲಮೂತ್ರ ಸ್ವೇದಗಳು [೩]
೧೪] "ಸ್ರೋತಾಂಸಿ" ಬಹಿರ್ಮುಖವಾದ ಬಾಯಿ ಮೊದಲಾದ ರಂಧ್ರಗಳು [೯]
೧೫] "ಕಂಡರಾಃ" ಮಹಾಸ್ನಾಯುಗಳು [೧೬]
೧೬] "ಜಾಲಾನಿ" ಬಲೆಗಳಂತೆ ಇದ್ದವುಗಳು [೧೬]
೧೭] "ಕೂರ್ಚಾಃ" ಕುಂಚನದಂತಿರುವವುಗಳು [೬]
೧೮] "ರಜ್ಜವಃ" ಮಾಂಸದ ಹಗ್ಗಗಳು [೪]

೧೯] "ಸೇವನ್ಯಃ" ಹೊಲಿಗೆಗಳು [೭]
೨೦] "ಸಂಘಾತಾಃ" ಅಸ್ಥಿಗಳ ಗುಂಪುಗಳು [೧೪]
೨೧] "ಸೀಮಂತಾಃ" ಅಸ್ಥಿಗಳು ಕೂಡುವ ಮಧ್ಯ ಭಾಗಗಳು ಬೈತಲೆಯಂತೆ ಇರುತ್ತವೆ [೧೪]
೨೨] "ಯೋಗವಾಹಿಸ್ರೋತಾಂಸಿ" ಅಂತರ್ಮುಖ ಸ್ರೋತಸ್ಸುಗಳು [೨೨]
೨೩[ "ಅಂತ್ರಾಣಿ" ದೊಡ್ಡ ಮತ್ತು ಸಣ್ಣ ಕರುಳುಗಳು [೨]

ಪ್ರತಿಯೊಂದು ವಿಭಾಗದ ಸಂಖ್ಯಾ ನಿರ್ದೇಶವು ಮುಗಿಯಿತು.

# (೧೯) ಸಪ್ತತ್ವಗ್ವಿಜ್ಞಾನವು

ದೇಹಕ್ಕೆ ಬಹಿರ್ಭಾಗದಲ್ಲಿ ಆವರಣೆಯೆಂದರೆ ಚರ್ಮ [ತ್ವಕ್] ವಾಗಿರುತ್ತದೆ. ಮರಗಳಿಗೆ ಹೇಗೆ ತೊಗಟೆಯು (ಚಲ್ಲಿ) ಹೊರಭಾಗದಲ್ಲಿದ್ದು ಒಳಭಾಗವನ್ನು ರಕ್ಷಿಸುತ್ತದೆಯೋ, ಅದರಂತೆ ಚರ್ಮವು ಬಹಿರ್ಭಾಗದಲ್ಲಿದ್ದುಕೊಂಡು ದೇಹವನ್ನೂ, ಒಳಭಾಗವನ್ನೂ ರಕ್ಷಿಸುತ್ತದೆ. ಮೇಲೆ ಕಾಣುವ ಚರ್ಮದ ಒಳಗಡೆಗೆ ಬಹಳೇ ತೆಳುವಾದ ಚರ್ಮದ ಥರಗಳು ಇರುತ್ತವೆ. ಅವುಗಳಿಗೆ "ಅಂತಸ್ತ್ವಚಃ" ಎಂದು ಅನ್ನುತ್ತಾರೆ. ಬಹಿರ್ಭೂತವಾದ ಸ್ಥೂಲ ಚರ್ಮದ ಒಳಗಡೆ [೬] ಚರ್ಮಗಳು ಒಂದರ ಮೇಲೊಂದರಂತೆ ಇರುತ್ತವೆ. ಬಾಹ್ಯ ಚರ್ಮ (೧), ಅಂತರ್ಭಾಗದಲ್ಲಿ (೬), ಹೀಗೆ [೭] ತ್ವಚೆಗಳು ಇರುತ್ತವೆ.

**ತ್ವಚೋನಾಮ:— ಸರ್ವದೇಹಾವರಣರೂಪಾ, ಭೂಮಿಃ ಸ್ಪರ್ಶನೇಂದ್ರಿಯಸ್ಯ ಸ್ರೋತಸಾಂ ಚ ಸ್ವೇದವಹಾನಾಂ, ರೋಮ್ಣಾಮಪಿಸರೋಮಕೂಪಾನಾಂ ॥**

ಚರ್ಮಗಳೆಂದರೆ ಸಂಪೂರ್ಣ ದೇಹಕ್ಕೆ ಹೊದಿಕೆಯಂತಿರುತ್ತವೆ. ನಾವು ಯಾವದರಿಂದ ಸ್ಪರ್ಶಜ್ಞಾನವಮಾಡಿಕೊಳ್ಳುತ್ತೇವೆಯೋ ಅಂಥ ಸ್ಪರ್ಶನೇಂದ್ರಿ

ಯವು, ಸಮಗ್ರಶರೀರದಲ್ಲಿ ಚರ್ಮವನ್ನಾಶ್ರಯಿಸಿಯೇ ಇರುತ್ತದೆ. ಮುಖಾದಿ ರಂಧ್ರಗಳಿಗೂ, ಸ್ವೇದ [ಬೆವರು]ವನ್ನು ಹೊರಗೆ ಹಾಕುವ ಸ್ವೇದವಾಹಕವಾದ ಪರಮ ಸೂಕ್ಷ್ಮ ಸಿರಗಳಿಗೂ, ಕೂದಲುಗಳಿಗೂ, ಸೂಕ್ಷ್ಮಛಿದ್ರಗಳಾದ ರೋಮ ಕೂಪಗಳಿಗೂ, ಆಶ್ರಯಭೂಮಿಯಾಗಿರುತ್ತವೆ

ತಸ್ಯಖಲ್ವೇವಂ ಪ್ರವೃತ್ತಸ್ಯ ಶುಕ್ರಶೋಣಿತಸ್ಯಾಭಿಪಚ್ಯಮಾ
ನಸ್ಯ ಕ್ಷೀರಸ್ಯೈವ ಸಂತಾನಿಕಾಃ ಸಪ್ತ ತ್ವಚೋ ಭವಂತಿ ॥

[ ಸುಶ್ರುತ॥ ಶಾರೀರ॥ ಅ ೪ ಸೂ. ೪ ]

ಗರ್ಭಾಶಯದಲ್ಲಿ ಮಿಲಿತವಾದ ಶುಕ್ರಶೋಣಿತದ ಗುಂಪು, ಭೂತಾತ್ಮ [ಜೀವ] ನಿಂದ ಕೂಡಿರಲು, ಅದು ಗರ್ಭಾಶಯ ತೇಜಸ್ಸಿನಿಂದ [ಉಷ್ಣತೆಯಿಂದ]ಪಾಕವಾಗುತ್ತದೆ. ಆಗ ಕಾಯಿಸುತ್ತಿರುವ ಹಾಲಿಗೆ ಹೇಗೆ ಕೆನೆ [ಥರ] ಬರುತ್ತದೆಯೋ, ಅದರಂತೇ ಶುಕ್ರಶೋಣಿತ ಗುಂಪಿನ ಪಾಕವಾಗುತ್ತಿರಲು ಚರ್ಮ [ಆವರಣ] ಗಳು ಉತ್ಪನ್ನವಾಗುತ್ತವೆ.

## * ತ್ವಚಾವಿಷಯತಂತ್ರಾಂತರದಲ್ಲಿ

ತ್ವಚಾಯಾಮಖಿಲಃ ಕಾಯಃ ಸಂವೃತೋವಿಶ್ವಕರ್ಮಣಾ॥
ಬಾಹ್ಯೋಪದ್ರವಸಂಘಾತಾದ್ರಕ್ಷಿತಃ ಸಾಧುತಿಷ್ಠತಿ ॥೧॥

ಸ್ತರದ್ವಯವತೀಯಂತ್ವಕ್ ಬಾಹ್ಯಚರ್ಮೇತಿಕಥ್ಯತೇ॥
ಸ್ತರೋನಾಮೋಚ್ಯತೇಂತಸ್ತ್ವಕ್ ಭೂಮಿಃ ಸ್ಪರ್ಶೇಂದ್ರಿಯ
ಸ್ಯಸಾ ॥೨॥

ಉಪರ್ಯುಪರಿವಿಸ್ತೀರ್ಣಸ್ತರಸಪ್ತಕಸಂಹತೇ॥
ಏಷಾತ್ವಗಖಿಲಾಜಾತಾಕ್ಶೈತ್ಯಿದಿತಿಚಮನ್ಯತೇ ॥೩॥

ತೋಯಾನಿಲಾದಿಸಂಕರ್ಷಃ ಸ್ವೇದಸ್ಯಚವಿನಿರ್ಗಮಃ ॥
ದೈಹಿಕಸ್ಯೋಷ್ಮಣೋರಕ್ಷಾತ್ವಚಾಸಂಪದ್ಯತೇಧೃವಮ್ ॥೪॥

ಸೃಷ್ಟಿಕರ್ತನಾದ ವಿಶ್ವಕರ್ಮನು ಚರ್ಮದಿಂದ ಸಂಪೂರ್ಣದೇಹವನ್ನು ಸುತ್ತಿರುತ್ತಾನೆ. ಚರ್ಮದಲ್ಲಿ ದೇಹವನ್ನುಇಟ್ಟು ಸುತ್ತಲ್ಪಟ್ಟಂತೆಸಮಗ್ರ ದೇಹವನ್ನು ಚರ್ಮವು ವ್ಯಾಪಿಸಿರುತ್ತದೆ. ಹೊರಗೆ ಚರ್ಮದ ಆವರಣ ರೂಪವಾದ ಹೊದಿಕೆಇರುವದರಿಂದ ಬಾಹ್ಯವಾದ ಚಳಿಮಳೆ ಉಷ್ಣತೆ ಆಘಾತಾದಿಗಳಿಂದ, ಒಳಭಾಗ ದೇಹವು ರಕ್ಷಿಸಲ್ಪಟ್ಟದ್ದಾಗಿ ಚನ್ನಾಗಿರುತ್ತದೆ. ತ್ವಚಾದಲ್ಲಿ ಎರಡು ವಿಭಾಗಗಳನ್ನು ಮಾಡಿರುತ್ತಾರೆ. ಕಣ್ಣಿಗೆ ಕಾಣುವ ಬಾಹ್ಯದಲ್ಲಿರುವದಕ್ಕೆ "**ಚರ್ಮ**"ವೆಂದೂ ಒಳಗಡೆ ಇರುವ ತ್ವಚೆಗೆ "**ಸ್ತರ**"ವೆಂದೂ ಅನ್ನುತ್ತಾರೆ ಸ್ತರದಲ್ಲಿ ಸ್ಪರ್ಶೇಂದ್ರಿಯ ಆಶ್ರಯಸ್ಥಾನವು ಇರುತ್ತದೆ. ಸ್ಪರ್ಶೇಂದ್ರಿಯ ಆಶ್ರಯವಾದ ಅಂತಸ್ತ್ವಚೆಗೆ "**ಸ್ತರ**"ವೆಂದು ಹೇಳುತ್ತಾರೆ.

ಒಂದರಮೇಲೊಂದರಂತೆ **ಸ್ತರ**ಗಳು (೭) **ಕೂಡಿ** ಒಂದು ಧಪ್ಪವಾದ ತ್ವಚೆಯಾಗಿದೆಯೆಂದು, ಕೆಲವರಿಂದ ತಿಳಿಯಲ್ಪಡುತ್ತದೆ. ಎಲ್ಲ ಚರ್ಮಗಳು ಒಟ್ಟಾಗಿ ಒಂದರಮೇಲೊಂದರಂತೆ ಹೊಂದಿಕೊಂಡು, ಈ ಸ್ಥೂಲವಾದ (ಧಪ್ಪ) ತ್ವಚೆಯಾಗಿದೆಯೆಂದು ಕೆಲವರು ಹೇಳುತ್ತಾರೆ. ನೀರು ಗಾಳಿ ಮೊದಲಾದವುಗಳನ್ನು ಒಳಗೆ ತಕ್ಕೊಳ್ಳುವದು ಸ್ವೇದವನ್ನು ಹೊರಗೆ ಹಾಕುವದು ಮೊದಲಾದ ಕರ್ತವ್ಯಗಳನ್ನು ತ್ವಚೆಯು ಮಾಡುತ್ತದೆ. ದೇಹದ ಒಳಭಾಗಗಳಲ್ಲಿ ಉಷ್ಣತೆಯನ್ನು ರಕ್ಷಿಸುವ ಕೆಲಸವು ತ್ವಚೆಯಿಂದಲೇ ನಡೆಯುತ್ತದೆ. ಅರ್ಥಾತ್ ದೇಹದ ಒಳಭಾಗ ಹೊರಭಾಗಗಳು ತ್ವಚೆಯಿಂದ ರಕ್ಷಿತವಾಗುತ್ತವೆಂದರ್ಥವು.

## ಸಪ್ತತ್ವಚಃ

**ತಾಸಾಂಪ್ರಥಮಾವಭಾಸಿನೀನಾಮ, ಯಾ ಸರ್ವಾನ್‌ವರ್ಣಾನವಭಾಸಯತಿ ಪಂಚವಿಧಾಂಚಛಾಯಾಂ ಪ್ರಕಾಶಯತಿ, ಸಾವ್ರೀಹೇರಷ್ಟಾದಶಭಾಗಪ್ರಮಾಣಾ, ಸಿಧ್ಮಪದ್ಮಕಂಟಕಾಧಿಷ್ಠಾನಾ; ದ್ವಿತೀಯಾಲೋಹಿತಾನಾಮ, ಷೋಡಶಭಾಗಪ್ರ**

---

★ ಈ ಗುರುತುಳ್ಳ ವಿಷಯಗಳು ತಂತ್ರಾಂತರದಲ್ಲಿಯವೆಂದು ತಿಳಿಯಬೇಕು.

ಮಾಣಾ, ತಿಲಕಾಲಕನ್ಯಚ್ಛವ್ಯಂಗಾಧಿಷ್ಠಾನಾ; ತೃತೀಯಾಶ್ವೇ ತಾನಾಮ, ದ್ವಾದಶಭಾಗಪ್ರಮಾಣಾ, ಚರ್ಮದಲಾಜಗಲ್ಲೀಮ ಷಕಾಧಿಷ್ಠಾನಾ; ಚತುರ್ಥೀತಾಮ್ರಾನಾಮಾಷ್ಟಭಾಗ ಪ್ರಮಾ ಣಾ, ವಿವಿಧಕಿಲಾಸಕುಷ್ಠಾಧಿಷ್ಠಾನಾ; ಪಂಚಮೀವೇದಿನೀನಾ ಮಪಂಚಭಾಗಪ್ರಮಾಣಾ, ಕುಷ್ಠವಿಸರ್ಪಾಧಿಷ್ಠಾನಾ; ಷಷ್ಠೀ ರೋಹಿಣೀನಾಮವ್ರೀಹಿಪ್ರಮಾಣಾ, ಗ್ರಂಥ್ಯಪಚ್ಯರ್ಬುದಶ್ಲೀ ಪದಗಲಗಂಡಾಧಿಷ್ಠಾನಾ; ಸಪ್ತಮೀಮಾಂಸಧರಾನಾಮವ್ರೀ ಹಿದ್ವಯಪ್ರಮಾಣಾ, ಭಗಂದರವಿದ್ರಧ್ಯರ್ಶೋಽಧಿಷ್ಠಾನಾ ॥ ಯದೇತತ್ ಪ್ರಮಾಣಂ ನಿರ್ದಿಷ್ಟಂ ತನ್ಮಾಂಸಲೇಷ್ವವಕಾಶೇ ಷು, ನಲಲಾಟೆಸೂಕ್ಷ್ಮಾಂಗುಲ್ಯಾದಿಷುಚ; ಯತೋವಕ್ಷ್ಯ ತ್ಯುದರೇಷು:- ವ್ರೀಹಿಮುಖೇನಾಂಗುಷ್ಠೋದರಪ್ರಮಾಣಮ ವಗಾಢಂವಿಧ್ಯೇತ್, (ಚಿ. ಅ. ೧೪) ಇತಿ॥
( ಸುಶ್ರುತ॥ ಶಾರೀರ॥ ಅ ೪ ಸೂ ೪ )

(೧) "**ಅವಭಾಸಿನೀ**" ಎಂಬ ಹೆಸರುಳ್ಳ ಮೊದಲನೇಯ ತ್ವಚೆಯು ಶ್ವೇತ ಕೃಷ್ಣಾದಿವರ್ಣ (ಬಣ್ಣ) ಗಳನ್ನು ತನ್ನಲ್ಲಿರುವ ಭ್ರಾಜಕಾಗ್ನಿಯಿಂದ; ಸ್ಫುಟವಾಗಿ ಭಾಸವಾಗುವಂತೆ ಮಾಡುತ್ತದೆ. ಪಂಚಭೂತಗಳ ಸ್ವರೂಪವಾದ "**ತ್ವಚೆಯು**" ಪೃಥಿವ್ಯಾದಿಗಳ ಛಾಯೆಯುಳ್ಳದ್ದಿರುವದರಿಂದ "**ಪಂಚವಿಧ ಛಾಯೆಯನ್ನು**" ಪ್ರಕಟಮಾಡುತ್ತದೆ. ಪ್ರಥಮ ತ್ವಚೆ (ಚರ್ಮ) ಪ್ರಮಾ ಣವು; ಭತ್ತದ ಹದಿನೆಂಟು ಭಾಗಗಳಷ್ಟು ಧಪ್ಪವಾಗಿರುತ್ತದೆ **ಸಿಧ್ಮ**(ಚಿಬ್ಬು), **ಪದ್ಮ** (ಒಂದು ಕುಷ್ಠ ಭೇದವು,) **ಕಂಟಕ** (ತ್ವಚೆಯಲ್ಲಿಯ ಮುಳ್ಳಿನಂಥ ಗುಳ್ಳೆಗಳು) ಗಳಿಗೆ ಸ್ಥಾನವಾಗಿರುತ್ತದೆ.

## ಛಾಯಾ ವರ್ಣ ಪ್ರಭಾದಿಗಳು

ತ್ವಚೆಯಲ್ಲಿ ಛಾಯಾ ವರ್ಣ ಪ್ರಭಾದಿಗಳು ಇರುತ್ತವೆ. "**ಛಾಯೆ**" ಯೆಂದರೆ ಪ್ರತಿ ಬಿಂಬದಲ್ಲಿ ಕಾಣುತ್ತಿರುವದು, ನೆರಳು."**ವರ್ಣ**"ವೆಂದರೆ ಶುಕ್ಲ ಕೃಷ್ಣ ಮೊದಲಾದ ಬಣ್ಣಗಳು. "**ಪ್ರಭಾ**" ಎಂದರೆ ಹೊಳಪು, ಕೆಂಪು ಹಳದಿ

ಮೊದಲಾದವುಗಳು. ರೋಗಿಯ ನೈಸರ್ಗಿಕವಾದ ಛಾಯಾದಿಗಳು ಬದಲಾಗುವದರಿಂದಗತಾಯುಷ್ಯ (ಮರಣ) ಲಕ್ಷಣವನ್ನು ಶಾಸ್ತ್ರಕಾರರು ಹೇಳುತ್ತಾರೆ ಆ ಲಕ್ಷಣವುತ್ವಚೆಯಲ್ಲಿ (ಚರ್ಮವನ್ನಾಶ್ರಯಿಸಿ) ಇರುವದರಿಂದಲೂ, ಚಿಕಿತ್ಸೆಯಲ್ಲಿ ಛಾಯಾದಿಗಳ ಸ್ಥಾನಾಶ್ರಯ ಪರಿಚಯ ಭೇದ ಬೋಧಕ್ಕಾಗಿಯೂ ಇಲ್ಲಿ ನಿರ್ದೇಶ ಮಾಡಿದ್ದಾರೆ. "ಛಾಯೆಯು" ವರ್ಣ ಪ್ರಭೆಗಳನ್ನು ಆಶ್ರಯಿಸಿಕೊಂಡಿರುತ್ತದೆಯಾದ್ದರಿಂದ **"ಛಾಯಾ ವರ್ಣಪ್ರಭಾಶ್ರಯಾ"** ಎಂದು ಹೇಳಿದ್ದಾರೆ. ಛಾಯೆಯು, ಕನ್ನಡಿ, ನೀರು, ಬಿಸಿಲು ಮೊಲಾದವುಗಳಲ್ಲಿ ಪ್ರತಿಬಿಂಬಕ್ಕೆ ಕಾರಣವಾಗಿರುತ್ತದೆ. ಛಾಯಾ ಪ್ರಭೆಗಳು ಬಹಳೇ ಸೂಕ್ಷ್ಮವಿದ್ದುದರಿಂದ ನಿರ್ಣಯಕ್ಕಾಗಿ ಭೇದವನ್ನು ವಿವರಿಸಿದ್ದಾರೆ.

**ವರ್ಣಮಾಕ್ರಮತಿಚ್ಛಾಯಾ ಭಾಸ್ತುವರ್ಣಪ್ರಕಾಶಿನೀ ||**
**ಆಸನ್ನಾ ಲಕ್ಷ್ಯತೇ ಛಾಯಾ ಭಾಃ ಪ್ರಕೃಷ್ಟಾ ಪ್ರಕಾಶತೆ ||**
(ಚರಕ|| ಇಂ, ಸ್ಥಾ. ಅ ೭ ಶ್ಲೋ ೧೬)

"ಛಾಯೆಯು" ವರ್ಣ (ಬಣ್ಣ)ವನ್ನು ಆಕ್ರಮಿಸುತ್ತದೆ. ಅರ್ಥಾತ್, ಛಾಯೆಯು ಆವರಿಸಿದರೆ ಬಣ್ಣವು ಕಾಣುವದಿಲ್ಲ ಹೀಗಿರುವದರಿಂದಲೇ ವರ್ಣವನ್ನು ಆಕ್ರಮಿಸುತ್ತದೆಂದು ಹೇಳಿದ್ದಾರೆ ಛಾಯೆಯಿಂದ ಮುಚ್ಚಿದ ಬಣ್ಣವು ಕಾಣಿಸುವದಿಲ್ಲ.

"ಪ್ರಭೆಯು" ವರ್ಣ (ಬಣ್ಣ) ವನ್ನು ಪ್ರಕಟವಾಗುವಂತೇ ಮಾಡುತ್ತದೆ. ಚರ್ಮದಲ್ಲಿರುವ ಹೊಳಪು (ಪ್ರಭೆಯು) ದೇಹದಲ್ಲಿಯ ಚರ್ಮಗತವಾದ ಬಣ್ಣವನ್ನು, ಸ್ಫುಟವಾಗಿ ಕಾಣುವಂತೆ ಪ್ರಕಟ ಮಾಡುತ್ತದೆ. ಆದ್ದರಿಂದಲೇ ದೇಹದಲ್ಲಿಯಪ್ರಭಾಕ್ಷೀಣವಾಗಲು ವರ್ಣವು ಗೋಚರವಾಗದೆ ಮಲಿನವಾಗಿ ಮನುಷ್ಯನು ಸಪ್ಪಗೆ ಕಾಣುತ್ತಾನೆ. ಇದರಿಂದ ಪ್ರಭೆಯು ವರ್ಣವನ್ನು ಸ್ಫುಟವಾಗಿ ಕಾಣುವಂತೇ ಮಾಡುತ್ತದೆನ್ನುವದು ಸಿದ್ಧವಾಯಿತು.

"ಛಾಯೆಯು" ಸಮೀಪದಲ್ಲಿದ್ದರೆ ಮಾತ್ರ ಗೋಚರವಾಗುತ್ತದೆ.
**ಉದಾ:—** ಚಿತ್ರಪಟಲ್ಲಿಯ ಛಾಯೆಯು ಸಮೀಪ ಗೋಚರವಾದದ್ದಿರುತ್ತದೆ. ದೂರದಲ್ಲಿದ್ದರೆ ಸ್ಪಷ್ಟ ಕಾಣುವದಿಲ್ಲ.

"**ಪ್ರಭಾ**" ರತ್ನ ಮುತ್ತು ಅಗ್ನ್ಯಾದಿಗಳ ಪ್ರಭೆಯು ದೂರದಲ್ಲಿದ್ದರೂ ಕಾಣುತ್ತದೆ. ಸಮೀಪದಲ್ಲಿದ್ದರಂತೂ ಕಂಡೇಕಾಣುತ್ತದೆ. **ಛಾಯೆಯು** ಅಸ್ವತಂತ್ರವೂ **ಪ್ರಭೆಯು** ಸ್ವತಂತ್ರವೂ ವರ್ಣಾದಿಗಳನ್ನು ಸ್ಫುಟ ಪಡಿಸುವಂಥಾದ್ದೂ ಇರುತ್ತದೆ.

**ವರ್ಣ:—** ಶ್ವೇತ, ಕೃಷ್ಣ, ಶ್ಯಾಮ, ಗೌರಶ್ಯಾಮ, ಮೊದಲಾದ ನಾಲ್ಕು (೪) **ವರ್ಣಗಳು.**

**ಪ್ರಭಾ:-** ರಕ್ತಾ, ಪೀತಾ, ಸಿತಾ, ಶ್ಯಾವಾ, ಹರಿತಾ, ಪಾಂಡುರಾ, ಅಸಿತಾ, ಇತ್ಯಾದಿ (೭) ಪ್ರಭೆಗಳು.

**ಛಾಯಾ:—** ಸ್ನಿಗ್ಧಾ, ವಿಮಲಾ, ರೂಕ್ಷಾ, ಮಲಿನಾ, ಸಂಕ್ಷಿಪ್ತಾ, ಎಂಬ (೫) ಛಾಯೆಗಳು. (ವರ್ಣಾದಿಗಳ ವಿಷಯದಲ್ಲಿ ವಿಶೇಷ ಬೇಕಾದವರು ಸುಶ್ರುತದ "**ಛಾಯಾವಿಪ್ರತಿಪತ್ತಿ**" ಅಧ್ಯಾಯವನ್ನೂ, ಚರಕದ "**ಪನ್ನಾರೂಪೀಯ**" ಅಧ್ಯಾಯವನ್ನು ನೋಡಿರಿ )

(೨) "**ಲೋಹಿತಾ**" ಎರಡನೇ ತ್ವಚೆಯು ಲೋಹಿತವೆಂಬ ಹೆಸರುಳ್ಳದ್ದು, ಭತ್ತದ ಹದಿನಾರು ಭಾಗಗಳ ಪ್ರಮಾಣ ಧಪ್ಪವಾಗಿರುತ್ತದೆ. "**ತಿಲಕಾಲಕ**" (ಎಳ್ಳಿನಾಕಾರದ ಕಪ್ಪುಚಿಕ್ಕೆಗಳು) "**ನ್ಯಚ್ಛ**" (ದೇಹದಲ್ಲಿಯ ಕಪ್ಪು, ಬೂದೀ ಬಣ್ಣದ ಮಂಡಲಗಳು) "**ವ್ಯಂಗ**" (ಮುಖದ ಮೇಲಿನ ಕಪ್ಪು ಮಂಡಲ, ಭಂಗು,) ಮೊದಲಾದವುಗಳು ಉತ್ಪನ್ನವಾಗುವ ಸ್ಥಾನವಾಗಿರುತ್ತದೆ.

(೩) "**ಶ್ವೇತಾ**" ಎಂಬ ಮೂರನೇ ತ್ವಚೆಯು, ವ್ರೀಹಿಯ ಹನ್ನೆರಡು ಭಾಗಗಳಷ್ಟು ಧಪ್ಪವಾಗಿರುತ್ತದೆ. "**ಚರ್ಮದಲ**" (ಚರ್ಮವನ್ನು ಉದುರಿಸುವ, ನಾಶಮಾಡುವ ಕುಷ್ಠ) "**ಅಜಗಲ್ಲೀ**" (ಹೆಸರು ಕಾಳಿನಂತೆ ಚರ್ಮದಲ್ಲೇಳುವ ನೋವಿಲ್ಲದ (ನೀರುಜ) ಗುಳ್ಳೆಗಳು) "**ಮಷಕ**" (ಉದ್ದಿನಂತೆ ಕಪ್ಪು ವರ್ಣವಿದ್ದು ನೋವಿಲ್ಲದ ಸ್ಥಿರವಾದ ಗುಳ್ಳೆಗಳು, "**ಮಚ್ಚೆ**" ಎಂದು ಅನ್ನುತ್ತಾರೆ ) ಇವುಗಳಿಗೆ ಆಶ್ರಯ ಸ್ಥಾನವಾಗಿರುತ್ತದೆ.

(೪) "ತಾಮ್ರಾ" ನಾಲ್ಕನೇ ತ್ವಚೆಯು ಭತ್ತದ ಎಂಟು ಭಾಗಗಳ ಪ್ರಮಾಣ ಧಪ್ಪವಿದ್ದು, "ಕಿಲಾಸ" (ಗುಹ್ಯ ಭಾಗದಲ್ಲಿ ಕೈಕಾಲುಗಳಲ್ಲಿ ಉತ್ಪನ್ನವಾಗುವ ಕೆಂಪು ಬಣ್ಣದ ಕುಷ್ಠವು) "ವಿವಿಧಕುಷ್ಠ" (ಸಪ್ತಮಹಾ ಕುಷ್ಠ, ಏಕಾದಶಕ್ಷುದ್ರ ಕುಷ್ಠ), ಇವುಗಳ ಉತ್ಪತ್ತಿ ಮತ್ತು ಆಶ್ರಯಸ್ಥಾನ ವಾಗಿರುತ್ತದೆ.

(೫) ವೇದಿನೀ" ಎಂಬ ಹೆಸರುಳ್ಳ ಐದನೇ ತ್ವಚೆಯು ವ್ರೀಹಿಯ ಐದು ಭಾಗಗಳ ಪ್ರಮಾಣ ಧಪ್ಪವುಳ್ಳದ್ದಿರುತ್ತದೆ. ಕುಷ್ಠಗಳಿಗೂ, ಸರ್ವ ವಿಧವಾದ (೭) ವಿಸರ್ಪಗಳಿಗೂ, ಅಧಿಷ್ಠಾನವಾಗಿರುತ್ತದೆ.

(೬) "ರೋಹಿಣೀ" ಎಂಬ ಹೆಸರುಳ್ಳ ಆರನೇ ತ್ವಚೆಯು, ಒಂದು ವ್ರೀಹಿ ಪ್ರಮಾಣ ಧಪ್ಪವಾಗಿರುತ್ತದೆ. "ಗ್ರಂಥಿ" (ಬಾವಿನಿಂದ ಕೂಡಿದ ಸಿರಾಪ್ರದೇಶದಲ್ಲುತ್ಪನ್ನವಾದ ಗಂಟು). "ಅಪಚೀ" (ಗಂಡಮಾಲೆಯ ಭೇದ, ನೆಲ್ಲೀಕಾಯಿ ಪ್ರಮಾಣದಂತೆ ಬಹಳವಾಗಿ ಒಡೆದುಸೋರಿ ಗುಣವಾಗು ವದು. ಮತ್ತು ಹೊಸದಾಗಿ ಉತ್ಪನ್ನವಾಗುತ್ತಾ ಬಹುಕಾಲ ಇರುತ್ತದೆ.) "ಅರ್ಬುದ" ನೀರಿನ ದೊಡ್ಡ ಗುಳ್ಳೆಯಂತೆ ಇರುತ್ತದೆ. ವಿಶೇಷ ಬುಡದಲ್ಲಿ ದೊಡ್ಡಗಡ್ಡೆಯಂತೆ ಇರುತ್ತಿದ್ದು, ರಕ್ತಾರ್ಬುದದವಿನಾ ಉಳಿದವುಗಳು, ಪಾಕ ವಾಗುವದಿಲ್ಲ. "ಶ್ಲೀಪದ" ಕಾಲಿನ ಚರ್ಮವು ಹುತ್ತಿನಂತೆ ಆಗುವದು. ಇದಕ್ಕೆ ವಾಡಿಕೆಯಲ್ಲಿ ಆನೆಗಾಲೆಂಬ ಹೆಸರು. "ಗಲಗಂಡ" ಗಲ ಪ್ರದೇಶ ದಲ್ಲಿ ಅಂಡಕೋಶ ಸದೃಶವಾದಗಂಟುತ್ಪನ್ನವಾಗಿಜೋಲುತ್ತಿರುತ್ತದೆ. ರೋಹಿ ಣಿಯು ಗ್ರಂಥಿ ಮೊದಲಾದವುಗಳಿಗೆ ಉತ್ಪತ್ತಿ ಆಶ್ರಯಗಳಿಗೆ ಸ್ಥಾನ ವಾಗಿರುತ್ತದೆ.

(೭) "ಮಾಂಸಧರಾ" ಎಂಬ ತ್ವಚೆಯು ಎರಡು ವ್ರೀಹಿಯಷ್ಟು ದಪ್ಪ ವಾಗಿರುತ್ತದೆ. "ಭಗಂದರ" ಅಂಡಕೋಶದ ಕೆಳಗೆ ಬಲ ಎಡ ಪಾರ್ಶ್ವಗಳಲ್ಲಿ ಉಂಟಾಗುತ್ತದೆ. ಭಗದಂತೆ ತೂತುಳ್ಳದಾಗುವದರಿಂದ ಅದನ್ನು ಉಪಮೆಯಾ ಗಿಟ್ಟು ಹೇಳಿದ್ದಾರೆ "ವಿದ್ರಧಿ" ಕುರವು. "ಅರ್ಶಃ" ಮೂಲವ್ಯಾಧಿ, ಗಂಟು, ಮೊಳೆ, ಮೊದಲಾದವುಗಳು. ಮಾಂಸಧರಾ ತ್ವಚೆಯು ಇವುಗಳಿಗೆ ಆಶ್ರಯ ವಾಗಿರುತ್ತದೆ.

ಪ್ರತಿಯೊಂದು ಚರ್ಮದ "ವ್ರೀಹಿಭಾಗ ಪ್ರಮಾಣವು" ಮಾಂಸಲ (ವಿಶೇಷ ಮಾಂಸವುಳ್ಳ) ಪ್ರದೇಶಗಳಲ್ಲಿಯದೆಂದು ತಿಳಿಯಬೇಕು. ಸ್ವಲ್ಪ ಮಾಂಸವಿದ್ದು ಚರ್ಮವು ಹೆಚ್ಚಾಗಿ ತಿಳುವಾಗಿರುವ ಪ್ರದೇಶಗಳಲ್ಲಿ ಈ ನಿಯಮವು ಅನ್ವಯಿಸಲಾರದು ಆದ್ದರಿಂದ ಮಾಂಸವು ಕಡಿಮೆಯಿರುವ ಹಣೆ, ಮತ್ತು ತೆಳುವಾದ ಬೆರಳು, ಮುಂತಾದವುಗಳಲ್ಲಿ ಪೂರ್ವೋಕ್ತ ಪ್ರಮಾಣವಿರುವದಿಲ್ಲ. ಆದ್ದರಿಂದ ಸ್ವಲ್ಪ ಮಾಂಸವಿರುವ ತಿಳುವಾದ ಪ್ರದೇಶಗಳಲ್ಲಿಯ ಪ್ರಮಾಣಗಳನ್ನು, ಪ್ರತ್ಯಕ್ಷವಾಗಿ ತಿಳಿಯಬೇಕೆಂದು ಧ್ವನಿತವಾಗುತ್ತದೆ. ದಪ್ಪವಾದ ಪ್ರದೇಶಗಳಲ್ಲಿ ಮಾತ್ರ ತ್ವಚೆಯ ಪ್ರಮಾಣ ಯೋಗ್ಯವಿರುತ್ತದೆ. ಯಾಕಂದರೆ ಉದರ ರೋಗಗಳಲ್ಲಿ ಶಸ್ತ್ರಚಿಕಿತ್ಸೆಯ ಪ್ರಮಾಣವನ್ನು ಹೀಗೆ ಹೇಳಿರುತ್ತಾರೆ. "ವ್ರೀಹಿಮುಖ" ಶಸ್ತ್ರದಿಂದ ಅಂಗುಷ್ಠ ಬೆರಳಿನ ತಳಭಾಗದ ಹೊಟ್ಟೆಯಷ್ಟು ಪ್ರಮಾಣ ತಗ್ಗಾಗುವಂತೇ ಛೇದನಮಾಡಬೇಕು. ಎಂದು ನಿರ್ದೇಶಮಾಡಿದ್ದಾರೆ.

## ವಿಶೇಷ

ಮಾಂಸಲವುಳ್ಳ ಭಾಗಗಳಲ್ಲಿ ತ್ವಚೆಗಳಿಗೆಹೇಳಿದ ಪ್ರಮಾಣವು ಸರಿಯಾದದ್ದಿರುತ್ತದೆಂದು ತೋರಿಸಲು, ಉದರದಲ್ಲಿಯ ಶಸ್ತ್ರಕ್ರಿಯೆಯ ಛೇದನೇ ಮಾಡುವ ಪ್ರಮಾಣವನ್ನು ಹೇಳಿದ್ದಾರೆ ಏಳೂ ತ್ವಚೆಗಳ ಪ್ರಮಾಣವನ್ನು ಕೂಡಿಸಲು, ಅಂಗುಷ್ಠೋದರ ಪ್ರಮಾಣವಾಗುತ್ತದೆ. ಅಂಗುಷ್ಠೋದರ ಪ್ರಮಾಣವೆಂದರೆ:— ವ್ರೀಹಿಯ ಇಪ್ಪತ್ತನೇ ಭಾಗ ಕಡಿಮೆ ಇರುವ ಆರು ವ್ರೀಹಿ ಪ್ರಮಾಣವು. ಪ್ರತಿಯೊಂದು ಚರ್ಮದ ಪ್ರಮಾಣವನ್ನು ಏಳು ತ್ವಚೆಯು ಮುಗಿಯುವ ವರೆಗೆ ಕೂಡಿಸಿದರೆ, ಈ ಪ್ರಮಾಣವು ಸಿದ್ಧವಾಗುತ್ತದೆ ಪ್ರತಿಯೊಂದು ವ್ರೀಹಿಯಲ್ಲಿಯೂ ಮೊದಲು (೨೦) ಭಾಗ ಮಾಡಿ, ನಂತರ ಆಯಾವ ಭಾಗವನ್ನು ಗಣಿಸಬೇಕು. ಉದಾ:— ಪ್ರಥಮ ತ್ವಚೆಯು "ಅವಭಾಸಿನೀ" ಎನ್ನುವದರಪ್ರಮಾಣ ವ್ರೀಹಿಯ ೧೮ ಭಾಗವು, ವ್ರೀಹಿಯಲ್ಲಿ ೨೦ ಭಾಗಮಾಡಿ ಆ ಭಾಗಗಳಲ್ಲಿಯ ೧೮ ಭಾಗಗಳಷ್ಟು ಪ್ರಮಾಣವಿರುತ್ತದೆಂದು ತಿಳಿಯಬೇಕು. ಕ್ರಮಶಃ ಪ್ರತಿಯೊಂದು ತ್ವಚೆಗಳ ಪ್ರಮಾಣ = $\frac{೧೮}{೨೦}+\frac{೧೬}{೨೦}+\frac{೧೨}{೨೦}+\frac{೮}{೨೦}+\frac{೫}{೨೦}+\frac{೨೦}{೨೦}+\frac{೪೦}{೨೦}=\frac{೧೧೯}{೨೦}$ ॥ ೫ $\frac{೧೯}{೨೦}$ ॥ ವ್ರೀಹಿಗಳು. ಎಲ್ಲ ತ್ವಚೆಗಳು ಕೂಡಿದ ಪ್ರಮಾಣವು.

# (೨೦) ಕಲಾವಿಜ್ಞಾನವು

ಧಾತುಗಳ ಸ್ಥಾನ ಮತ್ತು ಆಶಯುಗಳ ಪ್ರದೇಶಗಳಲ್ಲಿರುವ ವಿಶೇಷ ಪಕ್ವವಾದ ದೇಹೋಷ್ಣ (ಉಷ್ಣತೆ)ದಿಂದ ಕೂಡಿದ ಅನ್ನರಸ ಕ್ಲೇದವಿರುತ್ತದೆ. ಆ ಕ್ಲೇದವು ಧಾತುಗಳಿರುತ್ತಿರುವ ಸ್ಥಾನದ ಒಳಭಾಗಗಳ ಸುತ್ತಲೂ ಆಶಯಾದಿ ಪ್ರದೇಶಗಳ ಒಳಭಾಗದ ಸುತ್ತಲೂ ಇರುತ್ತದೆ ಈ ಭಾಗಗಳಿಗೆ ಕಲಾಭಾಗವೆಂದೂ, "ಕಲಾ" ಎಂದೂ ಅನ್ನುತ್ತಾರೆ

**ಕಲಾಃ ಖಲ್ವಪಿಸಪ್ತ ಭವಂತಿ ಧಾತ್ವಾಶಯಾಂತರಮರ್ಯಾದಾಃ॥**

( ಸುಶ್ರುತ॥ ಶಾರೀರ॥ ಅ ೪ ಸೂ ೫ )

ಏಳು ಕಲಾಗಳು ಇರುತ್ತವೆ ಧಾತುಗಳ ಸ್ಥಾನ, ಮತ್ತು ಆಶಯುಗಳ ಒಳಗಡೆಯ ಪ್ರದೇಶಗಳಲ್ಲಿ, ಸೀಮಾಭೂತ ಪ್ರದೇಶವರ್ತಿಗಳಾಗಿರುತ್ತವೆ.

## ಕಲಾಸ್ವರೂಪ

**ಯಥಾಹಿ ಸಾರಃ ಕಾಷ್ಠೇಷುಛಿದ್ಯಮಾನೇಷು ದೃಶ್ಯತೆ ॥**
**ತಥಾಹಿ ಧಾತುರ್ಮಾಂಸೇಷು ಛಿದ್ಯಮಾನೇಷು ದೃಶ್ಯತೆ ॥೬॥**
**ಸ್ನಾಯುಭಿಶ್ಚ ಪ್ರತಿಛನ್ನಾನ್ ಸಂತತಾಂಶ್ಚ ಜರಾಯುಣಾ ॥**
**ಶ್ಲೇಷ್ಮಣಾವೇಷ್ಟಿತಾಂಶ್ಚಾಪಿ ಕಲಾಭಾಗಾಂಸ್ತುತಾನ್ವಿದುಃ ॥**

( ಸುಶ್ರುತ॥ ಶಾರೀರ॥ ಅ. ೪ ಶ್ಲೋ ೭ )

ಕಟ್ಟಿಗೆಗಳು ಕಡಿಯಲ್ಪಡುತ್ತಿರಲು ಒಳಗಿರುವ ಸಾರವು ಹೇಗೆ ದೃಷ್ಟಿಗೋಚರವಾಗುತ್ತದೆಯೋ, ಅದರಂತೆ ಮಾಂಸಗಳು ಛೇದಿಸಲ್ಪಡುತ್ತಿರಲು ಒಳಗಿರುವ ಧಾತುವು ಸ್ಪಷ್ಟವಾಗಿಕಾಣುತ್ತದೆ ಸ್ನಾಯುಗಳಿಂದ ವ್ಯಾಪ್ತವಾದ ಮತ್ತು ಜರಾಯುವಿನಿಂದ (ತೆಳುವಾದ ಪರದೆಯಂತಿರುವ ಒಳಚರ್ಮದಿಂದ) ಸುತ್ತಲೂ ಪಸರಿಸಲ್ಪಟ್ಟಿರುವ, ಸರ್ವದೇಹ ವ್ಯಾಪಿಯಾದ ಶ್ಲೇಷ್ಮದಿಂದ ಆವೇಷ್ಟಿತವಾದ, ಭಾಗಗಳನ್ನು ಕಲಾಭಾಗಗಳೆಂದು ಅನ್ನುತ್ತಾರೆ.

## ಕಲಾ ವಿಷಯದಲ್ಲಿ ವೃದ್ಧವಾಗ್ಭಟಿ ಮತವು.—

**ಯಸ್ತು ಧಾತ್ವಾಶಯಾಂತರೇಷು ಕ್ಲೇದೋಽವತಿಷ್ಠತೆ ಸಯಥಾ ಸ್ವಮೂಷ್ಮಭಿರ್ವಿಪಕ್ವಃ ಸ್ನಾಯು ಶ್ಲೇಷ್ಮ ಜರಾಯು ಛನ್ನಃ ಕಾಷ್ಠ ಇವಸಾರೋ ಧಾತುರಸವಿಶೇಷೋಽಲ್ಪತ್ವಾತ್ ಕಲಾ ಸಂಜ್ಞಃ॥**

ಧಾತುಸ್ಥಾನ ಆಶಯಸ್ಥಾನಗಳ ಒಳಭಾಗಗಳಲ್ಲಿ ಯಾವ ಕ್ಲೇದವು ಇರುತ್ತದೆಯೋ, ಅದು ಧಾತುಸ್ಥಾನಾಗ್ನಿಗಳಿಂದ ಪರಿಪಕ್ವವಾಗಿ ಸ್ನಾಯು, ಜರಾಯು, ಶ್ಲೇಷ್ಮ, ಮೊದಲಾದವುಗಳಿಂದ ವ್ಯಾಪ್ತವಾಗಿರುತ್ತದೆ. ಕಟ್ಟಿಗೆ ಒಳಗಿನ ಸಾರದಂತೆ ದೇಹದಲ್ಲಿಯ ಧಾತುರಸವಿಶೇಷವು ಸ್ವಲ್ಪವಾಗಿದ್ದು ಕಲಾ ಎಂಬ ಹೆಸರುಳ್ಳದ್ದಾಗಿರುತ್ತದೆ. ಅನ್ನರಸ ಕ್ಲೇದಕ್ಕೆ ಕಲಾ ಎಂದು ಕೆಲವರು, ಧಾತುರಸ ವಿಶೇಷಕ್ಕೆ ಕಲಾ ಎಂದು, ಭಿನ್ನಮತಗಳಿರುತ್ತವೆ. ಅನ್ನರಸ ಕ್ಲೇದಕ್ಕಾದರೂ ಧಾತುಸಂಜ್ಞೆ ಇರುವದರಿಂದ ಯಾವದನ್ನು ಗ್ರಹಿಸಿದರೂ ಯೋಗ್ಯವೇ ಇರುತ್ತದೆ.

### ಸುಶ್ರುತಮತವು

**ಧಾತ್ವಾಶಯಾಂತರೇಽನ್ನಸ್ಯಯಃ ಕ್ಲೇದಸ್ತ್ವಧಿತಿಷ್ಠತಿ ॥**
**ದೇಹೋಷ್ಮಣಾವಿಪಕ್ವಸ್ತು ಸಾಕಲೇತ್ಯಭಿಧೀಯತೆ ॥**
**( ಸುಶ್ರುತಾಧಿಕ ಪಾಠಃ ಟೀಕಾಯಾಂ )**

ಧಾತ್ವಾಶಯ ಒಳಭಾಗದಲ್ಲಿ ಅನ್ನರಸದ ಯಾವ ಕ್ಲೇದವಿರುತ್ತದೆಯೋ, ಅದು ದೇಹದಲ್ಲಿರುವ ಊಷ್ಮ (ಅಗ್ನಿಯಿಂದ) ದಿಂದ ಪರಿಪಕ್ವವಾಗಲು ಕಲಾ ಎಂದು ಹೇಳಲ್ಪಡುತ್ತದೆ ಕಲಾ ಭಾಗಗಳು ಏಳು ಇರುತ್ತವೆ. ಅವುಗಳನ್ನು ಕ್ರಮಶಃ ಹೇಳುತ್ತಾರೆ.

**ತಾಸಾಂ ಪ್ರಥಮಾ ಮಾಂಸಧರಾಯಸ್ಯಾಂ ಮಾಂಸೇ ಸಿರಾ ಸ್ನಾಯು ಧಮನೀ ಸ್ರೋತಸಾಂಪ್ರತಾನಾಭವಂತಿ॥**
**( ಸುಶ್ರುತ॥ ಶಾರೀರ॥ ಅ. ೪ ಸೂ. ೮ )**

(೧) "ಮಾಂಸಧರಾ" ಯಾವ ಕಲಾಭಾಗದ ಮಾಂಸದಲ್ಲಿ, ಸಿರಾ, ಸ್ನಾಯು, ಧಮನೀ, ಸ್ರೋತಸ್ಸುಗಳ ಸ್ಥಿತಿ (ಇರುವಿಕೆ) ಯು ಇದ್ದು ಎಲ್ಲ ಕಡೆಗೆ ಬಳ್ಳಿಯಂತೆ ಹಬ್ಬಿ ಪಸರಿಸುತ್ತವೆಯೋ, ಆ ಭಾಗವು ಮಾಂಸಧರಾ ಎಂಬ ಹೆಸರಿನ ಮೊದಲನೆಯ ಕಲೆಯು.

**ಯಥಾಬಿಸಮೃಣಾಲಾನಿ ವಿವರ್ಧಂತೇಸಮಂತತಃ ||**
**ಭೂಮೌಪಂಕೋದಕಸ್ಥಾನಿತಥಾಮಾಂಸೇಸಿರಾದಯಃ ||**

(ಸುಶ್ರುತ|| ಶಾರೀರ|| ಅ ೪ ಶ್ಲೋ ೯)

ಭೂಮಿಯಲ್ಲಿ ಕೆಸರು ನೀರಿನಲ್ಲಿ ಬಿಸಮೃಣಾಲ ಮೊದಲಾದ ಕಮಲ ಮೂಲಗಳು, ಬೆಳೆದು ಎಲ್ಲಕಡೆಗೂ ಪಸರಿಸುವಂತೆ ಹಬ್ಬುತ್ತವೆಯೋ; ಅದ ರಂತೆ ಮಾಂಸದಲ್ಲಿ ಸಿರಾದಿಗಳು ಅಭಿವೃದ್ಧಿಯನ್ನುಹೊಂದಿ ಸಮಗ್ರ ದೇಹದ ಲ್ಲಿಯೂ ಪಸರಿಸಿಕೊಂಡಿರುತ್ತವೆ. ಇಲ್ಲಿ ಕ್ರಮದಂತೆಯೆಂದರೆ, ರಕ್ತಧರವಾದ ನಂತರ ಮಾಂಸಧರವಾಗಬೇಕಿತ್ತು, ಆದರೆ ಇದಕ್ಕೆ ವಿರುದ್ಧವಾಗಿ ಮೊದಲೇ "ಮಾಂಸಧರಾ"ವನ್ನು ಹೇಳಿದ್ದೇಕೆನಿಸುತ್ತದೆ. ರಕ್ತವಾದ ನಂತರ ಮಾಂಸದ ಕ್ರಮಬದ್ಧವಾದ ರೀತಿಯು ಇರುತ್ತದೆ. ಇಲ್ಲಿ ಹೇಳಿರುವದು ಯೋಗ್ಯವೇ ಇರುತ್ತದೆ. ಯಾಕಂದರೆ, ಪೋಷಣೆಯ ವಿಷಯದಲ್ಲಿ ರಕ್ತ ಮಾಂಸಾದಿಗಳಲ್ಲಿ ರಕ್ತವು ಮೊದಲು ಬರುತ್ತದೆ. ಇಲ್ಲಿ ಧಾರಣೆಯ (ಧರಿಸುವ) ಕ್ರಮದಲ್ಲಿ ಮಾಂಸವೇ ಮೊದಲಿನದಾಗಿರುತ್ತದೆ. ರಕ್ತವು ದ್ರವರೂಪವಾಗಿರುವದರಿಂದ ಎರಡನೇಯದನ್ನು ಆಶ್ರಯಿಸಿಯೇ ಇರಬೇಕಾಗುತ್ತದೆ. ಅದಕ್ಕೆ (ರಕ್ತಕ್ಕೆ) ಆಶ್ರಯವಾದ ಸಿರಾದಿಗಳುಇರತಕ್ಕ ಸ್ಥಾನವು ಮಾಂಸವಾದ್ದರಿಂದ, ಆದಿಯ ಲ್ಲಿಯೇ ಮಾಂಸವನ್ನು ಹೇಳಿರುವದು ಯೋಗ್ಯವು.

**ದ್ವಿತೀಯಾರಕ್ತಧರಾಮಾಂಸಸ್ಯಾಂಭ್ಯಂತರತಃ, ತಸ್ಯಾಂ ಶೋಣಿತಂ ವಿಶೇಷತಶ್ಚಸಿರಾಸುಯಕೃತ್ ಪ್ಲಿಹ್ನೋಶ್ಚ (ಸ್ರವತಿ) ಭವತಿ ||**

(ಸುಶ್ರುತ|| ಶಾರೀರ|| ಅ ೪ ಸೂ ೧೦)

(೨) "ರಕ್ತಧರಾ" ಎಂಬ ಹೆಸರಿನ ಕಲೆಯು ಮಾಂಸದ ಒಳ ಭಾಗ ದಲ್ಲಿದ್ದು, ಎರಡನೇಯ ಕಲಾಭಾಗವಾಗಿರುತ್ತದೆ. ಇದರಲ್ಲಿಯು ಸಿರಾಗಳಲ್ಲಿ ರಕ್ತವು ವಿಶೇಷವಾಗಿ ಇರುತ್ತದೆ. ಯಕೃತ್ ಪ್ಲೀಹಗಳಲ್ಲಿ ರಕ್ತವು ತಯಾರಾಗುತ್ತದೆ. ಯಕೃತ್ ಪ್ಲಿಹಗಳಲ್ಲಿ ಸ್ರವಿಸುತ್ತದೆಯೆಂದೂ ಅನ್ನುತ್ತಾರೆ ಯಕೃತ್ ಪ್ಲೀಹ ಗಳಲ್ಲಿಯೇ ಅನ್ನ ರಸವು ರಕ್ತವಾಗುವದರಿಂದ "ಭವತಿ" ಎನ್ನುವದೇ ಯೋಗ್ಯವು. ಅಲ್ಲಿ ರಕ್ತವಾಗಿ ಎರಡನೇ ಕಡೆ ಹೋಗುವದರಿಂದ ಸ್ರವಿಸು ತ್ತದೆ ಎನ್ನುವ ಕಾರಣವೇ ಇಲ್ಲ. ಹೀಗಿರುವದರಿಂದ "ಸ್ರವತಿ" ಎನ್ನುವದ ರಿಂದ ರಕ್ತವಾಗುವದನ್ನು ಹೇಳಿದಂತಾಗುವದಿಲ್ಲ ಉಭಯತೋಽಪಿ "ಸ್ರವತಿ" ಎಂದೆನ್ನುವದು ಅಷ್ಟು ಪ್ರಶಸ್ತವಾದದ್ದಲ್ಲವು

ಮಾಂಸದ ಒಳಗಡೆಯಲ್ಲಿ ರಕ್ತಪ್ರಸರಣೆಇರುತ್ತದೆನ್ನುವದಕ್ಕೆದೃಷ್ಟಾಂತ ಕೊಟ್ಟು ಧೃಡಪಡಿಸುತ್ತಾರೆ:—

**ವೃಕ್ಷಾದ್ಯಥಾಽಭಿಪ್ರಹತಾತ್ ಕ್ಷೀರಿಣಃ ಕ್ಷೀರಮಾಸ್ರವೇತ್ ॥**
**ಮಾಂಸಾದೇವಂಕ್ಷತಾತ್ ಕ್ಷಿಪ್ರಂಶೋಣಿತಂ ಸಂಪ್ರಸಿಚ್ಯತೆ ॥**

(ಸುಶ್ರುತ॥ ಶಾರೀರ॥ ಅ ೪ ಸೂ ೧೧)

ಕಚ್ಚು ಹಾಕಿದ ಕ್ಷೀರವೃಕ್ಷದಿಂದ ಹೇಗೆ ಹಾಲು ಸುರಿಯುತ್ತದೆಯೋ, ಹಾಗೆಯೇ ಘಾಯಮಾಡಲಾಗಿ ಮಾಂಸದಿಂದ ರಕ್ತವು ಸೋರುತ್ತದೆ ಕ್ಷೀರ ವೃಕ್ಷದ ಉದಾಹರಣೆಯಿಂದ, ಮಾಂಸದ ಒಳಗಡೆಯಲ್ಲಿ ರಕ್ತದ ಸ್ಥಾನವೆಂದು ಸಿದ್ಧವಾಯಿತು. ಘಾಯ ಮಾಡಿದ ಮಾಂಸದಿಂದ "ಸಂಪ್ರಸಿಚ್ಯತೆ" ಚನ್ನಾಗಿ ಸೋರುತ್ತದೆಂದು ಹೇಳಿದ್ದರಿಂದ, ಸಾಮಾನ್ಯ ಚರ್ಮ ಭಾಗಕ್ಕಿಂತಲೂ ಮಾಂಸದಲ್ಲಿ ರಕ್ತಪ್ರಸರಣಸ್ಥಿತಿಯು ಸ್ಥೂಲವಾದದ್ದೆಂದು ಧ್ವನಿತವಾಗುತ್ತದೆ.

**ತೃತೀಯಾಮೇದೋಧರಾ; ಮೇದೋಹಿಸರ್ವಭೂತಾನಾಮು ದರಸ್ಥಮಣ್ವಸ್ಥಿಷುಚ, ಮಹತ್ಸುಚಮಜ್ಜಾಭವತಿ ॥**

(ಸುಶ್ರುತ॥ ಶಾರೀರ॥ ಅ ೪ ಶ್ಲೋ ೧೨)

(೩) "ಮೇದೋಧರಾ" ಎಂಬ ಹೆಸರಿನ ಕಲೆಯು ಮೂರನೇಯ ದಾಗಿರುತ್ತದೆ ಮೇದಸ್ಸು ಸರ್ವ ಪ್ರಾಣಿಗಳ ಉದರ ಪ್ರದೇಶದಲ್ಲಿರುತ್ತದೆ. ಅಲ್ಪಾಸ್ಥಿ (ಅಣ್ವಸ್ಥಿ) ಗಳಲ್ಲಿ ಮೇದಸ್ಸೂ, ಸ್ಥೂಲಾಸ್ಥಿಗಳಲ್ಲಿ (ಪೊಳ್ಳು ಭಾಗ ದಲ್ಲಿ) ಮಜ್ಜೆಯೂ ಇರುತ್ತದೆ.

**ಸ್ಥೂಲಾಸ್ಥಿಷುವಿಶೇಷೇಣಮಜ್ಜಾತ್ವಭ್ಯಂತರಾಶ್ರಿತಃ ॥**
**ಅಥೇತರೇಷುಸರ್ವೇಷುಸರಕ್ತಂ ಮೇದಉಚ್ಯತೆ ॥**
**ಶುದ್ಧಮಾಂಸಸ್ಯಯಃ ಸ್ನೇಹಃ ಸಾವಸಾಪರಿಕೀರ್ತಿತಾ ॥**

(ಸುಶ್ರುತ॥ ಶಾರೀರ॥ ಅ ೪ ಶ್ಲೋ ೧೩)

ಸ್ಥೂಲವಾದ ಅಸ್ಥಿಗಳ ಮಧ್ಯಭಾಗಗಳಲ್ಲಿ, ಮಜ್ಜೆಯು ಒಳಗೆ ಪೊಳ್ಳು ಭಾಗಗಳಲ್ಲಿಇರುತ್ತದೆ. ಇತರವಾದ ಅಲ್ಪಾಸ್ಥಿಗಳಲ್ಲಿ ರಕ್ತದಿಂದಯುಕ್ತವಾದ ಮೇದಸ್ಸಿರುತ್ತದೆ. ಶುದ್ಧವಾದ ಮಾಂಸದ ಸ್ನೇಹ (ನೆಣ, ನಯುವುಳ್ಳ ಸತ್ವ ಭಾಗ)ಕ್ಕೆ ವಸಾ ಎಂದು ಹೇಳುತ್ತಾರೆ. **ಮೇದಃ ವಪಾವಸಾ** ಇವುಗಳು ಮೇದಸ್ಸಿನ ಪರ್ಯಾಯವಾಚಕ ಶಬ್ದಗಳು. ಮೇದಸ್ಸೆಂದರೆ ತುಪ್ಪದಂತೆ ದಟ್ಟಾದ ನಯುವುಳ್ಳ ಶರೀರದಲ್ಲಿಯ ಧಾತುವಾಗಿರುತ್ತದೆ

**ಮೇದೋನಾಮ:– ಸಾಂದ್ರಸರ್ಪಿಸ್ತುಲ್ಯಃ ಸ್ನೇಹಧಾತುಃ ಶರೀರಸ್ಯ ॥** (ಸುಶ್ರುತ ಟೀಕಾ)

**ಅಷ್ಟಾಂಗಸಂಗ್ರಹ ಮತವು:— ಮಜ್ಜಾ, ತದೇವಚ ಸಿರಸಿಕ ಪಾಲಪ್ರತಿಚ್ಛನ್ನಂ ಮಸ್ತಿಷ್ಕಾಖ್ಯಂ ಮಸ್ತುಲುಂಗಾಖ್ಯಂಚ ॥**

(ಅಷ್ಟಾಂಗಸಂಗ್ರಹ॥ ಶಾರೀರ॥ ಅ ೫)

ತಲೆಯಲ್ಲಿ ತಲೆಬುರುಡೆಯ ಭಾಗಗಳಿಂದ ಮುಚ್ಚಲ್ಪಟ್ಟಿರುವ ಮಜ್ಜೆಗೆ, ಮಸ್ತಿಷ್ಕ, ಮಸ್ತುಲುಂಗವೆಂದು ಹೇಳುತ್ತಾರೆ. ಅಂದರೆ ಇವುಗಳು ಮಿದುಳಿನ ಹೆಸರುಗಳು.

**ಚತುರ್ಥೀಶ್ಲೇಷ್ಮಧರಾಸರ್ವಸಂಧಿಷುಪ್ರಾಣಭೃತಾಂಭವತಿ ||**

(ಸುಶ್ರುತ|| ಶಾರೀರ|| ಅ ೪ ಸೂ ೧೪)

(೪) "ಶ್ಲೇಷ್ಮಧರಾ" ಎಂಬ ನಾಲ್ಕನೇ ಕಲಾಭಾಗವು ಪ್ರಾಣಿಗಳ ಸರ್ವ ಸಂಧಿಗಳಲ್ಲಿಯೂ ಇರುತ್ತದೆ. ಶ್ಲೇಷ್ಮವೆಂದರೆ ಕಫವು ಸರ್ವ ದೇಹವನ್ನು ವ್ಯಾಪಿಸಿಕೊಂಡಿರುತ್ತದೆ. ವಿಶೇಷವಾಗಿ ಅಸ್ಥಿಸಂಧಿಗಳಲ್ಲಿ ಇರುತ್ತಿದ್ದು, ಕೀಲುಗಳಿಗೆ ಚಲನವಲನೆಗಳಲ್ಲಿ ಸರಿದಾಡುವಂತೆ ಮಾಡುತ್ತದೆ.

**ಸ್ನೇಹಾಭ್ಯಕ್ತೇಯಥಾಹ್ಯಕ್ಷೇಚಕ್ರಂ ಸಾಧುಪ್ರವರ್ತತೆ ||**
**ಸಂಧಯಃ ಸಾಧುವರ್ತಂತೆಸಂಶ್ಲಿಷ್ಟಾಃ ಶ್ಲೇಷ್ಮಣಾತಥಾ ||**

(ಸುಶ್ರುತ|| ಶಾರೀರ|| ಅ ೪ ಶ್ಲೋ ೧೫)

ರಥ ಚಕ್ರದ ರಂಧ್ರಗಳಲ್ಲಿ ಸ್ನೇಹ (ಎಣ್ಣೆ) ಮೊದಲಾದವುಗಳನ್ನು ಹಾಕಲು, ಚಕ್ರವು ಚನ್ನಾಗಿ ತಿರುಗುತ್ತವೆ. ಇದರಂತೆ ಸಂಧಿ ಕೀಲುಗಳಲ್ಲಿ ಶ್ಲೇಷ್ಮವು ಅಂಟಿಕೊಂಡಿರುವದರಿಂದ, ಆಕುಂಚನಪ್ರಸಾರಣಗಳಿಗೆಅನುಕೂಲವಾಗಿ; ಚನ್ನಾಗಿ ಕೀಲುಗಳು ತಿರುಗುತ್ತವೆ.

**ಪಂಚಮೀ ಪುರೀಷಧರಾನಾಮ; ಯಾಂತಃ ಕೋಷ್ಠೇ ಮಲ ಮಭಿ ವಿಭಜತಿ ಪಕ್ವಾಶಯಸ್ಥಾ ||**

( ಸುಶ್ರುತ|| ಶಾರೀರ|| ಅ. ೪ ಸೂ. ೧೬ )

(೫) "ಪುರೀಷಧರಾ" ಇದು ಐದನೇ ಕಲೆಯು, ಕೋಷ್ಠದ ಮಧ್ಯದಲ್ಲಿ ಮಲವನ್ನು ವಿಭಾಗಿಸುತ್ತದೆ. ಪಕ್ವಾಶಯದಲ್ಲಿಗುತ್ತದೆ

**ಯಕೃತ್ ಸಮಂತಾತ್ ಕೋಷ್ಠಂ ಚ ತಥಾಂತ್ರಾಣಿಸಮಾಶ್ರಿತಾ || ಉಂಡುಕಸ್ಥಂ ವಿಭಜತೇ ಮಲಂ ಮಲಧರಕಲಾ ||**

( ಸುಶ್ರುತ|| ಶಾರೀರ|| ಅ. ೪ ಶ್ಲೋ. ೧೭ )

ಯಕೃತ್ತಿನ ಸುತ್ತಲಿನಪ್ರದೇಶದಲ್ಲಿಯೂಕೋಷ್ಠ ಅಂತ್ರಗಳನ್ನಾಶ್ರಯಿಸಿ ಇರುತ್ತದೆ. "ಪುರೀಷಧರಾ"ಕಲೆಯು ಉಂಡುಕದಲ್ಲಿದ್ದ ಮಲವನ್ನು ವಿಭಾಗಿಸುತ್ತದೆ. ಸಮಸ್ತಕೋಷ್ಠವನ್ನಾಶ್ರಯಿಸಿಇರುವದೆಂದೂ"**ಉಂಡುಕದಲ್ಲಿದ್ದ**" ಮಲಮೂತ್ರಾದಿಗಳನ್ನು ಕೋಷ್ಠದಿಂದ ವಿಭಾಗವಮಾಡುತ್ತದೆಂದೂ ಇದರಿಂದ ಸ್ಪಷ್ಟವಾಗುತ್ತದೆ. ಚರಕದಲ್ಲಿ ಉಂಡುಕಕ್ಕೆ ಮಲಧರಕಲೆಯೆಂದು ಗ್ರಹಿಸಿದ್ದಾರೆ.

## ಕೋಷ್ಠ ಲಕ್ಷಣವು

**ಸ್ಥಾನಾನ್ಯಾಮಾಗ್ನಿಪಕ್ವಾನಾಂಮೂತ್ರಸ್ಯರುಧಿರಸ್ಯ ಚ ||**
**ಹೃದುಂಡುಕಂ ಫುಪ್ಫುಸಶ್ಚ ಕೋಷ್ಠ ಇತ್ಯಭಿಧೀಯತೆ ||**
**( ಸುಶ್ರುತ|| ಚಿ. ಸ್ಥಾ. ಅ ೨ )**

ಆಮಾಶಯ ಅಗ್ನ್ಯಾಶಯ ಪಕ್ವಾಶಯ ಮೂತ್ರಾಶಯ ರಕ್ತಾಶಯ ಸ್ಥಾನಗಳು. ಹೃದಯ ಉಂಡುಕ ಫುಪ್ಫುಸಗಳು ಕೋಷ್ಠವೆಂದು ಹೇಳಲ್ಪಡುತ್ತವೆ. ಹೀಗೆ ಹೇಳಿರುವದರಿಂದ ಸಂಪೂರ್ಣ ಕೋಷ್ಠಸ್ಥಾನಗಳನ್ನಾಶ್ರಯಿಸಿಕೊಂಡು ಮಲಧರ ಕಲೆಯು ಇರುತ್ತದೆ ಆಯಾಯ ಸ್ಥಾನಗಳಲ್ಲಿರುವ ಮಲವನ್ನುವಿಭಾಗಿಸುತ್ತದೆಂದು ಹೇಳಿದಂತಾಯಿತು. ಉಂಡುಕದಲ್ಲಿದ್ದುಕೊಂಡು ವಿಶೇಷವಾಗಿ ಮಲ (ಪುರೀಷ) ವನ್ನು ವಿಭಾಗಿಸುತ್ತದೆ. ಸ್ವಾಭಾವಿಕವಾಗಿ ಮಲ ವಿಭಜನೆಯಾದನಂತರ ಕಿಟ್ಟಭಾಗವು ಮಲಾಶಯದಲ್ಲಿ ಬರುವದರಿಂದ, ವಿಭಾಗವಾದ ಸ್ಥಿತಿಯೇ ಇರುತ್ತದೆ. ಹೀಗಿರುವದರಿಂದ ಮಲಾಶಯಕ್ಕೆಬರುವ ಪೂರ್ವದಲ್ಲಿಯೇವಿಭಾಗವಾಗುವದರಿಂದ,ಮಲಾಶಯದಪೂರ್ವದಲ್ಲಿಯೇ ಉಂಡುಕವಿರುತ್ತದೆಂದು ಕೆಲವರು ಪ್ರತಿಪಾದಿಸಿದ್ದಾರೆ. ಕೋಷ್ಠಗ್ರಹಣಮಾಡಿರುವದರಿಂದ ಕೋಷ್ಠಭಾಗಗಳಲ್ಲಿ ವ್ಯಾಪಕವಾಗಿರುತ್ತದೆಂತಲೂ ವಿಶೇಷವಾಗಿ ಉಂಡುಕದಲ್ಲಿದ್ದು, ಸ್ಥೂಲರೂಪವಾದ ಪುರೀಷವನ್ನುವಿಭಾಗಮಾಡುತ್ತದೆಂದೂ ಸ್ಪಷ್ಟವಾಗುತ್ತದೆ. ಕೋಷ್ಠದಿಂದ ಮಲವನ್ನು ಹೊರಗೆಹಾಕುತ್ತದೆಂತಲೂ ಗ್ರಹಿಸಿದರು ಸಮಗ್ರ ಭಾಗಗಳನ್ನು ವ್ಯಾಪಿಸಿರುವದರಿಂದ, ಪಕ್ವಾಶಯದಲ್ಲಿಯೂ ಇರುತ್ತದೆಂದು ಸಿದ್ಧವೇಆದೆ.

**ಷಷ್ಠೀಪಿತ್ತಧರಾ; ಯಾ ಚತುರ್ವಿಧಮನ್ನಪಾನಮಾಶಯಾತ್ ಪ್ರಚ್ಯುತಂ ಪಕ್ವಾಶಯೋಪಸ್ಥಿತಂ ಧಾರಯತಿ ॥**

(ಸುಶ್ರುತ॥ ಶಾರೀರ॥ ಅ. ೪ ಸೂ ೧೮)

(೬) "ಪಿತ್ತಧರಾ" ಇದು ಆರನೇ ಕಲಾ, ಭಕ್ಷ್ಯಾದಿ ಚತುರ್ವಿಧ ಅನ್ನವನ್ನೂ ಪಾನಮಾಡಿರುವ ಪೇಯಾದಿಗಳನ್ನೂ ಆಮಾಶಯದಿಂದಹೊರಗೆ ಹೊರಟು ಪಕ್ವಾಶಯಕ್ಕೆ ಹೋಗಲು ಸಿದ್ಧವಾದದ್ದನ್ನು; ಧಾರಣೆಯನ್ನು ಮಾಡುತ್ತದೆ. ಇಲ್ಲಿ ಪಿತ್ತವೆಂದರೆ ಅಂತರಗ್ನಿ ಸಂಜ್ಞೆಯುಳ್ಳ ಪಿತ್ತವು

**ಷಷ್ಠೀಪಿತ್ತಧರಾನಾಮ ಪಕ್ವಾಮಾಶಯ ಮಧ್ಯಸ್ಥಾ, ಸಾಹ್ಯಂತ ರಗ್ನ್ಯಧಿಷ್ಠಾನತಯಾಮಪಕ್ವಾಶಯೋರ್ಮಧ್ಯೇ ಚತುರ್ವಿಧ ಮನ್ನಂ ಬಲೇನವಿಧಾರ್ಯ ಪಿತ್ತತೇಜಸಾಶೋಷಯಂತೀ ಪಚತಿ ॥** ( ಅಷ್ಟಾಂಗಸಂಗ್ರಹ॥ ಶಾ॥ ಅ. ೫ )

ಪಿತ್ತಧರಾ ಎಂಬ ಆರನೇಕಲೆಯು ಆಮಾಶಯ ಪಕ್ವಾಶಯಗಳ ಮಧ್ಯ ಭಾಗದಲ್ಲಿದ್ದು, ಅದು ಅಂತರಗ್ನಿಯೆಂಬ ನಾಮಧೇಯವನ್ನು ಸಾಹಚರ್ಯ ದಿಂದ ಹೊಂದಿರುವದರಿಂದ ಪಚನಕ್ರಿಯೆಯನ್ನುಮಾಡುತ್ತದೆ. ಆಮಾಶಯ ಪಕ್ವಾಶಯಗಳ ಮಧ್ಯವರ್ತಿಯಾದ ಚತುರ್ವಿಧವಾದ ಆಹಾರವನ್ನು ತನ್ನ ಶಕ್ತಿಯಿಂದ ಧಾರಣೇಮಾಡಿ ಪಿತ್ತೋಷ್ಮದಿಂದ ಶೋಷಿಸಿ ಪಚನಮಾಡುತ್ತದೆ.

**ಅಶಿತಂ ಖಾದಿತಂ ಪೀತಂ ಲೀಢಂಕೋಷ್ಠಗತಂನೃಣಾಂ ॥**
**ತಜ್ಜೀರ್ಯತಿಯಥಾಕಾಲಂ ಶೋಷಿತಂ ಪಿತ್ತತೇಜಸಾ ॥**

(ಸುಶ್ರುತ॥ ಶಾರೀರ॥ ಅ ೪ ಶ್ಲೋ ೧೯)

ಉಣ್ಣುವದು ತಿನ್ನುವದು ಕುಡಿಯುವದು ನೆಕ್ಕುವದು ಮುಂತಾದ ಬಗೆಯ ಆಹಾರವನ್ನು, ಮನುಷ್ಯರ ಕೋಷ್ಠ ಪ್ರದೇಶಗತವಾದಮೇಲೆ, ಪಿತ್ತ ತೇಜಸ್ಸಿನಿಂದ ಶೋಷಿಸಿ ಪಚನಮಾಡುತ್ತದೆ. ಇದು ಪಿತ್ತಧರ ಕಲೆಯ ಕಾರ್ಯವಾಗಿರುತ್ತದೆ.

**ಸಪ್ತಮೀಶುಕ್ರಧರಾ, ಯಾಸರ್ವಪ್ರಾಣಿನಾಂ ಸರ್ವಶರೀರವ್ಯಾಪಿನೀ ॥** (ಸುಶ್ರುತ॥ ಶಾರೀರ॥ ಅ ೪ ಸೂ ೨೦)

(೭) "ಶುಕ್ರಧರಾ" ಎಂಬ ಏಳನೇ ಕಲಾ, ಸರ್ವ ಪ್ರಾಣಿಗಳ ಸಮಗ್ರ ಶರೀರ ವ್ಯಾಪಿಯಾಗಿರುತ್ತದೆ. ಅದು ಹೇಗೆಂದು ಉದಹರಿಸಿ ಹೇಳುತ್ತಾರೆ.

**ಯಥಾಪಯಸಿಸರ್ಪಿಸ್ತುಗೂಢಶ್ಚೇಕ್ಷೌರಸೋಯಥಾ ॥**
**ಶರೀರೇಷುತಥಾಶುಕ್ರಂ ನೃಣಾಂ ವಿದ್ಯಾತ್ ಭಿಷಗ್ವರಃ ॥**

(ಸು॥ ಶಾ॥ ಅ ೪ ಶ್ಲೋ ೨೧)

ಹಾಲಿನಲ್ಲಿ ಸೂಕ್ಷ್ಮವಾಗಿ ಹೇಗೆ ತುಪ್ಪವೂ, ಕಬ್ಬಿನಲ್ಲಿ ರಸವು ಗೂಢವಾಗಿ ಸರ್ವ ವ್ಯಾಪಿಯಾಗಿರುತ್ತದೆಯೋ ಅದರಂತೆ, ಶರೀರಗಳಲ್ಲಿ ಶುಕ್ರವು ವ್ಯಾಪಿಯಾಗಿಯೂ ಸೂಕ್ಷ್ಮವಾಗಿಯೂ ಸರ್ವ ಶರೀರದಲ್ಲಿಯೂ ಇರುತ್ತದೆಂದು ವೈದ್ಯ ಶ್ರೇಷ್ಠನು ತಿಳಿಯಬೇಕು.

**ದ್ವ್ಯಂಗುಲೇದಕ್ಷಿಣೇಪಾರ್ಶ್ವೇ ಬಸ್ತಿದ್ವಾರಸ್ಯಚಾಪ್ಯಧಃ ॥**
**ಮೂತ್ರಸ್ರೋತಃ ಪಥಾಚ್ಛುಕ್ರಂಪುರುಷಸ್ಯಪ್ರವರ್ತತೆ ॥**

(ಸುಶ್ರುತ॥ ಶಾರೀರ॥ ಅ ೪ ಶ್ಲೋ ೨೨)

ಬಸ್ತಿದ್ವಾರದ ಕೆಳಗಡೆ ಬಲಪಕ್ಕದಲ್ಲಿ ಎರಡು ಅಂಗುಲ ಪ್ರದೇಶದಲ್ಲಿ, ಮುಖ್ಯವಾಗಿ ಶುಕ್ರಧರಾಕಲೆ ಇರುತ್ತದೆ. ಮೂತ್ರ ದ್ವಾರ ಸ್ರೋತಸ್ಸಿನ ಮಾರ್ಗದಿಂದ ಶುಕ್ರವು ಪುರುಷನಿಗೆ ಪ್ರವರ್ತನೆಯಿಂದ ಹೊರಗೆ ಬರುತ್ತದೆ. ಇಲ್ಲಿ ಇನ್ನೊಂದು ಪ್ರಸಕ್ತಿಯೆಂದರೆ ಬಲಗಡೆಯಲ್ಲಿ ಶುಕ್ರದ ಸ್ಥಿತಿ ಗಮನಾದಿಗಳನ್ನು ಹೇಳಿದರೆ, ಪ್ರತ್ಯಕ್ಷಕ್ಕೂ ಸ್ವಶಾಸ್ತ್ರಕ್ಕೂ ವಿರೋಧವಾಗುತ್ತದೆ. ಹೇಗಂದರೆ ಸುಶ್ರುತವಲ್ಲಿ "**ಶುಕ್ರವಹೇದ್ವೇ ಶುಕ್ರಪ್ರಾದುರ್ಭಾವಾಯದ್ವೇಶುಕ್ರವಿಸರ್ಗಾಯಚ॥**" (ಟೀಕಾ) ಶುಕ್ರವಹನವನ್ನು ಮಾಡತಕ್ಕ

ಸ್ರೋತಸ್ಸುಗಳಿರಡು, ಅವು ಶುಕ್ರವನ್ನುತ್ಪನ್ನ ಮಾಡುತ್ತವೆ. ಶುಕ್ರವಿಸರ್ಗ ಮಾಡುವವುಗಳು ಎರಡು ಎಂದು ಹೇಳಿರುವದರಿಂದ, ಎರಡೂ ಕಡೆಗೆ ಎಂದು ಹೇಳುವದೇ ಯೋಗ್ಯವು. ಬಲಗಡೆ ಎಂದು ಹೇಳುವದರಿಂದ ಎಡಗಡೆಯಲ್ಲಿ ರುವದು ಗ್ರಹಿತವಾಗುವದಿಲ್ಲ. "ದ್ವ್ಯಂಗುಲೇದಕ್ಷಿಣೇವಾಮೇ" ಇತ್ಯೇವ ಸಾಧೀಯಾನ್‌ಪಾಠಃ. (ಪ್ರತ್ಯಕ್ಷ ಶಾರೀರೆ)

**ಕೃತ್ಸ್ನದೇಹಾಶ್ರಿತಂ ಶುಕ್ರಂ ಪ್ರಸನ್ನ ಮನಸಸ್ತಥಾ ||**
**ಸ್ತ್ರೀಷುವ್ಯಾಯಚ್ಛತಶ್ಚಾಪಿಹರ್ಷಾತ್ ತತ್ ಸಂಪ್ರವರ್ತತೆ ||**

( ಸುಶ್ರುತ|| ಶಾರೀರ|| ಅ. ೪ ಶ್ಲೋ. ೨೩ )

ಸಂಪೂರ್ಣ ದೇಹದಲ್ಲಿವ್ಯಾಪಕವಾಗಿರುವ ಶುಕ್ರವು, ಪ್ರಸನ್ನವಾದ ಮನ ಸ್ಸುಳ್ಳವನಿಗೆ, ಸ್ತ್ರೀಯರಲ್ಲಿ ರತಿಯನ್ನಾರಂಭಿಸಿದವನಿಗೆ ಹರ್ಷಉತ್ಪನ್ನವಾಗಲು ಹೊರಬೀಳುತ್ತದೆ. ರತಿ ಸಮಯದಲ್ಲಿ ಸಮಗ್ರ ದೇಹದಲ್ಲಿಯೂ ಹರ್ಷವಾಗು ವದರಿಂದ, ದೇಹದಲ್ಲಿ ವ್ಯಾಪಕವಾಗಿ ಶುಕ್ರವಿರುತ್ತದೆಂದು ಸಿದ್ಧವಾಗುತ್ತದೆ ಸುಶ್ರುತದಲ್ಲಿ ಬಲಗಡೆ ಇರುತ್ತದೆಂದು ಹೇಳುವದರಿಂದ ವಿರೋಧ ಸಂಭವಿಸು ತ್ತದೆ. ಆದ್ದರಿಂದ ಬಸ್ತಿಯ ಕೆಳಗಡೆ ಎರಡಂಗುಲ ಪಾರ್ಶ್ವಗಳಲ್ಲಿ, ಎರಡೂ ಕಡೆಗೆ ಇರುತ್ತದೆಂದು ಹೇಳುವದು ಯೋಗ್ಯವೆಂದು ನಿರ್ಣಯಿಸಿದ್ದಾರೆ.

## (೨೧) ಧಾತ್ವಾದಿ ವಿಜ್ಞಾನವು

**ವಿಸ್ತಾರೋಽತಊರ್ಧ್ವಂ, ತ್ವಚೋಽಭಿಹಿತಾಃ ಕಲಾಧಾತವೋ ಮಲಾದೋಷಾ ಯಕೃತ್‌ಪ್ಲೀಹಾನೌ ಫುಪ್ಫುಸ ಉಂಡುಕೋ ಹೃದಯಂ ವೃಕ್ಕೌಚ ||** (ಸುಶ್ರುತ|| ಶಾರೀರ|| ಅ. ೪ ಸೂ. ೨)

ವಿಸ್ತಾರವಾಗಿ ಇನ್ನು ಮುಂದೆ ವಿಭಾಗಶಃ ವಿವರವಾಗಿ ಹೇಳುತ್ತಾರೆ. ತ್ವಚೆ ಮತ್ತು ಕಲೆಗಳು ಹೇಳಲ್ಪಟ್ಟಿರುತ್ತವೆ. ಧಾತು, ಮಲ, ದೋಷ, ಯಕೃತ್, ಪ್ಲೀಹ, ಪುಪ್ಪುಸ, ಉಂಡುಕ, ಹೃದಯ, ವೃಕ್ಕ ಮೊದಲಾದವು ಗಳನ್ನು ಹೇಳುತ್ತಾರೆ.

# ಧಾತುಗಳು

**ತಏತೇಶರೀರಧಾರಣಾತ್ ಧಾತವ ಇತ್ಯುಚ್ಯಂತೇ ॥**
**( ಸುಶ್ರುತ॥ ಸೂ. ಸ್ಥಾ. ಅ. ೧೪ ಸೂ. ೨೦ )**

**ರಸಾऽಸೃಕ್ ಮಾಂಸಮೇದೋऽಸ್ಥಿ ಮಜ್ಜಶುಕ್ರಾಣಿ ಧಾತವಃ॥**
**( ವಾಗ್ಭಟ॥ ಅ. ೧ ಶ್ಲೋ. ೧೩ )**

**"ದಧ" ಧಾರಣೆ ದಧತೀತಿ ಧಾತವಃ ॥**

ಶರೀರವನ್ನುಧಾರಣೆಮಾಡುವದರಿಂದ ರಸರಕ್ತ ಮೊದಲಾದವುಗಳು ಧಾತುವೆಂದು ಹೇಳಲ್ಪಡುತ್ತವೆ. ದೇಹದಲ್ಲಿ ಧಾತುಗಳು ಇರುವದರಿಂದಲೇ ದೇಹಾಭಿವೃದ್ಧಿಯೂ, ಪೋಷಣೆಯೂ, ದೇಹಧಾರಣೆಯೂ, ಆಗುತ್ತದೆ. ಧಾರಣಾರ್ಥಕವುಳ್ಳ "ದಧ" ಧಾತುವಿನ ರೂಪವು, ಧಾರಣೆಯನ್ನುಮಾಡುತ್ತದೆಯಾದ್ದರಿಂದ "ಧಾತು" ಎಂದು ಪ್ರತಿಪಾದಿತವಾಗಿದೆ ರಸದಿಂದಾರಂಭಿಸಿ ಏಳು ಧಾತುಗಳು ಇರುತ್ತವೆ.

**೧ ರಸ ೨ ರಕ್ತ ೩ ಮಾಂಸ ೪ ಮೇದಸ್ಸು ೫ ಅಸ್ಥಿ ೬ ಮಜ್ಜಾ ೭ ಶುಕ್ರ**ಗಳೆಂದು ಶರೀರದಲ್ಲಿ ಏಳು ಧಾತುಗಳು ಇರುತ್ತವೆ.

# ಉಪಧಾತುಗಳು

ಧಾತುಗಳಿಂದ ಉತ್ಪನ್ನವಾಗುವ ಐದು ಉಪಧಾತುಗಳು ಇರುತ್ತವೆ. ಅವು ರಸಾದಿಗಳಿಂದ ಉತ್ಪನ್ನವಾಗುತ್ತವೆ. ಆದ್ದರಿಂದ ಅವಕ್ಕೆ ಉಪಧಾತುಗಳೆಂದು ಹೇಳುತ್ತಾರೆ.

**ರಸಾತ್‌ಸ್ತ್ಯನ್ಯಂ ತಥಾ ರಕ್ತಮಸೃಜಃ ಕಂಡರಾ ಸಿರಾಃ ॥**
**ಮಾಂಸಾದ್ವಸಾತ್ವಚಃ ಷಟ್ ಚ ಮೇದಸಃಸ್ನಾಯುಸಂಧಯಃ॥**
**( ಚರಕ॥ ಚಿಕಿತ್ಸಾ. ಸ್ಥಾ. ಅ. ೧೫ ಶ್ಲೋ. ೧೭ )**

ರಸಧಾತುವಿನಿಂದ ಸ್ತನ್ಯವು (ಮೊಲೆಹಾಲು), ರಜಸ್ಸಿನ ರಕ್ತವು, ಉಂಟಾಗುತ್ತವೆ. ರಕ್ತದಿಂದ ಕಂಡರಾ (ಸ್ಥೂಲಸ್ನಾಯು) ಸಿರಗಳುತ್ಪನ್ನವಾಗುತ್ತವೆ. ಮಾಂಸದಿಂದ ವಸಾ (ಚರಬಿ) ಆರು ತ್ವಚೆಗಳು ಹುಟ್ಟುತ್ತವೆ ಮೇದಸ್ಸಿನಿಂದ ಸ್ನಾಯುಗಳು ಹುಟ್ಟುತ್ತವೆ. "ಸ್ನಾಯುಸಂಧಯಃ" ಎಂದು ಹೇಳಿರುವದರಿಂದ ಸ್ನಾಯುಗಳಿಗೆ ಅಂಟಿಕೊಂಡಿರುವ ಸೂಕ್ಷ್ಮ ಸ್ನಾಯುಗಳೂ ಸಹ ಉತ್ಪನ್ನವಾಗುತ್ತವೆಂದು ತಿಳಿಯಬೇಕು ಅಥವಾ ಸೂಕ್ಷ್ಮವಾದ ಸ್ನಾಯುಗಳು ಮೇದಸ್ಸಿನಿಂದ ರಕ್ಷಿತವಾಗುತ್ತವೆಂದು ಗ್ರಹಿಸಬೇಕು.

**ಸಿರಾ ಸ್ನಾಯುರಜಃಸ್ತನ್ಯ ತ್ವಚೋಗತಿ ವಿವರ್ಜಿತಾಃ ||**
**ಧಾತುಭ್ಯಶ್ಚೋಪಜಾಯಂತೇ ತಸ್ಮಾತ್ ತೇ ಉಪಧಾತವಃ ||**

**(ಭೋಜತಂತ್ರ)**

ರಸಾದಿ ಧಾತುಗಳಿಂದ ಉಪಧಾತುಗಳಾದ ೧ ಸಿರಾ ೨ ಸ್ನಾಯು ೩ ರಜಸ್ಸು ೪ ಸ್ತನ್ಯ ೫ ತ್ವಚೆಗಳು, ಉತ್ಪನ್ನವಾಗುತ್ತವೆ. ಧಾತುಗಳಿಂದ ಹುಟ್ಟಿದವುಗಳಾಗಿಯೂ, ಗತಿರಹಿತವಾದವುಗಳಾಗಿಯೂ ಇರುವದರಿಂದ ಇವುಗಳಿಗೆ ಉಪಧಾತುಗಳೆಂದು ಹೇಳುತ್ತಾರೆ. ಶರೀರ ಪೋಷಣೆಯು ಸಾಮಾನ್ಯತಃ ಇವುಗಳಿಂದ ಆಗುವದರಿಂದ ಉಪಧಾತುಗಳೆಂದೂ, ಧಾತುಗಳಿಂದ ಮುಖ್ಯವಾಗಿ ಪೋಷಣೆಯಾಗುವದರಿಂದ ಧಾತುಗಳೆಂದೂ, ಅನ್ನುತ್ತಾರೆ

# ಸಪ್ತೋಪ ಧಾತುಗಳು

**ಶಾರ್ಙ್ಗಧರ ಮತವು:—** ಸಪ್ತ ಉಪಧಾತುಗಳು ರಸಾದಿ ಧಾತುಗಳಿಂದ ಸಂಭವಿಸುತ್ತವೆಂದು ಹೇಳಿರುತ್ತಾರೆ. ಅವು ರಸಾದಿ ಧಾತುಗಳಿಂದ ಹುಟ್ಟಿರುವದರಿಂದ ಉಪಧಾತುಗಳೆಂದು ಹೇಳುತ್ತಾರೆ.

**ಸ್ತನ್ಯಂ ರಜಶ್ಚ ನಾರೀಣಾಂ ಕಾಲೇಭವತಿ ಗಚ್ಛತಿ ||**
**ಶುದ್ಧ ಮಾಂಸಭವಸ್ನೆಹಃ ಸಾವಸಾಪರಿ ಕೀರ್ತಿತಾ ||೧೬||**

**ಸ್ವೇದೋದಂತಾಸ್ತಥಾಕೇಶಾಸ್ತಥೈವೋಜಶ್ಚ ಸಪ್ತಮಂ ||**
**ಇತಿ ಧಾತುಭವಾಜ್ಞೇಯಾ ಏತೇ ಸಪ್ತೋಪಧಾತವಃ ||೧೭||**

ಸ್ತ್ರೀಯರಿಗೆ ಸ್ತನ್ಯವು ಮತ್ತು ರಜಸ್ಸು ಯೋಗ್ಯಕಾಲದಲ್ಲಿ ಉತ್ಪನ್ನವಾಗುತ್ತವೆ ಪುನಃ ಹೋಗುತ್ತವೆ ಶುದ್ಧವಾದ ಮಾಂಸದಿಂದುತ್ಪನ್ನವಾಗುವ ಸ್ನೇಹಕ್ಕೆ ವಸಾಎಂದು ಹೇಳುತ್ತಾರೆ ಸ್ವೇದ ದಂತ ಕೇಶ ಓಜಸ್ಸು, ಮೇದಸ್ಸು ಅಸ್ಥಿ ಶುಕ್ರ ಧಾತುಗಳಿಂದ ಉತ್ಪನ್ನವಾಗಿರುತ್ತವೆ. ಇವುಗಳಿಗೆ ಸಪ್ತ ಉಪಧಾತುಗಳೆಂದು ಹೇಳುತ್ತಾರೆ.

**೧ ಸ್ತನ್ಯ ೨ ರಜಸ್ಸು ೩ ವಸಾ ೪ ಸ್ವೇದ ೫ ದಂತ ೬ ಕೇಶ ೭ ಓಜಸ್ಸು** ಇವುಗಳು ಸಪ್ತ ಉಪಧಾತುಗಳು.

ಉಪಧಾತುಗಳ ವಿಷಯದಲ್ಲಿ ಚರಕ ಮತದಂತೆ ರಸ ಧಾತುವಿನಿಂದ ಸ್ತನ್ಯರಕ್ತಗಳು (ರಜಸ್ಸು) ಉತ್ಪನ್ನವಾಗುವವೆಂದು ಹೇಳಿದ್ದಾರೆ. ಶಾರ್ಙಧರದಲ್ಲಿ ರಕ್ತದಿಂದ ರಜೋತ್ಪತ್ತಿಯನ್ನು ಹೇಳಿದ್ದಾರೆ. ಮತ್ತು ಚರಕದಲ್ಲಿಹೇಳಿದ ಆರು ತ್ವಚೆಗಳನ್ನೂ ಕಂಡರಾ ಸಿರಾ ಸ್ನಾಯು ಸೂಕ್ಷ್ಮ ಸ್ನಾಯುಗಳನ್ನು ಉಪಧಾತುಗಳೆಂದು ಶಾರ್ಙಧರಾದಿಗಳಲ್ಲಿ ಗ್ರಹಿಸಿರುವದಿಲ್ಲ.

# (೨೨) ಮಲಗಳು

**ಪುರೀಷ ಮೂತ್ರ ಸ್ವೇದಾಃ ಮಲಾಃ ||**

"**ಪುರೀಷ**" ಆಹಾರದ ಸ್ಥೂಲಭಾಗವಾದ ಕಿಟ್ಟ ಇದಕ್ಕೆ ಮಲವೆಂದು ಅನ್ನುತ್ತಾರೆ.

"**ಮೂತ್ರ**" ಆಹಾರ ರಸಾದಿಗಳಲ್ಲಿಯವಿಶೇಷ ಹೆಚ್ಚಾದ ಮಲಿನ ಜಲಭಾಗವು. ಬಸ್ತಿಯಲ್ಲಿ ಸಂಗ್ರಹವಾಗಿ ಮೂತ್ರರೂಪದಿಂದ ಹೊರಗೆ ಬರುತ್ತದೆ.

"**ಸ್ವೇದ**" ಬೆವರು. ಶರೀರದ ರೋಮ ರಂಧ್ರಗಳಿಂದ ಹೊರಗೆ ಬರುವ ಜಲವು.

# ಸಪ್ತಧಾತುಗಳ ಮಲಗಳು

**ಜಿಹ್ವಾನೇತ್ರ ಕಪೋಲಾನಾಂ ಜಲಂ ಪಿತ್ತಂ ಚ ರಂಜಕಂ ||**
**ಕರ್ಣವಿಡ್ ರಸನಾ ದಂತಕಕ್ಷಾಮೇಢ್ರಾದಿಜಂ ಮಲಂ ||೧೩||**

**ನಖನೇತ್ರಮಲಂ ವಕ್ತ್ರೇಸ್ನಿಗ್ಧತ್ವಂ ಪಿಟಿಕಾಸ್ತಥಾ ||**
**ಜಾಯಂತೇಸಪ್ತಧಾತೂನಾಂ ಮಲಾನ್ಯೇತಾನ್ಯನುಕ್ರಮಾತ್ ||**

(ಶಾರ್ಙಧರ|| ಪ್ರ. ಖ. ಅ ೫)

ನಾಲಿಗೆಯಲ್ಲಿ ಬರುವ ಜೊಲ್ಲು, ನೀರು, ಕಣ್ಣೀರು, ಮುಖದಲ್ಲಿಯ ನೀರು, ಇವು ರಸ "**ಧಾತುವಿನ**" ಮಲಗಳು. "**ರಂಜಕ**" ವೆಂಬ ಪಿತ್ತವು ಶರೀರಕ್ಕೆ ಕಾಂತಿಯನ್ನು ಉಂಟುಮಾಡುವದಾಗಿದ್ದು "**ರಕ್ತಧಾತುವಿನ**" ಮಲವಾಗಿರುತ್ತದೆ. ಕಿವಿಯಲ್ಲಿಯ ಮಲವು (ಕೂಗಣಿ) "**ಮಾಂಸದ**" ಮಲವಾಗಿದೆ. ನಾಲಿಗೆ, ಹಲ್ಲು, ಬಗಲು, ಶಿಶ್ನ, ಮೊದಲಾದವುಗಳಲ್ಲಿಯ ಮಲಗಳು, ಬೆವರು, "**ಮೆದೋಧಾತುವಿನ**" ಮಲವಾಗಿರುತ್ತವೆ. ನಖ, ನೇತ್ರಗಳ ಮಲವು, ಅಸ್ಥಿ ಮಜ್ಜಾಧಾತುವಿನಿಂದುಂಟಾಗಿರುತ್ತವೆ. ಮೋರೆಯ ಮೇಲಿನ ಸ್ನಿಗ್ಧತೆ ಮತ್ತೂ ಮಡಿಬಕ್ಕೆಗಳುಶುಕ್ರಮಲವೆನ್ನಿಸಿಕೊಳ್ಳುತ್ತವೆ

**ಕಫಃ ಪಿತ್ತಂ ಮಲಃ ಖೇಷುಪ್ರಸ್ವೇದೋನಖರೋಮಚ ||**
**ನೇತ್ರವಿಟ್ ತ್ವಕ್ಷುಚಸ್ನೇಹೋಧಾತೂನಾಂಕ್ರಮಶೋಮಲಾಃ||**

(ಶಾರ್ಙಧರ|| ಪ್ರ. ಖ. ಅ. ೫ ಶ್ಲೋ ೧೫)

**೧ ಕಫ ೨ ಪಿತ್ತ ೩ ರಂಧ್ರಗಳಲ್ಲಿಯ ಮಲ ೪ ಸ್ವೇದ ೫ ನಖರೋಮಗಳು ೬ ನೇತ್ರ ಮಲ ೭ ಚರ್ಮಗಳಲ್ಲಿಯ ಸ್ನಿಗ್ಧತೆಯು, ಇವುಗಳು ಸಪ್ತಧಾತುವಿನ ಮಲಗಳು.**

# (೨೩) ದೋಷಗಳು

**ವಾಯುಃ ಪಿತ್ತಂಕಫೋದೋಷಾಧಾತವಶ್ಚಮಲಾಮತಾಃ ||**
**ತತ್ರಾಪಿಪಂಚಧಾಖ್ಯಾತಾಪ್ರತ್ಯೇಕಂದೇಹಧಾರಣಾತ್ ||**
(ಶಾರ್ಙಧರ|| ಪ್ರ. ಖ. ಅ ೫ ಶ್ಲೋ ೨೩)

ವಾಯು, ಪಿತ್ತ, ಕಫಗಳು, ತ್ರಿದೋಷಗಳೆಂದೂ, ತ್ರಿಧಾತುಗಳೆಂದೂ, ತ್ರಿಮಲಗಳೆಂದೂ, ಹೇಳಲ್ಪಡುತ್ತವೆ. ದೇಹಧಾರಣಾಕ್ರಮದಿಂದ ಇವು ಪ್ರತಿಯೊಂದೂ ಐದು ವಿಧವಾಗಿರುತ್ತವೆ.

### ದೋಷಗಳ ಅನ್ವರ್ಥಕ ಹೆಸರು

**ಶರೀರದೂಷಣಾದ್ದೋಷಾಧಾತವೋದೇಹಧಾರಣಾತ್ ||**
**ವಾತಪಿತ್ತಕಫಾಜ್ಞೇಯಾಮಲಿನೀಕರಣಾತ್ ಮಲಾಃ ||**
(ಶಾರ್ಙಧರ|| ಪ್ರ. ಖ. ಅ ೫ ಶ್ಲೋ ೨೪)

ಶರೀರವನ್ನು ದೂಷಿಸುವದರಿಂದ, ಅರ್ಥಾತ್ ಪ್ರಕೋಪ ಮೊದಲಾದವುಗಳಿಂದ ಶರೀರದಲ್ಲಿ ರೋಗೋತ್ಪನ್ನ ಮಾಡುವ ಕಾರಣ; ಇವುಗಳಿಗೆ "**ದೋಷಗಳೆಂದು**" ಹೆಸರು. ಸಮಪ್ರಮಾಣದಲ್ಲಿದ್ದಾಗ ಶರೀರವನ್ನು ಯೋಗ್ಯ ನಿರೋಗ ಸ್ಥಿತಿಯಲ್ಲಿಡುವದರಿಂದ, "**ಧಾತುಗಳೆಂದು**" ಅನ್ನುತ್ತಾರೆ. ವಿಕೃತಿಯನ್ನು ಹೊಂದಿದಾಗ ದೇಹವನ್ನು ಮಲಿನ ಮಾಡುವದರಿಂದ "**ಮಲವೆಂದು**" ಹೇಳುತ್ತಾರೆ. ವಸ್ತುತಃ ತ್ರಿದೋಷಕ್ಕೆ ಆಯಾವ ಸ್ಥಿತಿಯಲ್ಲಿ **ದೋಷ, ಧಾತು,** ಮಲವೆಂದು ಅನ್ನುತ್ತಾರೆ. ಇವು ತ್ರಿದೋಷಗಳ ಆಯಾವ ಸ್ಥಿತಿಯಲ್ಲಿಯು ಅನ್ವರ್ಥಕನಾಮುಗಳಾಗುತ್ತವೆ.

### ಯಕೃತ್ ಪ್ಲೀಹಾದಿಗಳು

**ತದ್ವಾಮೇಫುಪ್ಫುಸಪ್ಲೀಹೌದಕ್ಷಿಣಾಂಗೇಯಕೃನ್ಮತಂ ||**
(ಶಾರ್ಙಧರ)

ಎದೆಯ ಕೆಳಗೆ ಎಡಗಡೆಯಲ್ಲಿ "ಪ್ಲೀಹವು" ಇರುತ್ತದೆ. ಬಲಗಡೆಯ ಭಾಗದಲ್ಲಿ "**ಯಕೃತ್**" ಇರುತ್ತದೆ. ಎದೆಯ ಒಲಗಡೆ ಮತ್ತು ಎಡಗಡೆಗಳಲ್ಲಿ "**ಪುಪ್ಪುಸಗಳು**" ಇರುತ್ತವೆ. ಪುಪ್ಪುಸವು ಎಡಗಡೆಯಲ್ಲಿರುತ್ತದೆಂದು ಹೇಳಿದ್ದಾರೆ. ಆದರೆ ಎರಡೂ ಕಡೆಯಲ್ಲಿರುತ್ತದೆಂದು ನಿರ್ಣಯವಿರುವದರಿಂದ ಹಾಗೆಯೇ ಸ್ಪಷ್ಟಪಡಿಸಿದ್ದಾಗಿದೆ.

## ಪುಪ್ಪುಸಗಳು

**ಉದಾನವಾಯೋರಾಧಾರಃ ಪುಪ್ಫುಸಃಪ್ರೋಚ್ಯತೆಬುಧೈಃ ॥**
**ಯಕೃದ್ರಂಜಕಪಿತ್ತಸ್ಯಸ್ಥಾನಂ ರಕ್ತಸ್ಯಸಂಶ್ರಯಃ ॥**

(ಶಾರ್ಙಧರ॥ ಪ್ರ ಖಂ. ಅ ೫ ಶ್ಲೋ ೪೪)

"**ಪುಪ್ಪುಸಗಳು**" ಉದಾನವಾಯುವಿಗೆ ಆಧಾರವಾಗಿರುತ್ತವೆ ಮತ್ತು ಯಾವಾಗಲು ಶ್ವಾಸೋಚ್ಛ್ವಾಸವಾಗಬೇಕಾದರೆ, ಪುಪ್ಪುಸಗಳ ಆಕುಂಚನ ಪ್ರಸಾರಣವಾಗುತ್ತದೆ. ಇವುಗಳ ಆಕುಂಚನ ಪ್ರಸಾರಣಗಳಿಂದ ತಿದಿಹೊಡೆದಂತೆ ವಾಯುವಿನ ಆಗಮನ ನಿರ್ಗಮನಗಳಾಗುತ್ತವೆ ಹೀಗಿರುವದರಿಂದಲೇ ಕಂಠದೇಶದಲ್ಲಿರುವ (ಸಂಚರಿಸುವ) ಉದಾನವಾಯುವಿಗೆ ಆಧಾರ ಸ್ಥಾನವೆಂದು ಹೇಳಿದ್ದಾರೆ.

## (೨೪) ಯಕೃತ್

"**ಯಕೃತ್**" ರಂಜಕ ಪಿತ್ತವು ಯಕೃತ್ತಿನಿಂದಲೇ ಹುಟ್ಟುತ್ತದೆ ರಂಜಕ ಪಿತ್ತವೆಂದರೆ, ಆಹಾರ ರಸದಲ್ಲಿ ಯುಕ್ತವಾಗಿಅದಕ್ಕೆ ಕೆಂಪು ಬಣ್ಣ ಬರುವಂತೆ ಮಾಡುತ್ತದೆ ಹೀಗೆ ಬಣ್ಣವನ್ನುಂಟು ಮಾಡುತ್ತದೆಯಾದ್ದರಿಂದ ಇದಕ್ಕೆ ರಂಜಕಪಿತ್ತವೆಂಬ ಹೆಸರು. ರಂಜಕಪಿತ್ತದ ಯೋಗದಿಂದಲೇ ಅನ್ನರಸವು ರಕ್ತವಾಗಿ ಪರಿಣಮಿಸುತ್ತದೆ. ಈ ರಂಜಕ ಪಿತ್ತೋತ್ಪತ್ತಿಗೆ ಯಕೃತ್ತೇ ಸ್ಥಾನವು. ಇದನ್ನು ಆಶ್ರಯಿಸಿ ರಸವು ಕೆಂಪು ಬಣ್ಣವನ್ನು ಹೊಂದಿ ರಕ್ತ

ವಾಗುತ್ತದೆಯಾದ್ದರಿಂದ, ರಕ್ತಕ್ಕೆ (ರಕ್ತವಾಗಲಿಕ್ಕೆ) ಮೂಲ ಕಾರಣವಾದ್ದರಿಂದ ರಕ್ತವು ಯಕೃತ್ತನ್ನು ಆಶ್ರಯಿಸುತ್ತದೆಯೆಂದು ಹೇಳಿದ್ದಾರೆ. ರಕ್ತಾಶಯವು ಬೇರೆ ಇರುವದರಿಂದ ಯಕೃತ್ ರಕ್ತವಿರುವ ಸ್ಥಾನವೆಂದು ತಿಳಿಯಬಾರದು ರಸವು ರಕ್ತವಾಗುವಪರ್ಯಂತ ಆಶ್ರಯಿಸಿರುವದರಿಂದಲೂ, ಇಲ್ಲಿಯೇ ರಕ್ತವಾಗಿ ಪರಿಣಮಿಸುವದರಿಂದಲೂ, ರಕ್ತಕ್ಕೆ ಸಂಶ್ರಯ ಸ್ಥಾನವೆಂದು ಹೇಳಿರುವರೇವಿನಾ, ಮುಖ್ಯವಾದ ರಕ್ತಸಂಶ್ರಯಸ್ಥಾನವು ರಕ್ತಾಶಯದ ಹೊರತು ಮತ್ತಾವದೂ ಇರುವದಿಲ್ಲ. ಯಕೃತ್ತಿನಲ್ಲಿ ಪಿತ್ತರಸವು ಉತ್ಪನ್ನವಾಗುತ್ತದೆ ನಂತರ ಅದು ಪಿತ್ತಾಶಯದಲ್ಲಿ ಸಂಚಯವಾಗುತ್ತದೆ. ಆಹಾರಜೀರ್ಣ ಕ್ರಮದಲ್ಲಿ ಪಿತ್ತರಸವು ಕೂಡಿಕೊಂಡು ಆಹಾರವನ್ನು ಪಚನ ಮಾಡುತ್ತದೆ

## (೨೫) ಪ್ಲೀಹಾ

**ರಕ್ತವಾಹಿಸಿರಾಮೂಲಂ ಪ್ಲೀಹಾಖ್ಯಾತಂ ಮಹರ್ಷಿಭಿಃ ॥**

(ಶಾರ್ಙ್ಗಧರ)

ರಕ್ತವು ಯಕೃದ್ರಸದಿಂದ ಆಗುವಂತೆ ಪ್ಲೀಹೋತ್ಪನ್ನ ರಸದಿಂದಲೂ ಆಗುತ್ತದೆ. ಆದ್ದರಿಂದ ಪ್ಲೀಹವೂ ಕೂಡ ರಕ್ತವಾಗಲಿಕ್ಕೆ ಮೂಲ ಕಾರಣವು. ಆದ್ದರಿಂದ ರಕ್ತವಾಹಿ ಸಿರಗಳಿಗೆ ಮೂಲಕಾರಣವೆಂದು ಹೇಳಿದ್ದಾರೆ. ಮಹರ್ಷಿಗಳು ಮುಖ್ಯವಾಗಿ ಇಲ್ಲಿ ರಕ್ತ ತಯಾರಾಗುವ ಮೂಲ ಕಾರಣವನ್ನವಲೋಕಿಸಿ, ಹೀಗೆ ರಕ್ತವಾಹಿಗಳಾದ ಸಿರಗಳಿಕೆ ಪ್ಲೀಹವು ಮೂಲವೆಂದು ನಿರ್ಣಯಿಸಿದ್ದಾರೆ

## (೨೬) ಕ್ಲೋಮ (ತಿಲ) ಗಳು

**ಜಲವಾಹಿಸಿರಾಮೂಲಂ ತೃಷ್ಣಾಚ್ಛಾದನಕಂತಿಲಂ ॥**

(ಶಾರ್ಙ್ಗಧರ॥ ಪ್ರ. ಖ. ಅ ೫ ಶ್ಲೋ. ೪೪)

ತಿಲಕವೂ(ಕ್ಲೋಮ)ಕೂಡ ಎದೆಯಲ್ಲಿ ಉಭಯ(ಎಡಬಲ)ಸ್ಥಾನಗಳಲ್ಲಿ ಇರುತ್ತವೆ. ಪ್ರಮಾದವಶಾತ್ ಬಲಗಡೆಯಲ್ಲಿ ಎಂದು ಹೇಳಿದ್ದಾರೆ. ಆದ್ದರಿಂದ ಎರಡೂ ಕಡೆಯಲ್ಲಿ ಎಂದು ಗ್ರಹಿಸುವದು ಯೋಗ್ಯವು. ತಿಲಕಂ, ತಿಲಂ, ಕ್ಲೋಮಂಗಳೆಂಬ ಹೆಸರುಗಳಿರುತ್ತವೆ ಜಲವನ್ನು ವಹಿಸುವ (ಒಯ್ಯುವ) ಸಿರಾಗಳ ಮೂಲದಲ್ಲಿರುತ್ತವೆ ವಿಶೇಷವಾಗಿ ನೀರಡಿಕೆ (ತೃಷ್ಣಾ) ಉಂಟು ಮಾಡುತ್ತವೆ ಅಲ್ಲಿ ಯೋಗ್ಯಸಾಂಕಷ್ಟು ಜಲ (ದ್ರವ) ವಿರುವವರೆಗೆ ತೃಷ್ಣೆಯನ್ನು ತಡೆಯುತ್ತವೆ "ಆಚ್ಛಾದಕ" ವೆಂದರೆ ತೃಷ್ಣೆಯನ್ನು ಆರ್ದ್ರತೆ ಇರುವ ವರೆಗೆ ತಡೆದುಹಿಡಿಯುತ್ತವೆಂದೂ, ಮಾಂಸಗೋಲಕಗಳಾದ್ದರಿಂದ ಹೃದಯಕ್ಕೆ ಬಲಬರುವಂತೆ ಆಚ್ಛಾದಕವೆಂದೂ ಅರ್ಥ ಮಾಡುತ್ತಾರೆ. ಇವೆರಡೂ ಯುಕ್ತಿಸಂಮತವಾದವುಗಳೇಇರುತ್ತವೆ. ಕ್ಲೋಮವೆಂದರೆ ಮಾಂಸಗೋಲಕಗಳು.

## (೨೭) ವೃಕ್ಕಗಳು

**ವೃಕ್ಕೌ ಪುಷ್ಟಿಕರೌ ಪ್ರೋಕ್ತೌ ಜಠರಸ್ಥಸ್ಯ ಮೇದಸಃ ॥**

(ಶಾರ್ಙ್ಗಧರ)

"ವೃಕ್ಕವೆಂದರೆ" ಹೊಟ್ಟೆಯ ಪ್ರದೇಶಗಳಲ್ಲಿರುವ ಮಾಂಸ ಗೋಲಕಗಳು. ಜಠರದಲ್ಲಿ ಮೇದಸ್ಸಿನ ಪುಷ್ಟಿಯನ್ನು ಮಾಡುತ್ತವೆ. ಮೇದಸ್ಸನ್ನು ಒಯ್ಯುವ ಸ್ರೋತಸ್ಸಿನ ಮೂಲಗಳು ವೃಕ್ಕಗಳು. ಮೇದೋವಹ ಸ್ರೋತಸ್ಸುಗಳು ವೃಕ್ಕಗಳಿಂದ ಹೊರಟಿರುತ್ತವೆಂಬರ್ಥವು.

## (೨೮) ವೃಷಣ (ಬೀಜಕೋಶ)ಗಳು

**ವೀರ್ಯವಾಹಿ ಸಿರಾಧಾರೌ ವೃಷಣೌ ಪೌರುಷಾವಹೌ ॥**

( ಶಾರ್ಙ್ಗಧರ॥ ಪ್ರ. ಖ. ಅ. ೫ ಶ್ಲೋ. ೪೬ )

ಪುರುಷರ ಶುಕ್ರವನ್ನು ಅತ್ತಿತ್ತ ಚಲನಮಾಡಿಸತಕ್ಕ ಧಮನಿಗಳಿಗೆ ಆಶ್ರಯವಾಗಿಯೂ, ಮುಖ್ಯವಾಗಿ ಪುರುಷತ್ವಕ್ಕೆ ಗುರುತಾಗಿಯೂ, ಇರುವ ಅಂಗಕ್ಕೆ ವೃಷಣಗಳೆಂಬ ಹೆಸರು. ಶುಕ್ರವಾಹಿ ಸ್ರೋತಸ್ಸುಗಳಿಗೆ ವೃಷಣವು ಅಂಟಿಕೊಂಡಿರುತ್ತವೆ. ವೃಷಣಗಳ ಪ್ರಸರಣಗಳಿಂದ ಶುಕ್ರ ನಿರ್ಗಮನವಾಗುತ್ತದೆ. ಅರ್ಥಾತ್ ಶುಕ್ರಪ್ರಚ್ಯವನಕ್ಕೆ ಪ್ರೇರಕವಾಗಿರುವದರಿಂದ "**ವೀರ್ಯವಾಹಿಸಿರಾಧಾರೌ**" ವೀರ್ಯವಾಹಿ ಸಿರಗಳಿಗೆ ಆಶ್ರಯವೆಂದು ಹೇಳಿದ್ದಾರೆ. ಮುಖ್ಯವಾಗಿ ಶುಕ್ರ ವಿಸರ್ಜನೆಗೆ ಮೂಲವಾಗಿರುವದರಿಂದಲೇ ವೃಷಣಗಳು ಸಿರಗಳಿಗೆ ಆಧಾರವೇ ಹೊರತು, ವೃಷಣಗಳಿಂದ ಸಿರಾ ಉತ್ಪನ್ನವಾಗಿರುತ್ತವೆಂದು ತಿಳಿಯಬಾರದು.

## (೨೯) ಲಿಂಗವು

**ಗರ್ಭಾಧಾನಕರಂ ಲಿಂಗಮಯನಂ ವೀರ್ಯಮೂತ್ರಯೋಃ॥**

(ಶಾರ್ಙ್ಗಧರ)

ಲಿಂಗವೆಂದರೆ ಪುರುಷ ಜನನೇಂದ್ರಿಯವು. **ಮೇಢ್ರ, ಮೇಹನ, ಶೇಫಃ, ಶಿಶ್ನ, ಲಿಂಗ**ವೆಂದು ಪರ್ಯಾಯ ನಾಮಗಳಿರುತ್ತವೆ. ಲಿಂಗವು ಪುರುಷನ ಶುಕ್ರ (ವೀರ್ಯ) ವನ್ನು ಗರ್ಭಾಧಾನಕ್ಕಾಗಿ ಯೋನಿಯಲ್ಲಿ ಸ್ಖಲಿಸುತ್ತದೆ. ಮೂತ್ರವನ್ನು ಹೊರಗೆ ಹಾಕುತ್ತದೆ. ಸ್ವಾಭಾವಿಕವಾಗಿ ಮೂತ್ರವನ್ನೂ, ಶುಕ್ರವನ್ನೂ, ಹೊರಗೆಹಾಕುವ ಕಾರ್ಯವನ್ನುಮಾಡುತ್ತದೆಂದಭಿಪ್ರಾಯವು. ವೀರ್ಯ ಮೂತ್ರಗಳು ಹೊರಬರುವ ದ್ವಾರವಾಗಿರುತ್ತದೆ. ಗರ್ಭಾರಂಭ ಕ್ರಮದಲ್ಲಿ ಯೋನಿಯಲ್ಲಿ ಪ್ರಚ್ಯುತವಾದ ಶುಕ್ರ ಮತ್ತು ಆರ್ತವಗಳು ಯುಕ್ತವಾಗಿ, ಗರ್ಭಾಶಯವನ್ನು ಪ್ರವೇಶಿಸಿ ಅಲ್ಲಿ ಗರ್ಭವಾಗಿ ಅಭಿವೃದ್ಧಿಯನ್ನು ಕ್ರಮವಾಗಿಹೊಂದುತ್ತದೆ. ಆದ್ದರಿಂದ ಲಿಂಗವು ಗರ್ಭಾಧಾನಕರವೆಂದು ಹೇಳಿದ್ದಾರೆ

# (೩೦) ಉಂಡುಕ

**ಪಂಚಮೀಪುರೀಷಧರಾ, ಸಾಹ್ಯಂತ್ರಾಮಪಕ್ವಾಶಯಾಶ್ರಯಾ, ತತ್ರೋಂಡುಕಸ್ಥಂ ಮಲಂ ವಿಭಜತಿ ||** (ವೃದ್ಧವಾಗ್ಭಟ)

**(ಚರಕ) ಪುರೀಷಾಧಾರಶಬ್ದೇನ ಉಂಡುಕಃ ಪ್ರತಿಪಾದಿತಃ || ಅತ ಏವ ಪುರೀಷಧರೇತಿ ನಾಮಾಸ್ಯಾಃ || ಮಲಂ ವಿಭಜತಿ ಮೂತ್ರ ಪುರೀಷ ರೂಪತಯಾ ವಿಭಾಗಂ ಕರೋತಿ ||**

ಕರಳು, ಆಮಾಶಯ, ಪಕ್ವಾಶಯಗಳಲ್ಲಿ "**ಉಂಡುಕದಲ್ಲಿ**" ಪುರೀಷ ಧರಾಕಲಾ ಇರುತ್ತದೆ. ಮಲವನ್ನು ವಿಭಾಗಿಸುತ್ತದೆ. ವೃದ್ಧ ವಾಗ್ಭಟ ಮತವು ಇಂತಿರುತ್ತದೆ.

**ಚರಕ ಮತವು:**— ಪುರೀಷಾಧಾರ ಶಬ್ದದಿಂದ "**ಉಂಡುಕವು**" ಪ್ರತಿಪಾದಿತವಾಗಿರುತ್ತದೆ. ಆದ್ದರಿಂದಲೇ ಅದಕ್ಕೆ ಪುರೀಷಧರಾ ಎಂಬ ಹೆಸರು ಬಂದಿರುತ್ತದೆ. ಮೂತ್ರ ಪುರೀಷರೂಪದಿಂದ ಮಲವನ್ನು ವಿಭಾಗಿ ಸುತ್ತದೆ. ಎಂದು ಹೇಳಿದ್ದರಿಂದ ಗುದ ಪರ್ಯಂತವಾದ ಸಮಸ್ತಕೋಷ್ಠಾ ಶ್ರಯವಾಗಿ, ಉಂಡುಕವಿರುತ್ತದೆಂದು ಚರಕಾಚಾರ್ಯರ ಮತವು.

ದೇಹದಲ್ಲಿರುವ ಅಗ್ನಿ, ವಾಯುಗಳು ರಸಮೂತ್ರಪುರೀಷಗಳನ್ನು ಬೇರೆ ಮಾಡುತ್ತವೆಂದುಹೇಳಿರುವದರಿಂದ, ಪಕ್ವಾಶಯದಲ್ಲಿಯ ಮಲವನ್ನುಹೊರಗೆ ಹಾಕುವ ಕೆಲಸವನ್ನು ಉಂಡುಕಮಾಡುತ್ತದೆಂದು ಕೆಲವರ ಮತವು ಕೋಷ್ಠ ವ್ಯಾಪಿಯಾಗಿದ್ದು ಪಕ್ವಾಶಯದಲ್ಲಿ ಉಂಡುಕ ಸ್ಥಿತಿಯು ವಿಶೇಷವಾಗಿರುತ್ತ ದೆಂದೂ, ಪಕ್ವಾಶಯದಲ್ಲಿ ಮಲಸ್ಥಾನವಾದ್ದರಿಂದ ಮಲವನ್ನು ಹೊರಗೆ ಹಾಕುವ ಸ್ವಾಭಾವಿಕ ಸ್ಥಿತಿಯು ಇದ್ದೇ ಇರುತ್ತದೆಯಾದ್ದರಿಂದ; ಪಕ್ವಾ ಶಯದ ಮೇಲ್ಭಾಗದಲ್ಲಿ "ಉಂಡುಕ" ವಿದ್ದು ಸ್ಥೂಲಮಲದ ವಿಭಾಗವನ್ನು ಮಾಡುತ್ತದೆಂದೂ ಅನೇಕ ಮತಗಳಿರುತ್ತವೆ. ಪ್ರತ್ಯಕ್ಷ ಶವ ವಿಚ್ಛೇದನ ರೂಪದಿಂದ ಶರೀರವನ್ನು ಜ್ಞಾನಮಾಡಿಕೊಳ್ಳುವ ಪದ್ಧತಿಯು ಆಯುರ್ವೇದ

ದಲ್ಲಿ ಬರುವವರೆಗೂ, ವಿವಾದಾಸ್ಪದ ಸಂಗತಿಗಳು ನಿಶ್ಚಯವಾಗಲಾರವು. ಇದರಂತೆ ಅನೇಕ ದ್ರವ್ಯಗಳ ಸ್ಥಾನಾಶ್ರಯ ಸ್ಥಿತಿ ಆಕಾರ ಸ್ವರೂಪಗಳ ವಿಷಯದಲ್ಲಿ ಭಿನ್ನಾಭಿಪ್ರಾಯ ಇದ್ದೇ ಇರುತ್ತವೆ.

## (೩೧) ಹೃದಯ ವಿಜ್ಞಾನವು

ಹೃದಯವನ್ನು ಆಯುರ್ವೇದ ದೃಷ್ಟಿಯಿಂದ ವಿಚಾರಿಸಿದರೆ ಅನೇಕ ವಿರೋಧ ಸಂಶಯಗಳುಂಟಾಗುತ್ತವೆ. ಇದರಿಂದ ಆಯುರ್ವೇದ ದೃಷ್ಟಿಯಿಂದ ಹೃದಯ ನಿಷ್ಕರ್ಷೆಯು ಅಸಂಗತವೆಂದು ಅನ್ನಿಸುವಷ್ಟು ಸಂದಿಗ್ಧವಾಗಿರುತ್ತದೆ. ಇಲ್ಲಿ ಹೃದಯವಿರುವ ಸ್ಥಾನ ಮತ್ತು ಹೃದಯಗಳನ್ನು ಭಿನ್ನ ಮಾಡಿ ಹೇಳದಿರುವದೇ ಬಹುಮತ ವಿರೋಧಗಳಿಗೆ ಆಸ್ಪದವಾಗಿದೆ.

ಆತ್ಮ, ಬುದ್ಧಿ, ಮನಸ್ಸು, ಚೇತನೆಗಳಿಗೆ ಹೃದಯವೇ ಆಶ್ರಯವೆಂದು ಹೇಳಿದ್ದಾರೆ. ಕಮಲದಂತೆ ಆಕಾರವುಳ್ಳದ್ದಾಗಿ ಅಧೋಮುಖವಾದದ್ದೆಂದೂ, ಎಚ್ಚತ್ತಾಗಅರಳಿಕೊಂಡೂ ನಿದ್ರಿಸಿದಾಗ ಮುಚ್ಚಿದಸ್ಥಿತಿಯನ್ನು(ಸಂಕೋಚ) ಹೊಂದಿಯೂ ಇರುತ್ತದೆಂದು ಹೇಳಿದ್ದಾರೆ. ಇದರಿಂದಲೇ ದೇಹದ ಸರ್ವ ಕ್ರಿಯಾ ನಡೆಯುವದರಿಂದ "**ಹೃದಯವು**" ಮುಖ್ಯವಾದದ್ದೆಂದು ಹೇಳಿರುವರು. ಹೃದಯವಿರುವ ಆಶ್ರಯಸ್ಥಾನಕ್ಕೂ ಹೃದಯವೆಂದು ಹೇಳಿದ್ದಾರೆ.

ಉದಾಹರಣೆ:– ಪ್ರಾಣರಸಾದಿಗಳನ್ನುಒಯ್ಯುವ ಧಮನಿಗಳು ಹೃದಯದಿಂದ ಹೊರಟಿರುತ್ತವೆ. ಆದ್ದರಿಂದ ಅವುಗಳಿಗೆ ಹೃದಯವು ಆಶ್ರಯ ಸ್ಥಾನವಾಗಿರುತ್ತದೆ.

**॥ ರಸವಹಾನಾಂಸ್ರೋತಸಾಂ ಹೃದಯಂ ಮೂಲಂ ॥**

(ಚರಕ ವಿಮಾನ)

**॥ ಪ್ರಾಣವಹಾನಾಂ ಸ್ರೋತಸಾಂ ಹೃದಯಂಮೂಲಂ ॥**

(ಚರಕ ವಿಮಾನ)

ರಸವಾಹಿನೀ ಸ್ರೋತಸ್ಸು (ಧಮನಿ) ಗಳಿಗೆ ಹೃದಯವು ಸ್ಥಾನವಾಗಿರುತ್ತದೆ ಇದರಂತೆ ಪ್ರಾಣವಾಹಿನೀ ಸ್ರೋತಸ್ಸುಗಳು ಸಹ ಹೃದಯದಿಂದ ಹೊರಟಿರುತ್ತವೆಂದು, ಚರಕ ಸುಶ್ರುತಗಳಲ್ಲಿ ಹೇಳಿರುವದರಿಂದ, ಕಮಲದ ಆಕಾರವುಳ್ಳ ಹೃದಯದಿಂದ ಧಮನ್ಯಾದಿಗಳು ಹೊರಟಿರುತ್ತವೆಯೋ ಎಂದು ಅನಿಸುತ್ತದೆ. ಇಲ್ಲಿ ಕಮಲದ ಆಕಾರವಿರುವ ಸಾಕ್ಷಾತ್ ಹೃದಯದಿಂದ ಧಮನಿಗಳು ಹೊರಟಿರದೆ, ಹೃದಯದ ಸಮೀಪ ಸ್ಥಾನದಿಂದ ಹೊರಟಿವೆಯೆಂದು ತಿಳಿಯಬೇಕು. ಇದರಿಂದ ಹೃದಯವಿರುವ ಸಮೀಪ ಸ್ಥಾನಕ್ಕೆ ಲಕ್ಷಣ ಮಾಡಿ, ಹೃದಯವೆಂದು ಗ್ರಹಿಸಿದ್ದಾರೆನ್ನುವದು ಸಿದ್ಧವಾಯಿತು ಸಾಕ್ಷಾತ್ ಹೃದಯ, ಲಕ್ಷಣದಿಂದ ಗ್ರಹಿಸಿದ ಆಶ್ರಯಸ್ಥಾನ ರೂಪ ಹೃದಯವೆಂದೂ, ಸಾಮೀಪ್ಯ ರೀತಿಯ ಭಿನ್ನತೆಯನ್ನು ಗ್ರಹಿಸಿದರೆ ಹೃದಯವು ಯಾವದೆಂದು ನಿಶ್ಚಯವಾಗುತ್ತದೆ.

## ★ಹೃದಯ ಸ್ಥಾನ

ಉರೋಮಧ್ಯಗತಃ ಕೋಷ್ಠಃ ಲವಲೀ ಫಲವರ್ತುಲಃ ॥
ರಕ್ತಾಧಾರಶ್ಚತುರ್ಗರ್ಭ ಆವರಣ್ಯಾ ಸಮಾವೃತಃ ॥೧॥

ತಿರ್ಯಕ್ ಸ್ರೋಧಮನೀಭೂಮಿಃ ಫುಪ್ಫುಸದ್ವಯಶೀರ್ಷಕಃ॥
ಸ್ಥಿತ್ಯಾಽಕುಂಚನಶೀಲೋಽಸೌ ಹೃತ್ಕೋಷ್ಠ ಇತಿಕೀರ್ತಿತಃ ॥೨॥

ಅನಿಶಂಸ್ಥಾಯತೇಕೋಷ್ಠಃ ಪ್ರಕೃತ್ಯಾಸಂಕುಚತ್ಯಪಿ ॥
ಆಭೂಮಿಸ್ಪರ್ಶನಾದ್ಯಾವತ್ ಮೃತ್ಯುಃ ಸರ್ವಸ್ಯದೇಹಿನಃ॥೩॥

ತದಾಕುಂಚನತೋರಕ್ತಂ ಮುಹತಾಖಿಲುರಂಹಸಾ ॥
ಪ್ರವಿಶೇದ್ಧಮನೀಮೂಲಂ ತತೋಭ್ರಮತಿ ವಿಗ್ರಹಂ ॥೪॥

ಸ್ಥಾಯನಾಕುಂಚನತೇತಸ್ಯ ವಿರಮೇತಾಂಕ್ಷಣಂಯದಿ ॥
ಸಹಸೈವಭವೇನ್ಮೃತ್ಯುರ್ನಾಸ್ತಿಕೋಪ್ಯತ್ರ ಸಂಶಯಃ ॥೫॥

ಎದೆಯ ಮಧ್ಯಭಾಗದಲ್ಲಿ ರಾಯನೆಲ್ಲೀಕಾಯಿಯ (ಲವಲೀಫಲ) ಆಕಾರದಂತೆ ವರ್ತುಲವಾಗಿ ಹೃತ್ಕೋಷ್ಠವು (ಹೃದಯ) ಇರುತ್ತದೆ. ರಕ್ತಾಶಯದ ನಾಲ್ಕನೇ ವಿಭಾಗದಲ್ಲಿ ಆವರಣೆಯಿಂದ ಆವೃತವಾಗಿರುತ್ತದೆ. ಅಥವಾ ರಕ್ತಾಧಾರವೆಂದರೆ ಮಾಂಸವಾಗಿರುತ್ತದೆ. ಮಾಂಸ ಪರದೆಯ ನಾಲ್ಕನೇ ಆವರಣ ಮಧ್ಯದಲ್ಲಿ (ಗರ್ಭ) ಆಚ್ಛಾದಿಸಲ್ಪಟ್ಟಿರುತ್ತದೆ. ಈ ರೀತಿಯನ್ನನುಸರಿಸಿ ವಕ್ಷಸ್ಥಲ ಮಧ್ಯದಲ್ಲಿ ಹೃದಯವಿರುತ್ತದೆಂದು ಕೆಲವರು ಅನ್ನುತ್ತಾರೆ. "ರಕ್ತಾಧಾರ"ವೆನ್ನುವ ಶಬ್ದಕ್ಕೆ ರಕ್ತಾಶಯವೆಂದು ಅರ್ಥ ಮಾಡಿ, ರಕ್ತಾಶಯದ ನಾಲ್ಕನೇ ಭಾಗದಲ್ಲಿ ಆವೃತವಾಗಿ ಹೃದಯವಿರುತ್ತದೆಂದೂ ಕೆಲವರು ಅಭಿಪ್ರಾಯಪಡುತ್ತಾರೆ. ಆದರೆ ಆಯುರ್ವೇದ ಸಿದ್ಧಾಂತದಲ್ಲಿ ಹೃದಯ ಮತ್ತು ರಕ್ತಾಶಯಗಳನ್ನು ಭಿನ್ನವಾಗಿ ಹೇಳಿದ್ದಾರೆ. ಇಷ್ಟೇಅಲ್ಲ ರಕ್ತವಾಹಿನೀ ಧಮನಿಗಳಿಗೆ ಯಕೃತ್‌ಪ್ಲೀಹಗಳು ಮೂಲವೆಂದು ವಿವರಿಸಿದ್ದಾರೆ. ಆದ್ದರಿಂದ ಇಲ್ಲಿ ರಕ್ತಾಧಾರವೆಂದರೆ ರಕ್ತಾಶಯವಲ್ಲದೆ, ರಕ್ತಕ್ಕೆ ಆಶ್ರಯವಾದದ್ದು "ಮಾಂಸ"ವೆಂದು ಅರ್ಥಮಾಡಬೇಕಾಗುತ್ತದೆ. ಹೀಗೆ ಅರ್ಥ ಮಾಡಿದರೆ ಮಾಂಸ ಪರದೆಗಳಿಂದ ಆವೃತವಾಗಿ ಹೃದಯವಿರುತ್ತದೆಂದು ಸ್ಪಷ್ಟವಾಗುತ್ತದೆ. ಅಂದರೆ ರಕ್ತಾಶಯ ಭಿನ್ನವಾಗಿ ಹೃದಯವಿರುತ್ತದೆಂದು ಸಿದ್ಧವಾಗುತ್ತದೆ. ಅಥವಾ ತಂತ್ರಾಂತರ ಸಿದ್ಧಾಂತವಿರುವದರಿಂದ ವಿವಿಧ ಮತವೂ ಇರುವದು ಸ್ವಾಭಾವಿಕವಿರುತ್ತದೆ ಅಡ್ಡವಾಗಿ ಬಂದ ಧಮನಿಗಳು ಇರುವ ಆಶ್ರಯಸ್ಥಾನದ ಸಮೀಪವಾಗಿಯೂ, ಎರಡೂ ಪುಪ್ಪುಸಗಳ ಮಧ್ಯದ ಮೇಲ್ಭಾಗದಲ್ಲಿ ಹೃದಯವು ಇರುತ್ತದೆ. ತೆರೆಯುವ ಮುಚ್ಚುವ ಅಥವಾ ವಿಕಸನಸಂಕೋಚಶೀಲವುಳ್ಳದ್ದು ಇರುತ್ತದೆ. ಯಾವಾಗಲೂ ಆಕುಂಚನ ಪ್ರಸರಣವಾಗುತ್ತಿರುತ್ತದೆಂಬ ಅಭಿಪ್ರಾಯವು. ಆದ್ದರಿಂದ ಇದಕ್ಕೆ ಹೃತ್ಕೋಷ್ಠ ಹೃದಯವೆಂಬ (ಕೋಣೆ) ಸ್ಥಾನವೆಂದು ಹೇಳುತ್ತಾರೆ.

ಹೃದಯದ ವಿಕಾಸದಿಂದ ಎಚ್ಚರವೂ ಮುಚ್ಚುವಿಕೆಯಿಂದ ನಿದ್ರೆಯೂ ಆವರಿಸುತ್ತದೆಯೆಂದು ಹೇಳಿದ್ದರಿಂದ, ಯಾವಾಗಲೂ ಹೃದಯದಲ್ಲಿ ಇವುಗಳು ನಡೆಯುತ್ತಲೇ ಇರುತ್ತವೆಯಾದ್ದರಿಂದ, ಒಂದುಕ್ಷಣ ನಿದ್ರೆ ಮತ್ತು ಎಚ್ಚರಗಳುಂಟಾಗಬೇಕೆಂಬ ಆಕ್ಷೇಪಬರುತ್ತದೆ. ಇಲ್ಲಿ ಒಂದು ವಿಶೇಷವೇನಂದರೆ ಯಾವಾಗಲೂ ನಡೆಯುತ್ತಿರುವ ಸಂಕೋಚ ವಿಕೋಚನೆಗಳು, ಸ್ಫುರಣರೂಪ

ವಾದ ಹೃದಯದ ಕ್ರಿಯೆಯೆಂದು ತಿಳಿಯಬೇಕು. ಅದು ನಿದ್ರೆಯಲ್ಲಿಯೂ ಸಹ ಇದ್ದೇ ಇರುತ್ತದೆ. ಸ್ಥೂಲರೂಪವಾದ ಅರಳುವಿಕೆ ಮುಚ್ಚುವಿಕೆ ಬೇರೆ, ಕ್ರಿಯಾರೂಪ ಸ್ಫುರಣೆಯು ಬೇರೆ ಇರುತ್ತದೆ. ಸ್ಥೂಲರೂಪದ ಮುಚ್ಚುವಿಕೆಯಿಂದ ಇಂದ್ರಿಯಾರ್ಥ ಸನ್ನಿಕರ್ಷ ಜ್ಞಾನವಾಗುವದಿಲ್ಲ. ಇಂದ್ರಿಯಗಳು ವಿಶ್ರಾಂತಿಯನ್ನು ಹೊಂದಿರುತ್ತವೆ. ಸ್ಫುರಣರೂಪವಾದ ಹೃದಯಕ್ರಿಯೆಯು ಅನವರತ ಬಿಡದೇ ನಡೆಯುತ್ತಲೇ ಇರುತ್ತದೆ. ಅದರ ಗತಿ ನಿಂತಿತೆಂದರೆ ಮರಣ ಸಂಭವಿಸಿದೆಯೆಂದು ತಿಳಿಯಬೇಕು. ಚೇತನಾವಸ್ಥಿತ ಪ್ರೇರಕ ಆತ್ಮನ ಸಂಯೋಗ ಭಿನ್ನವಾದಕೂಡಲೇ, ಹೃದಯದ ಸ್ಫುರಣರೂಪಕ್ರಿಯೆಯು ಇಲ್ಲದಂತಾಗುತ್ತದೆ ಹೃದಯದ ಸಂಕೋಚ ವಿಕಾಸಗಳು ಸದಾ ಆಗುತ್ತಿರುವದು ಸ್ವಾಭಾವಿಕವೆಂದು ಹೇಳಿದ್ದಾರೆ ಸರ್ವಜೀವಿಗಳ ಉತ್ಪತ್ತಿ ಮೊದಲುಗೊಂಡು ಮೃತ್ಯುಬರುವ ಪರ್ಯಂತರವೂ ಹೃದಯಕ್ರಿಯೆಯು ಸತತ ನಡದೇ ಇರುತ್ತದೆ. ಆದ್ದರಿರದಲೇ ಜೀವಿತಮರಣ ನಿಶ್ಚಯ ವಿಷಯದಲ್ಲಿ ಹೃದಯವನ್ನೇ ಅವಲೋಕಿಸುತ್ತಾರೆ ಹೃದಯದ ಆಕುಂಚನೆಯಿಂದ ಪ್ರೇರಿಸಲ್ಪಟ್ಟದ್ದಾಗಿ, ರಕ್ತಾಶಯದಿಂದ ರಕ್ತವು ಬಹು ವೇಗದಿಂದ (ಬಹುರಂಹಸಾ) ಧಮನೀ ಮೂಲವನ್ನು ಪ್ರವೇಶಿಸುತ್ತದೆ. ನಂತರ ಸಮಗ್ರದೇಹವನ್ನು ಸಂಚರಿಸುತ್ತದೆ

"ಹೃದಯದ" ವಿಕಸನ (ಸ್ಫಾಯನ) ಆಕುಂಚನಗಳು ಒಂದುಕ್ಷಣ ತಡೆಯಿತೆಂದರೆ ಕೂಡಲೇ ಮರಣ ಸಂಭವಿಸುತ್ತದೆ. ಇದರಲ್ಲೇನೂ ವಿಚಾರ ಮಾಡುವ ಕಾರಣವೇ ಇರುವದಿಲ್ಲ. ಮರಣ ಸಂಭವಿಸಿದ ಕೂಡಲೇ ಹೃದಯ ಕ್ರಿಯೆಯೂ ಬಂದಾಗುತ್ತದೆ.

## ಹೃದಯ ವಿಷಯದಲ್ಲಿ ಮತಾಂತರ

ಸ್ಥಾನಮೇಕಾಂಗುಲಂ ವಾಮಚೂಚುಕಾಧಃ ಉರಃ ಫಲೇ ।
ಹೃದಯಾಗ್ರಮುಖಂವಾಮಾತ್ ಪಂಚಮೇಪರ್ಶುಕಾಂತರೇ॥೧೦॥
ಪುರಸ್ತಾದ್ವಾಮತಃ ಪ್ರಾಯೋಹೃಚ್ಚ ತಿರ್ಯಗವಸ್ಥಿತಮ್ ॥
ಅತ್ರೈವದರ್ಶನ ಸ್ಪರ್ಶೈಃ ಸ್ಪಂದನಂಚಾನುಭೂಯತೇ ॥
(ತಂತ್ರಾಂತರೆ)

ವಕ್ಷಸ್ಥಲದಲ್ಲಿ (ಎದೆಯಲ್ಲಿ) ಎಡಗಡೆಯ ಸ್ತನದ ಒಂದಂಗುಲ ಕೆಳಭಾಗ ದಲ್ಲಿ ಹೃದಯವಿರುವ ಸ್ಥಾನವಾಗಿರುತ್ತದೆ. ಹೃದಯದ ಅಗ್ರಮುಖ ಭಾಗವು (ಮುಖ್ಯಭಾಗ) ಎದೆಯ ಎಡಗಡೇ (೫) ನೇಎಲುಬಿನ ಪಟ್ಟಿಯ ವರೆಗಿನ ಸ್ಥಾನದಲ್ಲಿರುತ್ತದೆ ವಕ್ಷಸ್ಥಲದ ಎದುರು ವಿಶೇಷವಾಗಿ ಎಡಗಡೆಯಲ್ಲಿ ಹೃದ ಯವು ಅಡ್ಡವಾಗಿರುತ್ತದೆ. ಅಲ್ಲಿಯೇ ಕೇಳುವಿಕೆ (ಧ್ವನಿ) ಯಿಂದ ಅಥವಾ ಸ್ಪರ್ಶನದಿಂದ ಹೃದಯಸ್ಪಂದನಜ್ಞಾನವಾಗುತ್ತದೆ. ಎಡಗಡೆಯ ಸ್ತನದ ಒಂದಂಗುಲ ಕೆಳಭಾಗದಲ್ಲಿ ಹೃದಯಸ್ಪಂದನ ಧ್ವನಿಗಳನ್ನು ಅವಲೋಕಿಸ ಬೇಕು.

## ಹೃದಯದ ಸುತ್ತಲಿನ ಪ್ರದೇಶ

ತಿಷ್ಠತಿಹೃದಯಂದೇಹೇವಾಮಪಾರ್ಶ್ವೇತು ವಕ್ಷಸಃ॥
ಪರ್ಶುಕಾಃ ಸಂಮುಖೇವಾಮೇದ್ವಿತ್ರಿಕಚತುಃ ಪಂಚಮಾಃ॥
ಅಸ್ಯೈವದಕ್ಷಿಣೇವಾಮೇಫುಫ್ಫುಸೌತಿಷ್ಠತಃ ಕ್ರಮಾತ್॥
ಪಶ್ಚಾದನ್ನನಲೀಚಾಸ್ಯಧಮನೀಪೃಷ್ಠವಂಶಕಮ್॥
ಮಹಾಪ್ರಾಚೀರಾಸ್ಯಪೃಷ್ಠೇಪೇಶೀಚಹೃದಯಾಶ್ರಯಾ॥
ಉದರೇಪೇಶ್ಯಧೋವಾಮೇಪ್ಲೀಹಾಚದಕ್ಷಿಣೇಯಕೃತ್॥
ತಯೋರೂರ್ಧ್ವಂಮಹಾಸ್ರೋತೋರಕ್ತಸ್ಯಸರ್ವದೇಹಗಮ್॥
ಫುಫ್ಫುಸಗಾಚರಕ್ತಸ್ಯಸಿರಾಚಫುಫ್ಫುಸಸ್ಯತಾ॥
ಪ್ರಾಣದಾಪ್ರಾಣವಾಹಿನ್ಯೋಹೃದಿಬದ್ಧಾಭವಂತಿಹಿ॥
ಸ್ವಸಂಕೋಚವಿಕಾಶಾಭ್ಯಾಂ ಸೃಜತ್ಯಸ್ರಂಚಜೀವನಂ॥
ಸಜೀವಾಯಾಂತಿದೇಹೇsಸ್ರಕ್ಷೇಪೇಣಪರಮಾಣವಃ॥
ಹೃದಯಸ್ಯಚಸೀಮಾಂತಾಃ ಕಾರ್ಯಂ ಸ್ಥಾನಂಚವರ್ಣಿತಂ॥
(ತಂತ್ರಾಂತರೆ)

ದೇಹದಲ್ಲಿ ಎದೆಯ ಎಡಗಡೇ ಭಾಗದಲ್ಲಿ "ಹೃದಯವು" ಇರುತ್ತದೆ. ಪಾರ್ಶ್ವಾಸ್ಥಿದಬ್ಬೆಗಳ ಸ್ಥಾನದಲ್ಲಿ ಎರಡನೇದರಿಂದಾರಂಭಿಸಿಐದನೇದರ(ದಬ್ಬೇ ಎಲಬು) ಪರ್ಯಂತರ ಎಡಗಡೆಗೆ ಸಂಮುಖವಾಗಿ (ಎದುರಿಗೆ) ಹೃದಯ

ಸ್ಥಾನವು. ಹೃದಯದ ಎಡಬಲಭಾಗಗಳಲ್ಲಿ "ಪುಪ್ಫುಸಗಳು" ಇರುತ್ತವೆ. ಹೃದಯದ ಹಿಂದೆ ಅನ್ನನಲಿಕೆ, ಮತ್ತು ಮಹಾ ಧಮನಿಗಳು ಇರುತ್ತವೆ. ಇವುಗಳ ಹಿಂದೆ ಕಸೇರುಕಾರಜ್ಜು (ಪೃಷ್ಠಾಸ್ಥಿ) ಇರುತ್ತದೆ. ಹೃದಯಕ್ಕೆ ಹತ್ತಿಕೊಂಡು ಹಿಂದು ಬದಿಯಲ್ಲಿ "ಮಹಾಪ್ರಾಚೀರ"ವೆಂಬ ಪೇಶಿಯು ಇರುತ್ತದೆ. ಅದರ ಮೇಲೆ ಅದನ್ನು ಆಶ್ರಯಿಸಿ, ಹೃದಯವು ಇರುತ್ತದೆ. ಮಹಾಪ್ರಾಚೀರದ ಕೆಳಗೆ ಉದರ ಗುಹಾದಲ್ಲಿ ಹೃದಯದ ಬಲಭಾಗದಲ್ಲಿ ಯಕೃತ್, ಎಡಭಾಗದಲ್ಲಿ ಪ್ಲಿಹಾ ಇರುತ್ತವೆ. ಇವುಗಳ ಮೇಲ್ಭಾಗಗಳಲ್ಲಿ ಸಮಗ್ರ ಶರೀರದಲ್ಲಿ ರಕ್ತವನ್ನು ಒಯ್ಯುವ ಧಮನೀ(ಮಹಾಸ್ರೋತಸ್ಸು) ಹೊರಟಿರುತ್ತವೆ. "ಪುಪ್ಫುಸಗಳಲ್ಲಿ" ರಕ್ತವಾಹಿ ಸಿರಗಳು ಮೇಲೆ ಕೆಳಗೆ ಇರುತ್ತಿದ್ದು ಪುಪ್ಫುಸಗಳಿಂದ ಹೊರಟಂಥವುಗಳು ಸಹ ಇರುತ್ತವೆ. ಪ್ರಾಣಧಾರಣೆಮಾಡುವ ಪ್ರಾಣವಾಹಿನೀ ಧಮನಿಗಳು ಹೃದಯ ಸ್ಥಾನದಲ್ಲಿ ಬದ್ಧವಾಗಿರುತ್ತವೆ ಹೃದಯವು ಸಂಕೋಚ ವಿಕೋಚಗಳಿಂದ ದೇಹದಲ್ಲಿ ಜೀವನವಾದ ರಕ್ತವನ್ನು ಚಲಿಸುವಂತೆ ಮಾಡುತ್ತದೆ. ಹೀಗೆ ಸಂಚಲಿತ ರಕ್ತದ ಪರಮಾಣುಗಳು ಸಜೀವವಾಗಿ ದೇಹದಲ್ಲಿ ಸಂಚರಿಸುತ್ತವೆ. ಹೀಗೆ ವಿಸ್ತಾರವಾಗಿ ಹೃದಯ ಮತ್ತು ಸುತ್ತಲಿರುವ ಬೇರೆ ವಿಭಾಗಗಳ ಸ್ಥಾನಕಾರ್ಯಗಳು ವರ್ಣಿಸಲ್ಪಟ್ಟಿರುತ್ತವೆ. ಹೃದಯ ಮತ್ತು ಪ್ರದೇಶಗಳ ಸ್ಥಾನಕ್ರಿಯಾದಿಗಳು ತಂತ್ರಾಂತರದಲ್ಲಿ ವರ್ಣಿತವಾಗಿರುತ್ತವೆ. ಇವು ಸಾಮಾನ್ಯತಃ ನವೀನ ಮತವನ್ನನುಸರಿಸಿಯೇ ಇರುತ್ತವೆ. ಇದರಿಂದ ಹೃದಯ ಮತ್ತು ಸುತ್ತಲಿನ ವಿಭಾಗಗಳು ತಿಳಿಯುತ್ತವೆ.

**ಆಮಾಶಯಃ ಸಮೀಪೇಹಿ ಹೃದಯಸ್ಯೈವತಿಷ್ಠತಿ ॥**

(ತಂತ್ರಾಂತರೆ)

ಹೃದಯದ ಸಮೀಪದಲ್ಲಿಯೇ ಆಮಾಶಯವು ಇರುತ್ತದೆ. "ಆಮ"ವೆಂದರೆ ಅಪಕ್ವವಾದ ಅನ್ನರಸವು. ಅಪಕ್ವ ಅನ್ನರಸವು ಇರುವ ಸ್ಥಾನ (ಆಶ್ರಯ) ವಾದ್ದರಿಂದ ಆಮಾಶಯವೆಂದು ಅನ್ನುತ್ತಾರೆ.

**ಸ್ವವೀರ್ಯಾತ್ ಸ ತ್ರಿಕಸ್ಯೈವ ಶ್ಲೇಷ್ಮೋರಸ್ಥೋವಲಂಬಕಃ ॥**
**ಹೃದಯಸ್ಯಾನ್ನವೀರ್ಯಾಚ್ಚ ತತ್ಸ್ಥ ಏವಾಂಬು ಕರ್ಮಣಾ ॥**

**ಕಫಧಾವಸ್ನಾಂಚ ಶೇಷಾಣಾಂ ಯತ್ಕರೋತ್ಯವಲಂಬನಮ್ ॥**

(ತಂತ್ರಾಂತರೆ)

ವಕ್ಷಸ್ಥಲದಲ್ಲಿ (ಉರಸಿ) ಅವಲಂಬಕವೆಂಬ ಕಫಾಶಯ (ಶ್ಲೇಷ್ಮ ಸ್ಥಾನ) ವಿರುತ್ತದೆ. ಅದು ತನ್ನ ಪ್ರಭಾವದಿಂದತ್ರಿಕಪ್ರದೇಶ ಹೃದಯಗಳನ್ನು, ತನ್ನ ಸ್ಥಾನದಲ್ಲಿಯೇ ಇದ್ದುಕೊಂಡು, ಅನ್ನಸತ್ವದಿಂದಲೂ ಮತ್ತು ಅರ್ದಶಿ ಯನ್ನುಂಟುಮಾಡುವದರಿಂದಲೂ ಧಾರಣೆಯನ್ನು (ಅವಲಂಬನೆ) ಮಾಡು ತ್ತದೆ ದೇಹದಲ್ಲಿಯ ಉಳಿದ ಕಫಸ್ಥಾನಗಳನ್ನು ಸಹ ಧಾರಣಮಾಡುತ್ತದೆ.

## ಹೃದಯವೆಂದರೆ ರಕ್ತಾಶಯವೋ?

**ಸ್ಥಾನಂತು ಹೃದಯಂಕೇಚಿತ್ ಅಭೇದಾತ್ ರಸರಕ್ತಯೋಃ॥**
**ನಾಶೇತೇರಸಾದ್ಯಂ ಚ ವ್ರಜತ್ಯೇವತನೌ ತತಃ ॥**
**ಶುದ್ಧ್ಯರ್ಥಂ ಹೃದಯಂ ರಕ್ತಪ್ರೇರಕಂ ಪೋಷಣಾಯ ಚ ॥**
**ನಾಸೌ ರಕ್ತಾಶಯಃ ಪ್ರೋಕ್ತಃ ಪ್ರತ್ಯಕ್ಷಸ್ಯ ವಿರೋಧತಃ ॥**

ರಸರಕ್ತಗಳ ಅಭೇದದಿಂದ ( ರಸವೇ ಪರಿವರ್ತನೆಯಾಗಿ ರಕ್ತವಾಗುವ ದರಿಂದ ) ಕೆಲವರು ರಸರಕ್ತಗಳೆರಡೂ ಹೃದಯಾಶ್ರಯವಾಗಿರುತ್ತವೆಂದು ಹೇಳುತ್ತಾರೆ. ಆದರೆ ಹೃದಯವು ರಸರಕ್ತಾದಿಗಳ ಆಶಯವಾಗಿರುವದಿಲ್ಲ ರಸ ರಕ್ತಾದಿಗಳು ಹೃದಯದಿಂದ ಪ್ರೇರಿತವಾಗಿ ದೇಹದಲ್ಲಿ ಸಂಚರಿಸುತ್ತವೆಯೇ ವಿನಾ; ಹೃದಯವು ಅವುಗಳ ಆಶಯವಲ್ಲ. ದೇಹದಪೋಷಣೆಗಾಗಿಯೂ ರಕ್ತ ಶುದ್ಧಿಗಾಗಿಯೂ ರಕ್ತವನ್ನು ಪ್ರೇರಿಸುವದು ಹೃದಯವಾಗಿರುತ್ತದೆ. ಪ್ರತ್ಯ ಕ್ಷಕ್ಕೆ ವಿರೋಧವಾಗುವದರಿಂದ ಹೃದಯವೆಂದರೆ, ರಕ್ತಾಶಯವೆಂದು ಹೇಳ ಲ್ಪಟ್ಟಿರುವದಿಲ್ಲ

ಅರ್ಥಾತ್, ಹೃದಯವು ರಕ್ತಶುದ್ಧಿಗೂ, ರಕ್ತವು ದೇಹದಲ್ಲಿ ಪೋಷಣೆ ಗಾಗಿ ಸಂಚರಿಸುವದಕ್ಕೂ, ಪ್ರೇರಕವಾಗಿರುತ್ತದೆ ಅದ್ದರಿಂದ ರಕ್ತವು ಆಶ್ರ ಯಿಸಿ ಇರುವ, ರಕ್ತಾಶಯವು ಹೃದಯವಾಗಿರುವದಿಲ್ಲ. ರಕ್ತಾಶಯವು ಹೃದ

ಯವೆಂದು ಹೇಳುವದು ಪ್ರತ್ಯಕ್ಷಕ್ಕೆ ವಿರೋಧವಾಗಿರುತ್ತದೆ. ಆಶೇತೇ, ಇತ್ಯಾಶಯಃ ಆಶ್ರಯಿಸಿಕೊಂಡು ಇರುತ್ತದಾದ್ದರಿಂದ ಆಶಯ (ಆಧಾರ) ವೆಂದು ಹೇಳುತ್ತಾರೆ. ಇಲ್ಲಿ "ನಾಶೇತೇ" ಎಂದು ಹೇಳಿರುವದರಿಂದ ಆಶಯ ವಲ್ಲೆಂದು ತಿಳಿಯಬೇಕು.

**ಪುಂಡರೀಕೇಣಸದೃಶಂ ಹೃದಯಂಸ್ಯಾದಧೋಮುಖಂ ||**
**ಜಾಗ್ರತಸ್ತದ್ವಿಕಸತಿ ಸ್ವಪತಶ್ಚನಿಮೀಲತಿ ||**

**(ಸುಶ್ರುತ|| ಶಾರೀರ|| ಅ ೪ ಶ್ಲೋ ೩೨)**

"**ಹೃದಯವು**" ಕಮಲದಂತೆ ಇರುತ್ತದೆ. ಅದು ಕೆಳಗಡೆ ಮುಖ ವುಳ್ಳದ್ದಾಗಿಯೂ ಎಚ್ಚರಿರುವಾಗ ಅರಳುವಂಥದೂ, ನಿದ್ರೆಯಲ್ಲಿರುವಾಗ ಮುಚ್ಚಿಕೊಳ್ಳುವದಾಗಿಯೂ, ಇರುತ್ತದೆ.

**ಅರ್ಥೇದಶಮಹಾಮೂಲಾಃ ಸಮಾಸಕ್ತಾಮಹಾಫಲಾಃ ||**
**ಮಹಚ್ಚಾರ್ಥಶ್ಚಹೃದಯಂ ಪರ್ಯಾಯೈರುಚ್ಯತೇಬುಧೈಃ||**

**(ಚರಕ|| ಸೂ. ಸ್ಥಾ. ಅ. ೩೦ ಶ್ಲೋ. ೩)**

ಹೃದಯದಲ್ಲಿ ಮಹಾಮೂಲವಾದ ಹತ್ತು ಧಮನಿಗಳು, ಅತ್ಯಂತವಾಗಿ ಜೀವನಕ್ಕೆ ಪ್ರಾಮುಖ್ಯವಾದವುಗಳು, ಇರುತ್ತವೆ. ಆದ್ದರಿಂದಲೇ "**ಮಹಾ ಫಲಾಃ**" ಮಹತ್ವವುಳ್ಳದ್ದು, ಅಥವಾ ಮಹತ್ ಅಂದರೇ ಹೃದಯವು, ಅದೇ ಧಮನಿಗಳ ಕಾರ್ಯವಿಷಯದಲ್ಲಿ ಮುಖ್ಯವಾದ್ದರಿಂದ; ಮಹಾ (ಹೃದ ಯವೇ) ಫಲದಾಯಕ ಧಮನಿಗಳಗೆ ಆಶ್ರಯವಾಗಿರುತ್ತದೆ. ಆ ಹೃದಯವೇ ಮೂಲ ಆಶ್ರಯಸ್ಥಾನವಾಗಿರುವದರಿಂದ ಧಮನಿಗಳಿಗೆ "**ಮಹಾಮೂಲ**" ವೆಂದು ಹೇಳುತ್ತಾರೆ. ಪಂಡಿತರು ಹೃದಯವು ಮಹತ್ವವುಳ್ಳದ್ದಿದ್ದು, ಅತ್ಯಂತ ಪ್ರಾಮುಖ್ಯವಾದ್ದರಿಂದ "**ಮಹತ್**" ಎಂದು ಅನ್ನುತ್ತಾರೆ. ಮುಖ್ಯವಾಗಿ ಆತ್ಮಾದಿ ಚೇತನೆಗಳಿಗೆ ಆಶ್ರಯವಾದ್ದರಿಂದಲೂ ಬದುಕುವಿಕೆ ದೃಷ್ಟಿಯಿಂದ ಹೃದಯವು ಅಭಿಪ್ರೇತವಾಗಿ ಅರ್ಥಿಸಲ್ಪಡುವದರಿಂದ "**ಅರ್ಥಃ**" ಎಂದು

ಪರ್ಯಾಯ ಪದದಿಂದ ಹೇಳುತ್ತಾರೆ. ಹೃದಯವಾಚಕಶಬ್ದಗಳು :— ಮಹತ್, ಅರ್ಥಃ, ಹೃದಯಂ, ಎಂದು ಇರುತ್ತವೆ.

**ಷಡಂಗಮಂಗಂವಿಜ್ಞಾನಮಿಂದ್ರಿಯಾಣ್ಯರ್ಥಪಂಚಕಂ ॥**
**ಆತ್ಮಾಚಸಗುಣಶ್ಚೇತಶ್ಚಿಂತ್ಯಂಚಹೃದಿಸಂಶ್ರಿತಂ ॥**
**(ಚ॥ ಸೂ. ಸ್ಥಾ. ಅ. ೩೦ ಶ್ಲೋ. ೪)**

ಆರೂ ಅಂಗಗಳಲ್ಲಿ ಪ್ರಾಧಾನ್ಯವಾಗಿರುವದರಿಂದ ಹೃದಯವು ಮುಖ್ಯ ವಾದ ಅಂಗವು. ಅರ್ಥಾತ್ ಆಶ್ರಯಸ್ಥಾನಭೂತಮುಖ್ಯಾಂಗವೆಂದರ್ಥವು. ವಿಜ್ಞಾನ(ಶಾಸ್ತ್ರಾದಿಜ್ಞಾನ)ಬುದ್ಧ್ಯಾದಿ ಇಂದ್ರಿಯಗಳು,ವಿಷಯಗ್ರಹಣತ್ವವು, ಅಥವಾ ಯಾವದರಿಂದ ವಿಷಯಗಳು ಬೋಧವಾಗಿ ವಿಷಯಗಳೆಂದು ಅನ್ವರ್ಥಕವಾಗುತ್ತವೆಯೋ, ಅಂಥ ಇಂದ್ರಿಯ ಮೊದಲಾದವುಗಳಿಗೆ ಸ್ಥಾನವು. ಸುಖದುಃಖಗಳನ್ನು ಭೋಗಿಸುವ ಜೀವನಿಗೆ ಆಶ್ರಯವು. "ಮನಸ್ಸು" ಇಂದ್ರಿಯ ವಿಷಯ ಸನ್ನಿಕರ್ಷಗಳಿಂದ, ಜ್ಞಾನ ಮತ್ತು ಸ್ವೀಕಾರ ಮಾಡಿಸು ವದರಿಂದ ಹೃದಯದಲ್ಲಿ ಇವೆಲ್ಲ ಇರುತ್ತವೆಂದು ಸ್ಪಷ್ಟವಾಗುತ್ತದೆ. ಇಲ್ಲವೇ ಸಂಕಲ್ಪವಿಕಲ್ಪಾತ್ಮಕವಾದ್ದರಿಂದ "ಚಿಂತ್ಯ" ವಿಚಾರಿಸತಕ್ಕ ಗುಣದಿಂದ, ತಿಳಿಯಲ್ಪಡತಕ್ಕ ಮನಸ್ಸು ಹೃದಯದಲ್ಲಿರುತ್ತದೆಂದು ಧ್ವನಿತವಾಗುತ್ತದೆ ಅಥವಾ ಮನಸ್ಸಿನಿಂದ ಚಿಂತ್ಯವಾದದ್ದು, ಹೃದಯಾಶ್ರಯವೆಂದು ಲಕ್ಷಣ ಮಾಡಿ ಹೇಳಿದ್ದಾರೆ. ಇವೆಲ್ಲವುಗಳ ಸಮುದಾಯಾಶ್ರಯ ಭೂತವಾದದ್ದು ಹೃದಯವಾದ್ದರಿಂದ ಮುಖ್ಯವೆಂದು ನಿರ್ದೇಶಿಸಿದ್ದು ಆಶ್ಚರ್ಯವೇನಿಲ್ಲ.

**ಪ್ರತಿಷ್ಠಾರ್ಥಂಹಿಭಾವಾನಾಂ ಏಷಾಂ ಹೃದಯಮಿಷ್ಯತೆ॥**
**ಗೋಪಾನಸೀನಾಮಾಗಾರಕರ್ಣಿಕೇವಾರ್ಥಚಿಂತಕೈಃ॥**
**ತಸ್ಯೋಪಘಾತಾನ್ಮೂರ್ಛಾಯಂ ಭೇದಾನ್ಮರಣಮೃಚ್ಛತಿ॥**
**(ಚರಕ॥ ಸೂ. ಸ್ಥಾ. ಅ ೩೦ ಶ್ಲೋ ೫)**

ಷಡಂಗಾದಿಗಳು ಮತ್ತು ಹಿಂದೆ ಹೇಳಿದ ಭಾವಗಳಿಗೆ ಹೃದಯವು ಮುಖ್ಯವಾಗಿರುವದರಿಂದ, ಹೃದಯವು ಆಶ್ರಯವೆಂದು ಹೇಳಿದ್ದಾರೆ. ಮೇಲ್ಕ

ನೆಯ ಹೊದಿಕೆಗೆ ಸಾಧನಾಶ್ರಯವಾದ, ಆಗಾರಕರ್ಣಿ (ಮನೆಯ ಆಚ್ಛಾದನ ಗಳಿಗೆ ಮಧ್ಯದಲ್ಲಿ ಕೂಡಿಸುವ ಬಂಧನವಾದ ಮರದ ತೊಲೆ) ಯಂತೆ, ಹೃದ ಯವು ದೇಹದಲ್ಲಿ ಮಹತ್ವವಾದ ಆಧಾರವೆಂದುಹೇಳುತ್ತಾರೆ ಹೀಗೆ ಹೇಳುವದ ರಿಂದ ಎರಡಂಗುಲ ಪ್ರಮಾಣದಷ್ಟಿರುವ ಹೃದಯವು, ಎಲ್ಲ ಅಂಗಾದಿಗಳಿಗೆ ಹೇಗೆ ಆಶ್ರಯವಾಗುತ್ತದೆಂದು ಆಶ್ಚರ್ಯವಾಗುತ್ತದೆ ಹೃದಯವು ಸಾಮ್ಯ ಸ್ಥಿತಿಯಲ್ಲಿದ್ದರೆ, ಎಲ್ಲ ದೇಹಾವಯವಗಳೂ, ಮನಸ್ಸು, ಆತ್ಮಾ, ಸಕಲದೇಹ ಸ್ಥಿತಿ, ಕ್ರಿಯಾದಿಗಳು ಯೋಗ್ಯ ನಡೆಯುತ್ತವೆ. ಇಲ್ಲವಾದರೆ ಯೋಗ್ಯವಿರುವದಿಲ್ಲ ಹೀಗಿರುವದರಿಂದ ಎಲ್ಲವುಗಳ ಸ್ಥಿತಿಗೆ ಹೃದಯವು ಮುಖ್ಯವಾಗಿರುತ್ತದೆ ಈ ಸ್ಥಿತಿ ದೃಷ್ಟಿಯಿಂದಲೇ ಹೃದಯವು ಆಶ್ರಯಸ್ಥಾನ ವೆಂದು ಪ್ರತಿಪಾದಿಸಿದ್ದಾರೆ ಹೀಗೆ ಮುಖ್ಯ ಪ್ರಯೋಜನವನ್ನು ಅವಲೋಕಿ ಸುವವರಿಂದ, ಹೃದಯವು ಮಹತ್ವ ಸ್ಥಾನವೆಂದು ಹೇಳಲ್ಪಟ್ಟಿರುತ್ತದೆ ಹೃದ ಯಾಪಘಾತಾದಿಗಳಿಂದ ಮೂರ್ಛೆಯೂ, ಭೇದನದಿಂದ ಮರಣವೂವುಂಟಾಗು ತ್ತದೆ. ಹೀಗಿರುವವರಿಂದ ಹೃದಯದಲ್ಲಿಯೇ ಜೀವಾಶ್ರಯವೆಂದು ಸ್ಪಷ್ಟ ವಾಗುತ್ತದೆ.

ಯದ್ಧಿ ತತ್ ಸ್ಪರ್ಶವಿಜ್ಞಾನಂ ಧಾರಿತತ್ತತ್ರ ಸಂಶ್ರಿತಂ ||
ತತ್ ಪರಸ್ಯೌಜಸಃ ಸ್ಥಾನಂ ತತ್ರಚೈತನ್ಯ ಸಂಗ್ರಹಃ ||
ಹೃದಯಂ ಮಹದರ್ಥಶ್ಚ ತಸ್ಮಾದುಕ್ತಂಚಿಕಿತ್ಸಕೈಃ ||

(ಚರಕ || ಸೂ. ಸಾ ಅ ೩೦ ಶ್ಲೋ ೭)

ಯಾವದುಸ್ಪರ್ಶ ಮೊದಲಾದವುಗಳನ್ನು ತಿಳಿಯುತ್ತದೆಯೋ, ಶರೀರ, ಇಂದ್ರಿಯ, ಚೇತನಾ, ಆತ್ಮ, ಸಂಯೋಗವನ್ನು ಧಾರಣ ಮಾಡುವದೋ ಅದೇ ಹೃದಯವು, ಇವೆಲ್ಲವುಗಳಿಗೆ ಆಧಾರವಾಗಿರುತ್ತದೆ. ಅತ್ಯಂತ ಜೀವ ನಕ್ಕೆ ಅವಶ್ಯವಾದ ಓಜಸ್ಸಿನ ಸ್ಥಾನ, ಮನಸ್ಸು ಚೈತನ್ಯಾದಿಗಳ ಸಂಗ್ರಹ ಸ್ಥಿತಿಯೂ, ಇಲ್ಲಿರುತ್ತವೆ. ಆದ್ದರಿಂದ ಚಿಕಿತ್ಸೆಯಲ್ಲಿಯ ಪ್ರಾಧಾನ್ಯವನ್ನರಿತ ಚಿಕಿತ್ಸಕರಿಂದ "ಹೃದಯಂ""ಮಹದರ್ಥಃ" ಎಲ್ಲಕ್ಕೂ ಮುಖ್ಯವಾದದ್ದು, ಮಹತ್ವವಾದ ಪ್ರಯೋಜನವುಳ್ಳದ್ದೆಂದು ಹೇಳಲ್ಪಟ್ಟಿರುತ್ತದೆ.

**ವಿಶೇಷಾರ್ಥ:**— ಯಾವದು ಸ್ಪರ್ಶದಿಂದ (ಸ್ಪಂದನದಿಂದ) ದೇಹ ತತ್ವಗಳೆಲ್ಲದರ ಸಮುದಾಯವನ್ನು ಧರಿಸುವ ಜೀವದ ಜ್ಞಾನ ಮಾಡಿಕೊಡು ತ್ತದೆಯೋ, ಅದೇ ಹೃದಯವು. ಹೀಗೆ ಅರ್ಥ ಮಾಡುವದರಿಂದ "**ಹೃದಯ ವೀಕ್ಷಣ ಕ್ರಮವು**" ಆಯುರ್ವೇದದಿಂದಲೇ ಪ್ರತಿಪಾದಿತವಾಗಿದೆಯೆಂದು ನಿಸ್ಸಂಶಯವಾಗಿ ಹೇಳಬಹುದು. ದೇಹಧಾರಣೆಗೆ ಅವಶ್ಯವಾಗಿರುವ ತತ್ವ ಗಳು ಹೃದಯವನ್ನೇ ಆಶ್ರಯಿಸುತ್ತವೆಂತಲೂ, ಹೃದಯಕ್ಕೆ ಆಘಾತವಾದರೆ ಬಹಳೇ ದುಃಖವಾಗುವದೆಂದೂ, ಅದರ ವಿಭಾಗವಾದರೆ ದೇಹ ನಾಶವೆಂದೂ ಪ್ರಾಮುಖ್ಯವಾಗಿ ಬೋಧಿಸಿರುವರು ಅವರು ಜೀವನ ಸ್ಥಿತಿ ನಿರೀಕ್ಷಣೆಯಲ್ಲಿ "**ಹೃದಯ ಪರೀಕ್ಷೆಯನ್ನು**" ಅನುಸರಿಸಿದ್ದಾರೆನ್ನುವದು ಮಹರ್ಷಿಗಳ ಅಲೌಕಿಕ ವಿಜ್ಞಾನ ದೃಷ್ಟಿಯಿಂದ ಇಂಥಾದ್ದು ಸಾಮಾನ್ಯ ಸಂಗತಿಯೆಂದರೆ ಇದರಲ್ಲಿ ಅತಿಶಯವೇನೂ ಇಲ್ಲ. ಆಮೂಲಾಗ್ರವಾಗಿ ಇದಕ್ಕೂ ಹೆಚ್ಚು ಹೃದಯ ಮಹತ್ವವನ್ನು ನಿರ್ವಚನ ಮಾಡುತ್ತಾರೆ.

**ತೇನ ಮೂಲೇನ ಮಹತಾ ಮಹಾಮೂಲಾ ಮತಾದಶ ||**
**ಓಜೋವಹಾಃ ಶರೀರೇಽಸ್ಮಿನ್ ವಿಧಮ್ಯಂತೇ ಸಮಂತತಃ ||**

( ಚರಕ|| ಸೂ ಸ್ಥಾ. ಅ ೩೦ ಶ್ಲೋ. ೮ )

ಹೃದಯ ಯುಕ್ತವಾದ ಅಥವಾ ಹೃದಯದಲ್ಲಿಯೇ ಆಶ್ರಯಸ್ಥಾನ ವುಳ್ಳದ್ದಾಗಿ, ಮುಂದೆ ಹೊರಟ ಧಮನಿಗಳಿಗೆ ಹೃದಯವೇ ಮೂಲವು. ಆದ್ದ ರಿಂದ ಮಹಾಮೂಲವೆಂದು ಹೇಳುತ್ತಾರೆ. ಓಜೋ ವಹನ ಮಾಡತಕ್ಕ ಹತ್ತು ಧಮನಿಗಳು ದೇಹದಲ್ಲಿ ಎಲ್ಲ ಕಡೆಯಲ್ಲಿಯೂ ಪಸರಿಸಿರುತ್ತವೆ. ಈ ಧಮನಿಗಳು ಬಾಹ್ಯವಾದ ಧಾತುಗಳಿಂದ ತುಂಬಲ್ಪಡುತ್ತವೆ. ಯಾಕಂದರೆ ಓಜಸ್ಸು ಅತಿಸೂಕ್ಷ್ಮಪ್ರಮಾಣದಲ್ಲಿರುವದರಿಂದ, ಅನ್ಯಧಾತುಗಳನ್ನಾಕರ್ಷಿಸಿ ತುಂಬಿಕೊಳ್ಳುತ್ತದೆನ್ನುವದು ಯೋಗ್ಯವಿರುತ್ತದೆ.

**ಯೇನೌಜಸಾವರ್ತಯಂತಿ ಪ್ರೀಣಿತಾಃ ಸರ್ವದೇಹಿನಃ ||**
**ಯದೃತೆ ಸರ್ವ ಭೂತಾನಾಂ ಜೀವಿತಂ ನಾವತಿಷ್ಠತೆ ||೯||**

**ಯತ್ ಸಾರಮಾದೌಗರ್ಭಸ್ಯ ಯತ್ತದ್ಗರ್ಭರಸಾದ್ರಸಃ ॥**
**ಸಂವರ್ತಮಾನಂ ಹೃದಯಂ ಸಮಾವಿಶತಿಯತ್ಪುರಾ ॥**

(ಚರಕ ॥ ಸೂ. ಸ್ಥಾ ಅ ೩೦ ಶ್ಲೋ ೧೦)

ಓಜಸ್ಸಿನಿಂದ ಯುಕ್ತವಾಗಿ ಸರ್ವ ದೇಹಿಗಳು ತೃಪ್ತಿಹೊಂದಿ, ಶರೀರ ಧಾರಣೆಯನ್ನು ಮಾಡಿಕೊಂಡಿರುತ್ತವೆ. ಅರ್ಥಾತ್ ಓಜಸ್ಸಿನಿಂದ ಎಲ್ಲ ದೇಹ ಕ್ರಿಯೆಗಳು ನಡಿಸಲ್ಪಡುತ್ತವೆ. ಪರಮ ಸೂಕ್ಷ್ಮವಾದ ಎಂಟು ಬಿಂದು ಓಜಸ್ಸೆಂದೂ ಹಿಂದೆ ಹೇಳಿರುತ್ತದೆ. ಅದು ಹೃದಯದಲ್ಲಿರುತ್ತಿದ್ದು ಸರ್ವ ದೇಹ ಧಾರಣೆಗೆ ಪ್ರೇರಕವಾಗಿರುತ್ತದೆ ಸ್ಥೂಲಭೂತವಾದ ಓಜಸ್ಸು ಧಮನಿಗಳಲ್ಲಿ ಸಂಚರಿಸುತ್ತದೆಂದು ತಿಳಿಯಬೇಕು. ಇದರ ಹೊರತಾಗಿ ಸರ್ವ ಪ್ರಾಣಿಗಳ ಜೀವಿತವು ನಡೆಯಲಾರದು. ಇದಿಲ್ಲದಿರುವಾಗ ಪ್ರಾಣಿಗಳು ನಾಶಹೊಂದುತ್ತವೆ. ಯಾವ ಸಾರವು ಗರ್ಭಕ್ಕೆ ಕಾರಣವಾಗಿರುತ್ತದೆಯೋ ಮತ್ತು ಗರ್ಭಕ್ಕೆ ಮೂಲವಾದ ರಸದ (ಶುಕ್ರದ)ಸಾರರೂಪವಾದ ಸತ್ವವೋ, ಅದು ಹೃದಯವನ್ನುತ್ಪನ್ನಮಾಡತಕ್ಕದ್ದಾಗಿರುವದು ಹೃದಯೋತ್ಪತ್ತಿಯಾದ ಮೇಲೆ ಓಜೋರೂಪದಿಂದ ಹೃದಯದಲ್ಲಿರುತ್ತದೆ ಅರ್ಥಾತ್ ಶುಕ್ರ ರೂಪ ಸಾರವಾದ ಓಜಸ್ಸು, ಗರ್ಭಾರಂಭದಲ್ಲಿ ಶುಕ್ರ ಶೋಣಿತಗಳ ಸಾರರೂಪವಾಗಿರುತ್ತದೆ. ಕಲಲಾವಸ್ಥೆಯಲ್ಲಿ ರಸ ಸಾರರೂಪದಿಂದಿರುತ್ತದೆ. ಅವಯವ ಮತ್ತು ಹೃದಯೋತ್ಪನ್ನವಾದಮೇಲೆ ಓಜೋರೂಪದಿಂದಿರುತ್ತದೆ. ಹೀಗೆ ದೇಹದ ಆರಂಭದಿಂದಲೂ ಸರ್ವಾವಸ್ಥೆಗಳಲ್ಲಿಯೂ ಇರುವದರಿಂದ ವ್ಯಾಪಕತ್ವದಿಂದ ಓಜಸ್ಸಿನ ಮಹತ್ವವೆಷ್ಟೆಂಬುವದು ಸ್ಪಷ್ಟವಾಗುವದು.

**ಯಸ್ಯನಾಶಾತ್ತುನಾಶೋಽಸ್ತಿಧಾರಿಯದ್ಧೃದಯಾಶ್ರಿತಂ ॥**
**ಯಚ್ಛರೀರ ರಸಸ್ನೇಹಃ ಪ್ರಾಣಾಯತ್ರ ಪ್ರತಿಷ್ಠಿತಾಃ ॥೧೧॥**
**ತತ್ಫಲಾ ಬಹುಧಾವಾತಾಃ ಫಲಂತೀತಿ ಮಹಾಫಲಾಃ ॥**
**ಧ್ಮಾನಾದ್ಧಮನ್ಯಃ ಸ್ರವಣಾತ್ ಸ್ರೋತಾಂಸಿ ಸರಣಾತ್ ಸಿರಾಃ॥**

( ಚರಕ॥ ಸೂ ಸ್ಥಾ ಅ. ೩೦ ಶ್ಲೋ ೧೨ )

ಶರೀರ, ಇಂದ್ರಿಯ, ಸತ್ವ, ಆತ್ಮ ಸಂಯೋಗವನ್ನು, ಧಾರಣೆ ಮಾಡುವದರಿಂದ "ಧಾರಿ" ಎಂದು "ಓಜಸ್ಸಿನ" ಹೆಸರು ಅನ್ವರ್ಥಕವಾದದ್ದಿರುತ್ತದೆ. ಹೃದಯಾಶ್ರಿತವಾದ "ಧಾರಿ" ಓಜಸ್ಸಿನ ನಾಶದಿಂದ ಮರಣವಾಗುತ್ತದೆ. ರಸಾದಿ ಧಾತುಗಳು ಇರುತ್ತಿದ್ದರೂ ಓಜಸ್ಸಿನಲ್ಲಿ ಆಘಾತ ವಿಭಾಗಗಳುಂಟಾದರೆ, ನಾಶ ಸಂಭವಿಸುವದರಿಂದ ಓಜಸ್ಸೇ ಮುಖ್ಯವೆಂದೂ ಅದೇ ದೇಹ ಧಾರಣೆ ಮಾಡುತ್ತದೆಂದು ನಿಶ್ಚಿತಸಿದ್ಧಾಂತವಾಗಿರುತ್ತದೆ. ಶರೀರದಲ್ಲಿ ಉತ್ಪನ್ನವಾಗುವ ರಸಾದಿಗಳು ಶರೀರ ಪೋಷಕವಾದ್ದರಿಂದ, ಶರೀರ ಸಾರವಾಗಿರುತ್ತವೆ. ಶರೀರ ಸಾರವೆಂದರೆ ರಸಾದಿ ಧಾತುಗಳು ಅಂಥ ಶರೀರಧಾರಕ ರಸಾದಿಗಳ ಸಾರವೇ "ಓಜಸ್ಸು" ಎಂದು ಹೇಳುತ್ತಾರೆ. ಹೀಗೆ "ಶರೀರರಸಸ್ನೇಹಃ" "ಶರೀರ ಸಾರ ಸಾರಂ" "ಧಾತುಸಾರ" ಶಬ್ದಗಳಿಂದ ದೇಹ ಧಾರಣೆಯ ವಿಷಯದಲ್ಲಿ ಪ್ರಾಮುಖ್ಯತೆ ಇರುವದನ್ನು ಸ್ಪಷ್ಟಪಡಿಸಿರುತ್ತಾರೆ. ಎಲ್ಲಿ ಪ್ರಾಣಗಳೂ, ಓಜಸ್ಸೂ ಯಾವದನ್ನು ಆಶ್ರಯಿಸಿ ಜೀವಧಾರಕವಾಗಿರುತ್ತವೆಯೋ, ಅದು ಹೃದಯವು. ಹೃದಯದಿಂದಲೇ ಓಜಸ್ಸು, ಪ್ರಾಣಗಳು, ಸಂಚರಿಸುವ ಧಮನಿಗಳು ಹೊರಟಿರುತ್ತವೆ. ಅವು ಸಮಗ್ರದೇಹವನ್ನು ವ್ಯಾಪಿಸಿ ಸಂಚರಿಸುವ ಪ್ರಾಣಾದಿಗಳಿಗೆ ಮಾರ್ಗವಾಗಿರುತ್ತವೆ. ಜೀವಧಾರಣೆಯ ಕಾರ್ಯವು ಇವುಗಳಿಂದ ಫಲಿಸುವದರಿಂದ "ಮಹಾಫಲ"ವುಳ್ಳವುಗಳೆಂದು ಅನ್ನುತ್ತಾರೆ. ಅಥವಾ "ಮಹತ್" ಅಂದರೆ ಹೃದಯವು ಅದರಿಂದ ಹೊರಟಿರುವದರಿಂದ ಅದನ್ನೇ ಆಶ್ರಯಿಸಿದ್ದರಿಂದ ಮಹಾಫಲವೆಂದೂ ಅನ್ನಬಹುದು. ಹೀಗೆ ಏಕಸಮಯಾವಚ್ಛೇದೇನ ಉಭಯಾರ್ಥಗಳನ್ನೂ ಸಮನ್ವಯ ಮಾಡಬಹುದು. ಮುಖ್ಯ ಪ್ರಯೋಜನಕಾರಿ (ಮಹಾಫಲಾಃ) ಯಾಗಿರುವ, ಧಮನೀ ಪ್ರಭೇದಗಳು ಅಸಂಖ್ಯವಾಗಿ(ಬಹುಧಾ) ದೇಹವನ್ನು ವ್ಯಾಪಿಸಿರುತ್ತವೆ ರಸಾದಿಗಳನ್ನು ಶರೀರದಲ್ಲಿ ತುಂಬಿಸುವದರಿಂದ "ಧಮನಿ"ಗಳೆಂದು ಹೆಸರು. "ಧ್ಮಾನಾದ್ಧಮನ್ಯಃ" ಎಂದು ಹೇಳಿದ್ದಾರೆ. ಪೋಷಕವಾದ ರಸಾದಿಗಳನ್ನು ಶರೀರದ ಆಯಾಯ ಸ್ಥಾನಗಳಲ್ಲಿ ಉಪಯೋಗಾನುಸಾರವಾಗಿ ಸ್ರವಿಸುವದರಿಂದ "ಸ್ರೋತಸ್ಸೆಂದು" ಅನ್ನುತ್ತಾರೆ. "ಸ್ರವಣಾತ್ ಸ್ರೋತಾಂಸಿ" ಹೀಗೆಂದು ವಿವರಿಸಿದ್ದಾರೆ. ಸೂಕ್ಷ್ಮವಾಗಿ ಎಲ್ಲ ಪ್ರದೇಶಗಳಿಗೂ ರಸಾದಿಗಳನ್ನು ಒಯ್ದು ಮುಟ್ಟಿಸುವದರಿಂದ "ಸಿರಾ" ಎಂದು ಹೇಳುತ್ತಾರೆ. "ಸರಣಾತ್ ಸಿರಾಃ" ಈ

ರೀತಿಯಿಂದ ಕ್ರಿಯಾ ವೈಶಿಷ್ಟ್ಯಗಳಿಂದಲೂ ಸ್ಥೂಲ, ಸೂಕ್ಷ್ಮ, ಸ್ರವಣ ಯೋಗ್ಯ ಆಕೃತಿ, ಮೊದಲಾದವುಗಳ ಭಿನ್ನತೆಯಿಂದ, ಧಮನೀ ಮುಂತಾದ ಅನ್ವರ್ಥಕ ಹೆಸರುಳ್ಳವಾಗಿರುತ್ತವೆ.

ತನ್ಮಹತ್ತಾ ಮಹಾಮೂಲಾಃ ತಚ್ಚೌಜಃ ಪರಿರಕ್ಷತಾ ||
ಪರಿಹಾರ್ಯಾ ವಿಶೇಷೇಣ ಮನಸೋ ದುಃಖಹೇತವಃ ||೧೩||

ಹೃದ್ಯಂಯತ್ ಸ್ಯಾದ್ಯದೌಜಸ್ಯಂ ಸ್ರೋತಸಾಂಯತ್ಪ್ರಸಾದನಂ||
ತತ್ತತ್ ಸೇವ್ಯಂ ಪ್ರಯತ್ನೇನ ಪ್ರಶಮೋ ಜ್ಞಾನಮೇವ ಚ ||
( ಚ|| ಸೂ ಸ್ಥಾ. ಅ. ೩೦ ಶ್ಲೋ. ೧೪ )

ಹೃದಯವನ್ನೂ, ಹೃದಯವೇ ಮೂಲವಾದ ಧಮನಿಯನ್ನೂ, ಓಜಸ್ಸನ್ನೂ ರಕ್ಷಿಸಬೇಕೆನ್ನುವವನು ಮನಸ್ಸಿಗೆ ದುಃಖಕಾರಕವಾದವುಗಳೆಲ್ಲವನ್ನೂ ಬಿಡಬೇಕು. ಮನಸ್ಸು ಹೃದಯದಲ್ಲಿರುವದರಿಂದ ಮನೋ ದುಃಖದಿಂದ ತೇಜೋವಹ ಧಮನಿಗಳಿಗೆ ಆಘಾತವಾಗುತ್ತದೆ ಇದರಿಂದ ಹೃದಯಭೇದವಾಗಲೂಬಹುದು. ಮನೋದುಃಖ ಆಘಾತಾದಿಗಳಿಂದ ಮರಣಹೊಂದಿದ ಉದಾಹರಣೆಗಳಲ್ಲಿ ಮನೋವ್ಯಗ್ರತೆಯಿಂದ, ಹೃದಯಭೇದವಾದದ್ದು ಕಂಡುಬಂದಿರುತ್ತದೆ ಆದ್ದರಿಂದ ಮಹತ್ವವಾದ ಜೀವ ರಕ್ಷಣೆಯಲ್ಲಿ ದೈಹಿಕವಾದ ಹೃದಯದಷ್ಟೇ ಅಥವಾ ಅದಕ್ಕಿಂತಲೂ ಹೆಚ್ಚು ಮನಸ್ಸಿನ ಪ್ರಾಧಾನ್ಯತೆ ಇರುತ್ತದೆ. ಮನಸ್ಸಿನ ಚಿಂತೆ ಮೊದಲಾದವುಗಳಿಂದುತ್ಪನ್ನವಾದ ರೋಗಗಳು ದೇಹವನ್ನು ನಾಶಪಡಿಸುವವೂ, ದೇಹದಲ್ಲಿಯ ದೀರ್ಘರೋಗಾದಿಗಳನ್ನುಂಟುಮಾಡುವದೂ, ಮನಸ್ಸಿಗೆ ತೀವ್ರದುಃಖಕಾರಕವಾಗಿರುವ ಉದಾಹರಣೆಯೂ, ಅನುಭವ ವಿಷಯವೇ ಆಗಿರುತ್ತದೆ ಹೀಗಿರುವದರಿಂದ ಮನಸ್ಸೂ, ದೇಹವೂ ವಿಭಾಗಿಸಲು ಬಾರದ ಪರಸ್ಪರ ತಾದಾತ್ಮ್ಯವುಳ್ಳದ್ದಿರುತ್ತವೆ ಹೃದಯ ಜೀವನವೇ ಆದ ದೇಹವನ್ನು ರಕ್ಷಿಸಬೇಕಾದರೆ ಮನಸ್ಸಿಗೆ ವಿಘಾತವನ್ನುಂಟು ಮಾಡತಕ್ಕವುಗಳನ್ನು ತ್ಯಜಿಸಬೇಕೆಂದಭಿಪ್ರಾಯವು ಯಾವದು ಮನಸ್ಸಿಗೆ ಆಹ್ಲಾದದಾಯಕವೋ ಮತ್ತು ಹೃದಯಕ್ಕೆ ಹಿತ (ಹೃದ್ಯಂ) ವಾಗಿರುವದೋ ಅಂಥಾದ್ದನ್ನೇ ಸೇವಿಸಬೇಕು. ಓಜಸ್ಕರ, ಸ್ರೋತಸ್ಸಿಗೆ ಪ್ರಸನ್ನತೆಯು

ನ್ನುಂಟು ಮಾಡುವ ಆಹಾರಾದಿಗಳನ್ನೂ, ಮನಸ್ಸಿಗೆ ಹಿತವಾಗುವ ಶಾಂತಿ, ತತ್ವಜ್ಞಾನ ಮೊದಲಾದವುಗಳನ್ನೂ, ಪ್ರಯತ್ನಪೂರ್ವಕವಾಗಿ ಹಿತದೃಷ್ಟಿಯುಳ್ಳವನು ಅನುಸರಿಸಬೇಕು.

## ಜೀವಧಾರಣ, ಓಜಸ್ಸು, ಮನೋಹೃದಯಗಳ ಮಹತ್ವವು

"ಧಾರಿ" ಜೀವನಿಗೆ ಸುಖ ದುಃಖಗಳನ್ನು ಪಡೆಯುವ, ಪಂಚಭೂತ, ವಿಕಾರಾತ್ಮಕವಾದ ಆಶ್ರಯ ಸ್ಥಿತಿ ಸಾಧನವು ದೇಹವಾಗಿರುವದು ಚಕ್ಷು (ಕಣ್ಣು) ಮೊದಲಾದ ಇಂದ್ರಿಯಗಳು, ಇವೆಲ್ಲ ಇಂದ್ರಿಯಗಳಲ್ಲಿಯೂ ಸಂಚರಿಸುವ ಪ್ರಧಾನವಾಗಿರುವವನು ಮನಸ್ಸು, ಇದಕ್ಕೆ "ಸತ್ವ" ವೆಂದು ಹೇಳುತ್ತಾರೆ "ಆತ್ಮ" ವೆಂದರೆ ಇವೆಲ್ಲಕ್ಕೂ (ದೇಹಕ್ಕೆ) ಚೈತನ್ಯ ಕೊಡುವವನೂ ಜ್ಞಾನವನ್ನುಂಟು ಮಾಡುವವನೂ ಆಗಿರುವನು ಇವುಗಳ ಸಂಯೋಗದಿಂದ ಚೈತನ್ಯವು ಸ್ಫುಟವಾಗುತ್ತದೆ. ಇಷ್ಟೇ ಅಲ್ಲ ಜೀವವು ಜಡವಾದದೇಹ ಅವಯವಾದಿಗಳನ್ನು ವ್ಯಾಪಿಸಿ, ಚೈತನ್ಯಉಳ್ಳವುಗಳನ್ನಾಗಿಮಾಡುತ್ತದೆ. ಇದರಿಂದ ದೇಹವೇಚೈತನ್ಯವೆನ್ನುವ ಭ್ರಾಂತಿಬರುವಷ್ಟು ತಾದಾತ್ಮ್ಯವುಳ್ಳದ್ದಾಗುತ್ತದೆ ಈ ಸಮುದಾಯಗಳ ಸಂಯೋಗ ಸ್ಥಾನವೆಂದರೆ ಹೃದಯವು ಹೃದಯದಲ್ಲಿಯೇ ಇವುಗಳ ವಾಸವಿರುವದರಿಂದ "ಹೃದಯವೇ" ಇವೆಲ್ಲವುಗಳಿಗೂ ಆಶ್ರಯವೆಂದು ಹೇಳುತ್ತಾರೆ. ಇದರಿಂದ"ಧಾರಿ"ಯೆಂದರೆಜೀವಧಾರಣೆ, ಬದುಕುವಿಕೆಯೆನ್ನುವದು ಸಿದ್ಧಿತವಾದಂತಾಯಿತು.

**"ಧಾರೀತಿಜೀವಾಧಿಷ್ಠಿತಂ ಲಿಂಗಶರೀರಂ" ತದೇವ ಶರೀರಧಾರಕತ್ವಾತ್ ಧಾರಿಶಬ್ದೇನೋಚ್ಯತೇ; ಕಿಂವಾ, ಜೀವಿತಧಾರಕತ್ವಾದೋಜಏವಧಾರೀತ್ಯುಚ್ಯತೆ, ಅಥವಾ ಮನೋಜೀವಿತಾಶ್ರಯತ್ವೇನಹೃದಯಮೇವಧಾರೀತ್ಯುಕ್ತಂ; ನಿಖಿಲಪದಾರ್ಥಜ್ಞಾನಹೇತುಭೂತಂಮನೋಹೃದಿಸಂಶ್ರಿತಂತಿಷ್ಠತಿ, ತಸ್ಮಿನ್ನುಪಘಾತಭೇದಾಭ್ಯಾಂ ಮನೋಜೀವಿತಯೋರಪಿಉಪಘಾತಭೇದಸಂಭವಾತ್ ಮೂರ್ಛಾಮರಣಂ ಚೋಪಪನ್ನಂ ಅತೋಧ್ವನ್ಯತೇ ಮನೋಪಿಧಾರೀತಿ"**

ಜೀವಕ್ಕೆ ದೇಹವನ್ನು ಪಡೆಯುಲು ಕಾರಣವಾದ ಆವರಣವು "ಲಿಂಗ ಶರೀರವು" ಆದ್ದರಿಂದ ದೇಹವನ್ನು ಧರಿಸುವದರಿಂದ ಲಿಂಗ ಶರೀರವೇ ಧಾರಿ ಯೆಂದು ಹೇಳುತ್ತಾರೆ. ಅಥವಾ ಮನಸ್ಸಿಗೂ ಲಿಂಗ ಶರೀರವೆನ್ನುವರು. ದ್ರವರೂಪದಿಂದಶರೀರಕ್ಕೆ ಕಾಂತಿಯನ್ನುಂಟುಮಾಡಿ ಸರ್ವಗತವಾಗಿ, ದೇಹ ವನ್ನು ರಕ್ಷಿಸುವದರಿಂದ "ಓಜಸ್ಸೂ" ಸಹ ಧಾರಿಯೆಂದನ್ನುವರು. ಇದರಂತೆ ಇವೆಲ್ಲವುಗಳಿಗೆ ಆಶ್ರಯಸ್ಥಾನವಾದ "ಹೃದಯುಕ್ಕೂ" ಧಾರಿಯೆನ್ನುವರು. ವಸ್ತುತಃ ಜೀವಧಾರಣೆ, ಓಜಸ್ಸು, ಮನಸ್ಸು, ಹೃದಯುಗಳು ಜೀವಿಸ ಲಿಕ್ಕೆ ಮಹತ್ವವಾದವುಗಳೂ ಅವಶ್ಯವಾದವುಗಳೂ ಇರುವದರಿಂದ ಇವೆಲ್ಲವು ಗಳಿಗೂ ಧಾರಿಯೆಂದು ಹೇಳಿದ್ದಾರೆ. ಜೀವಧಾರಣೇ ವಿಷಯುದಲ್ಲಿ ಇವುಗಳ ಹಿರಿಮೆ ಎಷ್ಟಿದೆಎನ್ನುವದು ಇದರಿಂದ ಸ್ಪಷ್ಟವಾಗುವದು

## (೩೨) ಮನೋವಿಜ್ಞಾನವು

ಮನಸ್ಸನ್ನು ಕುರಿತು ವಿಚಾರಿಸಬೇಕಾದರೆ ಮೊದಲು ಮನಸ್ಸೆಂದ ರೇನು? ದೇಹದಲ್ಲಿ ಅದರ ಆಶ್ರಯವೆಲ್ಲಿ? ಅದರ ಸ್ವರೂಪವೇನು? ಅದರಿಂದ ಯಾವ ಕ್ರಿಯೆಯು ಸಂಭವಿಸುತ್ತದೆ? ಶರೀರದಲ್ಲಿ ಅದರ ಮಹತ್ವವೇನು? ಎನ್ನುವದನ್ನು ತಿಳಿದುಕೊಳ್ಳದೆ ಮನಸ್ಸನ್ನು ಗುರುತಿಸಲಾರೆವು. ಯಾವು ದನ್ನು ನಾವು ಗುರುತಿಸಿಲ್ಲವೊ ಅದನ್ನು ವಿಮರ್ಶಿಸುವದು ಪ್ರಯೋಜನಕಾರಿ ಯಲ್ಲ. ಆದ್ದರಿಂದ ಮನೋವಿಜ್ಞಾನ ವಿಷಯದಲ್ಲಿ ಶಾರೀರಕ್ಕೆ ಸಮ್ಮಂಧಿಸಿ ದುದೆಂದರೆ ಮನಸ್ಸು, ಅದರ ಸ್ಥಿತಿ, ಆಶ್ರಯ, ಕ್ರಿಯಾ, ಮತ್ತು ಮಹತ್ವ ಇವುಗಳೇ ಮುಖ್ಯವಾಗಿರುತ್ತವೆ. ಇದರ ವಿನಹ ಮನಸ್ಸಿನ ಬಾಹ್ಯಾಂಭ್ಯಂತರ ಸ್ವತಂತ್ರ ಪ್ರವೃತ್ತಿ, ಅಲೌಕಿಕ ವ್ಯಾಪಕತೆ, ಸೂಕ್ಷ್ಮತ್ವ, ವೇಗ, ತೀವ್ರತೆ ಮೊದಲಾದವುಗಳನ್ನು; ಎಷ್ಟೋ ಮನೋವಿಜ್ಞಾನಿಗಳು ಮನಮುಟ್ಟ ರೂಪಿ ಸಲು ಯತ್ನಿಸಿದ್ದಾರೆ. ಭಾರತೀಯ ಪಾಶ್ಚಾತ್ಯಮೊದಲಾದ ವಿಚಾರಸರ ಣೆಯು, ಮನೋವಿಜ್ಞಾನದಲ್ಲಿಯೂ ತಾಂಡವಾಡದೇ ಇರಲಿಲ್ಲ. ಭಾರತೀಯ ಶಾಸ್ತ್ರಗಳಲ್ಲಿ ಮನಸ್ಸಿನವಿಷಯಕ್ಕೆ ಆಮೂಲಾಗ್ರವಿಮರ್ಶೆಇರುವದಿಲ್ಲವೆಂದೂ, ಆ ವಿಷಯದಲ್ಲಿ ಪ್ರಮಾಣ ಸಿದ್ಧಾಂತವನ್ನು ಭಾರತೀಯರು ಮುಟ್ಟಿಲ್ಲ

ವೆಂದೂ, ಆಧುನಿಕ ಮನೋವಿಜ್ಞಾನಪ್ರತೀತಿಯಾಗಿದೆ. ಆದರೆ ಭಾರತೀಯರು ಕಂಡುಹಿಡಿದಮನಸ್ಸಿನವ್ಯಾಪಕತೆ, ವೇಗ, ಸ್ವತಂತ್ರತೆ, ನಿತ್ಯತ್ವ, ಆತ್ಮನನ್ನೇ ಆಶ್ರಯಿಸಿ ಇರೋಣ, ದೇಹಾತ್ಮ ಸಂಯೋಗವಿಯೋಗಗಳಲ್ಲಿಯೂ ಕ್ರಿಯಾಕರಣಸಂಗ್ರಹಗಳೂ, ದೇಹನಾಶವಾದಮೇಲೂ ದೇಹದ ಸಂಸ್ಕಾರ ಗ್ರಹೀತತ್ವ ಮೊದಲಾದ ಮನೋ ವಿಷಯಗಳಿದ್ದರೂ ಅವನ್ನು ವಿಮರ್ಶಿಸಿ ಸಿದ್ಧಾಂತಪಡಿಸಲಾರದೆ, ಭಾರತೀಯದರ್ಶನಗಳ ಮೇಲೆ ವಾಕ್ಪ್ರಹಾರಮಾಡಿ ಸಮಾಧಾನ ಮಾಡಿಕೊಂಡಿದ್ದಾರೆ ಇದು ವಿಮರ್ಶಕರ ದೌರ್ಬಲ್ಯ ಪ್ರತೀಕವೇ ಹೊರತು ಸತ್ಯವಿಮರ್ಶೆ ಅಲ್ಲವೇಅಲ್ಲ.

**ಸುಖಾದ್ಯುಪಲಬ್ಧಿಸಾಧನಮಿಂದ್ರಿಯಂ ಮನಃ ॥**
**ತಚ್ಚ ಪ್ರತ್ಯಾತ್ಮನಿಯತತ್ವಾದನಂತಂ ಪರಮಾಣುರೂಪಂ**
**ನಿತ್ಯಂಚ ॥** (ತರ್ಕ ಸಂಗ್ರಹ)

ಸುಖದುಃಖಗಳನ್ನು ಪರಿಗ್ರಹಿಸುವ ಸಾಧನವಾದ ಇಂದ್ರಿಯವೇ ಮನಸ್ಸು. ಅದು ಪ್ರತಿಯೊಂದು ಜೀವದಲ್ಲಿಯೂ ಪ್ರತ್ಯೇಕವಾಗಿರುವದರಿಂದ ಅಸಂಖ್ಯವಾದದ್ದೂ ಪರಮಾಣು ರೂಪವುಳ್ಳದ್ದೂ ನಿತ್ಯವಾಗಿರುವದೂ ಇರುತ್ತದೆ.

## ಮನಸ್ಸಿನ ಲಕ್ಷಣಗಳು

**ಸುಖದುಃಖಾದಿ ಸಾಕ್ಷಾತ್ಕಾರಕಾರಣತ್ವೇಸತಿ ಇಂದ್ರಿಯತ್ವಂ ಮನಸೋಲಕ್ಷಣಂ॥ ಆತ್ಮನಸ್ತು ಸುಖಾದಿಕಂಪ್ರತಿಸಮವಾಯಿಕಾರಣತ್ವಂ॥ ನತುಸಾಧನತ್ವೇನ ಕಾರಣಂ॥**

ಸುಖ ದುಃಖ ಮೊದಲಾದವುಗಳನ್ನು ಪ್ರತ್ಯಕ್ಷಪಡಿಸುವ ವಿಷಯದಲ್ಲಿ (ಸ್ವೀಕಾರದಲ್ಲಿ) ಕಾರಣ (ಸಾಧನರೂಪವಾದಕಾರಣ) ವಾಗಿಯೂ ಇಂದ್ರಿಯವಾಗಿಯೂ ಯಾವದು ಇರುತ್ತದೆಯೋ ಅದು ಮನಸ್ಸಾಗಿರುವದು. ಆತ್ಮನು (ಜೀವನು) ಸುಖವನ್ನಾಗಲೀ ದುಃಖವನ್ನಾಗಲೀ ನಿತ್ಯದಲ್ಲಿಯೂ ಹೊಂದಲೇಬೇಕಾದ್ದರಿಂದ, ದುಃಖ ಸುಖಕ್ಕೂ ಆತ್ಮನಿಗೂ ಸಂಬಂಧರೂಪವೇ ಹೊರತು ಸಾಧನರೂಪವಾದ ಕಾರಣವಿಲ್ಲ. ಹೀಗಿರುವದರಿಂದ ಸಾಧನರೂಪ ಮನೋ

ಯೋಗದಿಂದಲೇ ದುಃಖ ನಿವಾರಣೆಯೂ, ಸದಾ ಗ್ರಹಣಾಪೇಕ್ಷೆಯಿಂದ ಸುಖ ಪ್ರಾಪ್ತಿಯೂ, ಆಗುತ್ತದೆಂದು ಅಭಿಪ್ರಾಯವು. ಇಲ್ಲಿ ವಿಶೇಷವೇನೆಂದರೆ ಮೋಕ್ಷರೂಪ ಸುಖಕ್ಕೂ ಸಹ ಸಾಕ್ಷಾತ್ಕಾರ (ಸ್ವೀಕಾರ) ವಾಗಲಿಕ್ಕೆ ಮನ ಸ್ಸಿರಲೇಬೇಕೆಂಬ ಆಕ್ಷೇಪ ಬರಬಹುದು. ಮೋಕ್ಷವು ಇಂದ್ರಿಯಜನ್ಯ ಸುಖ ವಿಷಯವಾಗಿದ್ದರೆ ಇದು ಯೋಗ್ಯವು. ಆದರೆ ಮೋಕ್ಷವು ಇಂದ್ರಿಯಜನ್ಯ ಸುಖವಿಷಯ ಭಿನ್ನವಾದ್ದರಿಂದ, ಸ್ವಭಾವಸಿದ್ಧ ಸುಖಸ್ವರೂಪವೇ ಇದ್ದದ್ದ ರಿಂದ ಸ್ವೀಕಾರ ಪ್ರಸಂಗವೇ ಬರುವದಿಲ್ಲ ಜೀವಕ್ಕೆ ಮಾತ್ರ ಸುಖದುಃಖಗಳು ಇಂದ್ರಿಯಜನ್ಯವಿರುವದರಿಂದಲೂ, ಮನಸ್ಸಿನ ಸಂಯೋಗದಿಂದಲೇ ಸುಖಾದಿ ಗಳ ಸಾಕ್ಷಾತ್ಕಾರವು ಆಗಬೇಕಾದ್ದರಿಂದಲೂ ಮನೋಯೋಗವು ಅವಶ್ಯ ವಾಗಿರ ಬೇಕಾಗುತ್ತದೆ. ದೇಹದಲ್ಲಿ ಜೀವಕ್ಕೆ ವಿಷಯ ಗ್ರಹಣದಲ್ಲಿ ಮನಸ್ಸು ಇರಲೇಬೇಕಾದ್ದರಿಂದ, ಜೀವ ಮನಸ್ಸುಗಳಿಗಿರುವ ಅತ್ಯಂತ ಸಂಬಂಧವು ವಿಭಾಗಿಸಲಿಕ್ಕೆ ಬರದಷ್ಟು ಐಕ್ಯವಾದದ್ದಿರುತ್ತದೆ. ಪರಮಾಣುರೂಪವಾದ "ಮನಸ್ಸು" ಇಂದ್ರಿಯವಾದ್ದರಿಂದಇಂದ್ರಿಯ ದೃಷ್ಟಿಯಿಂದ ವಿಚಾರಮಾಡು ತ್ತಾರೆ. ( ಅದು ಕ್ರಮಶಃ ಮುಂದೆ ಬರುತ್ತದೆ )

## ಪಂಚೇಂದ್ರಿಯಗಳು

**ಇಹಖಲು ಪಂಚೇಂದ್ರಿಯಾಣಿ, ಪಂಚೇಂದ್ರಿಯ ದ್ರವ್ಯಾಣಿ, ಪಂಚೇಂದ್ರಿಯಾಧಿಷ್ಠಾನಾನಿ, ಪಂಚೇಂದ್ರಿಯಾರ್ಥಾಃ, ಪಂ ಚೇಂದ್ರಿಯ ಬುದ್ಧಯೋ ಭವಂತಿ ಇತ್ಯುಕ್ತವಿಂದ್ರಿಯಾಧಿ ಕಾರೆ॥** ( ಚರಕ॥ ಸೂ ಸ್ಥಾ. ಅ ೮ ಸೂ ೩ )

ಆಯುರ್ವೇದ ಶಾಸ್ತ್ರದಲ್ಲಿ ಐದು ಇಂದ್ರಿಯಗಳು, **ಶ್ರವಣ, ಚಕ್ಷು, ಘ್ರಾಣ, ಸ್ಪರ್ಶ, ರಸನೇಂದ್ರಿಯಗಳು** ಹೇಳಲ್ಪಟ್ಟಿರುತ್ತವೆ. ಇದರಂತೆಯೇ ಪಂಚೇಂದ್ರಿಯ ದ್ರವ್ಯಗಳು. ಪಂಚೇಂದ್ರಿಯಗಳ ಆಶ್ರಯಸ್ಥಾನ. ಪಂಚೇಂದ್ರಿ ಯಗಳಿಂದ ಸ್ವೀಕರಿಸಲ್ಪಡುವ ವಿಷಯಗಳು. ಪಂಚೇಂದ್ರಿಯ ಬುದ್ಧಿಗಳು. ಇವುಗಳು ಇಂದ್ರಿಯ ವಿಷಯ ವಿಮರ್ಶೆಯ ಅಧ್ಯಾಯದಲ್ಲುಕ್ತವಾಗಿರುತ್ತವೆ. ಇಲ್ಲಿ ಇಂದ್ರಿಯಗಳಲ್ಲಿ ಮನಸ್ಸನ್ನುಗ್ರಹಿಸಿಲ್ಲವಾದ್ದರಿಂದ, ಮನಸ್ಸು ಇಂದ್ರಿಯ

ವಲ್ಲವೆಂದು ಯಾರೂ ತಿಳಿಯಬಾರದು. ಮತ್ತು ವೈಶೇಷಿಕ ಸಾಂಖ್ಯಾದಿದರ್ಶನ ಗಳ ಮತಕ್ಕೆವಿರುದ್ಧವಾಗಿ, ಆಯುರ್ವೇದದಲ್ಲಿಮನಸ್ಸು ಇಂದ್ರಿಯವಲ್ಲವೆಂದು ಹೇಳಿರುವರೆಂದು ಭಾವಿಸಬಾರದು. ವೈಶೇಷಿಕಮತದಿಂದ ಮನಸ್ಸುಇಂದ್ರಿಯ ವೆಂದುಗ್ರಹಿಸಲ್ಪಟ್ಟಿದೆ. ಆಯುರ್ವೇದಶಾಸ್ತ್ರದಲ್ಲಿಯೂ,ಮಧುರರಸ ವಿವೇಚನೆ ಯಲ್ಲಿ"ಷಡಿಂದ್ರಿಯಪ್ರಸಾದನಃ" ಆರುಇಂದ್ರಿಯಗಳಿಗೂಪ್ರಸನ್ನತೆಯನ್ನುಂ ಟುಮಾಡುವಂಥದು, ಎಂದು ಹೇಳಿರುವದರಿಂದ ಮನಸ್ಸನ್ನುಇಂದ್ರಿಯವೆಂದು ಗ್ರಹಿಸಿರುವದು ಸ್ಪಷ್ಟವದೆ ಚಕ್ಷುರಾದಿಗಳಿಂದ ಗ್ರಹಿಸಲ್ಪಡುವ ವಿಷಯಾದಿ ಗಳು, ಮತ್ತು ಇಂದ್ರಿಯಗಳ ಧರ್ಮ (ಸ್ವತ್ವ) ವಿಶೇಷಗಳಿಂದ ಮನಸ್ಸನ್ನು ಇಂದ್ರಿಯವೆಂದು ಸ್ವೀಕರಿಸಿಲ್ಲ. ಇಂದ್ರಿಯಾದಿಗಳು ( ಚಕ್ಷುಸ್ಸು ಮೊದಲಾದ ವುಗಳು ) ತಮ್ಮಿಂದ ತಾವೇ ರೂಪಾದಿಗ್ರಹಣದಿಂದಲೂ, ಸ್ಪಷ್ಟಗೋಚರತ್ವ ಕ್ರಿಯಾದರ್ಶನವಾಗುವದರಿಂದಲೂ, ಪ್ರತ್ಯಕ್ಷವಿರುವದರಿಂದ ಬಾಹ್ಯವಾಗಿ ವಿಭಾಗಹೊಂದಿ ವಿವೇಚಿಸಲ್ಪಡುತ್ತವೆ. ಮನಸ್ಸು ಅತೀಂದ್ರಿಯವಾದ್ದರಿಂದ ಸ್ಥೂಲಭೂತ ಇಂದ್ರಿಯಗಳಲ್ಲಿ ಸಮಾವೇಶವಾಗುವದಿಲ್ಲ

### ಅತೀಂದ್ರಿಯ ಲಕ್ಷಣದಿಂದ ಮನಸ್ಸಿನ ವಿವರಣೆಯು:—

**ಅತೀಂದ್ರಿಯಂ ಪುನರ್ಮನಃ ಸತ್ವಸಂಜ್ಞಕಂ ಚೇತಇತ್ಯಾಹು ರೇಕೇ, ತದರ್ಥ ಆತ್ಮಸಂಪದಾಯತ್ತಚೇಷ್ಟಂ ಚೇಷ್ಟಾ ಪ್ರತ್ಯ ಯ ಭೂತಮಿಂದ್ರಿಯಾಣಾಂ ||**

( ಚರಕ|| ಸೂ. ಸ್ಥಾ. ಅ. ೮ ಸೂ. ೪ )

ಮನಸ್ಸು ಅತೀಂದ್ರಿಯವೆಂದೂ, ಕೆಲವರು ಸತ್ವಸಂಜ್ಞಕಚೇತಸ್ಸೆಂದೂ ಅನ್ನುತ್ತಾರೆ. "ಚಕ್ಷುರಾದೀಂದ್ರಿಯಾಗ್ರಾಹ್ಯಂ" ಕಣ್ಣು ಮೊದಲಾದ ವಿಷಯ ಪ್ರತ್ಯಕ್ಷೀಕರಿಸುವ ಇಂದ್ರಿಯಗಳಿಂದ ಗ್ರಹೀತವಾಗದಿರುವದು. ಆದ್ದ ರಿಂದಲೇ ಅತೀಂದ್ರಿಯವೆಂದು ಹೇಳಲ್ಪಡುವದು. ಅನುಮಾನಗ್ರಾಹ್ಯವೆಂದು ಸ್ಪಷ್ಟಾರ್ಥವು.

ಸತ್ವಸಂಜ್ಞಕವುಳ್ಳ ಚೇತಸ್ಸೆಂದು ಹೇಳುವದರಿಂದ ಆತ್ಮಕ್ಕೆ (ಜೀವ ನಿಗೆ) ಸ್ವಾನುಕೂಲ, ಇಷ್ಟವಾಗಿರುವ ವಿಷಯದಲ್ಲಿ, ಮನಸ್ಸಿನಿಂದಲೇ

ಪ್ರವೃತ್ತಿ ಪ್ರೇರಕವಾಗಿಯೂ ಇರುತ್ತದೆಂದು ಹೇಳುತ್ತಾರೆ ಹೀಗೆ ಚಕ್ಷುರಾದಿ ಇಂದ್ರಿಯಗಳ ವ್ಯಾಪಾರಸ್ಥಿತಿ ಮೊದಲಾದವುಗಳಿಂದ ಭಿನ್ನವಾದ, ವಿಶೇಷ ಧರ್ಮಗಳಿಂದ ಮನಸ್ಸಿನ ಸ್ವರೂಪವನ್ನು ವಿಶದೀಕರಿಸಿದ್ದಾರೆ. "**ಅತಿಕ್ರಾಂತ ಮಿಂದ್ರಿಯೇಭ್ಯಃಅತೀಂದ್ರಿಯಂ**"ಚಕ್ಷುರಾದಿ ಇಂದ್ರಿಯಗಳಲ್ಲಿರುವಬಾಹ್ಯ ವಿಷಯುವನ್ನೇ ಗ್ರಹಣಮಾಡುವ ಧರ್ಮವನ್ನು, ಮೀರಿರುವದರಿಂದ ಅತೀಂದ್ರಿ ಯವೆಂದು ಹೇಳುತ್ತಾರೆ. ಸತ್ವವೆಂಬಸಂಜ್ಞೆಯುಯಾವದಕ್ಕಿರುತ್ತದೆಯೋ ಆ ಕಾರಣದಿಂದ ಸತ್ವವು. ಅರ್ಥಾತ್ ಮನಸ್ಸಿನಿಂದಲೇ ಸರ್ವಕಾರ್ಯ ಪ್ರತಿ ಪತ್ತಿ ಇರುವದರಿಂದ "**ಸತ್ವ**"ವೆಂದರೆ ಸಾರ, ಮುಖ್ಯವೆಂದು ಅರ್ಥವು. ಪರ ಮತಸಂಮತಿದರ್ಶನಕ್ಕಾಗಿ ಚೇತಸ್ಸೆಂದು ಗ್ರಹಿಸಿದ್ದಾರೆ. ಪರ್ಯಾಯವಾಚಕ ಶಬ್ದಗಳು ಶಾಸ್ತ್ರ ವ್ಯವಹಾರಕ್ಕಾಗಿ ಹೇಳಲ್ಪಟ್ಟಿರುತ್ತವೆ.

## ವಿಶೇಷ

ಮನಸ್ಸಿಗೆ ಇಷ್ಟವಾಗಿರುವದು ಸುಖಾದಿ ಮತ್ತು ಚಿಂತ್ಯವಿಚಾರ್ಯಾದಿ ಗಳು, ಆತ್ಮನೆಂದರೆ "**ಚೇತನಾ**" ಉಂಟುಮಾಡತಕ್ಕವನು, ಆತ್ಮ ಮತ್ತು ಚೇತನೆಗಳು ಸುಖಾದಿಗಳನ್ನು ಪಡೆಯಲು ಮನಸ್ಸೇ ಸಾಧನವಾಗಿರುತ್ತದೆ "**ಆತ್ಮಸಂಪತ್**" ಆತ್ಮನಿಗೆ ಅವಶ್ಯವಾಗಿ ಬೇಕಾಗಿರುವದು, ಆ ವಿಷಯದಲ್ಲಿ ಪ್ರಯತ್ನಕಾರಿಯಾಗಿ ಮನಸ್ಸುಸುಖಾದಿಗಳ ಸ್ವೀಕಾರವನ್ನೂ, ಯಾವದರಲ್ಲಿ ಇಚ್ಛೆಯುಂಟಾಗುತ್ತದೆಯೋ ಅದರ ದರ್ಶನ ಅಥವಾ ಸಾಮೀಪ್ಯವನ್ನೂ, ಮಾಡಿಸುತ್ತದೆ. ಆದ್ದರಿಂದ "**ತದಾರ್ಥಾತ್ಮ ಸಂಪದಾಯತ್ತ ಚೇಷ್ಟಂ**" ಎಂದು ಹೇಳಿದ್ದಾರೆ.

ಚಕ್ಷುರಾದಿ ಇಂದ್ರಿಯಗಳಿಗೆ ತಮ್ಮಿಂದ ಗ್ರಹಿಸತಕ್ಕವುಗಳಾದ, ರೂಪಾ ದಿಜ್ಞಾನ ಸ್ವೀಕಾರ ವಿಷಯಗಳಲ್ಲಿ; ಮನಸ್ಸು ಕಾರಣವಾಗುತ್ತದೆ. ಹೀಗಿ ರುವದರಿಂದ "**ಚೇಷ್ಟಾ ಪ್ರತ್ಯಯ ಭೂತಮಿಂದ್ರಿಯಾಣಾಂ**" ಎಂದು ಸ್ಪಷ್ಟಪಡಿಸಿದ್ದಾರೆ ಈ ವಿಷಯದಲ್ಲಿ ವಿವೇಚನೆಮಾಡಿರುವ ವಾಕ್ಯಗಳನ್ನು ಅಭ್ಯಾಸಿಗಳ ಸ್ಪಷ್ಟಜ್ಞಾನಕ್ಕಾಗಿ ದರ್ಶನಮಾಡುತ್ತಾರೆ.

ಮನಃ ಚೇಷ್ಟಾ ಚ ಸುಖಾದಿಜ್ಞಾನಂ ಚಿಂತ್ಯಚಿಂತನಾದಿ ತಥಾ ಚಕ್ಷುರಾದಿಂದ್ರಿಯ ಪ್ರೇರಣಂ ಚ॥ ಇಂದ್ರಿಯಾಣಾಂ ಚಕ್ಷುರಾದೀನಾಂ ಯಾ ಚೇಷ್ಟಾ ಸ್ವವಿಷಯ ರೂಪಾದಿ ಜ್ಞಾನ ಲಕ್ಷಣಾ ॥ ತತ್ರ ಪ್ರತ್ಯಯಭೂತಂ ಕಾರಣಂ ಮನ ಇತಿ ಮಂತವ್ಯಂ ॥ ( ಚರಕ ಸೂ ಸ್ಥಾ ಅ ೮ )

ತದೇವ ವಿಶದೀಕರೋತಿ

ಯದಾ ಸುಖಾದಯಶ್ಚಿಂತ್ಯಾದಯೋಽಪಿ ವಿಷಯಾ ಭವಂತಿ ಆತ್ಮಾ ಚ ಪ್ರಯತ್ನವಾನ್ ಭವತಿ॥ ತದಾ ಮನಃ ಸ್ವವಿಷಯೇ ಪ್ರವರ್ತತೆ, ಇಂದ್ರಿಯಾಣಿ ಚ ಅಧಿತಿಷ್ಠತಿ, ಇಂದ್ರಿಯಾಣಿ ಚ ಮನೋಽಧಿಷ್ಠಿತಾನ್ಯೇವ ಸ್ವವಿಷಯಜ್ಞಾನೇ ಪ್ರವರ್ತಂತೆ ॥
( ಮನೋವಿಷಯೇ ಸರ್ವಂ ವಿವೇಚಿತಂ ಪುನರನಪೇಕ್ಷ್ಯಂ )
(ಚರಕಟೀಕಾ)

ಮನಸ್ಸು ಒಂದೇ ಪುರುಷನಲ್ಲಿ ಉಪಾಧಿಭೇದದಿಂದ ಅನೇಕವಾಗಿರುವಂತೆ ಕಲ್ಪನೆಯಾಗುತ್ತಿದ್ದರೂ, ಪರಮಾರ್ಥತಃ ಒಂದೇ ಎನ್ನುವದನ್ನು ಸಿದ್ಧ ಮಾಡುತ್ತಾರೆ:—

ಸ್ವಾರ್ಥೇಂದ್ರಿಯಾರ್ಥಸಂಕಲ್ಪ ವ್ಯಭಿಚರಣಾಚ್ಚಾನೇಕಮೇಕಸ್ಮಿನ್ ಪುರುಷೇ ಸತ್ವಂ ರಜಸ್ತಮಃ ಸತ್ವಗುಣಯೋಗಾಚ್ಚ; ನ ಚಾನೇಕತ್ವಂ ಹ್ಯೇಕಂ ಹ್ಯೇಕ ಕಾಲಮನೇಕೇಷು ಪ್ರವರ್ತತೆ; ತಸ್ಮಾನ್ನೈಕ ಕಾಲಾ ಸರ್ವೇಂದ್ರಿಯ ಪ್ರವೃತ್ತಿಃ ॥
( ಚರಕ॥ ಸೂ. ಸ್ಥಾ. ಅ. ೮ ಸೂ. ೫ )

ಮನಸ್ಸು ಗ್ರಹಿಸಿರುವ ಒಂದು ಇಂದ್ರಿಯಾರ್ಥವನ್ನು ತ್ಯಜಿಸಿ ಮತ್ತೊಂದನ್ನು ಗ್ರಹಿಸುವದರಿಂದ ಅಥವಾ ಒಂದು ಸಂಕಲ್ಪವನ್ನು ತ್ಯಜಿಸಿ ಅನ್ಯತ್ರ ವಿಚಾರಪ್ರವರ್ತಕವಾಗುವದರಿಂದ ಒಂದೇ ಪುರುಷನಲ್ಲಿ ಅನೇಕ ಮನಸ್ಸಿರುವದೆಂಬ ಭ್ರಾಂತಿ ಬರುತ್ತದೆ. ಹಾಗೆ ಅನಿಸುತ್ತದೆಯೇ ವಿನಾ

ಅನೇಕ ಮನಸ್ಸಿರುವದು ಸತ್ಯವಾದದ್ದಲ್ಲ. ಸತ್ವಗುಣಯೋಗದಿಂದ ಸತ್ವಗುಣ ಯುಕ್ತವೂ, ಇದರಂತೆ ರಜೋಗುಣ, ತಮೋಗುಣ, ಯುಕ್ತವಾಗುವದರಿಂದ ಅವಾವ ಗುಣವುಳ್ಳದ್ದು ಆವಾವ ಸ್ಥಿತಿಯಲ್ಲಿ ಒಂದೇ ಮನಸ್ಸು ಪ್ರವರ್ತಕವಾಗುತ್ತದೆಯೇ ವಿನಾ ಮನಸ್ಸು ಅನೇಕತ್ವವುಳ್ಳದ್ದಿರುವದಿಲ್ಲ ಒಂದೇ ಮನಸ್ಸು ಅನೇಕಾರ್ಥಗಳಲ್ಲಿ ಏಕಕಾಲದಲ್ಲಿ ಪ್ರವರ್ತಕವಾಗುವದಿಲ್ಲ. ಆದ್ದರಿಂದ ಸರ್ವ ಇಂದ್ರಿಯಗಳು ಏಕಕಾಲಾವಚ್ಛೇದೇನ ಸ್ವವಿಷಯಗ್ರಾಹಕವಾಗಲಾರವು.

## ಮನಸ್ಸಿನ ಗುಣವು

**ಅಣುತ್ವಮಥಚೈಕತ್ವಂ ದ್ವೌಗುಣೌಮನಸಃ ಸ್ಮೃತೌ ॥**

(ಚರಕ॥ ಶಾರೀರ॥ ಅ ೧ ಶ್ಲೋ ೧೯)

ಒಂದು ದೀರ್ಘವಾದ ವಸ್ತುವಿನ ವಿಷಯದಲ್ಲಿ (ಚಕ್ಕುಲಿಯಲ್ಲಿ) ಕಣ್ಣು, ನಾಲಿಗೆ, ಗಂಧೇಂದ್ರಿಯಗಳು ಗ್ರಹಣ ವಿಷಯದಲ್ಲಿ (ಸ್ವೀಕರಿಸುವದರಲ್ಲಿ) ಪ್ರವೃತ್ತವಾದರೆ ಏಕಕಾಲದಲ್ಲಿ ರೂಪ, ರಸ, ಗಂಧ ಜ್ಞಾನವಾಗುವದಿಲ್ಲವಾದ್ದರಿಂದ ಮನಸ್ಸು "ಮಹತ್ವ ಪರಿಮಾಣ"ವುಳ್ಳದ್ದಿರುವದಿಲ್ಲೆಂದು ಸಿದ್ಧವಾಗುತ್ತದೆ. "ಮಹತ್ವ ಪರಿಮಾಣ"ವಿದ್ದರೆ ಸಕಲೇಂದ್ರಿಯಗಳ ಪ್ರವೃತ್ತಿಯಾಗಿ ಒಮ್ಮೆಲೇ ಸರ್ವೇಂದ್ರಿಯ ವಿಷಯಗಳೂ ಗ್ರಹಿಸಲ್ಪಡುತ್ತಿದ್ದವು. ಹಾಗೆ ಗ್ರಹಿಸಲ್ಪಡದಿರುವದರಿಂದ ಮನಸ್ಸು "ಅಣುರೂಪ" ವಾಗಿರುವದೆಂದು ಸಿದ್ಧವಾಗುತ್ತದೆ ಅನೇಕ ಇಂದ್ರಿಯಗಳಲ್ಲಿ ಏಕಕಾಲದಲ್ಲಿಯೇ ಪ್ರವರ್ತನೆಯಾಗುವದಿಲ್ಲವಾದ್ದರಿಂದ ಮನಸ್ಸು ಒಂದೇ ಎಂದು ನಿಶ್ಚಯವು.

## ಮನೋವಿಷಯಗಳು

**ಚಿಂತ್ಯಂ ವಿಚಾರಮೂಹ್ಯಂಚಧ್ಯೇಯಂ ಸಂಕಲ್ಪಮೇವಚ॥**
**ಯತ್ಕಿಂಚಿತ್‌ಮನಸೋಜ್ಞೇಯಂತತ್‌ಸರ್ವಂಹ್ಯರ್ಥಸಂಜ್ಞಕಂ॥**

(ಚರಕ॥ ಶಾರೀರ॥ ಅ ೧ ಶ್ಲೋ ೨೦)

ಯಾವದು ಮನಸ್ಸಿನಿಂದ ವಿಚಾರಿಸಲ್ಪಡುತ್ತದೆಯೋ (ಚಿಂತ್ಯಂ) ಅದು ಮನಸ್ಸಿನ ವಿಷಯುವು. ಕಾರ್ಯತಃ ಆಗಲಿ ಕೇವಲ ಸಂಕಲ್ಪದಿಂದಲೇ ಆಗಲಿ ಮನಸ್ಸಿನಿಂದ ಚಿಂತಿಸಲ್ಪಡತಕ್ಕದ್ದಿದೆಯೋ ಅದಕ್ಕೆ "ಚಿಂತ್ಯ"ವೆಂಬ ಹೆಸರು. ಯೋಗ್ಯಾಯೋಗ್ಯ ಪ್ರಾಪ್ತ್ಯಪ್ರಾಪ್ತಿ ದೃಷ್ಟಿಯಿಂದ ಯಾವದು ವಿಮರ್ಶಿಸಲ್ಪಡುತ್ತದೆಯೋ ಅದು "ವಿಚಾರ್ಯ" ವೆಂದು ಹೇಳಲ್ಪಡುತ್ತದೆ. ಇದು ಹೀಗೆ ಆಗಬಹುದೆಂದು ಸಂಭಾವನಾ ದೃಷ್ಟಿಯಿಂದ ಊಹಿಸಲ್ಪಡುತ್ತದೆಯೋ ಅದು "ಊಹ್ಯವು" "ಏವಮೇತದ್ಭವಿಷ್ಯತೀತಿ" ಹೀಗೆ ಇದು ಆಗುವದು; ಇತ್ಯಾದಿ ವಿಚಾರಕ್ಕೆ ಊಹೆಯೆಂದು ಅನ್ನುತ್ತಾರೆ. ಭಾವನೆಯಲ್ಲಿಯ ಜ್ಞಾನ ವಿಷಯಕ್ಕೆ "ಧ್ಯೇಯ" ವೆಂಬ ಹೆಸರು ಅನುಭೂತಾನನುಭೂತ ವಿಷಯಗಳಲ್ಲಿ ಮನುಷ್ಯನ ವಿಚಾರವು ಸ್ಥಿರತೆಯನ್ನು ಹೊಂದುವದಿದೆಯೋ ಅದಕ್ಕೆ "ಭಾವನೆ"ಯೆಂಬ ಹೆಸರು. ಆ ಭಾವನೆಗೆ ಜ್ಞಾನ ವಿಷಯವಾಗಿರುವದೇ "ಧ್ಯೇಯವು". ಅಥವಾ ಯಾವದನ್ನು ಕುರಿತು ಧ್ಯಾಸಿಸುತ್ತಾನೆಯೋ (ಆ ವಿಷಯದಲ್ಲಿ ಬದ್ಧಭಾವವುಳ್ಳವನಾಗುವನೋ) ಅದಕ್ಕೆ "ಧ್ಯೇಯ"ವೆಂಬ ಹೆಸರು. ಗುಣದಿಂದಾಗಲೀ ದೋಷದಿಂದಾಗಲೀ ಮುಂದೆ ನಿಶ್ಚಯವಾಗತಕ್ಕ ವಿಷಯವು "ಸಂಕಲ್ಪವು". ಮನಸ್ಸಿನ ಕರ್ಮಕ್ಕೆ ಸಾಮಾನ್ಯವಾಗಿ ಸಂಕಲ್ಪವೆಂಬ ಅರ್ಥವಿದೆ. ಆದರೆ ಇಲ್ಲಿ ವಿಷಯಾನ್ವಯವಾಗಿ ಹೇಳಿರುವದರಿಂದ, ನಿರ್ಧರಿಸಲ್ಪಡತಕ್ಕ ವಿಷಯವೆಂದು ತಿಳಿಯಬೇಕು. ಅಥವಾ ಯಾವದೇ ಒಂದು ಮನೋ ವಿಷಯದ ತಿಳಿಯತಕ್ಕದ್ದಿರುವದೋ ಅದೆಲ್ಲ "ಅರ್ಥ" ವೆಂದು ಹೇಳಲ್ಪಡುತ್ತದೆ ಅದೆಲ್ಲಮನಸ್ಸಿಗೆ ವಿಷಯವಾದದ್ದೆಂದಭಿಪ್ರಾಯವು. "ಮನಸಾಜ್ಞೇಯಂ" ಎಂದು ಹೇಳದೆ ಷಷ್ಠ್ಯಭಿಧಾನ ವಾಕ್ಯದಿಂದ, ಇಂದ್ರಿಯ ಸಾಧನರಹಿತವಾಗಿ ಮನಸ್ಸಿನ ಸ್ವತಂತ್ರ ಗ್ರಹಣ ಸಾಮರ್ಥ್ಯವನ್ನು ತೋರಿಸಲು ಹೀಗೆ ವಾಕ್ಯವನ್ನಿಟ್ಟಿದ್ದಾರೆ ಆದ್ದರಿಂದ ಭಾರತೀಯದರ್ಶನದಲ್ಲಿ ಇಂದ್ರಿಯಗಳ ಸಾನ್ನಿಧ್ಯನಿರಪೇಕ್ಷತ್ವೇನ ಮನೋಗ್ರಾಹ್ಯವಾದದ್ದಿರುವದರಿಂದ ಮನಸ್ಸು"ಸ್ವತಂತ್ರವೂ" ಪರಮಾಣುರೂಪವುಳ್ಳದ್ದೂ, ನಿತ್ಯವೂ, ಅನಂತವೂ, ಪ್ರತಿ ಶರೀರ ಭಿನ್ನವೂ, ಚಕ್ಷುರಾದಿಂದ್ರಿಯಗಳಿಗೆ ವಿಷಯ ಗ್ರಹಣದಲ್ಲಿ ಮನೋಽಧಿಷ್ಠಾನವೂ, ಮುಂತಾಗಿ ಮನಸ್ಸಿನ ವಿಮರ್ಶೆಯು ಆಮೂಲಾಗ್ರವಾಗಿ ಗ್ರಹಿಸಿ ವಿಮರ್ಶಿಸಲ್ಪಟ್ಟಿರುತ್ತದೆ

# ಮನಸ್ಸಿನ ಕರ್ಮ

**ಇಂದ್ರಿಯಾಭಿಗ್ರಹಃ ಕರ್ಮ ಮನಸಃ ಸ್ವಸ್ಯನಿಗ್ರಹಃ ||**
**ಊಹೋವಿಚಾರಶ್ಚ, ತತಃ ಪರಂ ಬುದ್ಧಿಃ ಪ್ರವರ್ತತೆ ||**

ಚಕ್ಷುರಾದಿ ಇಂದ್ರಿಯುಗಳ ವಿಷಯಗ್ರಹಣದಲ್ಲಿರುವದು, ಯೋಗ್ಯವಾದದ್ದರಲ್ಲಿಯೇ ಪ್ರವೃತ್ತಿಯಾಗುವಂತೆ ತನ್ನನ್ನು ತಾನೇ ನಿಗ್ರಹಿಸಿಕೊಳ್ಳುವದು, ಊಹಿಸೋಣ, ವಿಚಾರಮಾಡೋಣ, ಇವು ಮನಸ್ಸಿನಕರ್ಮಗಳು ಊಹವಿಚಾರಗಳ ನಂತರ ಬುದ್ಧಿಯು ಕಾರ್ಯಮಾಡತಕ್ಕದ್ದಾಗುತ್ತದೆ. ಆದ್ದರಿಂದನಿಶ್ಚಯಾತ್ಮಕವಾಗಿರುವದುಬುದ್ಧಿಯೆಂದೂ,ಸಂಶಯಾತ್ಮಕವಾಗಿರುವದುಮನಸ್ಸೆಂದೂ, ಹೇಳುತ್ತಾರೆ. ಸಂಕಲ್ಪ ವಿಕಲ್ಪಾತ್ಮಕವಾದ ಮನಸ್ಸಿನಿಂದ ಪ್ರವರ್ತನೆಯಾದ ಮೇಲೆ (ಮನೋವಿಚಾರಾ ನಂತರ) ಅಧ್ಯವಸಾಯಿಯು (ನಿಶ್ಚಯವಾಡುವದು) ಬುದ್ಧಿಯಾಗುತ್ತದೆ ಅರ್ಥಾತ್ ಮನಸ್ಸಿನಿಂದ ಸಂಕಲ್ಪಿಸಿದ್ದನ್ನು ಬುದ್ಧಿಯು ನಿಶ್ಚಯಿಸುತ್ತದೆಂದಭಿಪ್ರಾಯವು. ಮನಸ್ಸು ಅಹಂಕಾರದಿಂದ ಯುಕ್ತವಾಗಿ ಬುದ್ಧಿಯು, ಮನಸ್ಸಿನಿಂದ ಸಂಕಲ್ಪಿತವಾಗಿರುವದನ್ನು; ನಿರ್ಧಾರ, ಸ್ವೀಕಾರ, ಅಸ್ವೀಕಾರ,ನಿರ್ಣಯಗಳನ್ನು ಬುದ್ಧಿಯುಮಾಡುತ್ತದೆ· ಎಲ್ಲ ಇಂದ್ರಿಯ ವ್ಯಾಪಾರಗಳು ಬುದ್ಧಿಯಲ್ಲಿ ಅರ್ಪಿಸಲ್ಪಡತಕ್ಕದ್ದಾಗುತ್ತವೆ. ಮನಸ್ಸಿನ ಕರ್ಮಗಳು ಬುದ್ಧಿಯಲ್ಲಿ ಅರ್ಪಣವಾಗುವದು, ಕಪೋಲ ಕಲ್ಪಿತವಾದ ಅಸಂಭವವೆಂದು ತೋರಬಹುದು ಹೀಗೆ ಅನಿಸುವದು ಸ್ವಾಭಾವಿಕವು. ಯಾಕಂದರೆ ಸೂಕ್ಷ್ಮ ಅತೀಂದ್ರಿಯವಾದವುಗಳ ನಿರ್ಣಯವು ಗಹನವಾಗಿರುತ್ತವೆ. ಬುದ್ಧಿಯಲ್ಲಿ ಇಂದ್ರಿಯಗಳ ವ್ಯಾಪಾರವು ಅರ್ಪಿಸಲ್ಪಡುತ್ತದೆನ್ನುವದು ನಿಶ್ಚಯವಾದದ್ದೇ ಇರುತ್ತದೆ. ಅದನ್ನು ವಿಭಾಗಿಸಿ ವಿಮರ್ಶಿಸಿದರೆ ತಿಳಿಯುತ್ತದೆ. ಈ ಹಿಂದೆ ಮನಸ್ಸು ಒಂದೇ ವೇಳೆಯಲ್ಲಿ ಅನೇಕ ವಿಷಯಗಳನ್ನು ಗ್ರಹಿಸುವದಿಲ್ಲೆಂದೂ ಹೇಳಿರುತ್ತದೆ. ಪ್ರತಿಕ್ಷಣವೂ ಬೇರೆಬೇರೆ ವಿಷಯಗಳನ್ನು ಗ್ರಹಿಸುವ ಮನಸ್ಸು, ಗ್ರಹಿಸಿದ್ದೆಲ್ಲವನ್ನೂ ತನ್ನಲ್ಲಿಟ್ಟುಕೊಳ್ಳಲು ಸಾಧ್ಯವಿಲ್ಲ. ಗ್ರಹಿಸಿದ್ದೆಲ್ಲಕ್ಕೂ ಮನಸ್ಸೇ ಆಧಾರವಾಗುತ್ತಿದ್ದರೆ, ಒಂದನ್ನು ಗ್ರಹಿಸಬೇಕಾದರೆ ಮತ್ತೊಂದು ಯಾಕೆ ಒರಬಾರದು ಹಾಗಾಗುವದಿಲ್ಲವಾದ್ದರಿಂದ ಮನ

ಸ್ಸಿನಿಂದ ಗ್ರಹೀತವಾದವುಗಳಿಗೆ ಮತ್ತೊಂದು ಆಶ್ರಯವಿದೆ ಎನ್ನುವದು ಸಿದ್ಧ. ವಾಗುತ್ತದೆ

**ಉದಾಹರಣೆ:—** ಬಾಯಲ್ಲಿ ನಾವು ಆಹಾರವನ್ನು ಗ್ರಹಿಸುತ್ತೇವೆ. ಗ್ರಹಿಸಿದ ಆಹಾರಕ್ಕೆ ಬೇರೆ ಆಶ್ರಯವಿರುವದರಿಂದ ಬಾಯಿಂದ ಪುನಃಪುನಃ ಗ್ರಹಿಸಲು ಅನುಕೂಲವಾಗುತ್ತದೆ. ಬಾಯೇ ಆಶ್ರಯವಾಗಿದ್ದರೆ ಅನೇಕ ವಸ್ತುಗಳ ಸಂಸರ್ಗದಿಂದ ಎಲ್ಲವುಗಳ ರುಚಿಯೂ ಕೂಡಿ ಯಾವ ವಸ್ತುವಿನ ರುಚಿ ಯಾವದೆಂದು ತಿಳಿಯುತ್ತಿದ್ದಿಲ್ಲ. ಇದು ಸ್ಥೂಲೋದಾಹರಣೆಯಾ ಯಿತು. ಮನಸ್ಸಿನಲ್ಲಿ ಅನೇಕ ವಿಚಾರಗಳ ಆಶ್ರಯ ಸುಖಾದಿಗ್ರಹಣ ವೊದ ಲಾದವುಗಳಿರುತ್ತಿದ್ದರೆ. ಒಂದರಲ್ಲೊಂದು ಸೇರಿ ಅವ್ಯವಸ್ಥೆಯಾಗುವದೆಂದು ಇದರಿಂದ ತಿಳಿಯಬೇಕು.

**ಏತೇಪ್ರದೀಪಕಲ್ಪಾಃ ಪರಸ್ಪರ ವಿಲಕ್ಷಣಾಃ ಗುಣವಿಶೇಷಾಃ ॥**
**ಕೃತ್ಸ್ನಂ ಪುರುಷಾರ್ಥಂ ಪ್ರಕಾಶ್ಯಬುದ್ಧೌ ಪ್ರಯಚ್ಛಂತಿ ॥**
(ಸಾಂಖ್ಯಕಾರಿಕಾ)

ಮನಸ್ಸು ಇಂದ್ರಿಯ ಬುದ್ಧಿ ಇವುಗಳು ಪರಸ್ಪರವಾಗಿ ವಿಲಕ್ಷಣ ಗುಣ ವುಳ್ಳವುಗಳೂ, ಇವುಗಳ ಆತ್ಯಂತಿಕವಾದ ಸನ್ನಿಧಿಯಲ್ಲಿ ಗುಣವೈಶಿಷ್ಟ್ಯವುಳ್ಳ ವುಗಳೂ ಆಗುತ್ತವೆ. ಆದ್ದರಿಂದ ಇವುಗಳಿಗೆ ದೀಪದ ಉದಾಹರಣೆಯನ್ನು ಕೊಟ್ಟಿದ್ದಾರೆ. ದೀಪದಲ್ಲಿ ಬತ್ತಿ ತೈಲ ಅಗ್ನಿ ಇವುಗಳ ಸಮಯೋಚಿತ ಸಂಯೋಗವಿರುತ್ತದೆ. ಅದು ಕತ್ತಲೆಯನ್ನು ಹೋಗಲಾಡಿಸುವ ಶಿಖಾರೂಪ ವಾದ ಜ್ವಾಲೆಯಲ್ಲಿ ಪರ್ಯವಸಾನವಾಗುತ್ತದೆ. ಬೆಳಕನ್ನು ಕೊಡುವ ಜ್ವಾಲೆ ಯನ್ನು ವಿಭಾಗಿಸಿ ಬತ್ತಿ ತೈಲ ಅಗ್ನಿ ಸಂಯೋಗಗಳಲ್ಲಿಯ ಪರಸ್ಪರ ಗುಣ ವೈಶಿಷ್ಟ್ಯವನ್ನು ಕಂಡುಹಿಡಿಯಬಹುದೋ? ಊಹಿಸಬಹುದೇ ವಿನಾ ವಿಭಾಗಿ ಸಲು ಬರುವದಿಲ್ಲ ಆದ್ದರಿಂದ "ಪರಸ್ಪರ ವಿಲಕ್ಷಣಾಃ" ಎಂದು ಹೇಳಿ ದ್ದಾರೆ. ಹೇಗೆ ದೀಪ ಜ್ವಾಲೆಗೆ ಬತ್ತಿ ತೈಲ ಅಗ್ನಿಗಳು ಅನುವರ್ತಿಗಳಾಗುತ್ತ ವೆಯೋ ಅದರಂತೆ, ಜೀವಕ್ಕೆ ಇಚ್ಛಿತವಾದವುಗಳೆಲ್ಲವನ್ನೂ ಗ್ರಹಿಸಲು ಬಹಿ ರಿಂದ್ರಿಯ ಮನಸ್ಸುಗಳೊಂದಾಗಿ ಅಹಂಕಾರವನ್ನು ಕೂಡಿಕೊಳ್ಳುತ್ತವೆ

ಅಹಂಕಾರವು ಇವೆಲ್ಲವುಗಳಿಂದ ಯುಕ್ತವಾಗಿ, ಬುದ್ಧಿಯಲ್ಲಿ ಸಮರ್ಪಿಸುತ್ತದೆ. ಪರಸ್ಪರ ಯುಕ್ತವಾದ ಸ್ವಕರ್ತವ್ಯ ಪರಿಮಿತಿಯುಳ್ಳ ಇಂದ್ರಿಯಗಳಿಂದಲೇ ಬುದ್ಧಿಯು ಜೀವಕ್ಕೆ (ಪುರುಷನಿಗೆ) ವಿಷಯ ಸ್ವೀಕಾರಮಾಡಲಿಕ್ಕೆ ಅನುವಾಗುತ್ತದೆ.

## ವಿಷಯ ಸ್ವೀಕಾರ ಕ್ರಮ

**ಇಂದ್ರಿಯೇಣೇಂದ್ರಿಯಾರ್ಥೋಹಿಸಮನಸ್ಕೇನ ಗೃಹ್ಯತೇ ||**
**ಕಲ್ಪ್ಯತೇಮನಸಾತೂರ್ಧ್ವಂ ಗುಣತೋ ದೋಷತೋಥವಾ ||**
**ಜಾಯತೇ ವಿಷಯೇ ತತ್ರಯಾ ಬುದ್ಧಿರ್ನಿಶ್ಚಯಾತ್ಮಿಕಾ ||**
**ವ್ಯವಸ್ಯತಿ ತಥಾವಕ್ತುಂ ಕರ್ತುಂವಾ ಬುದ್ಧಿಪೂರ್ವಕಂ ||**
(ಚರಕ|| ಶಾರೀರ|| ಅ ೧ ಶ್ಲೋ ೨೩)

ಇಂದ್ರಿಯಗಳಿಗೆ ಅಭೀಷ್ಟವಾಗಿರುವಂಥಾದ್ದು, ಮನೋಯುಕ್ತವಾದ ಜೀವನಿಂದ ಊಹಿಸಲ್ಪಡುತ್ತದೆ ಮುಂದೆ ಗುಣ ದೋಷಗಳಿಂದ ವಿಚಾರಿಸಲ್ಪಡುತ್ತದೆಂದು ಹೇಳಿರುವದರಿಂದ ಇಲ್ಲಿ "ಗೃಹ್ಯತೆ" ಎನ್ನುವದಕ್ಕೆ ಊಹಿಸಲ್ಪಡುತ್ತದೆಂದು ಅರ್ಥ ಮಾಡಿದ್ದಾರೆ. ಆಮೇಲೆ ಗುಣದೋಷಗಳ ದೃಷ್ಟಿಯಿಂದ ವಿಚಾರವು ಮನಸ್ಸಿನಿಂದ ಮಾಡಲ್ಪಡುತ್ತದೆ. ಹೀಗೆ ವಿಚಾರ ನಡೆದಿರಲು ನಿಶ್ಚಯಮಾಡತಕ್ಕ ಬುದ್ಧಿಯು ಸ್ವಕರ್ತವ್ಯವನ್ನು ಮಾಡಿ ನಿರ್ಣಯಿಸುತ್ತದೆ. ಆಮೇಲೆ ಬುದ್ಧಿಯುಕ್ತನಾಗಿ ಎಲ್ಲ ಸಾಧನೇಂದ್ರಿಯಗಳಿಂದ ಮಾತಾಡಲೂ, ಯಾವದನ್ನೂ ಮಾಡಲು ಸ್ವೀಕರಿಸಲು ಅವನು ಉದ್ಯುಕ್ತನಾಗುತ್ತಾನೆ. ಜೀವನು ಬುದ್ಧಿಪುರಸ್ಸರನಾಗಿ ಮನೋಯುಕ್ತ ಇಂದ್ರಿಯಗಳಿಂದ ವಿಷಯ ಸ್ವೀಕಾರ ಮಾಡುತ್ತಾನೆಂದು ಅಭಿಪ್ರಾಯವು. ಈ ಶ್ಲೋಕದಲ್ಲಿ ಕ್ಲಿಷ್ಟಾಭಿಪ್ರಾಯವಾಗುತ್ತದೆ. ಅರ್ಥ ನಿರ್ವಹಣೆಯಲ್ಲಿ ಸಂದರ್ಭಾನುಸಾರ ಸಂಕುಚಿತಾರ್ಥ ಗ್ರಹಣ ಮಾಡುತ್ತಾರೆ. ಶಾಸ್ತ್ರವಚನದಲ್ಲಿಯ ಸಂದರ್ಭವು ಅನುಸರಿಸಲೇ ಬೇಕಾಗಿರುತ್ತದೆ. ಮನಸ್ಸಿನ ಆಶ್ರಯ ಸ್ಥಾನವು ಹೃದಯವೆಂದು ಹಿಂದೆ ನಿರೂಪಿಸಿದ್ದೇನೆ.

# ಬಾಹ್ಯೇಂದ್ರಿಯಗಳು

**ಏಕೈಕಾಧಿಕಯುಕ್ತಾನಿ ಖಾದೀನಾಮಿಂದ್ರಿಯಾಣಿತು ॥**
**ಪಂಚ ಕರ್ಮಾನುಮೇಯಾನಿಯೇಭ್ಯೋ ಬುದ್ಧಿಃಪ್ರವರ್ತತೆ॥**
(ಚರಕ|| ಶಾರೀರ|| ಅ ೧ ಶ್ಲೋ ೨೪)

ಆಕಾಶಾದಿ ಪಂಚ ಭೂತಗಳಲ್ಲಿ ಒಂದೊಂದು ಭೌತಿಕಾಧಿಕ್ಯದಿಂದ, ಆವಾವ ಭೂತಾತ್ಮಕ ಇಂದ್ರಿಯಗಳು ಉಂಟಾಗಿರುತ್ತವೆ. ಹೀಗೆ ಭೌತಿಕ ವಾದ ಶ್ರೋತ್ರಾದಿ ಐದು ಇಂದ್ರಿಯಗಳಿರುತ್ತವೆ. ಅವುಗಳ ಕರ್ಮಗಳಿಂದ ಆವಾವ ಭೂತಗಳಿಂದುತ್ಪನ್ನವಾಗಿವೆಯೆಂದು ತಿಳಿಯಬೇಕು ಶಬ್ದವನ್ನು ಗ್ರಹಿಸುವ ಶ್ರೋತ್ರೇಂದ್ರಿಯವು, ಶಬ್ದವು ಆಕಾಶಗುಣವಾದ್ದರಿಂದ; ಆಕಾಶೀಯವಾಗಿರುತ್ತದೆ ಇದರಂತೆ ಎಲ್ಲ ಇಂದ್ರಿಯಗಳನ್ನೂ ತಿಳಿಯಬೇಕು. ಈ ಇಂದ್ರಿಯಗಳಿಗೆ ವಿಷಯ ಗ್ರಹಣೆಯಲ್ಲಿ ಪಂಚೇಂದ್ರಿಯ ಬುದ್ಧಿಗಳು ಅನುವರ್ತಿಸುತ್ತವೆ.

**ಇಹಖಲು ಪಂಚೇಂದ್ರಿಯಾಣಿ, ಪಂಚೇಂದ್ರಿಯದ್ರವ್ಯಾಣಿ, ಪಂಚೇಂದ್ರಿಯಾಧಿಷ್ಠಾನಾನಿ, ಪಂಚೇಂದ್ರಿಯಾರ್ಥಾಃಪಂಚೇಂ ದ್ರಿಯ ಬುದ್ಧಯೋಭವಂತಿ, ಇತ್ಯುಕ್ತಮಿಂದ್ರಿಯಾಧಿಕಾರೇ ॥**
(ಚರಕ|| ಇಂದ್ರಿಯೋಪಕ್ರಮಣೀಯೆ)

ಬಾಹ್ಯೇಂದ್ರಿಯಗಳ ವಿವರಣೆಯಲ್ಲಿ ಶ್ರೋತ್ರಾದಿ ಐದು ಇಂದ್ರಿಯಗಳು, ಪಂಚೇಂದ್ರಿಯ ದ್ರವ್ಯಗಳು, ಪಂಚೇಂದ್ರಿಯಗಳ ಆಶ್ರಯಸ್ಥಾನ, ಪಂಚೇಂದ್ರಿಯಗಳಿಂದ ಗ್ರಹಿಸಲ್ಪಡುವ ವಿಷಯಗಳು, ಪಂಚೇಂದ್ರಿಯ ಬುದ್ಧಿಗಳು, ಇವುಗಳು ಇಂದ್ರಿಯ ಸಂಬಂಧದಿಂದ ಇಂದ್ರಿಯೋಪಕ್ರಮಣೀಯಾಧ್ಯಾಯದಲ್ಲಿ ಉಕ್ತವಾಗಿರುತ್ತವೆ. ಇಲ್ಲಿ ಪಂಚೇಂದ್ರಿಯಗಳೆಂದರೆ ಜ್ಞಾನೇಂದ್ರಿಯಗಳು.

# ಕರ್ಮೇಂದ್ರಿಯಗಳು

**ಕರ್ಮೇಂದ್ರಿಯಾಣಿ:- ವಾಕ್‌ಹಸ್ತೋಪಸ್ಥಪಾಯುಪಾದಂ ॥**
(ಸುಶ್ರುತ|| ಶಾರೀರ|| ಅ ೧ ಸೂ ೪)

(೧) ವಾಗಿಂದ್ರಿಯ (೨) ಹಸ್ತ (೩) ಜನನೇಂದ್ರಿಯ (೪) ಗುದ (೫) ಪಾದ ಇವು, ಪಂಚಕರ್ಮೇಂದ್ರಿಯಗಳು. ಕರ್ಮವನ್ನೇ ಪ್ರಧಾನವಾಗಿ ಮಾಡುವದರಿಂದ ಕರ್ಮೇಂದ್ರಿಯಗಳೆಂದು ಹೆಸರು. ಕರ್ಮೇಂದ್ರಿಯಗಳು ಕಾರ್ಯ ಮಾಡುತ್ತಿರುವಾಗ ಮನಸ್ಸು ಆಶ್ರಯಿಸುತ್ತದೆ. ಮನೋಽಧಿಷ್ಠಿತ ವಾಗಿಯೇ ಕರ್ಮೇಂದ್ರಿಯಗಳು ಕಾರ್ಯವನ್ನು ಮಾಡುತ್ತವೆ.

## ಕರ್ಮೇಂದ್ರಿಯಗಳ ಕೆಲಸಗಳು

**ಕರ್ಮೇಂದ್ರಿಯಾಣಾಂ ಯಥಾಸಂಖ್ಯಂವಚನಾದಾನಾಽನಂದ ವಿಸರ್ಗವಿಹರಣಾನಿ ||** (ಸುಶ್ರುತ|| ಶಾರೀರ|| ಅ ೧ ಸೂ ೫)

ಕರ್ಮೇಂದ್ರಿಯಗಳಿಗೆ ವಚನಾದಿಗಳು ಕರ್ಮವಾಗಿರುತ್ತವೆ ಅರ್ಥಾತ್ ವಚನಾದಿ ಕರ್ಮಗಳನ್ನು ಕರ್ಮೇಂದ್ರಿಯಗಳು ಮಾಡುತ್ತವೆ.

(೧) "**ವಾಗಿಂದ್ರಿಯವು**" ಮಾತಾಡುವದು ಒದರುವದು ಮೊದಲಾದ ಕರ್ಮಗಳನ್ನು ಮಾಡುತ್ತದೆ.

(೨) "**ಹಸ್ತವು**" ತೆಗೆದುಕೊಳ್ಳುವ ಮೊದಲಾದ ಕೆಲಸವನ್ನು ಮಾಡುತ್ತದೆ.

(೩) "**ಜನನೇಂದ್ರಿಯು**" ಇಂದ್ರಿಯಗಳ ಸಂಯೋಗ ಕರ್ಮದಿಂದ ಆನಂದವನ್ನುಂಟು ಮಾಡುತ್ತದೆ.

(೪) "**ಗುದವು**" ಮಲವಿಸರ್ಜನೆಯನ್ನು ಮಾಡುತ್ತದೆ

(೫) "**ಪಾದವು**" ಗಮನಾದಿ ಕರ್ಮಗಳನ್ನು ಮಾಡುತ್ತದೆ.

# ಜ್ಞಾನೇಂದ್ರಿಯಗಳು

**ತತ್ರಚಕ್ಷುಃ ಶ್ರೋತ್ರಂ ಘ್ರಾಣಂರಸನಂ ಸ್ಪರ್ಶನಮಿತಿಪಂಚೇಂ ದ್ರಿಯಾಣಿ ||** (ಚರಕ|| ಇಂ ಅ ೮)

(೧) "**ಚಕ್ಷುಃ**" ಚಷ್ಟೇ ರೂಪಂರೂಪವಂತಂಚಪ್ರಕಾಶಯತೀತಿ ಚಕ್ಷುಃ|| ರೂಪವನ್ನೂ ರೂಪಉಳ್ಳದ್ದನ್ನೂ ಗ್ರಹಿಸಿ ವ್ಯಕ್ತಪಡಿಸುತ್ತದೆ.

ಆದ್ದರಿಂದ "ಚಕ್ಷುಃ" ಎಂದು ಹೇಳುತ್ತಾರೆ. ಎರಡೂ ನೇತ್ರ ಗೋಲಕ ಗಳಲ್ಲಿರುವ ರೂಪಗ್ರಾಹಕ ಚಕ್ಷುರಿಂದ್ರಿಯಗಳನ್ನು, ಅವಿಶೇಷ ಧರ್ಮವಿರುವದ ರಿಂದ ಒಂದೇ ಎಂದು ಗ್ರಹಿಸಿದ್ದಾರೆ ಇದರಂತೇ ಶ್ರೋತ್ರ, ಘ್ರಾಣಗಳನ್ನೂ ತಿಳಿಯಬೇಕು. ಸ್ವರೂಪದಿಂದ ಚಕ್ಷುರಾದಿಗಳು ಒಂದೇ ಇದ್ದರೂ ಪರಸ್ಪರ ಭಿನ್ನವಾಗಿಯೇ ಇರುತ್ತವೆ ಹಾಗಿಲ್ಲವಾದರೆ ಒಂದು ಕಣ್ಣು ಕುರುಡಾದರೆ, ಒಂದು ಕಿವಿ ಕೇಳಿಸದಿದ್ದರೆ, ಮತ್ತೊಂದು ಕಾಣದಂತೆ, ಕೇಳಿಸದಂತೆ ಆಗ ಬೇಕಾಗುತ್ತಿತ್ತು. ಹೀಗಾಗುವದಿಲ್ಲವಾದ್ದರಿಂದ ಭಿನ್ನವಾಗಿರುತ್ತವೆಂದು ಸ್ಪಷ್ಟವಾಗುತ್ತದೆ.

"ಶ್ರೋತ್ರ" "ಶೃಣೋತ್ಯನೇನೇತಿ ಶ್ರೋತ್ರಂ" ಶಬ್ದಗಳನ್ನು ಯಾವ ಇಂದ್ರಿಯಗಳಿಂದ ನಾವು ಕೇಳುತ್ತೇವೆಯೋ, ಅವುಗಳಿಗೆ ಶ್ರೋತ್ರವೆಂಬ ಹೆಸರು. ಶ್ರೋತ್ರವೆಂದರೆ ಶಬ್ದವನ್ನು ಗ್ರಹಿಸುವ ಕಿವಿಗಳು.

"ಘ್ರಾಣ" "ಜಿಘ್ರತ್ಯನೇನೇತಿ ಘ್ರಾಣಂ" ಯಾವ ಇಂದ್ರಿಯದಿಂದ ನಾವು ವಾಸನೆಯನ್ನು ತೆಗೆದುಕೊಳ್ಳುತ್ತೇವೆಯೋ, ಅದಕ್ಕೆ ಘ್ರಾಣವೆಂಬ ಹೆಸರು. ಘ್ರಾಣವೆಂದರೆ ವಾಸನೆಯನ್ನು ಗ್ರಹಿಸುವ ಇಂದ್ರಿಯ, ಮೂಗು ಆಗಿರುತ್ತದೆ.

"ರಸನ" ರಸತ್ಯಾಸ್ವಾದಯತ್ಯನೇನೇತಿರಸನಂ ॥ ಯಾವದರಿಂದ ಮಧುರಾದಿ ರಸವು ಗ್ರಹಿಸಲ್ಪಡುತ್ತದೆಯೋ ಅಥವಾ ಮಧುರಾದಿಗಳು ನಿರ್ಣ ಯಿಸಿ ಸ್ಪಷ್ಟಪಡಿಸಲ್ಪಡುತ್ತವೆಯೋ, ಇಲ್ಲವೇ ಮಧುರಾದಿ ಸ್ವೀಕಾರದಲ್ಲಿ ಪ್ರೇರಿಸುತ್ತ ಸ್ವೀಕಾರ ಮಾಡುತ್ತದೆಯೋ ಅದೇ ರಸನೇಂದ್ರಿಯವು. ರಸ ನೇಂದ್ರಿಯವೆಂದರೆ ನಾಲಿಗೆಯು.

"ಸ್ಪರ್ಶನೇಂದ್ರಿಯ" ಸ್ಪೃಶತ್ಯನೇನೇತಿ ಸ್ಪರ್ಶನಂ। ಯಾವಇಂದ್ರಿ ಯವು ಸ್ಪರ್ಶದಿಂದ ವಸ್ತುವಿನ ಸ್ಪರ್ಶಗ್ರಾಹ್ಯ ಜ್ಞಾನವನ್ನು ಮಾಡುತ್ತ ದೆಯೋ, ಅದಕ್ಕೆ ಸ್ಪರ್ಶೇಂದ್ರಿಯ ಅಥವಾ ಸ್ಪರ್ಶನವೆಂದು ಹೇಳುತ್ತಾರೆ. ಸ್ಪರ್ಶನೇಂದ್ರಿಯವೆಂದರೆ ಸ್ಪರ್ಶಜ್ಞಾನಮಾಡಿಕೊಡುವ ಇಂದ್ರಿಯವು. ಚರ್ಮ (ತ್ವಕ್) ವನ್ನು ಆಶ್ರಯಿಸಿರುತ್ತದೆ

# ಪಂಚೇಂದ್ರಿಯದ್ರವ್ಯಗಳು

**ಪಂಚೇಂದ್ರಿಯ ದ್ರವ್ಯಾಣಿ:—**

**ಖಂವಾಯುಜ್ಯೋತಿರಾಪೋಭೂರಿತಿ॥**

೧ ಆಕಾಶ ೨ ವಾಯು ೩ ತೇಜಸ್ಸು ೪ ಜಲ ೫ ಪೃಥಿವಿ ಇವುಗಳು ಂಚೇಂದ್ರಿಯ ದ್ರವ್ಯಗಳು. ಯಾವ ಇಂದ್ರಿಯವು ಯಾವ ಪಂಚಭೂತಾ ್ಕ ದ್ರವ್ಯದ ಆಧಿಕ್ಯದಿಂದ ಉಂಟಾಗಿರುತ್ತದೆಯೋ, ಆ ಇಂದ್ರಿಯಕ್ಕೆ ಆ ೂತವು ದ್ರವ್ಯವಾಗಿರುತ್ತದೆ.

**ಉದಾಹರಣೆ.**— ತೇಜಸ್ಸಿನಾಧಿಕ್ಯವುಳ್ಳ ಚಕ್ಷುರಿಂದ್ರಿಯಕ್ಕೆ ತೇಜಸ್ಸು ್ರವ್ಯವಾಗಿರುತ್ತದೆ ಇದರಂತೆ ಉಳಿದವುಗಳನ್ನು ತಿಳಿಯಬೇಕು.

# ಪಂಚೇಂದ್ರಿಯಗಳ ಆಶ್ರಯಗಳು

**ಪಂಚೇಂದ್ರಿಯಾಧಿಷ್ಠಾನಾನಿ:-**

**ಅಕ್ಷಿಣೀ ಕರ್ಣೌ ನಾಶಿಕೆ ಜಿಹ್ವಾತ್ವಕ್ ಚೇತಿ ॥**

೧ **"ಚಕ್ಷುರಿಂದ್ರಿಯಕ್ಕೆ"** ೧ ಕಣ್ಣುಗಳು ಆಶ್ರಯವಾಗಿರುತ್ತವೆ. ೂಪವನ್ನು ಗ್ರಹಿಸುವ ಇಂದ್ರಿಯವು ಕಣ್ಣೆಂದು ವಾಡಿಕೆಯಾಗಿರುತ್ತದೆ. ಣ್ಣುಗಳ ಕರೀ ಗುಡ್ಡೆಗಳಲ್ಲಿರುವ ತೇಜೋವಿಶಿಷ್ಟವಾದ ಇಂದ್ರಿಯವೇ, ೂಪವನ್ನು ಗ್ರಹಿಸುವದೇ ವಿನಾ ಕೇವಲ ಕಣ್ಣು ಗುಡ್ಡೆಗಳಲ್ಲ. ಯಾಕಂದರೆ ಷ್ಟೋ ಕುರುಡರಿಗೆ ಕಣ್ಣುಗುಡ್ಡೆಗಳಿದ್ದು ಕಣ್ಣು ಕಾಣಿಸುವದಿಲ್ಲವಾದ್ದರಿಂದ ೂಪಗ್ರಾಹಕ ಇಂದ್ರಿಯವು ಕಣ್ಣುಗುಡ್ಡೆಗಳಲ್ಲಿ ಇರುತ್ತದೆಯೇ ವಿನಾ, ಕಣ್ಣು ುಡ್ಡೆಗಳೇ ರೂಪಗ್ರಾಹಕ ಇಂದ್ರಿಯವಲ್ಲೆಂದು ಸಿದ್ಧವಾಗುತ್ತದೆ ಇದನ್ನೇ ರ್ಕಸಂಗ್ರಹದಲ್ಲಿ ಹೀಗೆ ನಿರೂಪಿಸಿದ್ದಾರೆ. **"ಇಂದ್ರಿಯಂರೂಪಗ್ರಾಹಕಂ ಕ್ಷುಃ ಕೃಷ್ಣತಾರಾಗ್ರವರ್ತಿ".**

ತೇಜಸ್ಸಿನ ಸಂಬಂಧಿಯಾದ ಇಂದ್ರಿಯವು ರೂಪವನ್ನು ಗ್ರಹಿಸುವ ಚಕ್ಷುಃ" ಅದು ಕಣ್ಣುಗುಡ್ಡೆಗಳ ಕಪ್ಪು ಭಾಗಗಳಲ್ಲಿರುವ **"ಚಿಕ್ಕೆಗಳಲ್ಲಿ'**

ಇರುತ್ತದೆ. ಇದರಂತೆ ಸ್ಥೂಲವಾಗಿ ಕಾಣುವ ನಾಸಿಕಾದಿಗಳು, ಘ್ರಾಣಾದಿ ಇಂದ್ರಿಯಗಳಗೆ ಆಶ್ರಯಸ್ಥಾನವಾಗಿರುತ್ತವೆ. ಇದರಂತೆ ಎಲ್ಲವುಗಳನ್ನೂ ತಿಳಿಯಬೇಕು.

"ಶ್ರೋತ್ರೇಂದ್ರಿಯಕ್ಕೆ"ಕಿವಿಗಳು ಆಶ್ರಯಸ್ಥಾನವಾಗಿರುತ್ತವೆ. ಆಕಾಶವು ಶರೀರ ಇಂದ್ರಿಯ ವಿಷಯಾದಿಗಳ ಅಭಾವವುಳ್ಳದ್ದರಿಂದ, ಶಬ್ದಗ್ರಾಹಿ ಇಂದ್ರಿಯವು ಆಕಾಶೀಯವಾಗಿರುವದು ಹೇಗೆಂದು ನಿರೂಪಿಸುತ್ತಾರೆ.

**ಇಂದ್ರಿಯಂತುಭವೇತ್ ಶ್ರೋತ್ರಮೇಕಃ ಸನ್ನಪ್ಯುಪಾಧಿತಃ ||
ನಿತ್ಯತ್ವೇನನಿರವಯುವತ್ವೇನಚತತ್ರ ಶರೀರವಿಷಯಯೋರಭಾವಾದಿಂದ್ರಿಯವಮಾಹ:– "ಶ್ರೋತ್ರೇಂದ್ರಿಯಂ" ಕರ್ಣವಿವರ ಸಂಜ್ಞಕಂನಭಃ || ಕರ್ಣಶಷ್ಕುಲಿಭೇದಾತ್ ಶ್ರೋತ್ರಂ ಪುರುಷ ಭೇದೇನಭಿನ್ನಂ ಅನೇಕತ್ವಂ ಭವತಿ ||** (ಮುಕ್ತಾವಲೀ)

ಆಕಾಶವು ಒಂದೇ ಇದ್ದರೂ ಉಪಾಧಿಯಿಂದ ಭಿನ್ನವಾದದ್ದಾಗಿ, ಶ್ರೋತ್ರೇಂದ್ರಿಯವೆಂದು ಹೇಳಲ್ಪಡುತ್ತದೆ. ಶ್ರೋತ್ರೇಂದ್ರಿಯವು (ಕರ್ಣವು) ಶಬ್ದವನ್ನು ಗ್ರಹಿಸಿ ಜ್ಞಾನ ಮಾಡಿಕೊಡುತ್ತದೆ.

### ಶ್ರೋತ್ರೇಂದ್ರಿಯ ವಿಷಯದಲ್ಲಿ ವಿಶೇಷ ನಿರೂಪಣೆ:–

ಆಕಾಶವು ನಿತ್ಯವೂ ನಿರವಯುವವೂ ಶರೀರ ವಿಷಯಾದಿ ರಹಿತವೂ ಇರುವದರಿಂದ, ಶಬ್ದೇಂದ್ರಿಯವೆಂದರೆ "ಆಕಾಶವೇ ಆಗಿರುತ್ತದೆ" ಕಿವಿರಂಧ್ರಗಳಲ್ಲಿರುತ್ತದೆಂಬ ಸಂಜ್ಞೆಯುಳ್ಳ ಆಕಾಶವು. ಅರ್ಥಾತ್ ಕರ್ಣ ರಂಧ್ರಗಳಲ್ಲಿಯ ಪೊಳ್ಳು ಭಾಗವೇ ಶ್ರೋತ್ರೇಂದ್ರಿಯವು ಮನುಷ್ಯ ಭೇದದಿಂದಲೂ ಬೇರೆಬೇರೆ ಕರ್ಣಗಳಿರುವದರಿಂದಲೂ ಅನೇಕವಾಗಿ, ಉಪಾಧಿ (ಆಶ್ರಯ, ಆವರಣ)ಭೇದವುಳ್ಳದ್ದಾಗಿರುತ್ತದೆ. ಆಕಾಶವೂ ಒಂದೇಇದ್ದರೂ ಮಠಾಕಾಶ ಘಟಾಕಾಶಗಳಂತೆ ಭಿನ್ನವೂ ಮತ್ತು ಶಬ್ದಗ್ರಾಹಕ ಇಂದ್ರಿಯ ಧರ್ಮಗಳುಳ್ಳದ್ದರಿಂದ, ಪ್ರತಿಯೊಂದು ದೇಹದಲ್ಲಿಯೂ ಇರುವದರಿಂದ ಅನೇಕವೂ ಆಗಿರುತ್ತದೆ ಇಲ್ಲಿ ಇನ್ನೊಂದು ಆಕ್ಷೇಪಬರುತ್ತದೆ. ಹ್ಯಾಗಂದರೆ:– ಆಕಾಶವೇ ಶಬ್ದಗ್ರಾಹಕ ಇಂದ್ರಿಯವಾದರೆ ಅದು ದುರ್ಬಲವೂ ಕೇಳದೇಇರುವದು

ಯಾಕಾಗಬೇಕು. ಆಕಾಶವೆಂದರೆ ಪೊಳ್ಳು ಭಾಗವು, ಏನೂ ಇರುವದಿಲ್ಲ ವೆಂದು ಹೇಳುತ್ತಾರೆ. ಅಂಥಾದ್ದರ ದೌರ್ಬಲ್ಯ ಹೇಗಾಗುತ್ತದೆ ಶಾಸ್ತ್ರದಲ್ಲಿ ಬಧಿರತ್ವವು, (ಕಿವುಡತನ) ಆವರಣ (ಉಪಾಧಿ) ದೌರ್ಬಲ್ಯದಿಂದಾಗುತ್ತ ದೆಂದು ಹೇಳಿದ್ದಾರೆ.

೩ "**ಘ್ರಾಣೇಂದ್ರಿಯಕ್ಕೆ**" ಮೂಗು ಆಶ್ರಯಸ್ಥಾನವಾಗಿರುತ್ತದೆ ಪೃಥ್ವಿಯ ಸಂಬಂಧಿಯಾದ ಘ್ರಾಣೇಂದ್ರಿಯವು ಗಂಧವನ್ನು ಗ್ರಹಿಸುತ್ತದೆ.

**ಇಂದ್ರಿಯಂಗಂಧಗ್ರಾಹಕಂ ಘ್ರಾಣಂ ನಾಸಾಗ್ರವರ್ತಿ ||**

(ತರ್ಕ ಸಂಗ್ರಹ)

ಗಂಧವನ್ನು ಗ್ರಹಿಸುವ ಇಂದ್ರಿಯವು ಘ್ರಾಣೇಂದ್ರಿಯವು. ಅದು ನಾಸಿಕಾಗ್ರ ಭಾಗದಲ್ಲಿರುತ್ತದೆ.

೪ "**ರಸನೇಂದ್ರಿಯಕ್ಕೆ**" ನಾಲಿಗೆಯು ಆಶ್ರಯ ಸ್ಥಾನವಾಗಿರುತ್ತದೆ ಜಲಸಂಬಂಧಿಯಾದ ರಸನೇಂದ್ರಿಯವು ಮಧುರಾದಿ ರಸಗಳನ್ನು ಗ್ರಹಿಸಿ ಜ್ಞಾನ ಮಾಡಿಕೊಡುತ್ತದೆ.

**"ಇಂದ್ರಿಯಂ ರಸಗ್ರಾಹಕಂ ರಸನಂ ಜಿಹ್ವಾಗ್ರವರ್ತಿ"**

(ತರ್ಕ ಸಂಗ್ರಹ)

ರಸವನ್ನು ಗ್ರಹಿಸುವ ರಸನೇಂದ್ರಿಯವು ಜಿಹ್ವೆಯ (ನಾಲಿಗೆಯ) ಅಗ್ರ ಭಾಗದಲ್ಲಿರುತ್ತದೆ.

೫ "**ಸ್ಪರ್ಶನೇಂದ್ರಿಯ**" ಯಾವದರಿಂದ ನಮಗೆ ಸ್ಪರ್ಶಜ್ಞಾನವಾಗು ತ್ತದೆಯೋ ಅದಕ್ಕೆ ಸ್ಪರ್ಶನೇಂದ್ರಿಯವೆಂಬ ಹೆಸರು. ಅದು ಚರ್ಮದಲ್ಲಿರು ತ್ತದೆ ಅದು ಇರುವದರಿಂದಲೇ ಚರ್ಮಕ್ಕೆ ಯಾವದೇ ವಸ್ತು ತಾಗಿದಕೂಡಲೆ ಸ್ಪರ್ಶದಿಂದ ಜ್ಞಾನವಾಗುತ್ತದೆ.

**"ಇಂದ್ರಿಯಂ ಸ್ಪರ್ಶಗ್ರಾಹಕಂ ತ್ವಕ್ ಸರ್ವಶರೀರವರ್ತಿ"**

(ತರ್ಕ ಸಂಗ್ರಹ)

ಸ್ಪರ್ಶವನ್ನು ಗ್ರಹಿಸುವ ತ್ವಗಿಂದ್ರಿಯವು ಸಂಪೂರ್ಣ ಶರೀರವನ್ನು ವ್ಯಾಪಿಸಿರುತ್ತದೆ. ದೇಹದಲ್ಲಿಯ ಆವರಣರೂಪವಾದ ಹೊದಿಕೆಗೆ, ತ್ವಕ್, ಚರ್ಮವೆಂಬ ಹೆಸರು. ಆದ್ದರಿಂದ ಸ್ಪರ್ಶವನ್ನು ಗ್ರಹಿಸುವ ಇಂದ್ರಿಯವು ಚರ್ಮದಲ್ಲಿರುತ್ತದೆಂದು ಸ್ಪಷ್ಟಾರ್ಥವು.

# ಪಂಚೇಂದ್ರಿಯವಿಷಯಗಳು

**ಪಂಚೇಂದ್ರಿಯಾರ್ಥಾಃ; ಶಬ್ದಸ್ಪರ್ಶರೂಪರಸಗಂಧಾಃ ||**
(ಚರಕ|| ಇಂ. ೫೮)

ಪಂಚೇಂದ್ರಿಯಗಳು ಗ್ರಹಿಸತಕ್ಕ ವಿಷಯಗಳಿಗೆ ಪಂಚೇಂದ್ರಿಯಾರ್ಥವೆಂಬ ಹೆಸರು. ಶಬ್ದಾದಿಗಳನ್ನು ಶ್ರೋತ್ರಾದಿ ಇಂದ್ರಿಯಗಳು ಗ್ರಹಿಸುತ್ತವೆ. "**ಪಂಚ ಚ ತಾನೀಂದ್ರಿಯಾಣಿಚ, ಪಂಚೇಂದ್ರಿಯಾಣಿ; ತೈರರ್ಥ್ಯಂತೆ ಇತಿ, ಪಂಚೇಂದ್ರಿಯಾರ್ಥಾಃ**" ಪಂಚೇಂದ್ರಿಯಗಳಿಂದ ಅಭಿಪ್ರೇತವಾಗಿ (ಇಷ್ಟವಾಗಿ) ಗ್ರಹಿಸಲ್ಪಡುತ್ತಿರುವದಕ್ಕೆ ಪಂಚೇಂದ್ರಿಯ ವಿಷಯವೆಂದನ್ನುತ್ತಾರೆ.

**ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳು** ಪಂಚೇಂದ್ರಿಯ(ಪಂಚೇಂದ್ರಿಯಾರ್ಥಾಃ) ವಿಷಯಗಳು.

## ಇಂದ್ರಿಯಗಳ ಭೌತಿಕ ವಿಶೇಷ

**ತತ್ರಾನುಮಾನಗಮ್ಯಾನಾಂ ಪಂಚಮಹಾಭೂತವಿಕಾರಸಮುದಾಯಾತ್ಮಕಾನಾಮಪಿ ಸತಾಮಿಂದ್ರಿಯಾಣಾಂ ತೇಜಶ್ಚಕ್ಷುಷಿ, ಖಂಶ್ರೋತ್ರೇ, ಘ್ರಾಣೇಕ್ಷಿತಿಃ, ಆಪೋರಸನೆ, ಸ್ಪರ್ಶನೆ ಅನಿಲೋ ವಿಶೇಷೇಣೋಪಪದ್ಯತೆ, ತತ್ರಯದ್ಯದಾತ್ಮಕಮಿಂದ್ರಿಯಂ ವಿಶೇಷಾತ್ತತ್ತದಾತ್ಮಕಮೇವಾರ್ಥಮನುಗೃಹ್ಣಾತಿ, ತತ್ಸ್ವಭಾವಾತ್ ವಿಭುತ್ವಾಚ್ಚ ||** (ಚರಕ || ಇಂ. ೮)

ಇಂದ್ರಿಯಗಳ ವಿಷಯದಲ್ಲಿ ಪಂಚಮಹಾಭೂತಗಳ ವಿಕಾರಗಳ ಸಮುದಾಯಾತ್ಮಕಗಳೆಂದು ಅನುಮಾನ ಸಿದ್ಧವಿದ್ದರೂ, ಆಯಾವ ಇಂದ್ರಿಯಗಳಲ್ಲಿಯ ಆಧಿಕ್ಯವಾದ ಭೂತ ವಿಶೇಷಗಳಿಂದ, ಆಯಾವ ಭೂತಾತ್ಮಕ ಇಂದ್ರಿಯಗಳೆಂದು ಹೇಳಲ್ಪಡುತ್ತವೆ. ಅದನ್ನು ಯಾವ ಇಂದ್ರಿಯಗಳಲ್ಲಿ ಯಾವ ಭೂತಾಧಿಕ್ಯವೆನ್ನುವದನ್ನು ಹೇಳುತ್ತಾರೆ.

ತೇಜಸ್ಸು ಕಣ್ಣಿನಲ್ಲಿ; ಆಕಾಶವು ಶ್ರೋತ್ರೇಂದ್ರಿಯದಲ್ಲಿ; ನಾಶಿಕದಲ್ಲಿ ಪೃಥಿವಿಯು; ಜಲವು ರಸನೇಂದ್ರಿಯದಲ್ಲಿ; ಸ್ಪರ್ಶೇಂದ್ರಿಯದಲ್ಲಿ ವಾಯುವು ಅಧಿಕವಾಗಿರುತ್ತವೆ. ಯಾವ ಭೂತಾತ್ಮಕವಾದ ಇಂದ್ರಿಯಗಳಿರುತ್ತವೆಯೋ ಅವು, ಆ ಭೂತಾತ್ಮಕವಾದ ವಿಷಯವನ್ನು ಸ್ವೀಕರಿಸುತ್ತವೆ. ಇಂದ್ರಿಯ ಗಳ ಸ್ವಭಾವ ಸಾಮರ್ಥ್ಯಗಳು ಹೀಗೆಯೇ ಇರುವದರಿಂದ, ತಾವು ಗ್ರಹಿಸ ತಕ್ಕವುಗಳನ್ನೇ ಗ್ರಹಿಸುತ್ತವೆ. ಚಕ್ಷುರಾದಿಗಳು ಸ್ವಕೀಯವಾದ ತೇಜಸ್ಸಾದಿ ಗಳನ್ನೇ ಗ್ರಹಿಸುತ್ತವೆಂದು ನಿಶ್ಚಿತಾರ್ಥವು.

## ಪಂಚೇಂದ್ರಿಯಬುದ್ಧಿಗಳು

**ಪಂಚೇಂದ್ರಿಯ ಬುದ್ಧಯಃ– ಚಕ್ಷುರ್ಬುದ್ಧ್ಯಾದಿಕಾಃ ತಾಃ ಪುನರಿಂದ್ರಿಯೇಂದ್ರಿಯಾರ್ಥಸತ್ವಾತ್ಮಸನ್ನಿಕರ್ಷಜಾಃ ಕ್ಷಣಿಕಾ, ನಿಶ್ಚಯಾತ್ಮಿಕಾಶ್ಚ, ಇತ್ಯೇತತ್ ಪಂಚಪಂಚಕಮ್**
(ಚರಕ|| ಇಂ ಆ ೮)

ಚಕ್ಷುರಾದಿ ಇಂದ್ರಿಯಗಳಿಗೆ ಪ್ರತ್ಯೇಕವಾಗಿ ಬುದ್ಧಿಗಳಿರುತ್ತವೆ. ಅವಕ್ಕೆ ಪಂಚೇಂದ್ರಿಯ ಬುದ್ಧಿ, ಚಕ್ಷುರ್ಬುದ್ಧಿ, ಶ್ರೋತ್ರಬುದ್ಧಿ, ಘ್ರಾಣಬುದ್ಧಿ, ರಸನೇಂದ್ರಿಯ ಬುದ್ಧಿ, ಸ್ಪರ್ಶನೇಂದ್ರಿಯ ಬುದ್ಧಿ, ಮುಂತಾಗಿ ಹೇಳುತ್ತಾರೆ. ಪಂಚೇಂದ್ರಿಯ ಬುದ್ಧಿಗಳು, ಚಕ್ಷುರಾದಿ ಇಂದ್ರಿಯ, ಇಂದ್ರಿಯ ವಿಷಯ, ಮನಸ್ಸು, ಆತ್ಮ (ಜೀವ) ಇವುಗಳ ಸನ್ನಿಕರ್ಷ (ವಿಷಯ ಗ್ರಹಣದಲ್ಲಿಯ ಪರಸ್ಪರ ಸಾನ್ನಿಧ್ಯ) ದಿಂದ ಉತ್ಪನ್ನವಾಗುತ್ತವೆ. ಅವು ಕ್ಷಣಿಕವಾದವು ಗಳು, ಆದ್ದರಿಂದ ಕೂಡಲೇ ನಾಶ ಹೊಂದುತ್ತವೆ. ನಿಶ್ಚಯಾತ್ಮಕವಾಗಿ ಯಾವದು ಏನೆಂಬುವದನ್ನು ನಿರ್ಣಯಿಸತಕ್ಕವು. ರೂಪಾದಿಗಳನ್ನು ಗ್ರಹಿಸಿ ನಿರ್ಣಯ ಮಾಡುತ್ತವೆಂದರ್ಥವು. ಹೀಗೆ ಐದು ಇಂದ್ರಿಯಗಳಲ್ಲಿ, ಐದು ಇಂದ್ರಿಯ ಬುದ್ಧಿಗಳಿರುತ್ತವೆ.

**"ತೇನಚಕ್ಷುರ್ಬುದ್ಧ್ಯಾದಾವಾತ್ಮಾಮನಸಾಸಂಯುಜ್ಯತೆ,ಮನ ಇಂದ್ರಿಯೇಣ, ಇಂದ್ರಿಯಮರ್ಥೇನ, ತೇಷಾಂಸನ್ನೀಕರ್ಷಃ**

ಸಂಬಂಧಃ, ಸಚಕ್ವಚಿತ್ ಸಂಯೋಗಃ, ಕ್ವಚಿತ್ಸಮವಾಯಃ॥ ಅಸಾಧಾರಣೇನಕಾರಣೇನಇಂದ್ರಿಯೇಣವ್ಯಪದಿಷ್ಟಾಬುದ್ಧಯಃ ಇಂದ್ರಿಯಬುದ್ಧಯಃ ॥ ಚಕ್ಷುಷಾಽಸಾಧಾರಣೇನಕಾರಣೇನ ಜನಿತಾಬುದ್ಧಿಶ್ಚಕ್ಷುರ್ಬುದ್ಧಿಃ ॥ ನಿಶ್ಚಯಾತ್ಮಿಕಾವಸ್ತುಸ್ವರೂಪವಿಚ್ಛೇದಾತ್ಮಿಕಾ, ಕ್ಷಣಿಕತ್ವೇಽಪಿವಸ್ತುಪರಿಚ್ಛೇದಕತ್ವಂಪ್ರದೀಪಾರ್ಚಿರ್ಜ್ವಲನವದ್ಬುದ್ಧೀನಾಮವಿರುದ್ಧಮ್ ॥
(ಚರಕ ಟೀಕಾ)

## ಅಸಾಧಾರಣಕಾರಣಾದಿಲಕ್ಷಣಂ

ಪಾರ ಮಾಡಲು ಯೋಗ್ಯವಾಗಲೆಂದು ಲಕ್ಷಣವನ್ನು ನಿರೂಪಿಸಿದ್ದೇನೆ ಶಾಸ್ತ್ರೀಯವಿರುವದರಿಂದ ಅರ್ಥವನ್ನಷ್ಟೇ ಹೇಳಿದ್ದೇನೆ. ಗುರುಮುಖದಿಂದ ವಿಶೇಷವಾಗಿತಿಳಿಯಿರಿ:-

೧ ಅಸಾಧಾರಣತ್ವಂಚ॥ ಕಾರ್ಯತ್ವಾತಿರಿಕ್ತಧರ್ಮಾವಚ್ಛಿನ್ನಕಾರ್ಯತಾನಿರೂಪಿತಕಾರಣತಾಶಾಲಿತ್ವಂ ॥

೨ ಕಾರಣತ್ವಂನಾಮ॥ ಕಾರ್ಯಂ ಪ್ರತಿನಿಯತತ್ವೇಸತಿಪೂರ್ವವೃತ್ತಿತ್ವಂ ॥

೩ ಸಮವಾಯಿಕಾರಣತ್ವಂ॥ ಸಮವಾಯಸಂಬಂಧಾವಚ್ಛಿನ್ನಕಾರ್ಯತಾನಿರೂಪಿತತಾದಾತ್ಮ್ಯ ಸಂಬಂಧಾವಚ್ಛಿನ್ನ ಕಾರಣತ್ವಂ ಸಮವಾಯಿಕಾರಣತ್ವಂ॥ ಯತ್ಸಮವೇತಂ ಕಾರ್ಯಮುತ್ಪದ್ಯತೆ ತತ್ಸಮವಾಯಿಕಾರಣಂ ॥ (ತರ್ಕ ಸಂಗ್ರಹ)

ರೂಪಾದಿಗಳನ್ನು ಗ್ರಹಿಸಿ ನಿಶ್ಚಯಿಸುವ ಚಕ್ಷುರಾದಿ ಇಂದ್ರಿಯ ಬುದ್ಧಿಗಳು, ಮನಸ್ಸು, ಚಕ್ಷುರಾದಿ ಇಂದ್ರಿಯಗ್ರಾಹ್ಯ (ಅರ್ಥ), ಇವುಗಳ ಸನ್ನಿಕರ್ಷ (ರೂಪಾದಿಗ್ರಹಣ ಯೋಗ್ಯಸಂಬಂಧ) ದಿಂದ ಉಂಟಾಗುತ್ತವೆ. ಮನೋಯುಕ್ತ ಇಂದ್ರಿಯಗಳಿಂದ ಗ್ರಹಿತವಾದದ್ದನ್ನು ಬುದ್ಧಿಯು ನಿಶ್ಚಯಿ

ಸುತ್ತದೆ. ಯಾಕಂದರೆ ಮನಸ್ಸಿನಲ್ಲಿ ನಿಶ್ಚಯಾತ್ಮಕ ಧರ್ಮವಿರುವದಿಲ್ಲ. ವಸ್ತುತಃ "ಅಯಂಶ್ವೇತಃ, ಕೃಷ್ಣತ್ವಾದಿಧರ್ಮಭಿನ್ನತ್ವಾತ್" ಎಂಬ ನಿರ್ಣಯವಾಗೇಆಗುವದರಿಂದ ಚಕ್ಷುರಾದಿ ಬುದ್ಧಿ ಇರುತ್ತವೆಯೆಂದು ಸ್ಪಷ್ಟ ವಾಗುತ್ತದೆ. ಶ್ವೇತತ್ವ ಗ್ರಹಣವು ಮನಇಂದ್ರಿಯಾರ್ಥ ಸನ್ನಿಕರ್ಷಕವಾದದ್ದೇ ಇರುತ್ತದೆ. ಆದರೆ ಇಲ್ಲಿ ನಿರ್ಣಯ ವಿಷಯದಲ್ಲಿ ಇದು ಶ್ವೇತತ್ವ ಧರ್ಮವು ಳ್ಳದ್ದು ನಿಶ್ಚಯ. ಯಾಕಂದರೆ, ಕೃಷ್ಣತ್ವಾದಿ ಧರ್ಮಕ್ಕಿಂತಲೂ ಭಿನ್ನವಾದ್ದ ರಿಂದ" ಹೀಗೆ ವಸ್ತುರೂಪವಿಚ್ಛೇದಾತ್ಮಕನಿರ್ಣಯವುಆಗಿರುತ್ತದೆ. ಅದು ಬುದ್ಧಿಯ ಕಾರ್ಯವಿರುವದರಿಂದ ಬುದ್ಧಿಯು ನಿರ್ಣಯ ವಿಷಯದಲ್ಲಿರುತ್ತ ದೆಂದು ಸಿದ್ಧಮಾಡಿರುತ್ತಾರೆ. ಆ ಬುದ್ಧಿಯು ಸದಾ ಇದ್ದರೆ:– ಪ್ರತಿಯೊಂದು ಇಂದ್ರಿಯಗಳು ಅನವರತ ಗ್ರಹಿಸುತ್ತಲೂ, ಬುದ್ಧಿಗಳು ನಿರ್ಣಯಿಸುತ್ತಲೂ, ಇರಬೇಕಾಗುತ್ತಿತ್ತು ಮನಸ್ಸು ಏಕಕಾಲದಲ್ಲಿ ಏಕೇಂದ್ರಿಯ ಗ್ರಾಹ್ಯವಿಷಯ ದಲ್ಲಿ ಕಾರ್ಯನಿಯತವಿರುವದರಿಂದ, ಅನೇಕ ಬುದ್ಧಿಗಳ ಸಕೃದಾಗಮನೋ ಪಯೋಗಿತ್ವ, ಮನಸ್ಸಿನ ಸರ್ವೇಂದ್ರಿಯ ಅಸಹಾಧಿಷ್ಠಾನತ್ವಗಳಿಂದಲೂ ಅನವಸ್ಥಾ ಸಂಭವವಾಗುತ್ತದೆಂದು ಅನಿಸಬಹುದು. ಆದರೆ ಹಾಗಾಗುವದಿಲ್ಲ. ಯಾಕಂದರೆ ಚಕ್ಷುರಾದಿ ಬುದ್ಧಿಗಳು ಯಾವಾಗಲೂ ನಿತ್ಯವಾಗಿರುವದಿಲ್ಲ. ರೂಪಾದಿ ಸ್ವೀಕಾರ ನಿರ್ಣಯದಲ್ಲಿ ಇಂದ್ರಿಯಾದಿ ಸನ್ನಿಕರ್ಷೋತ್ಪನ್ನವಾಗಿ, ನಿರ್ಣಯಿಸಿದ ನಂತರ ಇರುವದಿಲ್ಲ. ಆದ್ದರಿಂದ ಕ್ಷಣಿಕವಾದದ್ದೆಂದು ನಿರ್ಣ ಯಿಸಿದ್ದಾರೆ ಪ್ರದೀಪದಂತೆ ಅಥವಾ ತೇಜಸ್ಸಿನಂತೆ ಅರ್ಥ ಪ್ರಕಾಶ ವಿಷ ಯದಲ್ಲಿ ಪರಿಚ್ಛೇದಕ ವಿಭಾಗಾತ್ಮಕವಾಗಿ ಬುದ್ಧಿಯು ಕಾರ್ಯ ಮಾಡುವದ ರಿಂದ ಬುದ್ಧಿಗೆ ವಿರುದ್ಧವೇನಿಲ್ಲ ಹೀಗೆ ಸಮಂಜಸವಿರುವದರಿಂದ ಅನವ ಸ್ಥಾನಾದಿಗಳ ಸಂಭವವೇಇಲ್ಲ.

## ಚಕ್ಷುರ್ಬುಧ್ಯಾದಿಗಳ ಸನ್ನಿಕರ್ಷಕ್ರಮ

**ಚಕ್ಷುರ್ಬುಧ್ಯಾದಿಗಳ ಸನ್ನಿಕರ್ಷದಲ್ಲಿ,** ಆತ್ಮವು ( ಜೀವವು ) ಮನಸ್ಸಿನಿಂದ ಯುಕ್ತವಾಗುತ್ತದೆ. ಮನಸ್ಸು ಇಂದ್ರಿಯದಿಂದಲೂ, ಇಂದ್ರಿ ಯವು, ಅರ್ಥ (ಗ್ರಾಹ್ಯ) ದಿಂದಲೂ ಯುಕ್ತವಾಗುವದು. ಹೀಗೆ ಆತ್ಮ ಮನ

ಇಂದ್ರಿಯುಗಳ ಪರಸ್ಪರ ಸಂಬಂಧಕ್ಕೆ ಸನ್ನಿಕರ್ಷವೆಂದು ಹೆಸರು. ಈ ಸನ್ನಿ ಕರ್ಷದಿಂದ ರೂಪಾದಿಗಳ ನಿರ್ಣಯಪರ್ಯಂತ, ಇಂದ್ರಿಯ ಬುದ್ಧಿ ಉತ್ಪನ್ನ ವಾಗುತ್ತದೆ. ನಿರ್ಣಯ ಪರ್ಯಂತರವೇ ಇರುವದರಿಂದ ಅದಕ್ಕೆ ಕ್ಷಣಿಕ ವೆಂದು ಅನ್ನುತ್ತಾರೆ. ಕೆಲವು ಸಂದರ್ಭದಲ್ಲಿ ಸನ್ನಿಕರ್ಷ ಸಂಬಂಧಾತ್ಮಕ ವಾಗಿ ಇಂದ್ರಿಯ ಬುದ್ಧಿಗಳು ಇರುತ್ತವೆ· ಕೆಲವು ವೇಳೆ ಸಮವಾಯ ಸಂಬಂಧದಿಂದಿರುತ್ತವೆ. ರಸಗ್ರಾಹಕ ಜಿಹ್ವೆಯಿಂದ ರಸ ಸ್ವೀಕಾರ ವಿಷಯ ದಲ್ಲಿ ಇಂದ್ರಿಯು ಮನಸ್ಸುಗಳ ಸಂಯೋಗವು, ರಸನೇಂದ್ರಿಯ ಬುದ್ಧಿಯಲ್ಲಿ ಸಮವಾಯ ಸಂಬಂಧದಿಂದಿರುತ್ತವೆ

"**ಕಾರಣವೆಂದರೆ**" ಕಾರ್ಯಕ್ಕಿಂತ ಪೂರ್ವದಲ್ಲಿ ನಿಶ್ಚಯವಾಗಿ ಯಾವದಿರುತ್ತದೆಯೋ ಅದಕ್ಕೆ ಕಾರಣವೆಂದನ್ನುತ್ತಾರೆ.

"**ಅಸಾಧಾರಣ ಕಾರಣವೆಂದರೆ**" ಕಾರ್ಯದಿಂದ ಭಿನ್ನವಿದ್ದು ಕಾರ್ಯಬೋಧಕವಾದ ಕಾರಣವಾಗಿರುವದೇ, ಅಸಾಧಾರಣ ಕಾರಣವು. ಈ ಅಸಾಧಾರಣ ಕಾರಣವುಳ್ಳ ಇಂದ್ರಿಯದಿಂಗ (ಇಂದ್ರಿಯುಗಳನ್ನುದ್ದೇಶಿಸಿ) ಉತ್ಪನ್ನವಾದ ಬುದ್ಧಿಯೇ ಇಂದ್ರಿಯ ಬುದ್ಧಿಯು. ಚಕ್ಷುಸ್ಸಿನಿಂದ ಅಸಾ ಧಾರಣ ಕಾರಣೋತ್ಪನ್ನವಾದ ಬುದ್ಧಿಯು **ಚಕ್ಷುರಿಂದ್ರಿಯ** ಬುದ್ಧಿಯು. ಅದು ವಸ್ತುವಿನ ರೂಪವನ್ನು ಗ್ರಹಿಸಿ ಇತರ ಭಿನ್ನತ್ವದಿಂದ (ಸ್ವರೂಪ ವಿಚ್ಛೇ ದನದಿಂದ) ನಿಶ್ಚಯ ನಿರ್ಣಯವನ್ನು ನಿರೂಪಿಸುತ್ತದೆ ಚಕ್ಷುರ್ಬುದ್ಧ್ಯಾದಿ ಗಳಂತೆ ಶ್ರೋತ್ರೇಂದ್ರಿಯ ಬುದ್ಧ್ಯಾದಿಗಳನ್ನು ಯೋಜಿಸಿಕೊಳ್ಳಬೇಕು

**ಮನಃ ಪುರಸ್ಸರಾಣೀಂದ್ರಿಯಾಣ್ಯರ್ಥಗ್ರಹಣಸಮರ್ಥಾನಿ ಭ ವಂತಿ ॥** (ಚರಕ॥ ಇಂದ್ರಿಯ, ಸ್ಥಾ. ಅ. ೮)

ಮನಸ್ಸಿನಿಂದ ಯುಕ್ತವಾದ ಇಂದ್ರಿಯುಗಳು ಗ್ರಾಹ್ಯ (ಅರ್ಥ)ವಾದ ದ್ದನ್ನು ಗ್ರಹಿಸಲು ಸಮರ್ಥವಾಗುತ್ತವೆ. ಅರ್ಥಾತ್ ರೂಪಾದಿಗಳನ್ನು ಗ್ರಹಿಸಲು **ಚಕ್ಷುರಾದಿ** ಇಂದ್ರಿಯುಗಳಲ್ಲಿ ಮನೋಽಧಿಷ್ಠಾನವು ಅವಶ್ಯವೆಂದು **ಸಿದ್ಧ**ವಾಗುತ್ತದೆ. ಇದನ್ನೇ ಹಿಂದೆ "**ಮನಶ್ಚೇಷ್ಟಾಪ್ರತ್ಯಯಭೂತಮಿಂದ್ರಿ ಯಾಣಾಂ**" ಎಂದು ಹೇಳಿದ್ದಾರೆ.

# ಮನೋಬುದ್ಧಿಯ ವಿವರಣೆಯು

ಚಕ್ಷುರಾದಿ ಇಂದ್ರಿಯ ಬುದ್ಧಿಗಳಂತೆ ಮನಸ್ಸಿಗೂ "ಮನೋಬುದ್ಧಿ" ಇರುತ್ತದೆ. "ಮನೋಬುದ್ಧಿಯು" ಇಂದ್ರಿಯ ಅರ್ಥಗಳ (ಗ್ರಾಹ್ಯ) ಸನ್ನಿಕರ್ಷವಿಲ್ಲದೇ ಸಹ ಉತ್ಪನ್ನವಾಗುತ್ತದೆ. ಅರ್ಥಾತ್ ಮನಸ್ಸಿನ ಚಿಂತ್ಯಾದಿ (ಅರ್ಥ)ಗಳ ನಿರ್ಣಯವು ಮನೋಬುದ್ಧಿಯಿಂದಾಗುತ್ತದೆ. ಮನಸ್ಸಿಗೆ ಗ್ರಾಹ್ಯ (ಅರ್ಥ) ವಿಷಯದಲ್ಲಿ ಚಕ್ಷುರಾದಿ ಇಂದ್ರಿಯಗಳ ಸಾನ್ನಿಧ್ಯದ ಅವಶ್ಯಕತೆಯಿಲ್ಲ. ಆದ್ದರಿಂದ ಮನಸ್ಸು ಸ್ವತಂತ್ರವೆಂದೂ, ಒಂದು ಕ್ಷಣದಲ್ಲಿ ಚಿಂತ್ಯ ವಿಷಯವನ್ನು ಎಷ್ಟೇ ದೂರವಿದ್ದರೂ ಗ್ರಹಿಸುವವರಿಂದ; ವಿಷಯ ಸನ್ನಿಕರ್ಷಾಭಾವದಲ್ಲಿಯೂ ಮನಸ್ಸಿನ ವರ್ತನವಿರುವವರಿಂದ "ಅತೀಂದ್ರಿಯ"ವೆಂದೂ ಅನ್ನುತ್ತಾರೆ. ಜೀವಕ್ಕೆ ಸೂಕ್ಷ್ಮವಾಗಿ ಆವರಿಸಿರುವದರಿಂದ ಲಿಂಗಶರೀರವೆಂದೂ, ದೇಹಪಡೆಯಲು ಈ ಲಿಂಗಶರೀರ ಸ್ವರೂಪವಾದ ಮನಸ್ಸಿನ ಆವರಣೆಯೇ ಮುಖ್ಯವಾದ್ದರಿಂದ ಧಾರಿಯೆಂದೂ, ಅಥವಾ ದೇಹವು ಮನಸ್ಸಿನಿಂದಲೇ ಧರಿಸಲ್ಪಡುವದರಿಂದ ದೇಹಧಾರಣೆಯ ವಿಷಯದಲ್ಲಿ ಪ್ರಾಮುಖ್ಯವೆಂದು ಸಿದ್ಧವಾಗಿರುತ್ತದೆಂದೂ, ನಿರ್ಣಯಿಸಿದ್ದಾರೆ. ಸುಖ ದುಃಖಾದಿಗಳು ಅತೀಂದ್ರಿಯವಾಗಿರುತ್ತವೆ. ಅವುಗಳನ್ನು ಮನಸ್ಸು ಗ್ರಹಿಸಿ ಸ್ವೀಕಾರಮಾಡಿಸುತ್ತದಾದ್ದರಿಂದಅತೀಂದ್ರಿಯವೆಂದು ಸಿದ್ಧವಾಗಿದೆ ಮನೋಗ್ರಹೀತವಾಗಿರುವದರ ನಿರ್ಣಯವಾಗುವದರಿಂದ, ಮನೋಬುದ್ಧಿಯು ಇರುತ್ತದೆಂದು ಹೇಳಿದ್ದಾರೆ. ಮನಸ್ಸು ಮನೋಬುದ್ಧಿಗಳಿಗೆ ಮನೋಽರ್ಥದ ಸಮಯೋಗ, ಅತಿಯೋಗ, ಹೀನಯೋಗ, ಮಿಥ್ಯಾಯೋಗಗಳು, ಯೋಗ್ಯ ಸಮಾನವಾದ ಪ್ರಕೃತಿ ಸ್ಥಿತಿಯಲ್ಲಿಡಲಿಕ್ಕೂ, ವಿಕೃತಿ ಸ್ಥಿತಿ ಹೊಂದಿಸಲಿಕ್ಕೂ ಕಾರಣವಾಗುತ್ತವೆ. ಸಮಾನ ಸ್ಥಿತಿಯಿಂದ ಆರೋಗ್ಯವೂ ವಿಕೃತಿಯಿಂದ ಅನಾರೋಗ್ಯವೂ ಪ್ರಾಪ್ತವಾಗುವದರಿಂದ, ಮಾನಸಿಕ ಸ್ವಾಸ್ಥ್ಯ ಮಾನಸಿಕ ರೋಗಗಳ ವಿಷಯದಲ್ಲಿ ಅವಶ್ಯವಿರುವದರಿಂದ ಪ್ರತಿಪಾದಿಸಿದ್ದಾರೆ. ರೋಗ ವಿಭಾಗದಲ್ಲಿ ಮನಸ್ಸನ್ನಾಶ್ರಯಿಸಿ ಉತ್ಪನ್ನವಾಗುವ ರೋಗಗಳಿರುವದರಿಂದ ಮನಸ್ಸನ್ನು ಆಮೂಲಾಗ್ರವಾಗಿ ತಿಳಿಯುವದು ಅವಶ್ಯವೆಂದು, ರೋಗಾಧಿಷ್ಠಾನ ವಿಷಯದಲ್ಲಿ ವಿವರಿಸಿದ್ದಾರೆ. ಮನಸ್ಸನ್ನು ಆಶ್ರಯಿಸಿಉತ್ಪನ್ನವಾಗುವ

ರೋಗಗಳಿಗೆ "ಮಾನಸಾಃ" ಮಾನಸಿಕಾಃ, ಮನೋಽಧಿಷ್ಠಾನಾಃ, ಮುಂತಾಗಿ ಹೇಳಿದ್ದಾರೆ ಮಾನಸಿಕ ರೋಗಗಳಿಗೆ ಕಾಮಕ್ರೋಧಲೋಭಾದಿಗಳು, ಉತ್ಪನ್ನವಾಗಲಿಕ್ಕೆ ಕಾರಣವು. ಮಾನಸಿಕ ರೋಗಿಯ ರೋಗವನ್ನು ದೈಹಿಕ ರೋಗ ಚಿಕಿತ್ಸೆಯಂತೆ ನಡೆಸಿದರೆ, ರೋಗನಿವಾರಣೆಯಾಗಲಾರದು. ಮೂಲ ಕಾರಣವನ್ನುತಿಳಿದುಮನೋಽಪಘಾತವಾಗಿದ್ದರೆ ಪ್ರತಿಕ್ರಿಯೆಯನ್ನು ಯೋಜಿಸಿದರೆ, ರೋಗ ನಿವಾರಣೆಯಾಗಿದ್ದರ ಉದಾಹರಣೆ ಅನೇಕ ಇವೆ. ಇದನ್ನು ವಿವರಿಸಲಿಕ್ಕಾಗಿಯೇ ಆಯುರ್ವೇದದಲ್ಲಿ ಮನೋ ವಿಷಯವನ್ನು ವಿಶದವಾಗಿ ವಿವರಿಸಿದ್ದಾರೆ. ಮನಸ್ಸಿಗೆ ಸ್ಥಾನವಾದ ಹೃದಯ ವಿಷಯದಲ್ಲಿ ಹಿಂದೆ ವಿವರಿಸಿದಂತೆ, ಮನಸ್ಸಿನ ಆಘಾತವು ಹೃದಯದ ಮೇಲೆ ಪರಿಣಾಮವಾಗುವದು.

ಮನಸಸ್ತು ಚಿಂತ್ಯಮರ್ಥಃ॥ ತತ್ರಮನಸೋಮನೋಬುದ್ಧೇಶ್ಚ ತಏವಸಮಾನಾತಿಹೀನಮಿಥ್ಯಾಯೋಗಾಃಪ್ರಕೃತಿವಿಕೃತಿಹೇತವೋಭವಂತಿ॥ ಇಂದ್ರಿಯನಿರಪೇಕ್ಷಂಮನೋಯದ್ಗೃಹ್ಣಾತಿತಚ್ಚಿಂತ್ಯಂ॥ ಯದಿವಾ,ಇಂದ್ರಿಯಗೃಹೀತಮೇವಾರ್ಥಂಯತ್ಪುನರಿಂದ್ರಿಯನಿರಪೇಕ್ಷಂ ಮನೋಗೃಹ್ಣಾತಿತಚ್ಚಿಂತ್ಯಮ್॥
(ಚರಕ॥ ಇಂ, ಸ್ಥಾ, ಅ ೮)

ಮನಸ್ಸಿಗೆ ಗ್ರಾಹ್ಯವಾದದ್ದು (ಚಿಂತ್ಯವಾಗಿರುವದು) ಅರ್ಥವು. ಚಕ್ಷುರಾದಿ ಇಂದ್ರಿಯ ನಿರಪೇಕ್ಷೆಯಿಂದ ಮನಸ್ಸುಯಾವದನ್ನು ಗ್ರಹಿಸುತ್ತದೆಯೋ ಅದು ಚಿಂತ್ಯವು. ಅಥವಾ ಮೊದಲು ಇಂದ್ರಿಯ ಸಾನ್ನಿಧ್ಯದಿಂದ ಗ್ರಹಿಸಿರುವದನ್ನು, ತಿರುಗಿ ಇಂದ್ರಿಯನಿರಪೇಕ್ಷೆಯಿಂದ ಮನಸ್ಸು ಸ್ವಯಂ ಗ್ರಹಿಸುವದು ಸಹಚಿಂತ್ಯವು. ಅರ್ಥಾತ್ ಮನಸ್ಸು ಮನೋ ವಿಷಯವನ್ನು ಸ್ವತಂತ್ರವಾಗಿ ಗ್ರಹಿಸುತ್ತದೆಂದು ನಿಶ್ಚಯಾರ್ಥವು. ಮನಸ್ಸಿನಿಂದ ಗ್ರಹೀತವಾದ ಅರ್ಥದ ನಿರ್ಣಯವು, ಮನೋಬುದ್ಧಿಯಿಂದ ಮಾಡಲ್ಪಡುತ್ತದೆ. ಮನೋಗ್ರಹೀತದ ಅರ್ಥ ಸಮಹೀನ ಅತಿಮಿಥ್ಯಾ ಯೋಗಗಳು, ಮನಸ್ಸು ಮತ್ತು ಮನೋಬುದ್ಧಿಯು ಯೋಗ್ಯ ಇರಲಿಕ್ಕೂ, ವಿಕೃತಿ ಹೊಂದಲಿಕ್ಕೂ ಕಾರಣವಾಗುತ್ತವೆ. ಇದರಿಂದ ಪಂಚೇಂದ್ರಿಯ ಬುದ್ಧಿಗಳಂತೇ ಮನೋಬುದ್ಧಿಯು ಇರುತ್ತದೆಂದು ನಿಶ್ಚಯವಾಗುತ್ತದೆ

# ಇಂದ್ರಿಯ ಬುದ್ಧಿಗಳ ವಿವರಣೆಯು

**ಯಾಯದಿಂದ್ರಿಯ ಮಾಶ್ರಿತ್ಯ ಜಂತೋರ್ಬುದ್ಧಿಃ ಪ್ರವರ್ತತೆ॥ ಯಾತಿಸಾತೇನ ನಿರ್ದೇಶಂ ಮನಸಾಚ ಮನೋಭವಾ ॥೩೨॥ ಭೇದಾತ್ ಕಾರ್ಯೇಂದ್ರಿಯಾರ್ಥಾನಾಂ ಬಹ್ವ್ಯೋವೈಬುದ್ಧಯಃಸ್ಮೃತಾಃ ॥ ಆತ್ಮೇಂದ್ರಿಯ ಮನೋರ್ಥಾನಾಂ ಏಕೈಕಾ ಸನ್ನಿಕರ್ಷಜಾ ॥** (ಚರಕ॥ ಶಾರೀರ॥ ಅ ೧ ಶ್ಲೋ ೩೩)

ಯಾವ ಇಂದ್ರಿಯವನ್ನು ಆಶ್ರಯಿಸಿ ಬುದ್ಧಿಯು ಉತ್ಪನ್ನವಾಗುತ್ತದೆಯೋ, ಆ ಬುದ್ಧಿಯು ಆ ಇಂದ್ರಿಯ ಹೆಸರಿನಿಂದ ನಿರ್ದೇಶ ಮಾಡಿ ಹೇಳಲ್ಪಟ್ಟಿರುತ್ತದೆ ಚಕ್ಷುರಾದಿ ಬುದ್ಧಿಗಳು ಆಶ್ರಯೇಂದ್ರಿಯ ಹೆಸರಿನಿಂದಲೇ ಹೇಳಲ್ಪಟ್ಟಿರುತ್ತವೆ ಚಕ್ಷುರ್ಬುದ್ಧಿಃ ಶ್ರೋತ್ರಬುದ್ಧಿಃರಸನಬುದ್ಧಿಃ ಘ್ರಾಣೇಂದ್ರಿಯ ಬುದ್ಧಿಃ ಸ್ಪರ್ಶೇಂದ್ರಿಯ ಬುದ್ಧಿಃ ಹೀಗೆ ಇಂದ್ರಿಯ ಬುದ್ಧಿಗಳು ಐದು ಇರುತ್ತವೆ. ಮನಸ್ಸಿನಿಂದುತ್ಪನ್ನವಾದ ಬುದ್ಧಿಯು ಮನೋಬುದ್ಧಿಯು. ಗ್ರಾಹ್ಯ (ಕಾರ್ಯ) ಇಂದ್ರಿಯಗಳ ಭೇದದಿಂದ, ಬಹು ಬುದ್ಧಿಗಳಾಗುತ್ತವೆ.

ಇಂದ್ರಿಯ, ಅರ್ಥ, (ಗ್ರಾಹ್ಯ) ಕಾರ್ಯ ಇವುಗಳ ಭೇದಗಳಿಂದ, ಬಹು ಬುದ್ಧಿಗಳಿರುತ್ತವೆಂದು ಹೇಳಲ್ಪಟ್ಟಿರುತ್ತವೆ. ಆತ್ಮ, ಇಂದ್ರಿಯ, ಮನಸ್ಸು, ಅರ್ಥಗಳ ಸನ್ನಿಕರ್ಷದಿಂದ, ಒಂದೊಂದು ಇಂದ್ರಿಯಕ್ಕೆ ಒಂದೊಂದು ಬುದ್ಧಿಯುತ್ಪನ್ನವಾಗುತ್ತದೆ. ಇಲ್ಲಿ ಕಾರ್ಯವೆಂದರೆ ಇಂದ್ರಿಯ ಗ್ರಾಹ್ಯ ಅರ್ಥವೆಂದು ತಿಳಿಯಬಾರದು. ಸುಖ ದುಃಖಾದಿ ಪ್ರಭೇದಗಳಿಂದ ಅಥವಾ ಸುಖಾದಿ ಸಮುದಾಯಾತ್ಮಕದಲ್ಲಿಯ ಕಾರ್ಯದಿಂದ, ಕಾರಣವಾದ ಬುದ್ಧಿಯೂ ಅನೇಕವಾಗುತ್ತವೆ. ದುಃಖದಲ್ಲಿಯ ದ್ವೇಷಾತ್ಮಕವಾಗಿ ಇಷ್ಟವಲ್ಲವೆಂಬುವ ಬುದ್ಧಿಯೂ, ಸುಖದಲ್ಲಿ ಇನ್ನೂ ಬೇಕೆಂಬಬುದ್ಧಿಯೂ ಉತ್ಪನ್ನವಾಗುವದರಿಂದ; ಬುದ್ಧಿ ಬೇಧಗಳ ೂ ಸುಖದುಃಖಾನುಸಾರ ಭಿನ್ನವಾಗಿರುತ್ತವೆಂದು ಸೂಚಿತವಾಗುತ್ತವೆ. ಕಾರ್ಯವೆಂದರೆ ಸುಖ ದುಃಖಾದಿ ಅನೇಕ ಪ್ರಭೇದವುಳ್ಳವುಗಳು. ಇವಕ್ಕೆ ಕಾರಣವಾದ ಬುದ್ಧಿಗಳು ಬಹಳವಿರುವದ

ರಿಂದ, ಬಹು ಬುದ್ಧಿಗಳಿರುತ್ತವೆಂದು ಹೇಳುತ್ತಾರೆ. ಚಕ್ಷುರಾದೀಂದ್ರಿಯ ಬುದ್ಧಿಗಳು (೫), ಮನೋಬುದ್ಧಿ (೧), ಸುಖ ದುಃಖಾದಿ ಪ್ರಭೇದದಿಂದ ಮನೋಬುದ್ಧಿಯು ಅನೇಕ ಪ್ರಭೇದವುಳ್ಳದ್ದಾಗುತ್ತದೆ ಮುಖ್ಯವಾಗಿ (೬) ಬುದ್ಧಿಗಳೆಂದು ಸಾಮಾನ್ಯ ನಿರ್ವಚನ ಮಾಡಿದ್ದಾರೆ.

**ಮನೋ ಮನೋಽರ್ಥೋಽಬುದ್ಧಿರಾತ್ಮಾ ಚೇತ್ಯಧ್ಯಾತ್ಮದ್ರವ್ಯಗುಣಸಂಗ್ರಹಃಶುಭಾಶುಭಪ್ರವೃತ್ತಿನಿವೃತ್ತಿಹೇತುಶ್ಚ,ದ್ರವ್ಯಾಶ್ರಿತಂ ಕರ್ಮಯದುಚ್ಯತೇ ಸಾಕ್ರಿಯೇತಿ ||**
(ಚರಕ|| ಇಂ. ಅ ೮)

ಮನಸ್ಸು, ಮನೋಅರ್ಥ ( ಸುಖಾದಿಗಳು ಮತ್ತು ಗ್ರಾಹ್ಯವಾದವುಗಳು ), ಮನೋಬುದ್ಧಿ (ಮನೋಗ್ರಹಿತವಾದದ್ದನ್ನು ನಿರ್ಣಯಿಸುವದು), ಆತ್ಮಾ (ಜೀವನು), ಇವುಗಳು ಆತ್ಮವನ್ನುದ್ದೇಶಿಸಿ ವಿಶದೀಕರಿಸಿದ ದ್ರವ್ಯ ಗುಣಗಳು ಚಕ್ಷುರಾದೀಂದ್ರಿಯ ಬುದ್ಧಿ, ಮನೋಬುದ್ಧಿಗಳು, ಗುಣಗಳು, ಉಳಿದವು ದ್ರವ್ಯಗಳು ಹೀಗೆ ಆತ್ಮನ ಸಂಬಂಧಿಯಾದ ದ್ರವ್ಯಗುಣ ಸಂಗ್ರಹವನ್ನು ಹೇಳಿದ್ದಾರೆ

" **ಆತ್ಮಾನಮ್ ಅಧಿಕೃತ್ಯೇತಿ ಅಧ್ಯಾತ್ಮಂ** " ಆತ್ಮನಿಗೆ ದ್ರವ್ಯ ಗುಣಾದಿ ಸಂಗ್ರಹಗಳು, ಅಪಕಾರಕ ಉಪಕಾರಕವಾದವುಗಳೂ ಆಗುತ್ತವೆ. ಈ ಸಂಗ್ರಹಗಳು ಶುಭವಾದದ್ದು ಧರ್ಮ ಸುಖಕ್ಕೆ ಕಾರಣವಾದರೆ, ಅಶುಭ ಅಧರ್ಮ ರೂಪ ದುಃಖ ನಿವೃತ್ತಿಯಾಗುತ್ತದೆ ಆದ್ದರಿಂದ ಶುಭಾಶುಭವಾದ ಪ್ರವೃತ್ತಿ ನಿವೃತ್ತಿಗಳಿಗೆ ಕಾರಣವಾದದ್ದು, ಅಧ್ಯಾತ್ಮ ದ್ರವ್ಯಗುಣ ಸಂಗ್ರಹವೆಂದು ಹೇಳಿದ್ದಾರೆ. ಈಗ ಹೇಳಿದ ಶುಭವಾಗಿರುವ ದ್ರವ್ಯಗುಣ ಸಂಗ್ರಹಗಳು ಮೋಕ್ಷಕ್ಕೂ, ತದ್ಭಿನ್ನವಾದ ಅಧರ್ಮವು ದುಃಖವುಳ್ಳ ಸಂಸಾರಕ್ಕೆ ಕಾರಣವಾಗುತ್ತದೆ. ಆದ್ದರಿಂದ ದ್ರವ್ಯಾಶ್ರಿತವಾದ ಯಾವ ಕರ್ಮವಿದೆಯೋ, ಅದಕ್ಕೆ ಕ್ರಿಯಾ ಎಂದು ಹೇಳಿದ್ದಾರೆ. ಸುಖ ಪ್ರಾಪ್ತಿಯನ್ನು ಧರ್ಮದಿಂದ ಪಡೆಯುವಕ್ರಿಯಾ, ಅದರಂತೆ ದುಃಖಕ್ಕೆ ಕಾರಣವಾದ ಅಧರ್ಮವನ್ನು ನಿವಾರಿಸುವ ಕ್ರಿಯಾ ಇವು, ಯೋಗ್ಯವಾದ ದ್ರವ್ಯ ಕ್ರಿಯೆಯು ಇರ

ತ್ತವೆ. ಇಲ್ಲಿ ಕೇವಲ ಕರ್ಮ ಪದವನ್ನಿಟ್ಟರೆ ಪಮಃಸಾದಿಗಳಲ್ಲಿ ಅತಿ ವ್ಯಾಪ್ತಿ ಸಂಭವವಾಗುವದರಿಂದ, ದ್ರವ್ಯವೆನ್ನುವ ಪದವನ್ನು ಇಟ್ಟಿದ್ದಾರೆ ಕರ್ಮವೆಂದರೆ "ಧರ್ಮಾಧರ್ಮೌ ಜನ್ಮಾಂತರ ಕರ್ಮವಾಚಿನೌ" ಎಂದು ಹೇಳಿರುವದರಿಂದ ಧರ್ಮಾಧರ್ಮಗಳಲ್ಲಿ ಅತಿವ್ಯಾಪ್ತಿ ಸಮಾವೇಶವಾಗುವದರಿಂದ, ಕ್ರಿಯಾ ಎಂಬ ಪದವನ್ನಿಟ್ಟಿದ್ದಾರೆ. ಇದು ಕೇವಲ ಶಾಸ್ತ್ರೀಯ ಪದವಾದ್ದರಿಂದ ಶಾಸ್ತ್ರಾಭ್ಯಾಸ ಮಾಡಿದವರೇ, ಅವಯವಾರ್ಥ ಮಾಡಬೇಕು. ಅಭಿಪ್ರಾಯಾರ್ಥವು ಸರ್ವರಿಗೂ ಗೋಚರಿಸುವಂತೆಯೇ ಇದೆ.

## ವಿವರಣೆ

ದ್ರವ್ಯಾಶ್ರಿತ ಕ್ರಿಯೆಯ ಹೀನಾತಿಯೋಗ ಮಿಥ್ಯಾ ಯೋಗಗಳಿಂದ ವಿಕೃತಿಯೂ, ಸಮಯೋಗದಿಂದ ಪ್ರಕೃತಿಯೂ, ಎಂದು ವರ್ಣಿಸಿದ್ದಾರೆ. ಇಲ್ಲಿ ಅಧ್ಯಾತ್ಮದ್ರವ್ಯ ಗುಣಗಳಸಂಗ್ರಹವನ್ನು ಹೇಳಿರುವದರಿಂದ, ಆ ಸಂಗ್ರಹದಲ್ಲಿ ವಿಕೃತಿಯಾಗಲಿಕ್ಕೆ ಕಾರಣವೆಂದು ತಿಳಿಯಬೇಕು.

## ಹೀನಾತಿಯೋಗಾದಿಗಳ ವಿವರಣೆಯು

**ತದರ್ಥಾತಿ ಯೋಗಾಯೋಗಮಿಥ್ಯಾಯೋಗಾತ್ ಸಮನಸ್ಕಮಿಂದ್ರಿಯಂವಿಕೃತಿಮಾಪದ್ಯಮಾನಂ ಯಥಾಸ್ವಂಬುದ್ಧ್ಯುಪಘಾತಾಯಸಂಪದ್ಯತೆ, ಸಮಯೋಗಾತ್ ಪುನಃ ಪ್ರಕೃತಿಮಾಪದ್ಯಮಾನಂ ಯಥಾಸ್ವಂ ಬುದ್ಧಿಮಾಪ್ಯಾಯಯತಿ ॥**
(ಇಂದ್ರಿಯ॥ ಸ್ಥಾ. ಅ ೮)

"**ತದರ್ಥ**"ವೆಂದರೇ ಇಂದ್ರಿಯಾರ್ಥವಾದ ರೂಪಾದಿಗಳು. "**ಅತಿಯೋಗ**" ರೂಪಾದಿಗಳನ್ನು ಅತಿಶಯವಾಗಿ ನೋಡುತ್ತಿರುವದು. "**ಅಯೋಗ**" ಸ್ವಲ್ಪಪ್ರಮಾಣದಿಂದ ಅಥವಾ ಅರೆಗಣ್ಣಿನಿಂದನೋಡುವದು, ಹೀನ ಪ್ರಮಾಣರೂಪಾದಿಗಳನ್ನು ಗ್ರಹಿಸುವದು. ಇಲ್ಲವೇ ಎಲ್ಲೆಡೆಯಲ್ಲಿಯೂ ರೂಪಾದಿ ದರ್ಶನವಾಗದೇ ಇರುವದಕ್ಕೂ, ಅಯೋಗವೆಂದು ಹೇಳುತ್ತಾರೆ "**ಅಯೋಗ**" ಹೀನಯೋಗ, ಯೋಗವಿಲ್ಲದೇ ಇರುವಿಕೆಗಳು. "**ಮಿಥ್ಯಾ**

ಯೋಗ" ವಿಕೃತ ಬೀಭತ್ಸ ಭಯಾನಕ ದೃಶ್ಯಾದಿಗಳನ್ನು ನೋಡುವದು, ಅತಿಯೋಗಾದಿಗಳಿಂದ ಮನೋಯುಕ್ತ ಚಕ್ಷುರಾದಿ ಇಂದ್ರಿಯಗಳು; ವಿಕೃತಿಯನ್ನು ಹೊಂದತಕ್ಕವುಗಳಾಗಿ, ತಮ್ಮ ಬುದ್ಧಿಗಳಿಗೆ ವೇದನೆಯನ್ನುಂಟು ಮಾಡುತ್ತವೆ. ಹೀಗೆ ಹೀನಾದಿಯೋಗಗಳಿಂದಾಗುವ ವಿಕೃತಿಯನ್ನು ದರ್ಶಿಸುತ್ತಾರೆ. ಪುನಃ "**ಸಮಯೋಗದಿಂದ**" ಇಷ್ಟವಾದ ಯೋಗ್ಯ ವರ್ತನೆಯಿಂದ ಪೂರ್ವದ ಪ್ರಕೃತಿ ಸ್ಥಿತಿಯನ್ನು ಹೊಂದಿದ ಸಮನಸ್ಕ ಇಂದ್ರಿಯಗಳು, ಸ್ವಕೀಯ ಬುದ್ಧಿಗಳನ್ನು ಸಾಮ್ಯ ಸ್ಥಿತಿಯಲ್ಲಿರುವಂತೆ ಮಾಡುತ್ತವೆ. ಅಥವಾ ಯೋಗ್ಯಕರ್ತವ್ಯವನ್ನು ಬುದ್ಧಿಯು ನಿರ್ವಹಿಸುವಂತೇ ಮಾಡುತ್ತವೆಂಬರ್ಥವು ಮಾನಸಿಕ ರೋಗಗಳು ಮನಸ್ಸು ಇಂದ್ರಿಯಗಳಿಗೆ ಉಪತಾಪಕವಾಗಿ ದೇಹವನ್ನೂ ಆಶ್ರಯಿಸುತ್ತವೆ. ಆದ್ದರಿಂದ ಶಾರೀರಕವಾದ "**ವಾತ ಪಿತ್ತ ಕಫ ಶೋಣಿತ ಸಂನಿಪಾತ ವೈಷಮ್ಯನಿಮಿತ್ತ**"ದಿಂದುತ್ಪನ್ನವಾದ ರೋಗಗಳೋ? ಮಾನಸಿಕವೋ? ಎಂದು ತಿಳಿಯುವದು ದುಜ್ಞೇಯವಾದ ವಿಷಯವಾದ್ದರಿಂದ ಅವುಗಳ ತಿಳುವಳಿಕೆಗಾಗಿ, ವಿಶದವಾಗಿ ಮನೋಧಿಷ್ಠಿತ ಇಂದ್ರಿಯ ಬುದ್ಧ್ಯಾದಿಗಳನ್ನು ವಿವರಿಸಿದ್ದಾರೆ. ವಿಕೃತಿಗೆ ಕಾರಣವಾದ ಹೀನಾತಿಯೋಗಗಳನ್ನೂ, ಪ್ರಕೃತಿಗೆ ಕಾರಣವಾದ ಸಮಯೋಗವನ್ನೂ ದರ್ಶಿಸಿದ್ದಾರೆ. ಶಾರೀರದಲ್ಲಿಯ ಈ ಲಕ್ಷಣದಿಂದ ಮಾನಸಿಕ ರೋಗ ಚಿಕಿತ್ಸೆಗೆ ಅನುಕೂಲವಾಗುತ್ತದೆ.

## ಮನಸ್ಸಿನ ಸ್ಥಿತಿ

**ಅಚೇತನಂ ಕ್ರಿಯಾವಚ್ಚ ಮನಶ್ಚೇತಯಿತಾಪರಃ ||**
**ಯುಕ್ತಸ್ಯ ಮನಸಾತಸ್ಯ ನಿರ್ದಿಶ್ಯಂತೆ ವಿಭೋಃ ಕ್ರಿಯಾಃ ||೭೫||**
**ಚೇತನಾವಾನ್ ಯತಶ್ಚಾತ್ಮಾ ತತಃ ಕರ್ತಾನಿರುಚ್ಯತೆ ||**
**ಅಚೇತನತ್ವಾಚ್ಚ ಮನಃ ಕ್ರಿಯಾವದಪಿ ನೋಚ್ಯತೆ ||**
(ಚರಕ|| ಶಾರೀರ|| ಅ ೧)

ಮನಸ್ಸು ಚೇತನಾರಹಿತವೂ ಕ್ರಿಯಾಉಳ್ಳದ್ದೂ ಇರುತ್ತದೆ. ಇಂಥ ಮನಸ್ಸನ್ನು ಪ್ರೇರಿಸುವವನು (ಚೇತನೆಯನ್ನುಂಟು ಮಾಡುವವನು)ಆತ್ಮನು.

ಮನಸ್ಸಿನಿಂದ ಯುಕ್ತವಾದ ಆತ್ಮನ ಕ್ರಿಯೆಗಳಿಗೆ, ವಿಭುವಿನ (ಆತ್ಮನ) ಕ್ರಿಯಾ ಎಂದು ಹೇಳುತ್ತಾರೆ. ವಸ್ತುತಃ ಕ್ರಿಯೆಗಳು ಮನಸ್ಸಿನವೇ ಇರುತ್ತವೆ. ಅಚೇತನವಾದ ಮನಸ್ಸಿಗೆ ಆತ್ಮನು ಚೇತನೆಯನ್ನುಂಟು ಮಾಡುವದರಿಂದ ಆತ್ಮನಿಂದಲೇ ಮನಸ್ಸಿನ ಕ್ರಿಯಾರಂಭವಾಗುವದು ಹೀಗಿರುವದರಿಂದ ಆತ್ಮ ಚೇತನಾ ವಿಶಿಷ್ಟವಾದ ಮನಸ್ಸಿನ ಕ್ರಿಯೆಯು, ಆತ್ಮ ಕ್ರಿಯೆಯೆನ್ನುವದು ಉಪಚಾರೋಕ್ತಿಯೆಂದು ಹೇಳಿದ್ದಾರೆ ಇದರಿಂದ ಮನಸ್ಸು ಅಚೇತನವೆಂದೂ ಆತ್ಮವನ್ನಾಶ್ರಯಿಸಿ ಚೇತನಾ ಯುಕ್ತವಾಗಿ, ಕ್ರಿಯಾ ಮಾಡುತ್ತದೆಂದೂ ಸಿದ್ಧವಾಗುತ್ತದೆ ಆತ್ಮನು (ಜೀವನು) ಕ್ರಿಯಾರಹಿತನಿದ್ದು ಮನೋಯೋಗದಿಂದ ಮನಸ್ಸನ್ನು ಪ್ರೇರಿಸಿ ಕ್ರಿಯಾ ಮಾಡಿಸುತ್ತಾನೆಂದು ಹೇಳಿದ್ದಾರೆ ಚೇತಕನಾದ ಆತ್ಮನಿಂದ ಆಶ್ರಯ (ಆತ್ಮಾಧಿಷ್ಠಿತ) ವಾದ ಮನಸ್ಸು ಕ್ರಿಯಾ ಪ್ರವೃತ್ತವಾಗುತ್ತದೆ ಆತ್ಮನು ಮನಸ್ಸನ್ನುಕೂಡದಿದ್ದರೆ, ಮನಸ್ಸಿನಿಂದ ಕ್ರಿಯಾಪ್ರವರ್ತನೆಯಾಗಲಾರದು. "ಕ್ರಿಯಾವತ್" ಮನಸ್ಸ ಕ್ರಿಯಾವುಳ್ಳದ್ದೆಂದು ತಿಳಿಯಬೇಕೇವಿನಾ, ಮನಸ್ಸು ಸ್ವಯಂಕರ್ತೃತ್ವವುಳ್ಳದ್ದೆಂದು ತಿಳಿಯಬಾರದು ಆದ್ದರಿಂದಲೆ ಆತ್ಮನ ಕ್ರಿಯೆ ಯೆಂದು ಹೇಳಿದ್ದಾರೆ. ಅಚೇತನ ಪರಾಧೀನವಾದ ಮನಸ್ಸಿನ ಕ್ರಿಯೆಯ ಸಂಭವವು ಆತ್ಮ ಸಕಾಶದಿಂದ ಆಗುವದರಿಂದ, ಸ್ವಯಂ ಕರ್ತೃತ್ವವುಮನಸ್ಸಿಗೆ ಇರುವದಿಲ್ಲ ಆತ್ಮನು ಚೇತಕನು (ಚೇತನೆಯುಳ್ಳವನು) ಆಗಿರುವದರಿಂದ, ಕರ್ತೃವೆಂದು ಹೇಳಲ್ಪಡುತ್ತಾನೆ ಮನಸ್ಸು ಅಚೇತನ (ಚೇತನಾ ರಹಿತ) ವಾದ್ದರಿಂದ ಕ್ರಿಯಾವುಳ್ಳದ್ದಿದ್ದರೂ, ಕರ್ತೃವೆಂದು ಗ್ರಹಿಸಲ್ಪಡುವದಿಲ್ಲ. ಯಾಕಂದರೆ ಆತ್ಮನಿಂದ ಚೇತನೆಯನ್ನು ಪಡೆಯುವದರಿಂದ, ಮನಸ್ಸು ಸ್ವಚೇತನೇ ಇಲ್ಲದ್ದಿರುತ್ತದೆ

## ಜೀವದ ವಿಷಯದಲ್ಲಿಯ ವಿಶೇಷ

ಬುದ್ಧಿ, ಮನಸ್ಸು ಮೊದಲಾದವುಗಳು ಜೀವಾಧಿಷ್ಠಿತ ದೇಹದಲ್ಲಿ ಜೀವ (ಆತ್ಮ) ನಿಂದ ಯುಕ್ತವಾಗಿ, ಸರ್ವ ಕ್ರಿಯಾ ಸಾಧಕವಾಗಿರುತ್ತವೆಂದು ಹಿಂದೆ ವಿವರಿಸಿದ್ದೇನೆ. ಇವೆಲ್ಲವುಗಳ ಮತ್ತು ದೇಹದ ಯೋಗ್ಯ ಸಂಯೋಗ ಧಾರಣೆಗೆ ಜೀವನವೆಂಬ ಹೆಸರು. ಸಂಯೋಗ ಧಾರಣೆಯು ಜೀವನವಿರು

ವದರಿಂದ, ಸಂಯೋಗ ಭೇದವೇ ಮರಣವು. ಮರಣದಲ್ಲಿ ಯಾವ ವಿಧವಾದ ಕ್ರಿಯಾಚೈತನ್ಯಾದಿಗಳಿರದೇ ಕೇವಲಭೂತಾತ್ಮಕವಿರುವದರಿಂದ,ಭೌತಿಕಭಿನ್ನ ವಾಗಿರುವದೆಲ್ಲವೂ ದೇಹದಲ್ಲಿ ಆತ್ಮಾದಿಗಳಸಂಬಂಧವಾದದ್ದೆಂದುಹೇಳಿದ್ದಾರೆ ಪರಿಶೇಷ ನ್ಯಾಯದಿಂದ ಹೀಗೆ ನಿರ್ಣಯ ಮಾಡಿರುವದರಿಂದ, ಜೀವಿತ ಜೀವ ರಹಿತಲಕ್ಷಣವೂ ಕ್ರಿಯಾಕ್ರಮಾದಿಗಳಪರಿಚ್ಛೇದವೂ ಸಿದ್ಧವಾದಂತಾಯಿತು.

**ಪ್ರಾಣಾಪಾನೌನಿಮೇಷಾದ್ಯಾಜೀವನಂಮನಸೋಗತಿಃ ||**
**ಇಂದ್ರಿಯಾಂತರ ಸಂಚಾರಃ ಪ್ರೇರಣಂ ಧಾರಣಂ ಚಯತ್ ||**
**ದೇಶಾಂತರಗತಿಃ ಸ್ವಪ್ನೇ ಪಂಚತ್ವಗ್ರಹಣಂ ತಥಾ ||**
**ದೃಷ್ಟಸ್ಯ ದಕ್ಷಿಣೇನಾಕ್ಷ್ಣಾಸವ್ಯೇನಾವಗಮಸ್ತಥಾ ||**
**ಇಚ್ಛಾದ್ವೇಷಃ ಸುಖಂ ದುಃಖಂ ಪ್ರಯತ್ನಶ್ಚೇತನಾಧೃತಿಃ ||**
**ಬುದ್ಧಿಸ್ಮೃತಿರಹಂಕಾರೋ ಲಿಂಗಾನಿ ಪರಮಾತ್ಮನಃ ||**
**(ಚರಕ|| ಶಾರೀರ|| ಅ ೧ ಶ್ಲೋ ೭೨)**

ಪ್ರಾಣಾಪಾನಗಳು, ಉಚ್ಛ್ವಾಸನಿಃಶ್ವಾಸ, ನಿಮೇಷೋನ್ಮೇಷಗಳೂ, ಮತ್ತು ಜೀವಿಸುವಂತೇ ಮಾಡುವದೂ, ಅಚೇತನವಾದ ಮನಸ್ಸಿಗೆ ಚೇತನೆ ಯನ್ನುಂಟು ಮಾಡುವದರಿಂದ ಮನೋಗತಿಯೂ, ಆತ್ಮನದಾಗಿರುತ್ತದೆ.

ಮನಸ್ಸಿನ ಕರ್ಮವಾದ ಚಕ್ಷುರಾದೀಂದ್ರಿಯಗಳಲ್ಲಿಯ ಸಂಚಾರವು, ಪ್ರೇರಣೆಧಾರಣೆಗಳು, ಸ್ವಪ್ನದಲ್ಲಿ ದೇಶಾಂತರಗತಿಯು, ಮೃತವಾದ ಲಕ್ಷಣ ವನ್ನು ತಿಳಿಯುವದು, ಇವೆಲ್ಲವುಗಳೂಆತ್ಮಾಶ್ರಯ ಮನೋ ವ್ಯಾಪಾರಗಳು. ಚಕ್ಷುರಾದಿ ಇಂದ್ರಿಯಗಳಲ್ಲಿಯ ವ್ಯಾಪಾರವು ಮನಸ್ಸಿನಿಂದ ನಡೆಯುತ್ತದೆ ನ್ನುವದು ಹೇಗೆಂದರೆ:- ಬಲಗಣ್ಣಿನಿಂದ ಗ್ರಹಿಸಿದ ರೂಪವನ್ನೂ ಎಡ ಗಣ್ಣುಸಹ ಜ್ಞಾನಮಾಡಿಕೊಂಡು, ಮತ್ತೊಮ್ಮೆ ಗ್ರಹಿಸಬೇಕಾದಾಗ ಯೋಗ್ಯ ವಾಗಿ ತಾನೇ ಗ್ರಹಿಸುವದರಿಂದ, ಇಂದ್ರಿಯಾಧಿಷ್ಠಿತ ಮನಸ್ಸು ಚಕ್ಷುರ್ದ್ವಯ ಗಳಲ್ಲಿರುತ್ತದೆಯೆನ್ನುವದು ನಿಶ್ಚಿತವು. ಇದರಿಂದ ಇಂದ್ರಿಯಗಳಲ್ಲಿ ವಿಷಯ ಗ್ರಾಹಕವು, ಮನಸ್ಸೆನ್ನುವದು ನಿರ್ಣಯವಾದಂತಾಯಿತು.

# ಆತ್ಮನಲಕ್ಷಣಗಳು

"ಇಚ್ಛಾ" ತನಗೆಬೇಕೆಂದೆನಿಸುವದು. "ದ್ವೇಷ" ಬೇಡೆಂದೆನಿಸುವದು. ಅಥವಾ ಅನಿಷ್ಟವಾದ ವಿಷಯದಲ್ಲಿಯ ವೈರವು. "ಸುಖ" ಗ್ರಾಹ್ಯವಾಗಿ ಆನಂದವೆನಿಸುವದು "ದುಃಖ" ಅಗ್ರಾಹ್ಯವಾದದ್ದು ಗ್ರಹಣದಿಂದ ವೇದನೆ ಯಾಗುವದು. "ಪ್ರಯತ್ನ" ಇಷ್ಟಪ್ರಾಪ್ತಿ ಅನಿಷ್ಟನಿವೃತ್ತಿಗಳಲ್ಲಿ ಪ್ರವರ್ತ ನೆಯನ್ನುಂಟು ಮಾಡುವದು ಬುದ್ಧಿ ಗ್ರಹಣದಿಂದ, ಇಲ್ಲಿ ಆಯುರ್ವೇದ ಶಾಸ್ತ್ರದಲ್ಲಿ ಚೇತನಾ, ಧೃತಿ, ಸ್ಮೃತಿ, ಅಹಂಕಾರಗಳು, ಬುದ್ಧಿಯಲ್ಲಿ ಪ್ರಕಾ ಶವಾಗುವದರಿಂದ ಬುದ್ಧಿಪ್ರಕಾಶವೆಂದು ಹೇಳಿದ್ದಾರೆ.

"ಬುದ್ಧಿ" ಊಹಾಪೋಹಗಳಲ್ಲಿಯು ನಿರ್ಣಯವನ್ನು ಆತ್ಮನಿಗೆ ಸಾಕ್ಷಾ ತ್ಕರಿಸುವದು.

"ಧೃತಿ" ನಿಯಮನವುಳ್ಳದ್ದು ನಿಯಂತ್ರಕನಾದ ಆತ್ಮನಿಗೆ ನಿಯಮನ ಸಾಕ್ಷಾತ್ಕಾರ ಮಾಡುತ್ತದೆ. ಅರ್ಥಾತ್ ಆತ್ಮಾಧಿಷ್ಠಿತವಾಗಿ ನಿಯಮನ ವುಳ್ಳದ್ದಾಗುತ್ತದೆ.

"ಸ್ಮೃತಿ" ಪೂರ್ವದಲ್ಲಿ ಗ್ರಹಿಸಿರುವದನ್ನು ಆತ್ಮನಿಗೆ ನೆನಪು ಮಾಡಿ ಸಾಕ್ಷಾತ್ಕರಿಸುತ್ತದೆ.

"ಅಹಂಕಾರ" ನಾನು ಎನ್ನುವ ಅಭಿಮಾನವನ್ನು ಆತ್ಮನಲ್ಲುಂಟು ಮಾಡುವದು. ಇವುಗಳು ಆತ್ಮನ ಲಕ್ಷಣಗಳು ದೇಹದಲ್ಲಿ ಈ ಲಕ್ಷಣಗಳು ತೋರುತ್ತವೆ. ಪಂಚಭೂತಾತ್ಮಕವಾದ ಮೃತ ದೇಹದಲ್ಲಿ ಈ ಲಕ್ಷಣ ಇರದೇ ಇರುವದರಿಂದ, ಇವುಗಳು ಆತ್ಮನದೇ ಆಗಿರುತ್ತವೆಂದು ನಿರ್ಣಯಿಸಿದ್ದಾರೆ.

**ಯಸ್ಮಾತ್ಸಮುಪಲಭ್ಯಂತೆ ಲಿಂಗಾನ್ಯೇತಾನಿ ಜೀವತಃ ||**
**ನಮೃತಸ್ಯಾತ್ಮಲಿಂಗಾನಿ ತಸ್ಮಾದಾಹುರ್ಮಹರ್ಷಯಃ ||೭೭||**
**ಶರೀರಂಹಿಗತೇ ತಸ್ಮಿನ್ ಶೂನ್ಯಾಗಾರಮಚೇತನಂ ||**
**ಪಂಚಭೂತಾವಶೇಷತ್ವಾತ್ ಪಂಚತ್ವಂಗತಮುಚ್ಯತೆ ||**
**(ಚರಕ|| ಶಾರೀರ|| ಅ ೧ ಶ್ಲೋ. ೭೪)**

ಪೂರ್ವೋಕ್ತವಾದ ಲಕ್ಷಣಗಳು ಜೀವಂತವಿರುವಾಗಲೇ ದೊರೆಯುವ ದರಿಂದಲೂ ಮೃತ ದೇಹದಲ್ಲಿರದೇ ಇರುವದರಿಂದಲೂ, ಇವುಗಳು ಆತ್ಮನ ಲಕ್ಷಣಗಳೇ ಇರುತ್ತವೆಂದು ಮಹರ್ಷಿಗಳು ನಿರ್ಣಯಿಸಿದ್ದಾರೆ ಈ ಲಕ್ಷಣ ವುಳ್ಳ ಆತ್ಮನು ಹೊರಟುಹೋದನಂತರ ಶರೀರವು ನಿರ್ಜನವಾದ ಮನೆಯಂತೇ ಆಗುತ್ತದೆ. ಅರ್ಥಾತ್ ಚೇತನಾ ರಹಿತವಾದ್ದರಿಂದ ನಿರುಪಯೋಗವಾಗು ತ್ತದೆ ಆತ್ಮವು ಹೋದ ನಂತರ ಪಂಚಭೂತಗಳ ಅವಶೇಷ ಮಾತ್ರ ಉಳಿ ಯುವದರಿಂದ, ಪಂಚತ್ವವನ್ನು ಹೊಂದುವದೆಂದು ಹೇಳುತ್ತಾರೆ. ಷಡ್ಧಾತುಕ ನಾದ ಪುರುಷನು ಅರನೇಯುವನಾದ್ದರಿಂದ ಚೇತನೆಯನ್ನುಂಟು ಮಾಡು ತ್ತಾನೆ ಅವನು (ಆತ್ಮನು) ಹೊರಟುಹೋದ ಮೇಲೆ ಪಂಚಭೂತಾವಶೇಷ ಮಾತ್ರ ಉಳಿಯುವದರಿಂದ, ಪಂಚತ್ವವನ್ನುಹೊಂದುವದೆನ್ನುವದು ಯೋಗ್ಯ ವಾಗಿರುತ್ತದೆ. ಅರನೇಯುವನಾದ ಆತ್ಮನಿದ್ದಾಗ ಷಟ್ತ್ವವಿರುತ್ತದೆಯೇವಿನಾ ಪಂಚತ್ವವಿರುವದಿಲ್ಲ. ಆದ್ದರಿಂದ ಶಾಸ್ತ್ರೀಯ ಸಂಜ್ಞೆಯೆಂದು ಹೀಗೆ ನಿರ್ದೇಶಿಸಿದ್ದಾರೆ.

## ಇಂದ್ರಿಯಾದಿಗಳಿಂದ ಜೀವಾತ್ಮನಿಗೆ ಜ್ಞಾನವು

**ಆತ್ಮಾಜ್ಞಃ ಕರಣೈರ್ಯೋಗಾತ್ ಜ್ಞಾನಂತ್ವಸ್ಯ ಪ್ರವರ್ತತೆ ||**
**ಕರಣಾನಾಮವೈಮಲ್ಯಾದಯೋಗಾದ್ವಾನವರ್ತತೆ ||೬೪||**
**ಪಶ್ಯತೋಽಪಿಯಥಾದರ್ಶೇಸಂಕ್ಲಿಷ್ಟೇನಾಸ್ತಿದರ್ಶನಂ ||**
**ತದ್ವಜ್ಜಲೇವಾಕಲುಷೇಚೇತಸ್ಯುಪಹತೇತಥಾ ||**
(ಚರಕ|| ಶಾರೀರ|| ಅ ೧ ಶ್ಲೋ ೫೫)

ಆತ್ಮಾ , ಜ್ಞಃ, ಜೀವ, ಪುರುಷ, ಮೊದಲಾದವುಗಳುಜೀವನ ಹೆಸರು ಗಳು. ಚಕ್ಷುರಾದಿ ಇಂದ್ರಿಯಗಳ ಮನಸ್ಸಿನ ಸಮ್ಯಗ್ಯೋಗದಿಂದ ಜೀವನಿಗೆ ಜ್ಞಾನವಾಗುತ್ತದೆ. ಕರಣಗಳು (ಇಂದ್ರಿಯ) ಯೋಗ್ಯ ಸ್ಥಿತಿಯಲ್ಲಿರದಿ ದ್ದರೂ ಅಥವಾ ಅವುಗಳ ಯೋಗ ರಹಿತವಾಗಿದ್ದಾಗಲೂ ಜ್ಞಾನವುಂಟಾ ಗುವದಿಲ್ಲ.

ಉದಾ:— ಮಲಿನವಾದ ಕನ್ನಡಿಯಲ್ಲಿ ಎಷ್ಟೇ ಚನ್ನಾಗಿ ನೋಡಿದರೂ ಪ್ರತಿಬಿಂಬ ಕಾಣುವದಿಲ್ಲ. ಅದರಂತೇ ರಾಡಿ ಜಲದಲ್ಲಿಯೂ ಪ್ರತಿಬಿಂಬವು ಚನ್ನಾಗಿ ಮೂಡುವದಿಲ್ಲ. ಹಾಗೆಯೇ ಮನಸ್ಸು ಉದ್ವಿಗ್ನವಾದಾಗ ಅಥವಾ ಇಂದ್ರಿಯಗಳಲ್ಲಿ ಮನೋಯೋಗ ಇಲ್ಲದಿರುವಾಗ, ಕಲುಷಿತ ಜಲ ಕನ್ನಡಿಗಳಲ್ಲಿಯ ಪ್ರತಿಬಿಂಬವುಕಾಣದಿರುವಂತೆ ಜ್ಞಾನವೂಸಹ ಆಗಲಾರದು.

## ಆತ್ಮನಜ್ಞಾನಕರ್ಮಗಳು

**ಕರಣಾನಿಮನೋಬುದ್ಧಿಃ ಬುದ್ಧಿಃ ಕರ್ಮೇಂದ್ರಿಯಾಣಿಚ ||**
**ಕರ್ತುಃ ಸಂಯೋಗಜಂ ಕರ್ಮವೇದನಾಬುದ್ಧಿರೇವಚ ||೫೬||**
**ನೈಕಃ ಪ್ರವರ್ತತೇಕರ್ತುಂ ಭೂತಾತ್ಮಾನಾಶ್ನುತೇಫಲಂ ||**
**ಸಂಯೋಗಾದ್ವರ್ತತೇಸರ್ವಂ ತಂಋತೇನಾಸ್ತಿಕಿಂಚನ ||**
(ಚರಕ|| ಶಾರೀರ|| ಅ ೧ ಶ್ಲೋ ೫೬)

ಕರಣಗಳು (ಚಕ್ಷುರಾದೀಂದ್ರಿಯಗಳು), ಮನೋಬುದ್ಧಿ, ಬುದ್ಧಿ, ಕರ್ಮೇಂದ್ರಿಯಗಳು, ಕರ್ತೃವಿನ (ಜೀವನ) ಸಂಯೋಗದಿಂದಲೇ ಕರ್ಮವನ್ನು ಗ್ರಹಿಸುತ್ತವೆ. ಅರ್ಥಾತ್ ಆತ್ಮನು ಕರಣಾದಿಗಳಿಂದ ಯುಕ್ತನಾಗಿ ಕರ್ಮಾದಿಗಳನ್ನು ಗ್ರಹಿಸುತ್ತಾನೆಂಬರ್ಥವು. ಇಂದ್ರಿಯಾದಿಗಳ ಸಂಯೋಗವುಳ್ಳ ಆತ್ಮನಿಗೆಜ್ಞಾನ, ಕರ್ಮ, ವೇದನೆಗಳು, ಗ್ರಹೀತವಾಗುತ್ತವೆ. ಜೀವನು ಯಾವದನ್ನೂ ಒಬ್ಬನೇ ಸ್ವತಂತ್ರನಾಗಿ ಮಾಡುವದಿಲ್ಲ. ಯಾವ ಫಲವನ್ನೂ ಒಬ್ಬನೇ ಸ್ವೀಕರಿಸುವದಿಲ್ಲ. ಮನಸ್ಸು ಮೊದಲಾದ ಇಂದ್ರಿಯಗಳೆಲ್ಲವೂ ಆತ್ಮಯುಕ್ತವಾಗಿ ಫಲಗ್ರಾಹಿಗಳಾಗುತ್ತವೆ. ಕರಣ ಮೊದಲಾದವುಗಳು ಆತ್ಮನ ಸಂಯೋಗದಿಂದಲೇ ಎಲ್ಲವೂ ನಡೆಯುತ್ತವೆ. ಈ ಸಂಯೋಗದ ಹೊರತಾಗಿ ಏನೂ ನಡೆಯಲಾರದು.

## (೩೩) ನಿದ್ರಾಸ್ಥಿತಿಯ ವರ್ಣನೆಯು

**ಹೃದಯಂ ಚೇತನಾಸ್ಥಾನಮುಕ್ತಂ ಸುಶ್ರುತದೇಹಿನಾಂ ||**
**ತಮೋಭಿಭೂತೇತಸ್ಮಿಂಸ್ತುನಿದ್ರಾವಿಶತಿದೇಹಿನಾಂ ||೩೪||**

**ನಿದ್ರಾಹೇತುಸ್ತಮಃ, ಸತ್ವಂಬೋಧನೇಹೇತುರುಚ್ಯತೆ ||**
**ಸ್ವಭಾವಏವವಾಹೇತುರ್ಗರೀಯಾನ್ ಪರಿಕೀರ್ತ್ಯತೆ ||**
(ಚರಕ|| ಶಾರೀರ|| ಅ ೪ ಶ್ಲೋ ೩೫)

**ಸುಶ್ರುತರಿಗೆ ಗುರುಗಳಾದ ಧನ್ವಂತರಿಯು ನಿದ್ರಾ ವಿಷಯುದಲ್ಲಿ ಉಪದೇಶವು.** ಸುಶ್ರುತನೇ, ಶರೀರಗಳಿಗೆ ಹೃದಯುವು ಚೇತನಾ (ಪ್ರಜ್ಞಾ) ಸ್ಥಾನವೆಂದು ಹೇಳಲ್ಪಟ್ಟಿರುತ್ತದೆ ಪೂರ್ವೋಕ್ತ ಚೇತನಾ ಸ್ಥಾನವಾದ ಹೃದಯುದಲ್ಲಿ ತಮುಸ್ಸು ಆವರಿಸಿಕೆಂದರೆ, ದೇಹಿಗಳಿಗೆ ನಿದ್ರೆಯು ಬರುತ್ತದೆ. ತಮುಸ್ಸು ನಿದ್ರೆಗೆ ಕಾರಣವಾಗಿರುತ್ತದೆ ಸತ್ವವು ಎಚ್ಚರಿಕೆಗೆ (ಎಚ್ಚರವಾಗಲಿಕ್ಕೆ) ಕಾರಣವೆಂದು ಹೇಳಲ್ಪಡುತ್ತದೆ ಎಚ್ಚರಿಕೆ ಮತ್ತು ನಿದ್ರೆಗಳು ಪ್ರಾಣಗಳಲ್ಲಿ, ವಿರುದ್ಧ ಗುಣವುಳ್ಳವುಳಾಗಿರುತ್ತವೆ ಸತ್ವಾದಿಗಳ ಸದಾ ಸಾನ್ನಿಧ್ಯವಿರುವದರಿಂದ, ಸ್ವಾಪ ಮತ್ತು ಅವಬೋಧಗಳ ಸಂಭವವಾಗಲೇ ಬಾರದೆಂಬ ಆಕ್ಷೇಪ ಬರುತ್ತದೆ. ಇದಕ್ಕೆ ಶಾಸ್ತ್ರಕಾರರು ನಿದ್ರೆಯು ಸ್ವಾಭಾವಿಕವಾದದ್ದೇ, ಎಂದು ಹೇಳುತ್ತಾರೆ ಮತ್ತು ನಿದ್ರೆ ಬರುವದು ಎಚ್ಚರವಾಗುವದು ಈ ವಿಷಯುಗಳಲ್ಲಿ, ಸ್ವಾಭಾವಿಕವೇ ಮುಖ್ಯ ಕಾರಣವೆಂದು ನಿರ್ಧರಿಸಿದ್ದಾರೆ.

**ನಿದ್ರಾಂತುವೈಷ್ಣವೀಂಪಾಪ್ಮಾನಮುಪದಿಶಂತಿ, ಸಾಸ್ವಭಾವತ ಏವಸರ್ವಪ್ರಾಣಿನೋಽಭಿಸ್ಪೃಶತಿ|| ತತ್ರಯುದಾಸಂಜ್ಞಾವಹಾನಿಸ್ರೋತಾಂಸಿತಮೋಭೂಯಿಷ್ಠಃಶ್ಲೇಷ್ಮಾಪ್ರತಿಪದ್ಯತೇ ತದಾ ತಾಮುಸೀನಾಮುನಿದ್ರಾಸಂಭವತ್ಯನವಬೋಧಿನೀ, ಸಾಪ್ರಲಯು ಕಾಲೇ; ತಮೋಭೂಯಿಷ್ಠಾನಾಮುಹಸ್ಸುನಿಶಾಸುಚ ಭವತಿ, ರಜೋಭೂಯಿಷ್ಠಾನಾಮುನಿಮಿತ್ತಂ, ಸತ್ವಭೂಯಿಷ್ಠಾನಾಮು ರ್ಧರಾತ್ರೇ; ಕ್ಷೀಣಶ್ಲೇಷ್ಮಣಾಮುನಿಲಬಹುಲಾನಾಂಮುನಃ ಶರೀರಾಭಿತಾಪವತಾಂಚನೈವ, ಸಾವೈಕಾರಿಕೀಭವತಿ ||**
(ಸುಶ್ರುತ|| ಶಾರೀರ|| ಅ ೪ ಸೂ ೩೩)

ತಂತ್ರಾಂತರಗಳಲ್ಲಿ (೭) ವಿಧವಾದ ನಿದ್ರೆಗಳನ್ನು ಹೇಳುತ್ತಾರೆ ಆದರೆ ಸುಶ್ರುತ ತಂತ್ರದಲ್ಲಿ ೧ ತಾಮುಸೀ ೨ ಸ್ವಾಭಾವಿಕೀ ೩ ವೈಕಾರಿಕೀಗಳೆಂಬ

ಮೂರು ವಿಧವಾದ ನಿದ್ರೆಗಳನ್ನು ಹೇಳುತ್ತಾರೆ ನಿದ್ರೆಯನ್ನು ವಿಷ್ಣುವಿನ ಮಾಯೆಯೆಂದು ಹೇಳುತ್ತಾರೆ. "ವಿಷ್ಣೋಃ ಇಯಂ ವೈಷ್ಣವೀ" ಇಲ್ಲವೇ ಪಾಪವುಳ್ಳದ್ದು ನಿದ್ರೆಯೆಂದು ಹೇಳುತ್ತಾರೆ. ಯಾಕಂದರೆ ಎಲ್ಲ ಶುಭ ವ್ಯಾಪಾರಗಳನ್ನುನಿರೋಧಮಾಡುವದರಿಂದ ಪಾಪಯುಕ್ತವಾದದ್ದೆಂದು ತಿಳಿಸಿದ್ದಾರೆ. ನಿದ್ರೆಯು ಸ್ವಾಭಾವಿಕವಾಗಿ ಸರ್ವ ಪ್ರಾಣಿಗಳನ್ನು ವ್ಯಾಪಿಸುತ್ತದೆ.

೧ "ತಾಮಸೀನಿದ್ರೆ" ದೇಹದಲ್ಲಿ ಸಂಜ್ಞಾವಾಹಿಗಳಾದ ಸ್ರೋತಸ್ಸುಗಳನ್ನು, ಕೇವಲ ತಮಸ್ಸಿನ ಹೆಚ್ಚುವಿಕೆಯಿಂದಕೂಡಿದ ಶ್ಲೇಷ್ಮವುವ್ಯಾಪಿಸಿಗರೆ; ಅಥವಾ ಪ್ರವೇಶಿಸಿದರೆ ಆಗ ತಾಮಸೀ ಎನ್ನುವ ನಿದ್ರೆಯು ಸಂಭವಿಸುತ್ತದೆ. ಅದು ಎಚ್ಚರವಾಗದ ಕಠಿಣತರವಾದ ನಿದ್ರೆಯು, ಅದು ಪ್ರಾಣಿಗಳ ಪ್ರಲಯಕಾಲದಲ್ಲಿಯ ನಿದ್ರೆಯು, ಎಚ್ಚರರಹಿತವಾದ, ಅತ್ಯಂತಿಕಮರಣಕಾಲ ಪೂರ್ವದಲ್ಲಿಯ ನಿದ್ರೆಯೆಂದು ತಿಳಿಯಬೇಕು

೨ "ಸ್ವಾಭಾವಿಕೀನಿದ್ರೆ" ತಮಸ್ಸು ಅಧಿಕವಾದವರಿಗೆ ಹಗಲು ರಾತ್ರಿಗಳಲ್ಲಿಯೂ ಸಹ ನಿದ್ರೆ ಬರುತ್ತದೆ. ರಜೋಗುಣಾಧಿಕವಾದವರಿಗೆ ಏನೂ ಕಾರಣವಿಲ್ಲದೆ ಅಕಸ್ಮಾತ್ ನಿದ್ರೆಯು ಬರುತ್ತದೆ. ಸತ್ವಗುಣಾಧಿಕ್ಯವುಳ್ಳವರಿಗೆ ಅರ್ಧ ರಾತ್ರೆಯಲ್ಲಿ ನಿದ್ರೆಯು ಬರುತ್ತದೆ

೩ "ವೈಕಾರಿಕೀ ನಿದ್ರೆ" ಕ್ಷೀಣ ಶ್ಲೇಷ್ಮವುಳ್ಳವರಿಗೆ ವಾತ ಬಹಳವಾದವರಿಗೆ, ಮನಸ್ಸು ಶರೀರಗಳಲ್ಲಿ ಚಿಂತೆ ವೇದನಾವುಳ್ಳವರಿಗೂ ಕೂಡ ನಿದ್ರೆಯು ಬರುವದಿಲ್ಲ. ಬಂದರೂ ಸಹ ಚನ್ನಾಗಿ ಗಾಢನಿದ್ರೆಯು ಇರುವದಿಲ್ಲವಾದ್ದರಿಂದ "ವೈಕಾರಿಕೀ" ನಿದ್ರೆಯೆಂದು ಹೇಳುತ್ತಾರೆ.

## ನಿದ್ರೆಯ ವಿಷಯದಲ್ಲಿ ವಿಶೇಷ

ಕ್ಷೀಣ ಶ್ಲೇಷ್ಮವುಳ್ಳವರಿಗೆ, ವಾತ ಬಹಳವಾದವರಿಗೆ, ನಿದ್ರೆಯು ಬರುವದಿಲ್ಲವೆಂದು ಹೇಳಿದ್ದಾರೆ. ಇದಕ್ಕೆ ವಿರುದ್ಧವಾಗಿ ಶ್ರಮದಿಂದ ಬಳಲಿದವರಿಗೆ ನಿದ್ರೆಯು ಬರುತ್ತದೆ. ಯಾಕಂದರೆ ಲಂಘನಶ್ರಮಾದಿಗಳಿಂದ ವಾಯುವು ವೃದ್ಧಿಹೊಂದುತ್ತದೆ. ಮತ್ತು ಶ್ಲೇಷ್ಮವು ಕ್ಷೀಣವಾಗುತ್ತದೆ. ಇಂಥವರಿಗೆ

ನಿದ್ರೆಯು ಯಾಕೆ ಬರುತ್ತದೆಂದರೆ ಶ್ರಮಕಾರ್ಯದಿಂದ ಬಳಲಿರುವದರಿಂದ, ವಿಷಯಗಳಲ್ಲಿ ಮನಸ್ಸು ಇಂದ್ರಿಯಗಳು ನಿವರ್ತನೆಯನ್ನು ಹೊಂದುತ್ತವೆ. ಮನಸ್ಸು ಸಹಿತವಾದ ಇಂದ್ರಿಯಗಳು ನಿವರ್ತನೆಯನ್ನುಹೊಂದುವದರಿಂದ ಮನುಷ್ಯನು ನಿದ್ರಿಸುತ್ತಾನೆ.

**ಯದಾತುಮನಸಿಕ್ಲಾಂತೇ ಕರ್ಮಾತ್ಮಾನಃ ಕ್ಲಮಾನ್ವಿತಾಃ ||**
**ವಿಷಯೇಭ್ಯೋನಿವರ್ತಂತೇ ತದಾಸ್ವಪಿತಿ ಮಾನವಃ ||**
( ಚರಕ|| ಸೂ ಸ್ಥಾ. ಅ ೨೧ ಶ್ಲೋ. ೩೫ )

ಯಾವಾಗಮನಸ್ಸು ಬಳಲುತ್ತದೆಯೋ ಆಗ ಕರ್ಮ ಪುರುಷನಾದ ಜೀವನೂ ಇಂದ್ರಿಯಗಳೂ ಸಹ ಬಳಲುತ್ತವೆ. ಮನಸ್ಸು, ಇಂದ್ರಿಯಗಳು, ಕರ್ಮಾತ್ಮನಾದ ಪುರುಷ, ಇವೆಲ್ಲವುಗಳಿಗೂ ಶ್ರಮವಾಗಿರುವದರಿಂದ ವಿಶ್ರಾಂತಿ ಹೊಂದುತ್ತವೆ. ಎಲ್ಲ ವಿಷಯಗಳಿಂದಲೂ ನಿವರ್ತನೆಯಾಗುವದರಿಂದ ಮನುಷ್ಯನು ನಿದ್ರಿಸುತ್ತಾನೆ. ಇದು ಶ್ರಮಜನ್ಯವಾದ ವಿಶ್ರಾಂತಿ ರೂಪವಾದ ನಿದ್ರೆಯೆಂದು ಹೇಳುತ್ತಾರೆ.

## ಚರಕ ಮತದಂತೆನಿದ್ರೆಯಕಾರಣವು

**ತಮೋಭವಾ ಶ್ಲೇಷ್ಮಸಮುದ್ಭವಾ ಚ –**
**ಮನಃ ಶರೀರ ಶ್ರಮಸಂಭವಾ ಚ ||**
**ಆಗಂತುಕೀ ವ್ಯಾಧ್ಯನುವರ್ತಿನೀ ಚ –**
**ರಾತ್ರಿ ಸ್ವಭಾವ ಪ್ರಭವಾ ಚ ನಿದ್ರಾ ||**
( ಚರಕ|| ಸೂ. ಸ್ಥಾ. ಅ. ೨೧ ಶ್ಲೋ. ೫೮ )

(೧) "**ತಮೋಭವಾ**" ನಿದ್ರೆಯು ತಮಸ್ಸಿನ ಆಧಿಕ್ಯದಿಂದ ಉಂಟಾಗುತ್ತದೆ. ಇಲ್ಲಿ ತಮೋಧಿಕ್ಯವಿರುವದೇ ವಿನಾ ತಮಸ್ಸೇ ಇರುವದಿಲ್ಲ. ಆದ್ದರಿಂದ ಮರಣಕಾಲ ಪೂರ್ವದ "**ತಾಮಸೀ**" ನಿದ್ರೆಯೆಂದು ತಿಳಿಯಬಾರದು.

(೨) "**ಶ್ಲೇಷ್ಮ ಸಮುದ್ಭವಾ**" ಕಫಾಧಿಕ್ಯದಿಂದುಂಟಾಗುವನಿದ್ರೆಯು ಅಥವಾ ಶ್ಲೇಷ್ಮದಿಂದ ಸಂಭವಿಸುವನಿದ್ರೆಯೆಂದು ಹೇಳುತ್ತಾರೆ.

(೩) "ಶ್ರಮಸಂಭವಾ" ಮನಸ್ಸಿನ ಅಥವಾ ಶರೀರಗಳ ಶ್ರಮದಿಂದ ಬರುವ ನಿದ್ರೆಯು.

(೪) "ಆಗಂತುಕೀ" ನಿದ್ರೆಯು ವ್ಯಾಧಿಯ ಆಧಿಕ್ಯದಿಂದ ಬರುತ್ತದೆ. ವ್ಯಾಧಿಯ ತೀವ್ರತೆಯಿಂದ ಮನಸ್ಸು ಕಾದು ಬಳಲಿ ನಿದ್ರೆಯುಂಟಾಗುವದು. ಸನ್ನಿಪಾತಾದಿ ಜ್ವರಗಳಲ್ಲಿ "ಆಗಂತುಕೀ" ನಿದ್ರೆಯು ಬರುತ್ತದೆ. ಅದಕ್ಕೆ ಅರಿಷ್ಟ ಲಕ್ಷಣ ಯುಕ್ತವಾದದ್ದೆಂದು ಹೇಳುತ್ತಾರೆ ಸನ್ನಿಪಾತಾದಿಗಳಲ್ಲಿ ಎಚ್ಚರವಿಲ್ಲದ ನಿದ್ರೆಆರಂಭವಾಯಿತೆಂದರೆ ಕಷ್ಟಸಾಧ್ಯವೆಂದು ತಿಳಿಯುತ್ತಾರೆ.

(೫) "ಸ್ವಭಾವ ಪ್ರಭವಾ" ಪ್ರತಿದಿನ ರಾತ್ರಿ ಕಾಲದಲ್ಲಿ ಬರುವ ನಿದ್ರೆಗೆ, ಸ್ವಾಭಾವಿಕವಾದ ನಿದ್ರೆಯೆಂದು ಹೇಳುತ್ತಾರೆ. ಇದು ಪ್ರಾಣಿ ಮಾತ್ರಗಳಿಗೆ ಹಿತಕರವೆಂದು ಶಾಸ್ತ್ರಕಾರರು ಹೇಳುತ್ತಾರೆ.

**ರಾತ್ರಿಸ್ವಭಾವಪ್ರಭವಾಮತಾಯಾ**
**ತಾಂಭೂತಧಾತ್ರೀಂ ಪ್ರವದಂತಿತಜ್ಞಾಃ ||**
**ತಮೋಭವಾಮಾಹುರಘಸ್ಯಮೂಲಂ**
**ಶೇಷಾಃ ಪುನರ್ವ್ಯಾಧಿಷುನಿರ್ದಿಶಂತಿ||**
**(ಚರಕ||** ಸೂ. ಸ್ಥಾ. ೨೧ ಶ್ಲೋ ೫೯)

ರಾತ್ರಿಯಲ್ಲಿ ಪ್ರಾಣಿಗಳಿಗೆ ಸ್ವಾಭಾವಿಕವಾಗಿ ಬರುವ ಅಥವಾ ಪ್ರಾಣಿಗಳ ಸತ್ವಾದಿ ಗುಣಕ್ಕನುಸರಿಸಿ ಸ್ವಾಭಾವಿಕವಾಗಿರುವ ಯಾವನಿದ್ರೆಯಿರುತ್ತದೆಯೋ, ಅದು ಪ್ರಾಣಿಗಳನ್ನು ಪೋಷಿಸುವದರಿಂದ ಅದಕ್ಕೆ ಭೂತಧಾತ್ರಿಯೆಂದು ತಜ್ಞರು ಹೇಳುತ್ತಾರೆ. ಅಥವಾ ಹಾಲನ್ನುಕೊಟ್ಟು ಧಾತ್ರಿಯು (ದಾದಿಯು) ರಕ್ಷಿಸುವಂತೆ ದೇಹ ರಕ್ಷಣೆ ಮಾಡುವದರಿಂದ, ಪ್ರಾಣಿಗಳಿಗೆ ಧಾತ್ರೀ (ದಾದಿ) ಯಂತಿರುವ ನಿದ್ರೆಯೆಂದು ಹೇಳುತ್ತಾರೆ. "**ಭೂತಾನಿ ದಧಾತೀತಿ ಭೂತಧಾತ್ರೀ**" ಅಥವಾ **ಭೂತಾನಾಂ ಧಾತ್ರೀವ ಧಾತ್ರೀ ಭೂತಧಾತ್ರೀ**"

ನಿದ್ರೆಯು ಪ್ರಾಣಿಗಳಿಗೆ ಅವಶ್ಯವಾಗಿರುವದರಿಂದ ಪೋಷಣೆ ಧಾರಣೆಗಳು ಅದರಿಂದ ನಡೆಯುವದರಿಂದ, ಹೀಗೆ ಅದನ್ನು ಹೊಗಳಿ ಹೇಳುತ್ತಾರೆ.

" ತಮಸ್ಸಿನಿಂದ ಉತ್ಪನ್ನವಾಗುವ ನಿದ್ರೆಯನ್ನು " ಪಾಪಕ್ಕೆ ಮೂಲ (ಕಾರಣ) ವೆಂದು ಹೇಳುತ್ತಾರೆ. ತಮೋಭವ ನಿದ್ರೆಯು ಪಾಪಕ್ಕೆ ಕಾರಣವು ಯಾಕೆಂಬುವದನ್ನು ಹೇಳುತ್ತಾರೆ ಸದಾ ನಿದ್ರೆಯಲ್ಲಿಯೇ ಇರುವದರಿಂದ ಮನುಷ್ಯನು ಮಾಡಬೇಕಾದ ಸತ್ಕರ್ಮಗಳನ್ನು ಮಾಡಲಾರನು. ಮಾಡತಕ್ಕ ಕರ್ತವ್ಯಗಳನ್ನೂ ಸತ್ಕಾರ್ಯಗಳನ್ನೂ ಮಾಡದಿರುವದರಿಂದ ಅಧರ್ಮವುಂಟಾಗುತ್ತದೆ ಅಧರ್ಮದಿಂದ ಪಾಪವು ಸಂಭವಿಸುತ್ತದೆ. ಹೀಗೆ ಪರಸ್ಪರವಾಗಿ ಪಾಪಕ್ಕೆ, ಸದಾಬರುತ್ತಿರುವ ನಿದ್ರೆಯೇ ಕಾರಣವೆಂದು ನಿರ್ಧರಿಸಿ "ಅಘಸ್ಯಮೂಲಂ" ಎಂದು ನಿರ್ಧರಿಸಿ ಹೇಳಿದ್ದಾರೆ .

ಇವುಗಳ ಹೊರತಾಗಿ ಉಳಿದ ನಿದ್ರೆಯು ವ್ಯಾಧಿಗಳಲ್ಲಿ ಬರತಕ್ಕ ಆಗಂತುಕವಾದ ನಿದ್ರೆಯೆಂದು ತಿಳಿಯಬೇಕು.

**ನಿದ್ರಾಯತ್ತಂ ಸುಖಂ ದುಃಖಂ ಪುಷ್ಟಿಃಕಾರ್ಶ್ಯಂ ಬಲಾಬಲಂ**
**ವೃಷತಾಕ್ಲೀಬತಾ ಜ್ಞಾನಮಜ್ಞಾನಂ ಜೀವಿತಂನಚ ॥೩೬॥**
**ಅಕಾಲೇಽತಿಪ್ರಸಂಗಾಚ್ಚ ನಚನಿದ್ರಾನಿಷೇವಿತಾ ॥**
**ಸುಖಾಯುಷೀ ನಿರಾಕುರ್ಯಾತ್ ಕಾಲರಾತ್ರಿರಿವಾಗತಾ ॥**
(ಚರಕ॥ ಸೂ. ಸ್ಥಾ. ಅ ೨೧ ಶ್ಲೋ ೩೭)

ಸುಖದುಃಖಗಳು, ಪುಷ್ಟಿ ಮತ್ತು ಕೃಶತೆಗಳು, ಬಲ ದುರ್ಬಲತೆಗಳು, ವೃಷ್ಯತ್ವ ನಪುಂಸಕತ್ವಗಳು, ಜ್ಞಾನ ಅಜ್ಞಾನಗಳು, ಬದುಕುವಿಕೆ ಬದುಕದೇ ಇರೋಣ ಇವೆಲ್ಲವುಗಳು, ನಿದ್ರಾಯತ್ತ (ನಿದ್ರಾಽಧೀನ) ವಾಗಿರುತ್ತವೆ. ಆದ್ದರಿಂದ ಜೀವನದಲ್ಲಿ ಅತ್ಯಂತ ಪ್ರಾಮುಖ್ಯವಾಗಿರುವನಿದ್ರೆಯನ್ನು, ದೇಹಕ್ಕೆ ಅನುಕೂಲವಾಗುವಂತೆ ಸೇವಿಸಬೇಕು. ಯೋಗ್ಯಾಽಯೋಗ್ಯ ನಿದ್ರೆಗಳಿಂದುದ್ಭವಿಸುವ ಸುಖದುಃಖಾದಿಗಳನ್ನು ಹೇಳಿರುತ್ತಾರೆ

ಅಕಾಲದಲ್ಲಿ ನಿದ್ರೆಯನ್ನುಮಾಡುವದರಿಂದಲೂ ಅತಿನಿದ್ರೆಯಿಂದಲೂ ಇಲ್ಲವೇ ನಿದ್ರೆಯನ್ನೇ ಬಿಟ್ಟುಬಿಡುವದರಿಂದಲೂ ಸುಖ ಆಯುಸ್ಸನ್ನೂ; ಎರಡನೇಯದಾದ ಮೃತ್ಯುವಿನ ತಮಸ್ಸಿನಂತೇ (ಕಾಲರಾತ್ರಿಯಂತೆ) ನಾಶಪಡಿಸುತ್ತದೆ.

**ಸೈವಯುಕ್ತಾ ಪುನಯುರ್ಙಂಗ್ತೇನಿದ್ರಾದೇಹಂ ಸುಖಾಯುಷಾ॥**
**ಪುರುಷಂ ಯೋಗಿನಂ ಸಿದ್ಧ್ಯಾ ಸತ್ಯಾಬುದ್ಧಿರಿವಾಗತಾ ॥**
**( ಚರಕ॥ ಸೂ. ಸ್ಥಾ. ೨೧ ಶ್ಲೋ ೩೮ )**

ಯೋಗ್ಯ ಕಾಲದಲ್ಲಿ ಯುಕ್ತವಾಗಿ ಸೇವಿಸಿದ ನಿದ್ರೆಯು ದೇಹವನ್ನು ಸುಖ ಮತ್ತು ದೀರ್ಘಾಯು ಉಳ್ಳದ್ದನ್ನಾಗಿಮಾಡುತ್ತದೆ. ಸಿದ್ಧಿಯಿಂದ ಯುಕ್ತನಾಗುವಂತೆ ಯೋಗೀಪುರುಷನನ್ನು, ತತ್ವಜ್ಞಾನವು (ಸತ್ಯಾಬುದ್ಧಿಃ) ಮಾಡುವದು ಇದರಂತೆ ಯೋಗ್ಯ ನಿದ್ರೆಯು ದೇಹಕ್ಕೆ ಸುಖಾಯುಷ್ಯವನ್ನು ಕೊಡುತ್ತದೆಂಬರ್ಥವು. ಸತ್ಯಾಬುದ್ಧಿಯು (ಸ್ಥಿರಬುದ್ಧಿಯುಳ್ಳ ತತ್ವಜ್ಞಾನವು) ಯೋಗಿಗೆ ಸಿದ್ಧಿಯನ್ನು(ಆತ್ಮಜ್ಞಾನಾದಿಗಳನ್ನು) ಉಂಟುಮಾಡುತ್ತದೆಯೋ, ಆದರಂತೆ ಯೋಗ್ಯ ನಿದ್ರೆಯು ಮನುಷ್ಯನಿಗೆ ಸುಖಾಯುಷ್ಯಗಳನ್ನು ಕೊಡುತ್ತದೆ. ಚನ್ನಾಗಿ ಯೋಗ್ಯವಾದ ನಿದ್ರೆಯು ಆರೋಗ್ಯದಾಯಕವಾಗಿರುವದು. ಆರೋಗ್ಯದಿಂದ ಆಯುಷ್ಯಾಭಿವೃದ್ಧಿಯಾಗುತ್ತದೆ.

## ನಿದ್ರೆಯ ಪ್ರಭಾವ

**ಕರಣಾನಾಂತುವೈಗುಣ್ಯೇತಮಸ್ಯಾಭಿಪ್ರವರ್ಧಿತೆ ॥**
**ಅಸ್ವಪನ್ನಪಿಭೂತಾತ್ಮಾಪ್ರಸುಪ್ತಇವಚೋಚ್ಯತೆ ॥**
**(ಸುಶ್ರುತ॥ ಶಾರೀರ॥ ಅ ೪ ಶ್ಲೋ ೩೭)**

ಇಂದ್ರಿಯಗಳು ವಿಗುಣ(ವಿಕಾರವನ್ನು ಹೊಂದಿದ)ವಾಗಿರಲು ಬಾಹ್ಯ ಅಂತರೇಂದ್ರಿಯಗಳಲ್ಲಿ ತಮಸ್ಸು ಗಾಢವಾಗಿ ವ್ಯಾಪಿಸಿದರೆ, ಆತ್ಮನು (ಜೀವ) ನಿರ್ವಿಕಾರನಿದ್ದರೂ ಗಾಢನಿದ್ದೆ ಹೊಂದಿದವನಂತೇ ಇರುತ್ತಾನೆ. ಅಥವಾ ಅತ್ಯಂತವಾಗಿ ತಮಸ್ಸು ಬಾಹ್ಯಾಭ್ಯಂತರಗಳಲ್ಲಿ ವ್ಯಾಪಿಸುವದರಿಂದ, ಇಂದ್ರಿಯಗಳು ಕರ್ತವ್ಯಶೂನ್ಯವಾಗಿ ವಿಗುಣತೆಯನ್ನು ಹೊಂದುತ್ತವೆ. ಮನಸ್ಸು ಇಂದ್ರಿಯಗಳು ನಿಷ್ಕ್ರಿಯವಾಗುವದರಿಂದ, ಯಾವ ಜ್ಞಾನವೂಉಂಟಾಗುವದಿಲ್ಲ. ಇಂದ್ರಿಯ ವೈಗುಣ್ಯ (ವೈಕಲ್ಯ)ದಿಂದ ಆತ್ಮನೂ ಸಹ ಗಾಢವಾಗಿ ನಿದ್ರಿತನಂತೇ ತೋರುವದರಿಂದ, ಪ್ರಸುಪ್ತನೆಂದು ಹೇಳಲ್ಪಡುತ್ತಾನೆ.

ಅರ್ಥಾತ್ ತಮೋವ್ಯಾಪ್ತನಿದ್ರೆಯಿಂದ, ಮನುಷ್ಯನು ನಿಷ್ಕ್ರಿಯನಾಗುತ್ತಾನೆ. ಅವನ ಜೀವವು ಸಹ ಯಾವ ಕರ್ತವ್ಯವಿಲ್ಲದೆ ಪ್ರಗಾಢ ನಿದ್ರೆ ಆವರಿಸಿದಂತೆ ತೋರುತ್ತದೆ. ಆತ್ಮನು ಇಂದ್ರಿಯಗಳಿಂದಲೇ ಕರ್ತವ್ಯ ಮಾಡಿಸುವದರಿಂದ ಇಂದ್ರಿಯವಿಗುಣತೆ ಉತ್ಪನ್ನವಾಗಲು, ಆತ್ಮನ ಯಾವದೇ ಇಂದ್ರಿಯಗಳಿಂದಾಗ ಬೇಕಾದ ಕ್ರಿಯೆಯೂ ನಡೆಯುವದಿಲ್ಲ.

## ಸ್ವಪ್ನದರ್ಶನ

ಶಾಸ್ತ್ರೀಯ ದೃಷ್ಟಿಯಿಂದ ಸ್ವಪ್ನ ವಿಚಾರಮಾಡುವದಿದ್ದರೆ, ಗಾಢನಿದ್ದೆ ಯಲ್ಲಿದ್ದಾಗ ಸ್ವಪ್ನದರ್ಶನವಾಗುವದಿಲ್ಲ. ಯಾಕಂದರೆ ತಮಸ್ಸುವ್ಯಾಪಿಸಿದಾಗ ಗಾಢನಿದ್ರೆಯಿರುತ್ತದೆ. ಆಗಮನಸ್ಸೂ ಸಹ ತಮೋವ್ಯಾಪ್ತವಾಗಿ ವಿಶ್ರಾಂತಿಯ ನ್ನನುಭವಿಸುತ್ತದೆ. ಸ್ವಲ್ಪ ತಮಸ್ಸಿದ್ದು ರಜೋಗುಣಾಧಿಕ್ಯವಾದಾಗಮನಸ್ಸು, ಶುಭಾಶುಭರೂಪವಾದ ವಿಷಯದರ್ಶನವನ್ನು ಪಡೆಯುತ್ತದೆ. ಕೆಲವೊಂದು ವಿಷಯಗಳಲ್ಲಿ ಸುಖದುಃಖಾದಿಗಳನ್ನು ಸಹ ಸ್ವಪ್ನದಲ್ಲಿ ಅನುಭವಿಸುತ್ತಾನೆ. ಎಚ್ಚರವಿಲ್ಲದಿರುವ ಸ್ಥಿತಿಯೇ ನಿದ್ರೆಯು. ನಿದ್ರೆಯ ಅಭಾವವೇ ಎಚ್ಚರವು. ಹೀಗಿರುವಾಗ ನಿದ್ರೆಯಲ್ಲಿದ್ದಾಗ ಅರ್ಥವನ್ನು (ವಿಷಯವನ್ನು) ಗ್ರಹಿಸುವ ಬೋಧ ಹೇಗಾಗುತ್ತದೆಂದೂ, ಜ್ಞಾನಸಹಿತವಾಗಿದ್ದರೆ ನಿದ್ರೆ ಇಲ್ಲದೆ ಎಚ್ಚರ ವಾಗಿಯೇ ಇರಬೇಕೆಂಬ ಆಕ್ಷೇಪಬರುತ್ತದೆ. ಯಾವ ವಿಷಯವನ್ನೇ ಆದರೂ ಸ್ವಪ್ನದಲ್ಲಿ ದರ್ಶನರೂಪಗ್ರಹಣಮಾಡುತ್ತೇವೆಯೋ, ಅದು ಬಾಹ್ಯವಿಷಯವೇ ಇರುತ್ತದೆ. ನಿದ್ರೆಯ ವೇಳೆಯಲ್ಲಿ ಬಾಹ್ಯವಿಷಯಗಳ ಸಂಬಂಧವೇ ಇರುವದಿ ಲ್ಲವಾದ್ದರಿಂದ ಸ್ವಪ್ನದಲ್ಲಿ ಹೇಗೆ ಸಂಬಂಧಬರುತ್ತದೆ. ಮತ್ತು ವಿಷಯಜ್ಞಾನ ವಾದರೂ ಆಗುವದರಿಂದ, ಇದಕ್ಕೆ ಕಾರಣವೇನೆಂದು ಅನಿಸುವದು. ಇವೆಲ್ಲಕ್ಕೂ ಪೂರ್ವದಲ್ಲಿ ಅನುಭವಿಸಿದ ವಿಷಯಜ್ಞಾನವೇ ಕಾರಣವೆಂದು ಹೇಳುತ್ತಾರೆ. ನಿದ್ರೆಯ ಪೂರ್ವದಲ್ಲಿ ನೋಡಿದ ಸ್ವೀಕರಿಸಿದ ವಿಷಯಗಳಲ್ಲಿಯ, ಜ್ಞಾನ ರೂಪವಾದ ಸ್ಮೃತಿಯು ಉಂಟಾಗುತ್ತದೆ. ಇದರಿಂದ ಮನೋಯುಕ್ತನಾದ ಜೀವನು ಸ್ವಪ್ನದಲ್ಲಿ ಪೂರ್ವ ಗ್ರಹೀತ ವಿಷಯದರ್ಶನವನ್ನು ಹೊಂದುತ್ತಾನೆ. ಅಥವಾ ಜನ್ಮಾಂತರದಲ್ಲಿ ಗ್ರಹಿಸಿದ ವಿಷಯವನ್ನೂ ಇಲ್ಲವೇ ನಿದ್ರೆಗಿಂತ

ಪೂರ್ವದಲ್ಲಿ ಗ್ರಹಿಸಿರುವ ವಿಷಯುವನ್ನೂ ಸ್ವಪ್ನದಲ್ಲಿ ಕಾಣುತ್ತಾನೆ. ಹೀಗೆ ಸ್ವಪ್ನವಿಷಯದಲ್ಲಿ ನಿರ್ದೇಶಿಸಿದ್ದಾರೆ.

**ಪೂರ್ವದೇಹಾನುಭೂತಾಂಸ್ತು ಭೂತಾತ್ಮಾಸ್ವಪತಃ ಪ್ರಭುಃ ॥**
**ರಜೋಯುಕ್ತೇನಮನಸಾಗೃಹ್ಣಾತ್ಯರ್ಥಾನ್ ಶುಭಾಽಶುಭಾನ್ ॥**
**( ಸುಶ್ರುತ॥ ಶಾರೀರ॥ ಅ. ೪ ಶ್ಲೋ ೩೬ )**

ನಿದ್ರಿಸಿದ ಶರೀರದ ಒಡೆಯನಾದ ದೇಹವನ್ನುಹೊಂದಿದ ಆತ್ಮನು (ಭೂತಾತ್ಮಾ), ಪೂರ್ವಜನ್ಮದ ದೇಹದಲ್ಲಿ ಅನುಭವಿಸಿದ ಅಥವಾ ನಿದ್ರೆಯ ಪೂರ್ವದಲ್ಲಿಅನುಭವಿಸಿದ ಶುಭಾಶುಭಅರ್ಥಗಳನ್ನು, ರಜೋಗುಣಯುಕ್ತವಾದ ಮನಸ್ಸಿನಿಂದ ಕೂಡಿದವನಾಗಿ ಗ್ರಹಿಸುತ್ತಾನೆ. ಮನಸ್ಸು ತಮೋಯುಕ್ತವಾಗುವದರಿಂದ ನಿದ್ರೆಬರುತ್ತದೆಂದು ಪ್ರತಿಪಾದಿಸಿದ್ದಾರೆ. ತಮೋಯೋಗವುಳ್ಳ ಮನಸ್ಸು ನಿದ್ರೆಯಲ್ಲಿ ಶುಭಾಶುಭರೂಪವಾದ ಸ್ವಪ್ನದರ್ಶನವನ್ನು ಹೇಗೆ ಪಡೆಯುತ್ತದೆಂದು ಅನಿಸಬಹುದು ಅದಕ್ಕೆ ಶಾಸ್ತ್ರಕಾರರ ಮತವೆಂದರೆ, ಕೇವಲ ತಮೋಯೋಗವಿದ್ದಾಗ್ಯೆ ನಿದ್ರೆಯೂ, ರಜೋಗುಣ ಸಂಸರ್ಗದಿಂದ ಸ್ವಪ್ನದರ್ಶನವೂ, ಆಗುವದೆಂದು ಹೇಳಿದ್ದಾರೆ. ಗಾಢವಾದ ನಿದ್ರೆಯಲ್ಲಿ "ಸ್ವಪ್ನ ದರ್ಶನ"ವಾಗುವದಿಲ್ಲ. ಅರನಿದ್ದೆಯಿರುವಾಗಲೇ ಆಗುವದರಿಂದ ಸ್ವಪ್ನದಲ್ಲಿಯು ವಿಷಯಗ್ರಹಣದ ಮಟ್ಟಿಗೆ ಬೋಧೆಯಿರುತ್ತದೆ.

## ದಿವಾಸ್ವಾಪರಾತ್ರಿ ಜಾಗರಣೆಗಳ ನಿಷೇಧ

**ಸರ್ವರ್ತುಷು ದಿವಾಸ್ವಾಪಃ ಪ್ರತಿಷಿದ್ಧೋಽನ್ಯತ್ರಗ್ರೀಷ್ಮಾತ್, ಪ್ರತಿಷಿದ್ಧೇಷ್ವಪಿತು ಬಾಲ ವೃದ್ಧ ಸ್ತ್ರೀಕರ್ಶಿತಕ್ಷತಕ್ಷೀಣಮದ್ಯ ನಿತ್ಯಯಾನವಾಹನಾಧ್ವ ಕರ್ಮಪರಿಶ್ರಾಂ ನಾ ನಾಮಭುಕ್ತ ವತಾಂ ಮೇದಃ ಸ್ವೇದ ಕಫ ರಸ ರಕ್ತ ಕ್ಷೀಣಾನಾಮಜೀರ್ಣಿನಾಂ ಚ ಮುಹೂರ್ತಂ ದಿವಾಸ್ವಪನಮಪ್ರತಿಷಿದ್ಧಂ ॥ ರಾತ್ರಾವಪಿ ಜಾಗರಿತವತಾಂ ಜಾಗರಿತಕಾಲಾದರ್ಧಮಿಷ್ಯತೇ ದಿವಾ ಸ್ವಪನಂ॥ ವಿಕೃತಿರ್ಹಿ ದಿವಾಸ್ವಪ್ನೋ ನಾಮ; ತತ್ರ ಸ್ವಪತಾಮ**

**ಧರ್ಮಃ ಸರ್ವದೋಷ ಪ್ರಕೋಪಶ್ಚ, ತತ್ಪ್ರಕೋಪಾಚ್ಚ ಕಾಸ ಶ್ವಾಸ ಪ್ರತಿಶ್ಯಾಯ ಶಿರೋಗೌರವಾಂಗಮರ್ದಾರೋಚಕ ಜ್ವರಾಗ್ನಿದೌರ್ಬಲ್ಯಾನಿಭವಂತಿ; ರಾತ್ರಾವಪಿ ಜಾಗರಿತವ ತಾಂ ವಾತ ಪಿತ್ತ ನಿಮಿತ್ತಾಸ್ತ ಎವೋಪದ್ರವಾ ಭವಂತಿ ॥**

( ಸುಶ್ರುತ॥ ಶಾರೀರ॥ ಅ. ೪ ಶ್ಲೋ. ೩೮ )

ಗ್ರೀಷ್ಮ ಋತುವನ್ನು ಬಿಟ್ಟು (ಜ್ಯೇಷ್ಠ ಆಷಾಢ) ಉಳಿದ ಋತುಗಳಲ್ಲಿ ಹಗಲು ನಿದ್ರಿಸುವದು (ದಿವಾಸ್ವಾಪಃ) ನಿಷಿದ್ಧವಾಗಿರುತ್ತದೆ. ದಿವಾಸ್ವಾಪ ನಿಷಿದ್ಧವಿರುವ ಋತುಗಳಲ್ಲಿಯೂ ಕೂಡಾ, ಬಾಲಕರು, ಮುದುಕರು, ವಿಶೇಷ ವಾಗಿ ಸ್ತ್ರೀ ಸೇವನೆಮಾಡುವವರು, ಘಾಯಾದಿಗಳುಳ್ಳವರು, ಕ್ಷೀಣರು, ಅಥವಾ ಕ್ಷತದಿಂದ ಕ್ಷೀಣವಾದವರು, ಮದ್ಯಸೇವನೆಮಾಡುವವರು, ನಿತ್ಯದ ಲ್ಲಿಯೂ ಯಾನಾರೋಹಣಮಾಡುವವರು, ವಾಹನಾದಿಗಳನ್ನು ನಡೆಸುವವರು, ಅಥವಾ ಒಜ್ಜೆಹೊರುವವರು, ಮಾರ್ಗಕ್ರಮಣಮಾಡುವವರು, ಕೆಲಸವಾಡಿ ಬಳಲಿದಂತವರು, ಭೋಜನಮಾಡದವರು, ಮುಂತಾದವರಿಗೆ ಹಗಲು ನಿದ್ರೆಯು ನಿಷಿದ್ಧವಿಲ್ಲವು. ಮತ್ತು ಮೇದಸ್ಸು, ಸ್ವೇದ, ಕಫ, ರಸ, ರಕ್ತಗಳು ಕ್ಷೀಣವಾದಂಥವರೂ, ಅಜೀರ್ಣವಾದವರೂ, ನಿದ್ರೆಯನ್ನು ಒಂದುಮುಹೂರ್ತ ದಷ್ಟು ಹೊತ್ತು (೪೮ ಮಿನೀಟು) ಮಾಡಬಹುದು. ಈ ಪೂರ್ವೋಕ್ತವಾದವ ರಿಗೆ ಹಗಲುನಿದ್ರೆಯನ್ನು ಒಂದು ಮುಹೂರ್ತದಷ್ಟು ಹೊತ್ತು ತೆಗೆದುಕೊಳ್ಳು ವದು ನಿಷಿದ್ಧವಾಗಲಾರದು. ರಾತ್ರಿಯಲ್ಲಿ ಜಾಗರಮಾಡಿದವರಿಗೆ ಜಾಗರದ ಅರ್ಧದಷ್ಟು ಹೊತ್ತು ಹಗಲು ನಿದ್ರೆಯು ನಿಷಿದ್ಧವಲ್ಲ ಜಾಗರದ ಅರ್ಧದಷ್ಟು ಕಾಲ ನಿದ್ರೆಮಾಡಬಹುದೆಂಬರ್ಥವು ಹಗಲು ನಿದ್ರೆಯನ್ನುಮಾಡುವದು ದೋಷಪ್ರಕೋಪಕ್ಕೆ (ವಿಕೃತಿಗೆ) ಕಾರಣವಾಗಿರುತ್ತದೆ. ಹಗಲಿನಲ್ಲಿ ನಿದ್ರಿಸು ವವರಿಗೆ ಅಧರ್ಮಪ್ರಾಪ್ತಿಯಾಗುತ್ತದೆ. ಮತ್ತು ವಾತಾದಿ ಸರ್ವದೋಷಗಳೂ ಪ್ರಕುಪಿತವಾಗುತ್ತವೆ. ದೋಷಪ್ರಕೋಪದಿಂದ ಕೆಮ್ಮು, ನೆಗಡಿ, ತಲೆ ಭಾರ ವಾಗುವದು, ಮೈ ಕೈ ನೋವು, ಅರೋಚಕ, ಜ್ವರ, ಅಗ್ನಿದೌರ್ಬಲ್ಯ (ಅಗ್ನಿಮಾಂದ್ಯ) ಮೊದಲಾದವುಗಳುತ್ಪನ್ನವಾಗುತ್ತವೆ. ಇದರಂತೆ ರಾತ್ರಿ ಯಲ್ಲಿ ಜಾಗರಣೆಮಾಡುವದರಿಂದ ವಾತಾದಿದೋಷಗಳು ಪ್ರಕುಪಿತವಾಗಿ

ಪೂರ್ವೋಕ್ತವಾದವಿಕಾರಗಳು ಸಂಭವಿಸುತ್ತವೆ. ಆದ್ದರಿಂದ ದಿವಾಸ್ವಾಪವೂ, ರಾತ್ರಿ ಜಾಗರಣೆಯೂ, ಆರೋಗ್ಯಕ್ಕೆ ಯೋಗ್ಯವಾದವಲ್ಲ ವಿಶೇಷವಾದ ಕಾರಣ ನಿಮಿತ್ತದಿಂದಾಗಿ, ಸ್ವಲ್ಪ ದಿವಾಸ್ವಾಪವನ್ನು ಅವಶ್ಯವಿದ್ದರೆ ಮಾಡ ಬಹುದೆಂದು ಹೇಳಿದ್ದಾರೆ.

ತಸ್ಮಾನ್ನಜಾಗೃಯಾದ್ರಾತ್ರೌದಿವಾಸ್ವಪ್ನಂಚವರ್ಜಯೇತ್ ॥
ಜ್ಞಾತ್ವಾದೋಷಕರಾವೇತೌಬುಧಃ ಸ್ವಪ್ನಂಮಿತಂಚರೇತ್ ॥
ಅರೋಗಃ ಸುಮನಾಹ್ಯೇವಂಬಲವರ್ಣಾನ್ವಿತೋವೃಷಃ ॥
ನಾತಿಸ್ಥೂಲಕೃಶಃ ಶ್ರೀಮಾನ್ ನರೋಜೀವೇತ್ ಸಮಾಃಶತಂ॥
(ಸುಶ್ರುತ॥ ಶಾರೀರ॥ ಅ ೪ ಶ್ಲೋ ೪೦)

ದೋಷಪ್ರಕೋಪವಿಕೃತಿ ಉಪದ್ರವಗಳುತ್ಪನ್ನವಾಗುವದರಿಂದ, ರಾತ್ರಿಯಲ್ಲಿ ಜಾಗರಣೆಯನ್ನು ಮಾಡಬಾರದು. ಇದರಂತೆ ಹಗಲು ನಿದ್ರೆಯನ್ನು ಸಹ ವರ್ಜಿಸಬೇಕು. ತಿಳುವಳಿಕೆಯುಳ್ಳವನು, ಹಗಲು ನಿದ್ರಿಸುವದೂ ರಾತ್ರಿ ಜಾಗರಣೆಯೂ ಯೋಗ್ಯವಲ್ಲವೆಂದು ತಿಳಿದು, ನಿದ್ರೆಯನ್ನು ಯೋಗ್ಯಮಿತವಾಗಿ ಸೇವಿಸಬೇಕು. ಯೋಗ್ಯ ಕಾಲವನ್ನರಿತು ನಿದ್ರೆಯನ್ನುಸೇವಿಸುವವನು, ರೋಗವಿಲ್ಲದವನೂ, ಹರ್ಷಿತನಾದವನಾಗಿಯೂ(ಸುಮನಾಃ), ಶಕ್ತಿ, ಕಾಂತಿ, ಪ್ರಜೋತ್ಪಾದನೆ ಶಕ್ತಿಯುಳ್ಳ (ವೃಷಃ) ವನೂ, ಆಗುತ್ತಾನೆ. ಅತಿಸ್ಥೂಲ ಕೃಶತೆಗಳಿಲ್ಲದೆ ಮಧ್ಯದೇಹವುಳ್ಳವನಾಗಿಯೂ, ಆರೋಗ್ಯಾದಿಗಳಿಂದ ದೃಢ ಶರೀರವುಳ್ಳವನಾಗಿ; ಮನುಷ್ಯನು ಒಂದು ನೂರು ವರುಷ ಬದುಕುತ್ತಾನೆ. ಆದ್ದರಿಂದ ನಿದ್ರೆಯನ್ನು ಯೋಗ್ಯ ಕಾಲದಲ್ಲಿ ಹಿತವನ್ನರಿತು ಸೇವಿಸಬೇಕೆಂದು ಶಾಸ್ತ್ರಕಾರರು ವಿಧಿಸಿದ್ದಾರೆ.

## ನಿದ್ರೆಯ ವಿಷಯದಲ್ಲಿ ವಿಶೇಷ

ನಿದ್ರಾಸಾತ್ಮ್ಯೀಕೃತಾಯೈಸ್ತು ರಾತ್ರೌಚಯದಿವಾದಿವಾ ॥
ದಿವಾರಾತ್ರೌಚಯೇನಿತ್ಯಂ ಸ್ವಪ್ನಜಾಗರಣೋಚಿತಾಃ ॥
ನತೇಷಾಂಸ್ವಪತಾಂದೋಷೋಜಾಗ್ರತಾಂವಾಪಿಜಾಯತೆ ॥
(ಸುಶ್ರುತ॥ ಶಾರೀರ॥ ಅ ೪ ಶ್ಲೋ ೪೧)

ಹಗಲು ರಾತ್ರಿಗಳಲ್ಲಿ ಸಮಯವರಿತು ನಿದ್ರಿಸುವದು ಯಾರಿಗೆ ಆರೋಗ್ಯಕರ (ಸಾತ್ಮ್ಯ) ವಾಗಿರುವದೋ, ಅವರು ಅದರಂತೆ ವರ್ತಿಸಿದರೆ ಬಾಧಕ ವಲ್ಲವು. ಸತ್ಯವೂ ಹಗಲು ರಾತ್ರಿಗಳಲ್ಲಿ ನಿದ್ರೆ ಜಾಗರಣೆಗಳು ಯಾರಿಗೆ ಸ್ವಾತ್ಮವಾಗಿರುತ್ತವೆಯೋ, ಅವರು ಹಗಲು ನಿದ್ರಿಸುವದರಿಂದಲೂ ರಾತ್ರಿಯಲ್ಲಿ ಜಾಗರಣೇ ಮಾಡುವದರಿಂದಲೂ ದೋಷ ಪ್ರಕೋಪವಾಗಲಾರದು. ಅರ್ಥಾತ್ ಹಗಲು ನಿದ್ರೆಯು ಯಾರಿಗೆ ಆರೋಗ್ಯಕಾರಕವಾಗಿದೆಯೋ, ಅವರು ನಿದ್ರಿಸಬಹುದು. ರಾತ್ರಿಯಲ್ಲಿ ಸ್ವಲ್ಪ ತಡೆದು ಮಲಗುವ ಅಭ್ಯಾಸವಿದ್ದು ಆರೋಗ್ಯಕ್ಕೆ ಯೋಗ್ಯವೆನಿಸುವವರು ಅದರಂತೆಯೇ ನಡೆಯಬಹುದು.

## ನಿದ್ರಾ ನಾಶವಾದರೆ ಉಪಚಾರ

ನಿದ್ರಾ ನಾಶೋऽನಿಲಾತ್ ಪಿತ್ತಾನ್ಮನಸ್ತಾಪಾತ್ ಕ್ಷಯಾದಪಿ ||
ಸಂಭವತ್ಯಭಿಘಾತಾಚ್ಚ ಪ್ರತ್ಯನೀಕೈಃ ಪ್ರಶಾಮ್ಯತಿ ||೪೨||

ನಿದ್ರಾನಾಶೋऽಭ್ಯಂಗಯೋಗೋಮೂರ್ಧ್ನಿತೈಲನಿಷೇವಣಂ ||
ಗಾತ್ರಸ್ಯೋದ್ವರ್ತನಂಚೈವಹಿತಂ ಸಂವಾಹನಾನಿಚ ||೪೩||

ಶಾಲಿಗೋಧೂಮ ಪಿಷ್ಟಾನ್ನಭಕ್ಷ್ಯೈರೈಕ್ಷವಸಂಸ್ಕೃತೈಃ ||
ಭೋಜನಂಮಧುರಂ ಸ್ನಿಗ್ಧಂ ಕ್ಷೀರಮಾಂಸ ರಸಾದಿಭಿಃ ||೪೪||

ರಸೈರ್ಬಿಲೇಶಯಾನಾಂಚ ವಿಷ್ಕಿರಾಣಾಂತಥೈವಚ ||
ದ್ರಾಕ್ಷಾಸಿತೇಕ್ಷುದ್ರವ್ಯಾಣಾಮುಪಯೋಗೋಭವೇನ್ನಿಶಿ ||೪೫||

ಶಯನಾಸನಯಾನಾನಿ ಮನೋಜ್ಞಾನಿಮೃದೂನಿಚ ||
ನಿದ್ರಾನಾಶೇತುಕುರ್ವೀತತಥಾऽನ್ಯಾನ್ಯಪಿ ಬುದ್ಧಿಮಾನ್ ||

(ಸುಶ್ರುತ|| ಶಾರೀರ|| ಅ ೪ ಶ್ಲೋ ೪೬)

ವಾತಾಧಿಕ್ಯದಿಂದಲೂ, ಪಿತ್ತದಿಂದ, ಮನಸ್ಸಿನ ಚಿಂತೆ ಮೊದಲಾದವು ಗಳಿಂದ, ಕ್ಷಯದಿಂದ ಅಥವಾ ಶರೀರದಲ್ಲಿಯ ರಸಾದಿ ಧಾತುಗಳ ಕ್ಷೀಣತೆ

ಯಿಂದ, ದೈಹಿಕ ಮಾನಸಿಕ ಆಘಾತಗಳಿಂದಲೂ, ನಿದ್ರಾನಾಶವು ಸಂಭವಿಸ
ತ್ತದೆ. ನಿದ್ರಾನಾಶವು ಯಾವ ಕಾರಣಗಳಿಂದ ಸಂಭವಿಸಿರುತ್ತದೆಂಬು
ದನ್ನು ತಿಳಿದುಕೊಂಡು, ಅವುಗಳ ಪ್ರತೀಕಾರ ರೂಪವಾದ ಚಿಕಿತ್ಸೆಗಳನ
ಮಾಡಬೇಕು.

## ನಿದ್ರಾ ನಾಶದಲ್ಲಿ ಮಾಡಬೇಕಾದ ಚಿಕಿತ್ಸೆಯು

ತಲೆಗೆ ಎಣ್ಣೆಯನ್ನುಣಿಸಬೇಕು (ತೈಲನಿವೇಷಣ), ಮೈಗೆ ತೈಲಾ
ಗಳನ್ನು ಹಚ್ಚಿಕೊಳ್ಳುವದು, ಅಥವಾ ಅಂಗಾಂಗಗಳಿಗೆ ತೈಲವನ್ನು ಹಚ
ಮರ್ದಿಸುವದು, ಹಿತವಾಗುವಂತೆದೇಹಕ್ಕೆ ಮೃದುಮರ್ದನೆಯನ್ನುಮಾಡೋಣ
ಅಭ್ಯಂಗಸ್ನಾನ ಮೊದಲಾದವುಗಳ., ನಿದ್ರಾನಾಶದಲ್ಲಿಯೋಗ್ಯವಾಗಿರುತ್ತವೆ
ಅಕ್ಕಿ ಗೋಧಿಯ ಹಿಟ್ಟು ಇವುಗಳಲ್ಲಿ ಕಬ್ಬಿನ ಹಾಲನ್ನು ಕೂಡಿಸಿ ಮಾಡಿ
ಭಕ್ಷ್ಯವು, ಯೋಗ್ಯ ಪರಿಷ್ಕೃತವಾದ ಅನ್ನ, ಹಾಲು, ಮಾಂಸ ರಸಯು
ವಾದ, ಸತ್ವವುಳ್ಳ ಮಧುರ ಪೌಷ್ಟಿಕ ಆಹಾರವನ್ನು ಉಪಯೋಗಿಸಬೇಕು
ಮಧುರವಾದ ರಸಯುಕ್ತ ಆಹಾರಗಳ ಸಂಗಡ ಭೂಮಿಯ ಹೋರಿನ
ವಾಸಮಾಡುವ ಪ್ರಾಣಿಯ ಮಾಂಸ, ಪಕ್ಷಿಗಳ ಮಾಂಸಗಳನ್ನುಪಯೋಗಿ
ಬೇಕು. ರಾತ್ರಿಯ ಸಮಯದಲ್ಲಿ ದ್ರಾಕ್ಷಿ, ಸಕ್ಕರೆ, ಕಬ್ಬಿನ ರಸ ಮೊ
ಲಾದವುಗಳಿಂದ ಕೂಡಿದ ಪದಾರ್ಥಗಳ ಉಪಯೋಗವನ್ನು ಮಾಡಬೇಕ
ಅಥವಾ ದ್ರಾಕ್ಷೆಯನ್ನೂ, ಬಿಳೇ ಕಬ್ಬಿನ ರಸ ಮಿಶ್ರಿತ ದ್ರವ್ಯಗಳನ್ನೂ ಸೇ
ಸಬೇಕು ಹಾಸಿಗೆ, ಆಸನ, ಯಾನಗಳು ಮನೋಹರವೂ, ಒರಟಾಗಿ ಮೈ
ನೋವನ್ನುಂಟುಮಾಡದಿರುವವೂ,ಮೃದುವಾಗಿಯೂ ಸ್ವರ್ಶಾನುಕೂಲಹಿತಕ
ವಾದವುಗಳನ್ನು ಯೋಜಿಸಬೇಕು. ಇವೆಲ್ಲ ಉಪಾಯಗಳನ್ನು ದೋಷಾ
ಗಳನ್ನನುಲಕ್ಷಿಸಿಯೋಜಿಸಬೇಕು ಇದರಿಂದ ನಿದ್ರೆಯು ಚನ್ನಾಗಿ ಬ
ತ್ತದೆ. ನಿದ್ರಾನಾಶದಲ್ಲಿ ವೈದ್ಯನು ಸಮಯಕ್ಕನುಗುಣವಾಗಿ ಸ್ವಬುದ್ಧಿಯಿಂ
ವಿಚಾರಿಸಿ,ನಿದ್ರಾಕಾರಕವಾದ ಆಹಾರೋಪಚಾರಗಳನ್ನು ಯೋಜಿಸಬಹುದು

## ಅತಿನಿದ್ರೆಯ ನಿವಾರಣೋಪಾಯ

ನಿದ್ರಾತಿಯೋಗೇವಮನಂ ಹಿತಂ ಸಂಶೋಧನಾನಿಚ ||

**ಲಂಘನಂ ರಕ್ತಮೋಕ್ಷಶ್ಚ ಮನೋವ್ಯಾಕುಲನಾನಿಚ ||**
(ಸುಶ್ರುತ|| ಶಾರೀರ|| ಅ ೪ ಶ್ಲೋ ೪೭)

ನಿದ್ರೆಯು ಹೆಚ್ಚಾದರೆ ವಮನ (ವಾಂತಿ ಮಾಡಿಸೋಣ) ಸಂಶೋಧನ ಔಷಧೋಪಚಾರಗಳನ್ನು ಯೋಜಿಸಬೇಕು. ಲಂಘನ (ಉಪವಾಸ) ರಕ್ತ ಮೋಕ್ಷಣ, ಮನಸ್ಸಿಗೆ ದುಃಖವನ್ನುತ್ಪನ್ನ ಮಾಡೋಣದರಿಂದಲೂ ಅತಿ ನಿದ್ರೆಯು ಕಡಿಮೆಯಾಗುತ್ತದೆ. ನಿದ್ರೆಯುಕ್ಷೀಣತೆಯಾದರೆ ನಿದ್ರೆ ಬರು ವಂತೆಯೂ, ಅತಿಯಾದರೆ ಕಡಿಮೆಯಾಗುವಂತೆಯೂ ಉಪಚಾರಗಳನ್ನು ಹೇಳಿದ್ದಾರೆ. ಇದರಿಂದ ಹಿಂದೆ ನಿದ್ರೆಯನ್ನು ಹೊಗಳಿ ನಿದ್ರೆಯಿಂದಲೇ ಸುಖ ದುಃಖ ಬದುಕುವಿಕೆ ಮೊದಲಾದವುಗಳೆಂದು ಹೇಳಿರುವದು, ಸಮ ವಾದ ನಿದ್ರೆಯನ್ನುಕುರಿತು ಹೇಳಿದ್ದಾರೆಂದು ತಿಳಿಯಬೇಕು. ಸಮನಿದ್ರೆಯು ಆರೋಗ್ಯದಾಯಕವಾಗಿರುತ್ತದೆ ಅದೇ ನಿದ್ರೆಯ ಅತಿಯೋಗ ಅಯೋಗ ಗಳು ದೋಷಯುಕ್ತವೇ ಆಗಿರುತ್ತವೆ.

## ರಾತ್ರಿ ಜಾಗರಣೆಗೆಯೋಗ್ಯರು

**ಕಫಮೇದೋವಿಷಾರ್ತಾನಾಂ ರಾತ್ರೌಜಾಗರಣಂ ಹಿತಂ ||**
(ಸುಶ್ರುತ|| ಶಾರೀರ||)

ಕಫ ಮತ್ತು ಮೇದೋವೃದ್ಧಿಗಳಿಂದ ನರಳುವವರು, ಹಾಗೂ ವಿಷಭಾ ಧೆಯುಳ್ಳವರು, ರಾತ್ರಿಯಲ್ಲಿ ಜಾಗರಣೆಮಾಡುವದು ಹಿತಕರವಾಗಿದೆ.

# ಹಗಲು ನಿದ್ರೆಗೆ ಯೋಗ್ಯರು

**ದಿವಾಸ್ವಪ್ನಶ್ಚ ತೃಟ್ ಶೂಲಹಿಕ್ಕಾಜೀರ್ಣಾತಿಸಾರಿಣಾಂ ||**
( ಸುಶ್ರುತ|| ಶಾರೀರ|| ಅ. ೪ ಶ್ಲೋ ೪೮ )

ಹಗಲು ನಿದ್ರೆಯು ನಿಷಿದ್ಧವಾಗಿದ್ದರೂ ರೋಗಾವಸ್ಥೆಗನುಗುಣವಾಗಿ ಹಿತಕರವೂ ಆಗಿರುತ್ತದೆ. ಅಂತೆಯೇ ತೃಷ್ಣಾ (ನೀರಡಿಕೆ), ಶೂಲೆ, ಬಿಕ್ಕು

(ಹಿಕ್ಕಾ), ಅಜೀರ್ಣ, ಮತ್ತೂ ಅತಿಸಾರ ರೋಗಗಳಿಂದ ನರಳುವವರಿಗೆ ಹಗಲು ನಿದ್ರೆಯು ಹಿತಕರವಾಗಿದೆ. ರಾತ್ರಿಯಲ್ಲಿ ಜಾಗರಣೆಯೂ, ಹಗಲು ನಿದ್ರಿಸುವದೂ, ಆರೋಗ್ಯಕ್ಕೆ ಹಾನಿಕರವಾದದ್ದೆಂದು ನಿಷೇಧಿಸಿದ್ದರೂ ಸಹ ಕೆಲವೊಂದು ರೋಗಗಳಲ್ಲಿ; ದೋಷಪ್ರತೀಕಾರರೂಪ ಚಿಕಿತ್ಸೆಗಾಗಿ ಹಿತಕರವೆಂದು ಯೋಜಿಸಿದ್ದಾರೆ. ಆದ್ದರಿಂದ ಈ ರೋಗಿಗಳ ಹೊರತಾದವರಿಗೆ ನಿಷಿದ್ಧವೆಂದೂ ದೋಷಪ್ರಕೋಪಕಾರಕವೆಂದೂ ತಿಳಿಯಬೇಕು.

## ಮಬ್ಬಿನ (ತಂದ್ರಾ) ಲಕ್ಷಣ

**ಇಂದ್ರಿಯಾರ್ಥೇಷ್ವಸಂಪ್ರಾಪ್ತಿರ್ಗೌರವಂ ಜೃಂಭಣಂ ಕ್ಲಮಃ॥**
**ನಿದ್ರಾರ್ತಸ್ಯೇವಯಸ್ಯೇಹಾತಸ್ಯ ತಂದ್ರಾಂ ವಿನಿರ್ದಿಶೇತ್ ॥**

( ಸುಶ್ರುತ॥ ಶಾರೀರ॥ ಅ. ೪ ಶ್ಲೋ. ೪೯ )

ತಮಸ್ಸಿಂದುತ್ಪನ್ನವಾಗುವ ಮೋಹ (ಆವರಣ) ರೂಪವಾದ ನಿದ್ರೆಯ ಅನುಸರಣೆಯನ್ನುಮಾಡುವ (ನಿದ್ರೆಯಂತಿರುವ), ತಂದ್ರಾ ಸ್ವರೂಪವನ್ನು ಹೇಳುತ್ತಾರೆ. ಇಂದ್ರಿಯಕ್ಕೆ ವಿಷಯಗಳಾದ ಶಬ್ದಾದಿಗಳನ್ನು ಗ್ರಹಿಸಲಿಕ್ಕೆ ಬಾರದೇ ಇರೋಣ, ದೇಹೇಂದ್ರಿಯಾದಿಗಳಲ್ಲಿ ಜಡತ್ವ ಉಂಟಾಗುವದು, ಆಕಳಿಕೆ, ಬಳಲುವಿಕೆ, ಮೊದಲಾದವುಗಳುಂಟಾಗುತ್ತವೆ. ನಿದ್ರೆಯಿಂದ ಯಾವನಿಗೆ ಬಾಧಿಸಲ್ಪಡುವಂತೆ ಅನಿಸುತ್ತದೆಯೋ, ಅವನಿಗೆ ತಂದ್ರಾ (ಮಬ್ಬು) ಉತ್ಪನ್ನವಾಗಿದೆಯೆಂದು ತಿಳಿಯಬೇಕು. ನಿದ್ರೆಯಲ್ಲಿಯೂ ಸಹ ಇಂದ್ರಿಯ ವಿಷಯಗಳ ಗ್ರಹಣವಿರುವದಿಲ್ಲವಾದ್ದರಿಂದ, ನಿದ್ರೆ ತಂದ್ರಾಗಳಲ್ಲಿ ಭೇದವೇ ಇರುವದಿಲ್ಲೆಂದು ಅನಿಸುವದು. ವಸ್ತುತಃ ಭೇದವಿದ್ದೇ ಇರುತ್ತದೆ. ಹೇಗಂದರೆ:— ನಿದ್ರೆಯಲ್ಲಿ ಎಚ್ಚರವಾದ ನಂತರ ಬಳಲಿಕೆ ಇರುವದಿಲ್ಲ. ತಂದ್ರಾದಲ್ಲಿ (ಮಬ್ಬಿನಲ್ಲಿ) ಎಚ್ಚರವಿದ್ದರೂ ಸಹ ಬಳಲುವಿಕೆ ಇರುತ್ತದೆ. ಇದೇ ನಿದ್ರೆ ಮಬ್ಬುಗಳಲ್ಲಿಯ ವಿಶೇಷ ಭೇದವು. ಇದರಿಂದ ನಿದ್ರಾ ತಂದ್ರಾ ಒಂದೇ ಅಲ್ಲವೆಂದು ಸಿದ್ಧವಾಗುತ್ತದೆ.

# ಆಕಳಿಕೆಯ (ಜೃಂಭಾ) ಲಕ್ಷಣ

**ಪೀತ್ವೈಕಮನಿಲೋಚ್ಛ್ವಾಸಮುದ್ವೇಷ್ಟನ್ ವಿವೃತಾನನಃ ॥**
**ಯುಂ ಮುಂಚತಿಸನೇತ್ರಾಸ್ರಂ ಸಜೃಂಭ ಇತಿ ಸಂಜ್ಞಿತಃ ॥**

( ಸುಶ್ರುತ॥ ಶಾರೀರ॥ ಅ. ೪ ಶ್ಲೋ. ೫೦ )

ಬಾಯಿಯನ್ನು ತೆರೆದವನಾಗಿ ದೊಡ್ಡದಾದ ಶ್ವಾಸವನ್ನು ಗ್ರಹಿಸಿ ಉದ್ವೇಗದಿಂದ ಕಣ್ಣೀರಿನಿಂದ ಸಹಿತವಾದ ಶ್ವಾಸವನ್ನು ಬಿಡುತ್ತಾನೆಯೋ, ಅದಕ್ಕೆ ಆಕಳಿಕೆ (ಜೃಂಭ) ಎಂದು ಅನ್ನುತ್ತಾರೆ ಆಕಳಿಕೆ ಬರುವಾಗ ಮೊದಲು ಬಾಯಿ ತೆರೆದು ಹೆಚ್ಚು ಶ್ವಾಸವನ್ನು ಗ್ರಹಿಸುತ್ತಾನೆ ನಂತರ ಶ್ವಾಸವನ್ನು ಕೆಲವು ಹೊತ್ತು ಬಾಯಲ್ಲಿಯೇ ಇಟ್ಟುಕೊಂಡು ಉದ್ವೇಗ ಹೊಂದಿದವನಾಗಿ ಆಕಳಿಸಿ, ಶ್ವಾಸವನ್ನೂ ಕಣ್ಣೀರನ್ನೂ ಬಿಡುತ್ತಾನೆ ಹೀಗೆ ಆಕಳಿಕೆ ಬರಲಿಕ್ಕೆಹತ್ತಿತೆಂದರೆ ವಾಡಿಕೆಯಲ್ಲಿ ಬೇಸರ ಬಂದಿದೆಯೆಂದು ಹೇಳುತ್ತಾರೆ. ಇದು ಸಮಂಜಸವಲ್ಲ. ಯಾಕಂದರೆ, ನಿದ್ರೆಯ ಪೂರ್ವದಲ್ಲಿ ಇಂದ್ರಿಯಗಳು ಕೆಲಸಮಾಡದ ಸ್ಥಿತಿಯಲ್ಲಿರುತ್ತವೆಯಾದ್ದರಿಂದ ಹೀಗಾಗುತ್ತದೆ. ನಿದ್ರೆಯು ಬರುತ್ತದೆ ಎನ್ನುವದರ ಪೂರ್ವ ಲಕ್ಷಣವಾದ್ದರಿಂದ ನಿದ್ರೆಗೆ ಸಂಬಂಧಪಟ್ಟುಹೇಳಿದ್ದಾರೆ. ಆದ್ದರಿಂದ ಆಕಳಿಕೆಗೆ ಬೇಸರವೇ ಕಾರಣವಲ್ಲದೆ, ನಿದ್ರೆಯೂ ಕಾರಣವಾಗಿರುತ್ತದೆಂದು ತಿಳಿಯಬೇಕು. ಆನುಷಂಗಿಕವಾಗಿ ಬೇಸರವು ಇರುತ್ತದೆ. ಬೇಸರವೆಂದರೆ ನಿದ್ರೆಯು ಬರುವ ಪೂರ್ವದಲ್ಲಿ ಇಂದ್ರಿಯಗಳು ಕೆಲಸಮಾಡಲಾರದ ಉದಾಸೀನ ಸ್ಥಿತಿಯಾಗಿರುತ್ತದೆ.

# ಶೀಸುವದರ ಲಕ್ಷಣ

**ಪ್ರಾಣೋದಾನೌ ಸಮೌಸ್ಯಾತಾಂ ಮೂರ್ಧ್ನಿಸ್ರೋತಃಪಥಿಸ್ಥಿತೌ॥ ನಸ್ತಃ ಪ್ರವರ್ತತೇಶಬ್ದಃ ಕ್ಷವಥುಂತಂವಿನಿರ್ದಿಶೇತ್ ॥**

(ಸುಶ್ರುತ ಟೀಕಾ)

ಪ್ರಾಣ ಉದಾನವಾಯುಗಳು ಸಮಪ್ರಮಾಣವುಳ್ಳವುಗಳಾಗಿ ತಲೆಯಲ್ಲಿ ಸ್ರೋತೋ ಮಾರ್ಗದಲ್ಲಿ ನಿಂತವುಗಳಾಗುತ್ತವೆ ನಂತರ "ನಸ್ತಃ" ಎಂಬ ಶಬ್ದವು ಉತ್ಪನ್ನವಾಗಿ ವಾಯುವಿನಿಂದ ಕೂಡಿ ಹೊರಗೆ ಬರುತ್ತದೆ. ಇದನ್ನು ಶೀನು (ಕ್ಷವಥು) ಎಂದು ತಿಳಿಯಬೇಕು. ಮೂಗಿನಲ್ಲಿ ನಸ್ಯಾದಿಗಳನ್ನು ಏರಿಸಿದಾಗಲೂ, ಅಥವಾ ಮೇಲಕ್ಕೆ ನೋರಿಮಾಡಿ ಸೂರ್ಯನ ಕಿರಣವು ಮೂಗಿನಲ್ಲಿ ಬರುವಂತೆ ಮಾಡಿದಾಗಲೂ, ಇಲ್ಲವೇ ವಸ್ತ್ರದ ಚುಂಗನ್ನು ಮೂಗಿನಲ್ಲಿ ಆಡಿಸಿದಾಗಲೂ ಶೀನು ಬರುತ್ತದೆ

# ಕ್ಲಮಸ್ಯ ಲಕ್ಷಣಂ

**ಯೋಽನಾಯಾಸಶ್ರಮೋದೇಹೇಪ್ರವೃದ್ಧಃ ಶ್ವಾಸವರ್ಜಿತಃ ॥**
**ಕ್ಲಮಃ ಸಇತಿವಿಜ್ಞೇಯಃ ಇಂದ್ರಿಯಾರ್ಥಪ್ರಬಾಧಕಃ ॥**

(ಸುಶ್ರುತ॥ ಶಾರೀರ॥ ಅ ೪ ಶ್ಲೋ ೫೧)

ಆಯಾಸವಾಗುವಂಥ ಕೆಲಸವನ್ನು ಮಾಡದೆ ದೇಹದಲ್ಲಿ ಶ್ರಮವು ಹೆಚ್ಚಿಗೆಯಾಗೋಣ, ಶ್ರಮವಾದಾಗಿನಂತೆ ಶ್ವಾಸದ ಹೆಚ್ಚುವಿಕೆ ಇಲ್ಲದಿರುವದು "ಕ್ಲಮವೆಂದು" ತಿಳಿಯಬೇಕು. ಕ್ಲಮವಾದಾಗಲೂಸಹ ಇಂದ್ರಿಯಗಳು ವಿಷಯ ಸ್ವೀಕಾರ ಮಾಡಲು ಸಮರ್ಥವಾಗುವದಿಲ್ಲ. ಆದ್ದರಿಂದ ಇಂದ್ರಿಯಗಳ ಅರ್ಥಗ್ರಹಣದಲ್ಲಿ ಭಾಧಕವಾಗಿರುತ್ತದೆಂದು ಹೇಳಿದ್ದಾರೆ.

# ಉತ್ಕ್ಲೇಶ ಲಕ್ಷಣವು

**ಉತ್ಕ್ಲಿಶ್ಯಾನ್ನಂ ನನಿರ್ಗಚ್ಛೇತ್ ಪ್ರಸೇಕಷ್ಠೀವನೇರಿತಂ ॥**
**ಹೃದಯಂ ಪೀಡ್ಯತೇಚಾಸ್ಯತಮುತ್ಕ್ಲೇಶಂ ವಿನಿರ್ದಿಶೇತ್ ॥**

(ಸುಶ್ರುತ॥ ಶಾರೀರ॥ ಅ ೩ ಶ್ಲೋ ೫೩)

ಅತ್ಯಂತ ಪ್ರಬಲವಾದ ಕಫದ ಹೆಚ್ಚುವಿಕೆಯಿಂದ ಪ್ರೇರಿತವಾದ, ಅಥವಾ ಪ್ರಾಣವಾಯು ಕೋಷ್ಠಗತವಾದ ವಾಯುಗಳಿಂದ ನೂಕಲ್ಪಡತಕ್ಕದ್ದಾಗಿ, ಅನ್ನವು ಕ್ಲೇಶವುಳ್ಳದ್ದಾಗಿ ಹೊರಗೆ ಸಹ ಬರದೆ ತಡೆದು ನಿಲ್ಲುತ್ತದೆ. ಹೀಗೆ ತಡೆದು ನಿಂತ ಅನ್ನವು ಹೃದಯ ಪ್ರದೇಶದಲ್ಲಿ ಪೀಡೆಯನ್ನುತ್ಪನ್ನ ಮಾಡುತ್ತದೆ. ಅದನ್ನು ಉತ್ಕ್ಲೇಶವೆಂದು ತಿಳಿಯಬೇಕು.

## ಗ್ಲಾನಿಯ ಲಕ್ಷಣ

**ವಕ್ತ್ರೇಮಧುರತಾತಂದ್ರಾಹೃದಯೋದ್ವೇಷ್ಟನಂಭ್ರಮಃ ॥**
**ನಚಾನ್ನಮಭಿಕಾಂಕ್ಷೇಂತಗ್ಲಾನಿಂತಸ್ಯವಿನಿರ್ದಿಶೇತ್ ॥**

(ಸುಶ್ರುತ॥ ಶಾರೀರ॥ ಅ ೪ ಶ್ಲೋ೦ ೫೪)

ಬಾಯಲ್ಲಿ ಮಧುರತೆ ಉತ್ಪನ್ನವಾಗುವಿಕೆ, ಮಬ್ಬು, ಎದೆಯಲ್ಲಿ ನೋವಾಗುವದು, ತಲೆತಿರುಗೋಣ, ಅನ್ನೇಚ್ಛೆ ಇಲ್ಲದೇಇರುವಿಕೆಯು ಮೊದಲಾದವುಗಳಿದ್ದವನಿಗೆ, ಗ್ಲಾನಿಯೆಂದು ತಿಳಿಯಬೇಕು.

## ಜಡತೆಯ ಲಕ್ಷಣ

**ಆರ್ದ್ರಚರ್ಮಾವನದ್ಧಂವಾಯೋಗಾತ್ರಂಮನ್ಯತೇನರಃ ॥**
**ತಥಾಗುರುಶಿರೋsತ್ಯರ್ಥಂ ಗೌರವಂತದ್ವಿನಿರ್ದಿಶೇತ್ ॥**

(ಸುಶ್ರುತ॥ ಶಾರೀರ॥ ಅ ೪ ಶ್ಲೋ ೫೫)

ಹಸಿಯದಾದ ಚರ್ಮವನ್ನು ಸುತ್ತಿಕೊಂಡಂತೆ ಯಾವನ ಅವಯವವು ಭಾರವಾಗಿರುತ್ತದೆಯೋ ಹಾಗೂ ಭಾರವಾಗಿರುವಂತೆ ಯಾವ ಮನುಷ್ಯನು ತಿಳಿಯುತ್ತಾನೆಯೋ, ಮತ್ತು ಯಾವನತಲೆಯು ಅತಿಭಾರವಾಗಿರುತ್ತದೆಯೋ ಅದಕ್ಕೆ ಗುರುತ್ವ, ಗೌರವವೆಂದು ಹೇಳಬೇಕು.

## ಮೂರ್ಛಾದಿಗಳಲ್ಲಿಯ ದೋಷಪ್ರಕೋಪ

**ಮೂರ್ಛಾಪಿತ್ತತಮಃಪ್ರಾಯಾ,ರಜಃಪಿತ್ತಾನಿಲಾದ್ಭ್ರಮಃ॥**
**ತಮೋವಾತಕಫಾತ್ತಂದ್ರಾ, ನಿದ್ರಾಶ್ಲೇಷ್ಮತಮೋಭವಾ ॥**
(ಸುಶ್ರುತ॥ ಶಾರೀರ॥ ಅ. ೪ ಶ್ಲೋ. ೫೬)

ಪಿತ್ತ ಮತ್ತು ತಮೋಽಧಿಕ್ಯದಿಂದ ವಿಶೇಷವಾಗಿ "ಮೂರ್ಛೆ" ಉತ್ಪನ್ನವಾಗುತ್ತದೆ ರಜೋಗುಣ, ಪಿತ್ತ, ವಾಯುಗಳಾಧಿಕ್ಯದಿಂದ "ಭ್ರಮೆಯು" ಉಂಟಾಗುತ್ತದೆ ತಮುಸ್ಸು ವಾತ ಕಫಗಳಿಂದ "ತಂದ್ರಾ" ಉತ್ಪನ್ನವಾಗುತ್ತದೆ ಕಫ ಮತ್ತು ತಮೋಽಧಿಕ್ಯದಿಂದ "ನಿದ್ರೆಯು" ಉಂಟಾಗುತ್ತದೆ. ಹೀಗೆ ಯಾವ ದೋಷಾದಿಗಳ ಆಧಿಕ್ಯದಿಂದ ಮೂರ್ಛಾದಿಗಳು ಉತ್ಪನ್ನವಾಗುತ್ತವೆಂಬುವದನ್ನು ವಿವರಿಸಿದ್ದಾರೆ. ಅತ್ಯಂತ ಮಹತ್ವವೂ ಜಟಿಲವೂ ಆದ ಹೃದಯ, ಮನಸ್ಸು, ಜ್ಞಾನೇಂದ್ರಿಯ, ಬುದ್ಧಿ, ಆತ್ಮ, ಮೊದಲಾದವುಗಳನ್ನು ವಿವರಿಸಿ ಹೇಳಿದ್ದಾಯಿತು. ಸದ್ಯಃ ಕ್ರಮಪ್ರಾಪ್ತವಾದ ಆಶಯಾದಿಗಳ ವಿವರಣೆಯು ಮುಂದುವರೆಯುತ್ತದೆ.

## (೩೪) ಆಶಯ ವಿವರಣೆಯು

ದೇಹದಲ್ಲಿಯ ದ್ರವ ರೂಪ ಪದಾರ್ಥ ಮತ್ತು ದ್ರವ್ಯಗಳನ್ನು ತುಂಬಿಡಲಿಕ್ಕಾಗಿ ಬೇರೆಬೇರೆ ಸ್ಥಾನಗಳಿರುತ್ತವೆ, ನಾವು ಪಾತ್ರೆಗಳಲ್ಲಿ ಉಪಯುಕ್ತ ಪದಾರ್ಥಗಳನ್ನು ವ್ಯವಸ್ಥಿತವಾಗಿಡುವಂತೆ, ದೇಹದಲ್ಲಿಯ "**ಆಶಯಗಳಲ್ಲಿ**" ಜೀವನೋಪಯೋಗ ದ್ರವ್ಯಗಳು ಇರುತ್ತವೆ. ಆಶಯಗಳೆಂದರೆ ಮಾಂಸದಿಂದ ನಿರ್ಮಿತವಾದ ಚೀಲಗಳು ಅವುಗಳ ಒಳಗೆ ಪೊಳ್ಳುಭಾಗಗಳಲ್ಲಿ ಶರೀರದ ಸಂಬಂಧಿಯಾದ ಪದಾರ್ಥಗಳಿರುತ್ತವೆ **ಆಶಯಗಳ ಆಕೃತಿ, ವರ್ಣ, ಸ್ಥಿತಿ, ಕ್ರಿಯಾ, ಸ್ಥಾನಾದಿಗಳು ದೇಹಕ್ಕನುಸರಿಸಿಯೇ** ಇರುತ್ತವೆ ದೇಹದಲ್ಲಿಯ ಸ್ಥಾನ ಸನ್ನಿವೇಶಗಳಿಗನುಗುಣವಾಗಿ ವರ್ತುಲ, ದೀರ್ಘ, ಹ್ರಸ್ವ, ಸ್ಥೂಲ, ಮುಂತಾದ ಆಕಾರಗಳೂ, ಆಯಾವ ದ್ರವ್ಯಗಳಿಗನುಗುಣವಾದ ವರ್ಣಗಳೂ, ದೇಹ ವ್ಯಾಪಾರಕ್ಕನುಗುಣವಾಗಿ ದಪ್ಪ ಅಥವಾ ಮೃದು

ವಾಗಿಯೂ, ಆಕುಂಚನಪ್ರಸಾರಣ ಕ್ರಿಯೆಗಳಿಂದ ರಸಾದಿಗಳ ಸಂಗ್ರಹ ಮತ್ತೂ ಧಮನೀಮಾರ್ಗವಾಗಿ ಸಂಚರಣೆಗಳನ್ನುಮಾಡಿಸತಕ್ಕವುಗಳಾಗಿಯೂ, ಆಯಾಯ ದ್ರವ್ಯಗಳಿಗೆ ಸ್ಥಾನಗಳಾಗಿಯೂ ಇರುತ್ತವೆ. "ಆಸಮಂತಾಂತ್ ಶೇತೇಅಸ್ಮಿನ್ ಇತಿಆಶಯಃ" ಆಯಾಯ ಪದಾರ್ಥಗಳು ಅದರಲ್ಲಿ ತುಂಬಿರು ವದರಿಂದ "ಆಶಯ" ವೆಂಬ ಹೆಸರು ಬಂದಿರುತ್ತದೆ

## ಆಶಯಗಳು

**ಆಶಯಾಸ್ತು:— ವಾತಾಶಯಃ, ಪಿತ್ತಾಶಯಃ, ಶ್ಲೇಷ್ಮಾ ಶಯೋ,ರಕ್ತಾಶಯ, ಆಮಾಶಯಃ,ಪಕ್ವಾಶಯೋ, ಮೂತ್ರಾ ಶಯಃ, ಸ್ತ್ರೀಣಾಂಗರ್ಭಾಶಯೋಽಷ್ಟಮ ಇತಿ ||**

(ಸುಶ್ರುತ|| ಶಾರೀರ|| ಅ ೫ ಶ್ಲೋ ೮)

(೧) ವಾತಾಶಯ (೨) ಪಿತ್ತಾಶಯ (೩) ಶ್ಲೇಷ್ಮಾಶಯ (೪) ರಕ್ತಾಶಯ (೫) ಆಮಾಶಯ (೬) ಮಲಾಶಯ (೭) ಮೂತ್ರಾ ಶಯಗಳೆಂಬ" ಏಳು ಆಶಯಗಳು ಇರುತ್ತವೆ. ಇದು ಸುಶ್ರುತಾಚಾರ್ಯರ ಮತವಾಗಿರುತ್ತದೆ.

ಸ್ತ್ರೀಯರಿಗೆ "ಗರ್ಭಾಶಯವು" ಅಧಿಕವಾದ ಎಂಟನೇ ಆಶಯವಾಗಿ ರುತ್ತದೆ "ಶಾರ್ಙ್ಗಧರ ಮತದಂತೆ" ಸ್ತ್ರೀಯರಿಗೆ "ಸ್ತನ್ಯಾಶಯೌ" ಹಾಲಿನ ಸ್ಥಾನವಾದ ಮೊಲೆಗಳೆರಡೂ ಆಶಯಗಳೆಂದು ಗ್ರಹಿಸಿದ್ದಾರೆ. ಹೀಗಿ ರುವದರಿಂದ ಪುರುಷರಿಗೆ (೭) ಆಶಯಗಳೂ, ಸ್ತ್ರೀಯರಿಗೆ (೧೦) ಆಶಯ ಗಳೂ ಇರುತ್ತವೆ.

## ಆಶಯಗಳ ಸ್ಥಾನಗಳು

**ಶ್ಲೇಷ್ಮಾಶಯಃ ಸ್ಯಾದುರಸಿತಸ್ಮಾದಾಮಾಶಯಸ್ತ್ವಧಃ ||**
**ಊರ್ಧ್ವಮಗ್ನ್ಯಾಶಯೋನಾಭೇರ್ವಾಮಭಾಗೇವ್ಯವಸ್ಥಿತಃ ||**
**ತಸ್ಯೋಪರಿತಿಲಂಜ್ಞೇಯಂತದಧಃ ಪವನಾಶಯಃ ||೮||**

**ಮಲಾಶಯಸ್ತ್ವಧಸ್ತಸ್ಮಾದ್ಬಸ್ತಿರ್ಮೂತ್ರಾಶಯಸ್ತ್ವಧಃ ||**
**ರಕ್ತಾಶಯಃ ಸ್ಯಾದುರಸಿಜ್ಞೇಯಾಃ ಸಪ್ತಾಶಯಾಸ್ತ್ವಿಮೇ ||**

(ಶಾರ್ಙ್ಗಧರ|| ಪ್ರ. ಖ. ೫ ಶ್ಲೋ ೭)

## ಸ್ತ್ರೀಯರ ಅಧಿಕಾಶಯಗಳು (೩)

**ಪುರುಷೇಭ್ಯೋಽಧಿಕಾಶ್ಚಾನ್ಯೇ ನಾರೀಣಾಮಾಶಯಾಸ್ತ್ರಯಃ ||**
**ಧರಾಗರ್ಭಾಶಯಃ ಪ್ರೋಕ್ತಃ ಸ್ತನೌ ಸ್ತನ್ಯಾಶಯೌ ಮತೌ ||೧೦||**

ಎದೆಯಲ್ಲಿ "ಶ್ಲೇಷ್ಮಾಶಯವು" ಇರುತ್ತದೆ ಇದರಲ್ಲಿ ಕಫವು ಆಶ್ರಿತವಾಗಿರುತ್ತದೆ. ದೇಹದಲ್ಲಿ ಸೌಮ್ಯಗುಣದಿಂದ ಆರ್ದ್ರತೆಯನ್ನೂ ಸಂದುಗಳಲ್ಲಿದ್ದುಕೊಂಡು ಚಲನವಲನಕ್ಕೆ ಸುಗಮತೆಯನ್ನೂ ಉಂಟುಮಾಡುವ ಕಫದ ಮುಖ್ಯ ಸ್ಥಾನವಾಗಿರುತ್ತದೆ.

"ಆಮಾಶಯ" ಊಟಮಾಡಿದ ಅಪಕ್ವವಾದ ಆಹಾರ ರಸವು ಇರುವ ಸ್ಥಾನವಾಗಿರುತ್ತದೆ. ಈ ಆಮಾಶಯವು ಶ್ಲೇಷ್ಮಾಶಯದ ಕೆಳಭಾಗದಲ್ಲಿರುತ್ತದೆ. ಊಟ ಮಾಡಿದ ಪಕ್ವವಾಗದಿರುವ ಆಹಾರ ರಸವು ಮೊದಲ ಆಮಾಶಯಕ್ಕೆ ಹೋಗುತ್ತದೆ. ಅಲ್ಲಿ ಆಮಾಶಯದ ಆಕುಂಚನ ಪ್ರಸರಣಗಳಿಂದ ಸಾಮಾನ್ಯತಃ ಪಕ್ವವಾಗುತ್ತದೆ ನಂತರ ಕರುಳಿನಲ್ಲಿ ಹೋಗುತ್ತದೆ ಆಗ ಪಿತ್ತಾಶಯದಿಂದ ಪಿತ್ತರಸವು ಹೊರಬಿದ್ದು ಬಂದು ಕೂಡಿಕೊಳ್ಳುತ್ತದೆ. ಆಹಾರದಲ್ಲಿಯ ಸ್ನಿಗ್ಧ ಭಾಗವೂ ಜೀರ್ಣವಾಗದ ಕಠಿಣ ಭಾಗವೂ ಕರುಳಿನ ಹಿಚುಕುವಿಕೆಗಳಿಂದ ಪಚನವಾಗುತ್ತದೆ.

"ಪಿತ್ತಾಶಯ" ನಾಭಿಯ ಮೇಲ್ಭಾಗದಲ್ಲಿ ಎಡಗಡೆಯಲ್ಲಿ ಅಗ್ನ್ಯಾಶಯವಿರುತ್ತದೆ. ಪಿತ್ತಾಶಯಕ್ಕೆ ಅಗ್ನ್ಯಾಶಯವೆಂದು ಹೇಳಿದ್ದಾರೆ. ವಸ್ತುತಃ ಪಿತ್ತಾಶಯವು ಬಲಗಡೆಯಲ್ಲಿರುತ್ತದೆ. ಇಲ್ಲಿ ಪ್ರಮಾದದಿಂದ ಹೀಗಾಗಿರಬಹುದೆಂದು ಅನಿಸುತ್ತದೆ. ಯಕೃತ್ತಿನಲ್ಲಿ ತಯಾರಾದ ಪಿತ್ತ ರಸವು ಪಿತ್ತಾಶಯದಲ್ಲಿ ಸಂಗ್ರಹವಾಗಿರುತ್ತದೆ. ಆಹಾರ ಪಚನ ವೇಳೆಯಲ್ಲಿ ಪಿತ್ತರಸವು

ಸಣ್ಣ ಕರುಳಲ್ಲಿಯ ಆಹಾರದಲ್ಲಿ ಬಂದು ಕೂಡಿಕೊಳ್ಳುತ್ತದೆ ಇದರಿಂದ ಆಹಾರವು ಜೀರ್ಣವಾಗುತ್ತದೆ ಪಿತ್ತರಸಕ್ಕೆ ಅಗ್ನಿಯೆಂದು ಹೇಳಿದ್ದಾರೆ. ಇದರಿಂದ ಪಿತ್ತಾಶಯುವೇ ಅಗ್ನ್ಯಾಶಯುವೆಂದು ಗ್ರಹಿಸಬೇಕು. ಪಿತ್ತಾಶಯುದ ಮೇಲ್ಗಡೆಯಲ್ಲಿ "ತಿಲ" ಎಂಬಪಿಪಾಸಾ ಸ್ಥಾನವಿರುತ್ತದೆ.

**"ವಾತಾಶಯು"** ವಾಯುವಿಗೆ ಆಶ್ರಯವಾದ ಸ್ಥಾನಕ್ಕೆ ವಾತಾಶಯುವೆಂಬ ಹೆಸರು. ಪಿತ್ತಾಶಯುದ ಅಧೋಭಾಗದಲ್ಲಿರುತ್ತದೆ. ನಾಭಿಯ ಕೆಳಭಾಗದಲ್ಲಿ ವಾತಾಶಯುವಿದೆಯೆಂದು **" ವಾಗ್ಭಟದಲ್ಲಿಯು ವಾತಸ್ಥಾನ "** ನಿರ್ದೇಶವಿರುತ್ತದೆ. ದೇಹದಲ್ಲಿಯು ಮುಖ್ಯವಾದ ವಾತಸ್ಥಾನವು ವಾತಾಶಯುವಾಗಿರುತ್ತದೆ. ಪ್ರಾಣಾಪಾನಾದಿ ಭೇದಗಳಿಂದ ಐದು ಪ್ರಕಾರವಾದ ವಾಯುಗಳು ಸಮಗ್ರದೇಹಗಳಲ್ಲಿಯು ಆಯಾವ ಸ್ಥಾನಗಳಲ್ಲಿದ್ದು ಕ್ರಿಯಾಕಾರಿಗಳಾಗಿರುತ್ತವೆ

**"ಮಲಾಶಯು"** ಆಹಾರದ ಕಿಟ್ಟ ಭಾಗವಾದ ಮಲವು ಸಂಚಯವಾಗುವ ಸ್ಥಾನವು ಇಲ್ಲಿ ಸಂಚಿತವಾದ ಮಲವು ಗುದದ್ವಾರದಿಂದ ಹೊರಬಿದ್ದು ಹೋಗುತ್ತದೆ. ಮಲಾಶಯುಕ್ಕೆಪಕ್ವಾಶಯುವೆಂದೂಅನ್ನುತ್ತಾರೆ. ಬಸ್ತಿಯ ಮೇಲ್ಗಡೆ ವಾತಾಶಯುಕ್ಕಿಂತಲೂ ಕೆಳಭಾಗದಲ್ಲಿ ಮಲಾಶಯುವಿರುತ್ತದೆ.

**"ಮೂತ್ರಾಶಯು"** ದೇಹದಲ್ಲಿಯು ಮಲಿನವಾದ ಜಲಭಾಗವು ಸಂಚಿತವಾಗುವ ಸ್ಥಾನಕ್ಕೆ ಮೂತ್ರಾಶಯು ಅಥವಾ ಬಸ್ತಿಯೆಂದು ಅನ್ನುತ್ತಾರೆ. ಮೂತ್ರಾಶಯುದಲ್ಲಿ ಸಂಚಿತವಾದ ಮಲಿನ ಜಲಕ್ಕೆ ಮೂತ್ರವೆಂದು ಹೆಸರು. ಅದು ಜನನೇಂದ್ರಿಯ ದ್ವಾರದಿಂದ ಹೊರಗೆ ಹೋಗುತ್ತದೆ. ಮಲಾಶಯುದ ಕೆಳಭಾಗದಲ್ಲಿ ಮೂತ್ರಾಶಯುವಿರುವ ಸ್ಥಾನವಾಗಿರುತ್ತದೆ.

**"ರಕ್ತಾಶಯು"** ಬದುಕಲಿಕ್ಕೆ ಅತ್ಯವಶ್ಯವಾದ ಜೀವರಕ್ತದ ಸ್ಥಾನವಾಗಿರುತ್ತದೆ ರಕ್ತಾಶಯುದಲ್ಲಿ ರಕ್ತವು ಸಂಚಿತವಾಗಿರುತ್ತದೆ. ರಕ್ತಾಶಯುದಿಂದ ಹೊರಟ ಧಮನಿಗಳಿಂದ ಸಮಗ್ರ ಶರೀರದಲ್ಲಿಯೂ ರಕ್ತವು ಸಂಚರಿಸುತ್ತದೆ. ಎದೆಯಲ್ಲಿ ರಕ್ತಾಶಯುವು ಇರುತ್ತದೆ. ಹೀಗೆ ಶ್ಲೇಷ್ಮಾಶಯಾದಿ

(೭) ಆಶಯಗಳು ಇರುತ್ತವೆ. ಸ್ತ್ರೀಯರಿಗೆ (೩) ಆಶಯಗಳು ಹೆಚ್ಚಿಗೆ ಇರುತ್ತವೆ.

**"ಗರ್ಭಾಶಯ"** ಶುಕ್ರ ಆರ್ತವ ಸಂಯೋಗದಿಂದ ಗರ್ಭೋತ್ಪತ್ತಿಯಾಗುವ ಸ್ಥಾನವು. ಇಲ್ಲಿಯೇ ಗರ್ಭವು ಉತ್ಪನ್ನವಾಗಿ ಬೆಳೆಯುತ್ತದೆ. ಗರ್ಭವಿರುವ ಸ್ಥಾನವಾದ್ದರಿಂದ ಇದಕ್ಕೆ **"ಗರ್ಭಾಶಯ"** ವೆಂಬ ಹೆಸರು

**"ಸ್ತನ್ಯಾಶಯ"** ಹಾಲು ಉತ್ಪನ್ನವಾಗುವ ಸ್ಥಾನವು. ಶಿಶುವಿನ ಪೋಷಕವಾದ ಹಾಲು ಇಲ್ಲಿಯೇ ಸಂಗ್ರಹವಾಗುವದರಿಂದ ಇದಕ್ಕೆ ಸ್ತನ್ಯಾಶಯವೆಂದು ಹೇಳುತ್ತಾರೆ. ಸ್ತನಗಳು (೨) ಇರುತ್ತವೆ. ಗರ್ಭಾಶಯ(೧) ಒಟ್ಟು (೩) ಆಶಯಗಳು ಸ್ತ್ರೀಯರಿಗೆ ಅಧಿಕವಾಗಿರುತ್ತವೆ

ಆಶಯವೆಂದರೆ **"ಅಧಿಷ್ಠಾನವು"** ಆಶ್ರಯಸ್ಥಾನವಾಗಿರುತ್ತದೆ. ರಕ್ತಾಶಯವು ಮೊದಲಿರುತ್ತದೆ, ಅದರ ನಂತರ ಬೇರೇ ಆಶಯಗಳಿರುತ್ತವೆಂದು ವಾಗ್ಭಟ ಮತವು.

**ರಕ್ತಸ್ಯಾದ್ಯಃಕ್ರಮಾತ್ಪರೇ ||**
**ಕಫಾಮಪಿತ್ತ ಪಕ್ವಾನಾಂ ವಾಯೋರ್ಮೂತ್ರಸ್ಯ ಚ ಕ್ರಮಾತ್ ||**

(ವಾಗ್ಭಟ|| ಶಾರೀರ|| ಅ. ೩)

ರಕ್ತಾಶಯದ ಕೆಳಗಡೆಗೆ ಕ್ರಮವಾಗಿ ಉಳಿದ ಎಲ್ಲ ಆಶಯಗಳು ಇರುತ್ತವೆ. ಅರ್ಥಾತ್ ಮೊದಲನೇದು ರಕ್ತಾಶಯವೆಂದಭಿಪ್ರಾಯವಾಗಿರುತ್ತದೆ ನಂತರ ಕ್ರಮವಾಗಿ ಒಂದಾದ ಕೂಡಲೇ ಮತ್ತೊಂದರಂತೆ ಆಶಯಗಳು ಇರುತ್ತವೆ. ಅವುಗಳ ಕ್ರಮವು:— ಕಫಾಶಯ, ಆಮಾಶಯ, ಮಲಾಶಯ ವಾತಾಶಯ, ಮೂತ್ರಾಶಯ ಇವು (೬) ಆಶಯಗಳು ರಕ್ತಾಶಯದ ಕೆಳಗೆ ಕ್ರಮವಾಗಿರುತ್ತವೆ. ಇದು ವಾಗ್ಭಟ ಮತದಂತೆ ವಿವರಣೆಯಾಗಿರುತ್ತದೆ.

# (೩೫) ಕರುಳುಗಳು

ನಾವು ಊಟಮಾಡಿದ ಆಹಾರವು ಜೀರ್ಣವಾಗುವ ಕಾರ್ಯವು ವಿಶೇಷ ವಾಗಿ ಕರುಳಿನಲ್ಲಿ ನಡೆಯುತ್ತದೆ. ಇದಕ್ಕೆ "ಅಂತ್ರ"ವೆಂದು ಅನ್ನುತ್ತಾರೆ ಕರುಳಿನಲ್ಲಿ ದೊಡ್ಡ ಕರುಳು ಸಣ್ಣ ಕರುಳುಗಳೆಂದು ಎರಡು ವಿಭಾಗವನ್ನು ಮಾಡಿರುತ್ತಾರೆ. ಸಣ್ಣ ಕರುಳಿಗೆ "ಕ್ಷುದ್ರಾಂತ್ರ"ವೆಂದೂ ದೊಡ್ಡ ಕರುಳಿಗೆ "ಬೃಹದಂತ್ರ"ವೆಂದೂ ಅನ್ನುತ್ತಾರೆ. ಕ್ಷುದ್ರಾಂತ್ರವು ಹಗ್ಗದಂತೆ ಸುರಳೀ ಸುತ್ತಿಕೊಂಡಿರುತ್ತದೆ. ಅದರ ಮೇಲ್ಭಾಗ ಮತ್ತು ಎಡಬಲಕ್ಕೆ ಸ್ಥೂಲಾಂತ್ರವು ಸುತ್ತಲೂ ಇದ್ದು ಮಧ್ಯದಲ್ಲಿ ಕ್ಷುದ್ರಾಂತ್ರವಿರುತ್ತದೆ ಸ್ಥೂಲಾಂತ್ರಕ್ಕೆ ಅಂಟಿ ಕೊಂಡು ಮೇಲ್ಭಾಗದಿಂದಹೊರಟು, ಕ್ಷುದ್ರಾಂತ್ರದ ತುದಿಯು, ಸ್ಥೂಲಾಂತ್ರದ ಕೆಳಗಡೆಗೆ ಬಲಭಾಗದಲ್ಲಿ ಪುನಃ ಸಂಧಿತವಾಗುತ್ತದೆ. ಅರ್ಥಾತ್ ಹಗ್ಗದಂತೇ ಸುರಳೀ ಸುತ್ತಿಕೊಂಡಿರುವ ಕ್ಷುದ್ರಾಂತ್ರದ ಸುತ್ತಲೂ ಸ್ಥೂಲಾಂತ್ರವಿದ್ದು, ಮಧ್ಯದಲ್ಲಿ ಸುರಳಿಯಾಗಿರುವ ಸಣ್ಣ ಕರುಳಿನ ಗುಂಪು ಇರುತ್ತದೆ. ಕ್ಷುದ್ರಾಂತ್ರದ ಮೇಲ್ಭಾಗ ಮತ್ತು ತುದಿ, ಸ್ಥೂಲಾಂತ್ರಕ್ಕೆ ಕೂಡಿಕೊಂಡಿರು ತ್ತವೆ. ಆಮಾಶಯದಲ್ಲಿಯ ಅಪಕ್ವ ಆಹಾರ ಭಾಗವು ಕ್ಷುದ್ರಾಂತ್ರದಲ್ಲಿ ಬರುತ್ತದೆ. ಕ್ಷುದ್ರಾಂತ್ರದ ಆಕುಂಚನಪ್ರಸಾರಣ ಕ್ರಿಯೆಗಳಿಂದಲೂ ಚನ್ನಾಗಿ ಹಿಚುಕುವದರಿಂದಲೂ ಆಹಾರವು ವಿಶೇಷವಾಗಿ ಪಚನವಾಗುತ್ತದೆ. ಪಚನ ವಾಗಿ ಉಳಿದ ಕಿಟ್ಟ ಭಾಗವು ಕ್ಷುದ್ರಾಂತ್ರಾಂತದಿಂದ, ಸ್ಥೂಲಾಂತ್ರಕ್ಕೆ ಹೋಗುತ್ತದೆ. ಅಲ್ಲಿ ಆಹಾರದ ಸ್ಥೂಲ ಭಾಗವು ಪಚನವಾಗುತ್ತಾಗುತ್ತ ಸ್ಥೂಲಾಂತ್ರದ ಕೊನೆಯ ಭಾಗದಲ್ಲಿರುವ "ಮಲಾಶಯಕ್ಕೆ" ಬರುತ್ತದೆ. ಮಲಾಶಯಕ್ಕೆ ಅಂಟಿಕೊಂಡ ನಳಿಗೆಯಂತಿರುವ ಗುದದ್ವಾರದಿಂದ ಆಹಾರದ ಕಿಟ್ಟ ಭಾಗವಾದ ಮಲವು (ಪುರೀಷ) ಹೊರಗೆ ಬರುತ್ತದೆ. ಸ್ಥೂಲಾಂತ್ರದಲ್ಲಿ ಎಡಭಾಗದ ಕೊನೆಗೆ ಮಲಾಶಯವಿರುತ್ತದೆ. ಮಲಾಶಯದಿಂದ ಮಲವು ಗುದ ಮಾರ್ಗವಾಗಿ ಹೊರಗೆ ಬರುತ್ತದೆ. ಇದರಂತೆ ಮಲದಲ್ಲಿಯ ಮತ್ತು ರಸ ರಕ್ತ ಧಾತುಗಳಮಲಿನವಾದ ಜಲಭಾಗವು ಮೂತ್ರಾಶಯದಲ್ಲಿ (ಬಸ್ತಿ) ಸಂಚಿತವಾಗಿಮೂತ್ರ ರೂಪದಿಂದ ಹೊರಬೀಳುತ್ತದೆ.

**ಸಾರ್ಧತ್ರಿವ್ಯಾಮಾನ್ಯಂತ್ರಾಣಿಪುಂಸಾಂ ಸ್ತ್ರೀಣಾಮರ್ಧವ್ಯಾಮ ಹೀನಾನಿ ॥ (ಸುಶ್ರುತ॥ ಶಾರೀರ॥ ಅ. ೫ ಸೂ. ೯)**

ಸ್ಥೂಲಾಂತ್ರ ಕ್ಷುದ್ರಾಂತ್ರಗಳುಕೂಡಿ (೩॥) ವ್ಯಾಮದಷ್ಟು ಪ್ರಮಾಣ ಉದ್ದವಾಗಿರುತ್ತವೆ ಇದು ಪುರುಷರ ಕರುಳಿನ ಉದ್ದದ ಪ್ರಮಾಣವನ್ನು ಹೇಳಿದ್ದಾರೆ. ಸ್ತ್ರೀಯರ ಕರುಳಿನ ಪ್ರಮಾಣವು ಪುರುಷರಿಗಿಂತ ಅರ್ಧ ವ್ಯಾಮ ಕಡಿಮೆ ಅಂದರೆ (೩) ವ್ಯಾಮದಷ್ಟು ಉದ್ದವಾಗಿರುತ್ತದೆ.

"**ವ್ಯಾಮ**"ವೆಂದರೆ ಎರಡೂ ಕೈಗಳನ್ನು ಪಾರ್ಶ್ವಗಳಲ್ಲಿ ವಿಸ್ತಾರ ಮಾಡಿದರೆ ಆಗುವ ಅಳತೆಯು. ಇದಕ್ಕೆ ವ್ಯವಹಾರದಲ್ಲಿ "**ಮಾರು**" ಎನ್ನುವ ವಾಡಿಕೆಯಿದೆ.

# (೩೬) ದೇಹದಲ್ಲಿಯ ಬಾಹ್ಯದ್ವಾರಗಳು

ದೇಹದ ಬಹಿರ್ಭಾಗಗಳಲ್ಲಿ ಕಾಣುವ ಆಯಾಯ ಕಾರ್ಯಗಳನ್ನು ಮಾಡ ತಕ್ಕ "**ಸ್ರೋತಸ್ಸು**"ಗಳಿರುತ್ತವೆ ಇಂಥ ಸ್ರೋತಸ್ಸುಗಳ ರಂಧ್ರವು ಬಹಿ ರ್ಮುಖವಾಗಿಯೇ ಇರುತ್ತವೆ. ಅಂತರ್ಮುಖವಾದ ಸ್ರೋತಸ್ಸುಗಳನ್ನು ಧಮನೀ ವಿವರಯಣೆಯಲ್ಲಿ ಹೇಳುತ್ತಾರೆ.

"**ಚರಕ ಸಂಹಿತೆಯಲ್ಲಿ**" ಬಹಿರ್ಮುಖವಾದ ಸ್ರೋತಸ್ಸುಗಳಿಗೆ "**ದೊಡ್ಡಛಿದ್ರ**"ಗಳೆಂದು ಹೇಳಿದ್ದಾರೆ. ತಲೆಯ ಭಾಗದಲ್ಲಿ (೭), ದೇಹದ ಕೆಳಗಿನ ಭಾಗದಲ್ಲಿ (೨), ಒಟ್ಟು (೯) ಮಹಾ ಛಿದ್ರಗಳಿರುತ್ತವೆಂದು ಹೇಳಿ ದ್ದಾರೆ. (ಚರಕ॥ ಶಾರೀರ॥ ಅ ೭ ಸೂ ೧೩)

"**ಶಾರ್ಙ್ಗಧರದಲ್ಲಿ**" ನವರಂಧ್ರಗಳನ್ನು ಹೇಳಿ ನೆತ್ತಿಯ ಮೇಲೆ "**ಬ್ರಹ್ಮರಂಧ್ರ**" ವಿರುವದೆಂದು ಹೇಳಿದ್ದಾರೆ ಶಾರ್ಙ್ಗಧರ ಮತದಂತೆ ಬ್ರಹ್ಮ ರಂಧ್ರವನ್ನು ಹಿಡಿದು (೧೦) ರಂಧ್ರಗಳಾಗುತ್ತವೆ.

**ಶ್ರವಣನಯುನವದನಘ್ರಾಣಗುದಮೇಢ್ರಾಣಿನವಸ್ರೋತಾಂಸಿ ನರಾಣಾಂ ಬಹಿರ್ಮುಖಾನಿ, ಏತಾನ್ಯೇವಸ್ತ್ರೀಣಾಮುಪರಾಣಿ ಚ ತ್ರೀಣಿದ್ವೇಸ್ತನಯೋರಧಸ್ತಾದ್ರಕ್ತವಹಂಚ ॥**

(ಸುಶ್ರುತ॥ ಶಾರೀರ॥ ಅ ೫ ಸೂ ೧೦)

(೨) **ಶ್ರವಣ** (ಕಿವಿ), (೨) **ನಯುನ** (ಕಣ್ಣು), (೨) **ಘ್ರಾಣ** (ಮೂಗು), (೧) **ವದನ** (ಬಾಯಿ), (೧) **ಗುದ** (ಮಲದ್ವಾರ), (೧) **ಮೇಢ್ರ** (ಜನನೇಂದ್ರಿಯ), ಒಟ್ಟು ದೇಹದಲ್ಲಿ (೯) ರಂಧ್ರಗಳು ಇರುತ್ತವೆ ಇವು ಬಹಿರ್ಮುಖವಾಗಿರುವ ಸ್ರೋತಸ್ಸುಗಳು.

"**ಸ್ತ್ರೀಯರಲ್ಲಿ**" ಮೇಲೆ ಹೇಳಿದ ರಂಧ್ರಗಳ **ಹೊರತಾಗಿ** ಹೊಸತಾಗಿ (೩) ರಂಧ್ರಗಳು ಹೆಚ್ಚಿಗೆ ಇರುತ್ತವೆ ಸ್ತನಗಳಲ್ಲಿ (೨), ಕೆಳಗಡೆಗೆಮಾಸಿಕ ಸ್ರಾವವಾಗುವ ದ್ವಾರ (೧), ಒಟ್ಟು (೩) ರಂಧ್ರಗಳು ಸ್ತ್ರೀಯರಿಗೆ ಹೆಚ್ಚು ಇರುತ್ತವೆ. ಮೊದಲು ಹೇಳಿದ (೯) ಹೆಚ್ಚಿನ ರಂಧ್ರಗಳು (೩), ಒಟ್ಟು (೧೨) ರಂಧ್ರಗಳು ಸ್ತ್ರೀಯರಲ್ಲಿರುತ್ತವೆ ಬ್ರಹ್ಮರಂಧ್ರವನ್ನು ಹಿಡಿದರ (೧೩) ರಂಧ್ರಗಳಾಗುತ್ತವೆ. "**ಪುರುಷರಲ್ಲಿ**" (೧೦) ರಂಧ್ರಗಳು. ಹೀಗೆ ರಂಧ್ರಗಳ ವಿವರಣೆಯನ್ನು ಮಾಡಿರುತ್ತಾರೆ

# (೩೭) ಕಂಡರಗಳು

"**ಕಂಡರಾ**" ಅಂದರೆ ಮಹಾ ಸ್ನಾಯು. ದೇಹದಲ್ಲಿರುವ ದೊಡ್ಡದಾದ ಸ್ನಾಯುಗಳಿಗೆ ಕಂಡರಾ ಎಂದು ಹೇಳುತ್ತಾರೆ ದೇಹದಲ್ಲಿರುವ ಮಾಂಸ ಪಿಂಡಗಳನ್ನು ಆವಾವ ಸ್ಥಾನಗಳಲ್ಲಿ ಬಿಗಿಯಾಗಿ ಬಂಧಿಸುವ ಪಟ್ಟಕ್ಕೆ ಸ್ನಾಯುವೆಂಬ ಹೆಸರು. ಸ್ನಾಯುಗಳಲ್ಲಿ ಮಹಾಸ್ನಾಯುಗಳು (೧೬) ಇರುತ್ತವೆ ಇವುಗಳಿಗೆ "**ಕಂಡರಾ**"ಗಳೆಂದು ಹೇಳುತ್ತಾರೆ.

**ಷೋಡಶಕಂಡರಾ:— ತಾಸಾಂಚತಸ್ರಃ ಪಾದಯೋಃ, ತಾವ ತ್ಯೋಹಸ್ತಗ್ರೀವಾಪೃಷ್ಠೇಷು; ತತ್ರಹಸ್ತಪಾದಗತಾನಾಂ ಕಂಡ**

**ರಾಣಾಂನಖಾಅಗ್ರಪ್ರರೋಹಾಃ ಗ್ರೀವಾಹೃದಯನಿಬಂಧಿನೀ ನಾಮಧೋಭಾಗತಾನಾಂ ಮೇಢ್ರಂ, ಶ್ರೋಣಿಪೃಷ್ಠನಿಬಂಧಿನೀನಾಮಧೋಭಾಗಗತಾನಾಂಬಿಂಬಂ, ಮೂರ್ಧೋರುವಕ್ಷೋಂಸಪಿಂಡಾದೀನಾಂ ಚ ||**

(ಸುಶ್ರುತ||ಶಾರೀರ|| ಅ೫ ಸೂ೧೧)

ಕಂಡರಗಳು ಎರಡೂ ಕಾಲುಗಳಲ್ಲಿ ಕೂಡಿ (೪) ಇರುತ್ತವೆ. ಇದರಂತೆ ಕೈಗಳಲ್ಲಿ (೪), ಕುತ್ತಿಗೆಯಲ್ಲಿ(೪), ಬೆನ್ನಿನ ಪ್ರದೇಶಗಳಲ್ಲಿ (೪). ಒಟ್ಟು ಕಾಲು, ಕೈ, ಕುತ್ತಿಗೆ, ಬೆನ್ನುಗಳಲ್ಲಿ ಕೂಡಿಕೊಂಡು (೧೬) ಕಂಡರ (ಮಹಾಸ್ನಾಯು)ಗಳು ಇರುತ್ತವೆ

ಹಸ್ತ ಪಾದಗಳಲ್ಲಿಯ ಕಂಡರಗಳ ತುದಿ ಭಾಗಗಳಲ್ಲಿ ಉಗುರು (ನಖ) ಗಳು ಹುಟ್ಟಿ ಬೆಳೆದಿರುತ್ತವೆ. ಹಸ್ತ ಪಾದಾದಿಗಳಲ್ಲಿರುವ ಕಂಡರಗಳು ಬೆರಳಿನ ತುದಿಗಳವರೆಗೆ ಇರುತ್ತವೆ. ಬೆರಳಿನ ತುದಿಯಭಾಗಗಳಲ್ಲಿ ಉಗುರುಗಳಿರುತ್ತವೆ "ಜೇಜ್ಜಟಾಚಾರ್ಯರು" ಕೈಕಾಲುಗಳಲ್ಲಿರುವ ಕಂಡರಗಳ ಮತ್ತು ಅಸ್ಥಿಗಳ ಕೊನೆಯ ಭಾಗಗಳಲ್ಲಿ ಉಗುರುಗಳು ಹುಟ್ಟಿ ಬೆಳೆದಿರುತ್ತವೆಂದು ಹೇಳಿದ್ದಾರೆ.

**"ಹಸ್ತ ಪಾದಗತಾನಾಂ ಕಂಡರಾಣಾಮ<br>ಸ್ಥ್ನಾಂ ಚ ನಖಾ ಅಗ್ರ ಪ್ರರೋಹಾಃ"**

ಉಗುರುಗಳು ಎಲುಬುಗಳಿಂದ ಹುಟ್ಟಿರುತ್ತವೆಂದುಹೇಳಿರುವದರಿಂದ, ಕಂಡರ ಮತ್ತು ಅಸ್ಥಿಗಳ ತುದಿ ಭಾಗಗಳಲ್ಲಿ ಉಗುರುಗಳು ಇರುತ್ತವೆನ್ನುವದು ಯೋಗ್ಯವಾಗಿರುತ್ತದೆ.

ಕುತ್ತಿಗೆ ಹೃದಯ ನಿಬಂಧನ ಕಂಡರಗಳ ಅಧೋಭಾಗದಲ್ಲಿ ಮೇಢ್ರವು (ಶಿಶ್ನ) ಇರುತ್ತದೆ ಅರ್ಥಾತ್ ಕುತ್ತಿಗೆ ಹೃದಯಬಂಧನವಾದ ಕಂಡರಗಳು ಕೆಳಭಾಗದ ವರೆಗೂ ಬಂದಿರುತ್ತವೆ. ಅವುಗಳ ಸಾನ್ನಿಧ್ಯದಲ್ಲಿ ಶಿಶ್ನ (ಪುರುಷರ ಜನನೇಂದ್ರಿಯ) ಇರುತ್ತದೆಂದು ಅಭಿಪ್ರಾಯವು.

ಶ್ರೋಣಿ (ಕಟಿಪ್ರದೇಶ, ಟೊಂಕ), ಪೃಷ್ಠ (ಬೆನ್ನು) ಗಳ ನಿಬಂಧನಗಳಾದ ಕೆಳಭಾಗದಲ್ಲಿ ಬಂದಿರುವ ಕಂಡರಗಳ ತುದಿ ಭಾಗಗಳಲ್ಲಿ, ಬಿಂಬ (ನಿತಂಬ) ವಿರುತ್ತದೆ ನಿತಂಬವೆಂದರೆ ಕಟಿಯ ಹಿಂದು ಬದಿಯಲ್ಲಿರುವ ಮಾಂಸ ಪಿಂಡಗಳು. ಇದಕ್ಕೆ ವ್ಯವಹಾರ ಭಾಷೆಯಲ್ಲಿ (ತಿಕ) ವೆಂದು ಹೇಳುತ್ತಾರೆ. ಇವುಗಳಂತೆ, ತಲೆ (ಮೂರ್ಧಾ), ಊರು (ತೊಡೆ), ವಕ್ಷ (ಎದೆ), ಅಂಸ (ಭುಜ), ಇವುಗಳ ನಿಬಂಧನ ಕಂಡರಗಳ ಸಾನ್ನಿಧ್ಯಗಳಲ್ಲಿಯು ಮಾಂಸಪಿಂಡ (ಬಿಂಬ)ಗಳು ಇರುತ್ತವೆ ಅರ್ಥಾತ್, ತತ್ತತ್ಸ್ಥಾನ ನಿಬಂಧ ಮಹಾ ಸ್ನಾಯುಗಳ ಸಾನ್ನಿಧ್ಯದಲ್ಲಿ, ಆವಾವ ಮಾಂಸ ಪಿಂಡಗಳು ಇರುತ್ತವೆಂಬರ್ಥವು. "ಚ" ಎಂದು ಸಮುಚ್ಚಯಾರ್ಥ ಶಬ್ದವನ್ನಿಟ್ಟು ಹೇಳಿದ್ದರಿಂದ "ಸ್ತನಮಂಡಲ"ವನ್ನು ಗ್ರಹಣಮಾಡುತ್ತಾರೆ ಆದ್ದರಿಂದ ಸ್ತನಗಳೆರಡೂ ವಕ್ಷೋಮಂಡಲ ನಿಬಂಧಕ ಸ್ನಾಯುಗಳ ಸಾನ್ನಿಧ್ಯದಲ್ಲಿರುತ್ತವೆಂದು ಧ್ವನಿತವಾಗುತ್ತವೆ. ಕೈಕಾಲುಗಳಲ್ಲಿರುವ ಮಾಂಸಪಿಂಡಗಳೆಲ್ಲವುಗಳನ್ನೂ "ಚ"ಕಾರ ಸಮುಚ್ಚಯದಿಂದ ಗ್ರಹಿಸಿ, ಮೊಣಕಾಲು ಮೊಣಕೈ ತೋಳುಗಳಲ್ಲಿರುವ ಬಿಂಬಗಳನ್ನು ಸಹ ಹೇಳಿರುತ್ತಾರೆ. ಹೀಗೆ ಗ್ರಹಿಸುವದು ಸಮಂಜಸವಾದದ್ದೇ ಇರುತ್ತದೆ. ಹೀಗೆ ಹದಿನಾರು ಕಂಡರ ಮಹಾಸ್ನಾಯುಗಳ ಸಾನ್ನಿಧ್ಯದಲ್ಲಿರುವ ಬಿಂಬಾದಿ ವಿಶೇಷಗಳನ್ನು ವಿವರಿಸಿದ್ದಾರೆ.

## (೩೮) ಜಾಲ (ಬಲೆ) ಗಳು

ಬಲೆಗಳಲ್ಲಿ ಹೇಗೆ ತಂತುಗಳು ಒಂದಕ್ಕೊಂದು ಕೂಡಿಕೊಂಡಿರುತವೆಯೋ, ಅವರಂತೇ, ದೇಹದಲ್ಲಿ "ಮಾಂಸ ಸಿರಾ ಸ್ನಾಯು ಅಸ್ಥಿಗಳು" ಪ್ರತ್ಯೇಕ ಒಂದಕ್ಕೊಂದು ಯುಕ್ತವಾಗಿ ಬಲೆಯಂತೇ ಇರುತ್ತವೆ. ಆದ್ದರಿಂದ ಅವುಗಳಿಗೆ "ಜಾಲಗಳೆಂದು" ಅನ್ನುತ್ತಾರೆ. ಬಲೆಯ ಮಧ್ಯಗಳಲ್ಲಿ ಒಂದರಲ್ಲೊಂದು ಕೂಡಿ ಹೇಗೆ ರಂಧ್ರಗಳಿರುತ್ತವೆಯೋ, ದೇಹದಲ್ಲಿಯು ಜಾಲಗಳಲ್ಲಿಯೂ ಸಹ ಅದರಂತೇ ಇರುತ್ತವೆ. ಜಾಲಾದಿಗಳಿಂದವ್ಯಾಪ್ತವಾದ ದೇಹವು ಸುತ್ತಲೂ ಒಲೆಗಳನ್ನು ಹೆಣೆದಂತೆ ಕಾಣುತ್ತದೆ ಹೀಗಿರುವದರಿಂದ ದೇಹವು ಜಾಳಿಗೆಯಆಕಾರ ರಂಧ್ರಗಳ ಸಮೂಹದಿಂದ ಯುಕ್ತವಾಗಿದೆಯೋಎಂದು ಅನಿಸುತ್ತದೆ.

**ಮಾಂಸಸಿರಾಸ್ನಾಯ್ವಸ್ಥಿ ಜಾಲಾನಿ ಪ್ರತ್ಯೇಕಂ ಚತ್ವಾರಿ; ತಾನಿ ಮಣಿಬಂಧಗುಲ್ಫಸಂಶ್ರಿತಾನಿಪರಸ್ಪರ ನಿಬದ್ಧಾನಿಪರಸ್ಪರಗವಾಕ್ಷಿತಾನಿ ಚೇತಿ, ಯೈರ್ಗವಾಕ್ಷಿತಮಿದಂ ಶರೀರಂ॥**
(ಸುಶ್ರುತ॥ ಶಾರೀರ॥ ಅ. ೫ ಸೂ ೧೨)

**ಜಾಲಗಳು:—** (೧) **ಮಾಂಸಜಾಲ** (೨) **ಸಿರಾಜಾಲ** (೩) **ಸ್ನಾಯುಜಾಲ** (೪) **ಅಸ್ಥಿಜಾಲಗಳೆಂದು** ಪ್ರತ್ಯೇಕ ನಾಲ್ಕು ಜಾಳಿಗೆ (ಬಲೆ) ಗಳು ಇರುತ್ತವೆ "**ಮಣಿಬಂಧ**" (ಅಂಗೈ ಮತ್ತು ಮೊಳಕೈ ಮಧ್ಯದ ಸಂಧಿ), "**ಗುಲ್ಫ**"(ಪಾದ ಪಾರ್ಶ್ವಗಳಲ್ಲಿರುವಗಂಟು), ಇವುಗಳಲ್ಲಿ ಮಾಂಸಾದಿ ಜಾಲಗಳು ಇರುತ್ತವೆ ಮಾಂಸಾದಿ ಜಾಲಗಳು ಪರಸ್ಪರ ನಿಬದ್ಧವಾದವುಗಳು ಮತ್ತು ಒಂದಕ್ಕೊಂದು ಹೊಂದಿಕೊಂಡಂಥವುಗಳೂ ಇರುತ್ತವೆ ಒಂದರ ಮೇಲೊಂದು ಹೊದಿಸಲ್ಪಟ್ಟಂಥವಾಗಿಯೂ ಇರುತ್ತವೆ ಈ ಜಾಳಿಗೆಗಳಿಂದ ಶರೀರವು ವ್ಯಾಪಿಸಲ್ಪಟ್ಟಿರುತ್ತದೆ.

## (೩೯) ಕುಂಚ (ಕೂರ್ಚ) ಗಳು

ಮಾಂಸ ಸಿರಾ ಸ್ನಾಯು ಅಸ್ಥಿಗಳ ಎಳೆ (ತಂತು) ಗಳಿಂದ ರಚಿತವಾಗಿರುತ್ತವೆ. ಇವುಗಳ ಆಕೃತಿ ವಿಶೇಷವು ಕುಂಚದಂತಿರುವದರಿಂದ "**ಕೂರ್ಚ**" ಎಂದು ಹೇಳಿದ್ದಾರೆ. ಅರ್ಥಾತ್ ಕುಂಚವನ್ನು ಮಾಡಬೇಕಾದರೆ ಅನೇಕ ತಂತು (ಎಳೆ) ಗಳನ್ನು ಕೂಡಿಸಿ ಬುಡದ ಭಾಗದಲ್ಲಿ ಹೇಗೆ ಕಟ್ಟುತ್ತೇವೆಯೋ ಅದರಂತೆ ಇರುತ್ತದೆ ಮಾಂಸ ಸಿರಾ ಸ್ನಾಯು ಅಸ್ಥಿಗಳಿಂದ ನಿರ್ಮಿತವಾದ ಕುಂಚಗಳು ದೇಹದಲ್ಲಿರುತ್ತವೆ. ಅವುಗಳು ಎಲ್ಲಿರುತ್ತವೆ ಅವುಗಳ ಸ್ಥಾನಾದಿಗಳನ್ನು ಹೇಳುತ್ತಾರೆ.

**ಷಟ್ ಕೂರ್ಚಾಃ, ತೇಹಸ್ತಪಾದಗ್ರೀವಾಮೇಢ್ರೇಷು; ಹಸ್ತಯೋರ್ದ್ವೌ, ಪಾದಯೋರ್ದ್ವೌ, ಗ್ರೀವಾಮೇಢ್ರಯೋರೇಕೈಕಃ ॥** (ಸುಶ್ರುತ॥ ಶಾರೀರ॥ ಅ ೫ ಸೂ ೧೩)

ಆರು ಕೂರ್ಚಾ (ಕುಂಚ)ಗಳು ಇರುತ್ತವೆ ಅವುಗಳು ಹಸ್ತಪಾದ ಕುತ್ತಿಗೆ ಮೇಢ್ರ (ಪುರುಷ ಜನನೇಂದ್ರಿಯ)ಗಳಲ್ಲಿ ಇರುತ್ತವೆ. **ಹಸ್ತಗಳಲ್ಲಿ** (೨), **ಪಾದಗಳಲ್ಲಿ** (೨), **ಕುತ್ತಿಗೆಯಲ್ಲಿ** (೧), **ಮೇಢ್ರದಲ್ಲಿ** (೧), ಒಟ್ಟು ಆರು ಕೂರ್ಚಾಗಳು ದೇಹದಲ್ಲಿರುತ್ತವೆ. ಹಿಂದೆ ಹೇಳಿದ ಜಾಲಗಳ ಸಮುದಾಯಗಳಿಂದ ಕೂರ್ಚಾಗಳಾಗಿರುತ್ತವೆ. ನಾವು ಹಸ್ತವನ್ನು ಕೆಳಗೆ ಮಾಡಿದರೆ ಅಸ್ಥಿ ಸ್ನಾಯುಮಾಂಸಗಳಿಂದ ಯುಕ್ತವಾದ ಬೆರಳುಸಹಿತವಾದ, ಮಣಿಬಂಧವು ಒಂದು ಕುಂಚದಂತೇ ಕಾಣುತ್ತದೆ. ಆದ್ದರಿಂದ ಕೂರ್ಚಾ ಎಂದು ಹೇಳಿದ್ದಾರೆ ಇದರಂತೇ ಉಳಿದವುಗಳನ್ನು ತಿಳಿದುಕೊಳ್ಳಬೇಕು.

# (೪೦) ದೊಡ್ಡ ಮಾಂಸರಜ್ಜುಗಳು

ದೊಡ್ಡದಾಗಿ ಹಗ್ಗದಂತಿರುವ ಮಾಂಸರಜ್ಜುಗಳು ನಾಲ್ಕು ಇರುತ್ತವೆ. ಬೆನ್ನುಹುರಿಯ ಎರಡೂ ಬದಿಯ ಪಾರ್ಶ್ವಗಳಲ್ಲಿ ಪೇಶೀ (ಮಾಂಸ ಚೀಲ) ಗಳಿಗೆ ಆಧಾರವಾಗಿರುತ್ತವೆ. ಒಳಗೆ ಮತ್ತು ಬಾಹ್ಯ ಭಾಗಗಳಲ್ಲಿ ಎರಡೆರಡ ರಂತೆ (೪) ಇರುತ್ತವೆ ಹೇಗೆ ದಾರಕ್ಕೆ ಅಂಟಿಕೊಂಡು ಕಟ್ಟಿದ (ಹೆಣೆದ) ಹೂವುಗಳು ಭದ್ರವಾಗಿ ನಿಲ್ಲುತ್ತವೆಯೋ, ಅದರಂತೆ ಮಾಂಸರಜ್ಜುಗಳಿಗೆ ಅಂಟಿಕೊಂಡು ಪೇಶೀಗಳು ಸ್ಥಿರವಾಗಿ ನಿಲ್ಲುತ್ತವೆ. ಅರ್ಥಾತ್ ದಾರದಿಂದ ಕಟ್ಟಿದ ಹೂವಿನ ಮಾಲೆಯಂತೆ, ಪೇಶೀಗಳು ರಜ್ಜುಗಳಲ್ಲಿ ಕಟ್ಟಲ್ಪಟ್ಟು ಅಂಟಿಕೊಂಡು) ಭದ್ರವಾಗಿ ನಿಂತಿರುತ್ತವೆ

"**ಗಯೀಆಚಾರ್ಯರು**" ಬೆನ್ನುಹುರಿಯ ಪಾರ್ಶ್ವಗಳಲ್ಲಿ ಹೊರಗೆ ೪), ಒಳಗಡೆಯಲ್ಲಿ(೪), ಒಟ್ಟು (೮), ಮಾಂಸರಜ್ಜುಗಳೆಂದು ಹೇಳಿದ್ದಾರೆ.

**ಮಹತ್ಯೋಮಾಂಸರಜ್ಜವಶ್ಚತಸ್ರಃ, ಪೃಷ್ಠವಂಶಮುಭಯತಃ**
**ಪೇಶೀನಿಬಂಧನಾರ್ಥಂ ದ್ವೇಬಾಹ್ಯೇ, ಅಭ್ಯಂತರಂಚದ್ವೇ ||**

(ಸುಶ್ರುತ|| ಶಾರೀರ|| ಅ ೫ ಸೂ ೧೩)

ಮಹಾಮಾಂಸರಜ್ಜುಗಳು (೪) ಇರುತ್ತವೆ. ಪೇಶೀ ನಿಬಂಧನಕ್ಕಾಗಿ ಬೆನ್ನುಹುರಿಯ ಉಭಯ ಭಾಗಗಳಲ್ಲಿ ಬಾಹ್ಯವಾದ ಎರಡು ರಜ್ಜುಗಳು, ಒಳಗಡೆಗೆ ಎರಡು, ಒಟ್ಟು ನಾಲ್ಕು ಇರುತ್ತವೆ.

## (೪೧) ಏಳು ಸೇವನಿಗಳು

"ಸೇವನೀ"ಯೆಂದರೆ ಹೊಲಿಗೆಯು. ಮಾಂಸಚರ್ಮಾದಿಗಳು ಕೂಡಿದ ಮಧ್ಯಭಾಗಗಳಲ್ಲಿ ಹೊಲಿಗೆಯಂತೆ ಇರುತ್ತವೆ ಎರಡು ವಸ್ತ್ರಗಳನ್ನು ಕೂಡಿಸಿ ಹೊಲಿದರೆ ಮಧ್ಯದಲ್ಲಿ ಹೊಲಿದ ಗುರುತಿನ ಸಂಧಿ ಇರುತ್ತದೆಯೋ ಅದರಂತೇ ಸೇವನಿಗಳಿರುತ್ತವೆ.

**ಸಪ್ತಸೇವನ್ಯಃ; ಸಿರಸಿವಿಭಕ್ತಾಃ ಪಂಚ; ಜಿಹ್ವಾಶೇಫಸೋರೇ ಕೈಕಾ; ತಾಃ ಪರಿಹರ್ತವ್ಯಾಃ ಶಸ್ತ್ರೇಣ ॥**

(ಸುಶ್ರುತ॥ ಶಾರೀರ॥ ಅ. ೫ ಸೂ ೧೫)

"ಸೇವನೀ" ಹೊಲಿಗೆಗಳು (೭) ಇರುತ್ತವೆ. ತಲೆಯಲ್ಲಿ ಬೇರೆ ಬೇರೆ ವಿಭಾಗಗಳಲ್ಲಿ ಕೂಡಿ (೫) ಇರುತ್ತವೆ. ನಾಲಿಗೆಯ ಕೆಳಭಾಗದಲ್ಲಿ (೧) ಇರುತ್ತದೆ ಪುರುಷರ ಲಿಂಗ ಮತ್ತು ಅಂಡಕೋಶಗಳ ಮಧ್ಯದಲ್ಲಿಯ ಹೊಲಿಗೆ (೧) ಇರುತ್ತದೆ ಒಟ್ಟು ಸೇವನೀಗಳು (೭) ಇರುತ್ತವೆ ನಾಲಿಗೆ ಮತ್ತು ಮೇಢ್ರಗಳನ್ನು ಮೇಲೆತ್ತಿದಾಗ ಅವುಗಳ ಬುಡದಲ್ಲಿ ಹೊಲಿಗೆಯು ಸ್ಪಷ್ಟ ಕಾಣುತ್ತದೆ ಶಸ್ತ್ರಕರ್ಮ ಮಾಡಬೇಕಾದರೆ ಇವುಗಳನ್ನು ಬಿಡಬೇಕು. ಅರ್ಥಾತ್ ಇವುಗಳನ್ನು ಛೇದಿಸಬಾರದು. ಯಾಕಂದರೆ ಎರಡೂ ಸಂಯೋಜನೆಯ ಮಧ್ಯ ಭಾಗವು ಸೇವನೀ ಇರುವದರಿಂದ, ಅದರ ಛೇದನೆಯಿಂದ ಸಂಬಂಧವು ತಪ್ಪಿ ಬೇರೆಯಾಗುತ್ತವೆ. ಇಷ್ಟೇ ಅಲ್ಲ ತಿರುಗಿ ಕೂಡುವದಿಲ್ಲ ಆದ್ದರಿಂದ ಸೇವನೀಗಳನ್ನುಬಿಟ್ಟು ಶಸ್ತ್ರಕರ್ಮವೆಸಗಬೇಕೆಂದು ಹೇಳಿದ್ದಾರೆ ಅರ್ಥಾತ್ ಸೇವನೀಗಳನ್ನು ಛೇದಿಸಬಾರದೆಂಬುವದೇ ಸ್ಪಷ್ಟಾಭಿಪ್ರಾಯವಾಗಿರುತ್ತದೆ.

# (೪೨) ಅಸ್ಥಿಸಂಘಾತಗಳು

ಅಸ್ಥಿಗಳ ಗುಂಪಿಗೆ "**ಸಂಘಾತ**"ವೆಂದು ಹೇಳುತ್ತಾರೆ. ಎರಡು ಅಸ್ಥಿಗಳ ಕೂಡುವಿಕೆಗೆ ಸಂಧಿಯೆಂದು ಹೇಳುತ್ತಾರೆ ಎರಡಕ್ಕಿಂತ ಹೆಚ್ಚು ಅಸ್ಥಿಗಳು ಒಂದೇ ಸ್ಥಳದಲ್ಲಿ ಸಂಧಿತವಾಗುವದಕ್ಕೆ "**ಸಂಘಾತ**"ವೆಂದು ಹೇಳುತ್ತಾರೆ.

"**ಸುಶ್ರುತಾಚಾರ್ಯರು**" ಅಸ್ಥಿಸಂಘಾತಗಳು (೧೪) ಇರುತ್ತವೆಂದು ಹೇಳಿದ್ದಾರೆ.

"**ಅನ್ಯ ಕೆಲವು ಆಚಾರ್ಯರು**" ಅಸ್ಥಿಸಂಘಾತ (೧೮) ಇರುತ್ತವೆಂದು ಹೇಳುತ್ತಾರೆ ಸುಶ್ರುತದಲ್ಲಿ ಇವೆರಡೂ ಮತಗಳನ್ನು ಯೋಗ್ಯವೆಂದು ಗ್ರಹಿಸುತ್ತಾರೆ ಅಸ್ಥಿ ಸಂಘಾತಗಳು ಹೆಚ್ಚಿರುತ್ತವೆನ್ನುವದರ ಉದಾಹರಣೆ ವಿವರಗಳನ್ನು ಇಲ್ಲಿಯೇ ಮುಂದಿನ "**ಸೀಮಂತ**" ವಿಷಯದಲ್ಲಿ ಹೇಳುತ್ತಾರೆ.

**ಚತುರ್ದಶಾಸ್ಥ್ನಾಂಸಂಘಾತಾಃ ತೇಷಾಂತ್ರಯೋಗುಲ್ಫಜಾನು ವಂಕ್ಷಣೇಷು, ಏತೇನೇತರಸಕ್ಥಿಬಾಹೂಚವ್ಯಾಖ್ಯಾತೌ ತ್ರಿಕ ಶಿರಸೋರೇಕೈಕಃ ॥** (ಸುಶ್ರುತ॥ ಶಾರೀರ॥ ಅ ೫ ಸೂ ೧೬)

ಅಸ್ಥಿಗಳ ಸಂಘಾತಗಳು (೧೪) ಇರುತ್ತವೆ. ಅವುಗಳಲ್ಲಿ "**ಗುಲ್ಫ**" ಪಾದದ ಪಾರ್ಶ್ವಗಳಲ್ಲಿರುವಗಂಟು), "**ಜಾನು**" (ಮೊಣಕಾಲಿನ ಮೇಲ್ಭಾಗ ದಲ್ಲಿಯ ಸಂದು), "**ವಂಕ್ಷಣ**" (ತೊಡೆಯ ಎಲುಬಿನ ಮೇಲಿನ ಸಂಧಿ), ಇವುಗಳಲ್ಲಿ ಒಂದೊಂದರಲ್ಲಿ ಒಂದರಂತೆ (೩) ಸಂಘಾತಗಳಿರುತ್ತವೆ. ಇದರಂತೆ ಮತ್ತೊಂದು ಕಾಲು, ಬಾಹುಗಳೆರಡರಲ್ಲಿಯೂ, ಮೂರು ಮೂರು ಸಂಘಾತ ಗಳಂತೆ (೯) ಇರುತ್ತವೆ. ಒಟ್ಟು ಕಾಲು ಕೈಗಳಲ್ಲಿ ಕೂಡಿ (೧೨) ಸಂಘಾತ ಗಳಿರುತ್ತವೆಂದು ಹೇಳಿದ್ದಾರೆ.

"**ತ್ರಿಕ**" ( ಭುಜ ಕುತ್ತಿಗೆಗಳ ಮೂರು ಅಸ್ಥಿಗಳು ಕೂಡಿದ ಸ್ಥಳ ) **ಶಿರಸ್ಸು**"ಇವುಗಳಲ್ಲಿಪ್ರತಿಯೊಂದರಲ್ಲಿಒಂದರಂತೆ (೨) ಸಂಘಾತಗಳಿರುತ್ತವೆ.

ಇವೆಲ್ಲವುಗಳು ಕೂಡಿ "ದೇಹದಲ್ಲಿಯು" ಸಂಘಾತವೆಂದರೆ (೧೪) ಇರುತ್ತವೆ
ಟೊಂಕದಲ್ಲಿಯು (ಶ್ರೋಣಿಕಾಂಡಭಾಗ) ಮೂರು ಅಸ್ಥಿಗಳು ಕೂಡಿದ
ಭಾಗಕ್ಕೆ "ತ್ರಿಕ" ವೆಂದನ್ನುವದು ಪ್ರಸಿದ್ಧವಾಗಿರುತ್ತದೆ ಆದರೆ ಇಲ್ಲಿ
ಸಂಘಾತ ಗಣನೆಯ ವಿಷಯದಲ್ಲಿ ಭುಜಕುತ್ತಿಗೆಗಳ (ಬಾಹುಗ್ರೀವಸಂಧಾನಿ)
ಮೂರು ಅಸ್ಥಿಗಳ ಸಂಘಾತಕ್ಕೆ ತ್ರಿಕವೆಂದು ಹೆಸರು.

## (೪೩) ಸೀಮಂತಗಳು

ಸಂಘಾತಗಳು ಒಂದಕ್ಕೊಂದು ಹೊಲಿದಂತೆ ಕೂಡಿರುವದಕ್ಕೆ 'ಸೀಮಂತ" ವೆಂದು ಹೇಳುತ್ತಾರೆ ಇವುಗಳನ್ನು ಹಿಂದೆ ಹೇಳಿದ ಅಸ್ಥಿ ಸಂಘಾತದಂತೇ, ಆವಾವ ಸ್ಥಾನಗಳಲ್ಲಿರುತ್ತವೆಂದು ತಿಳಿಯಬೇಕೆಂದು ಹೇಳಿದ್ದಾರೆ. ಅರ್ಥಾತ್ ಅಸ್ಥಿ ಸಂಘಾತಗಳಿರುವ ಸ್ಥಳಗಳಲ್ಲಿಯೇ ಇವುಗಳು ಇರುತ್ತವೆಂದು ತಿಳಿಯಬೇಕು. "ಸೀಮಂತವೆಂದರೆ" ತಲೆಯಲ್ಲಿಯ ಬೈತಲೆಯು. ಇದರಂತೇ ವಿಭಾಗಗಳು ಕೂಡಿದ ಮಧ್ಯಭಾಗಗಳಿರುವದರಿಂದ ಸೀಮಂತವೆಂದು ಹೇಳಿದ್ದಾರೆ

**ಚತುರ್ದಶೈವ ಸೀಮಂತಾಃ ತೇಚಾಸ್ಥಿ ಸಂಘಾತವದ್ಗಣನೀಯಾಃ, ಯತಸ್ತೈರ್ಯುಕ್ತಾ ಅಸ್ಥಿಸಂಘಾತಾಃ, ಯೇಹ್ಯುಕ್ತಾಃ ಸಂಘಾತಾಸ್ತೇಖಲ್ವಷ್ಟಾದಶೈಕೇಷಾಂ ||**

( ಸುಶ್ರುತ|| ಶಾರೀರ|| ಅ ೫ ಸೂ ೧೭ )

"ಸೀಮಂತಗಳು" ಹದಿನಾಲ್ಕೇ ಇರುತ್ತವೆ. ಅಸ್ಥಿ ಸಂಘಾತಗಳಂತೇ ಇವುಗಳನ್ನು ಎಣಿಸಬೇಕು. ಅರ್ಥಾತ್ ಅಸ್ಥಿ ಸಂಘಾತಗಳ ಸ್ಥಾನಗಳಲ್ಲಿಯೇ ಇವುಗಳು ಇರುತ್ತವೆಂದು ತಿಳಿಯಬೇಕು. ಯಾಕಂದರೆ "ಸೀಮಂತ" ಗಳಿಂದ ಅಸ್ಥಿ ಸಂಘಾತಗಳು ಕೂಡಿದಂಥವುಗಳು ಇರುತ್ತವೆ ಹಿಂದೆ ಹೇಳಲ್ಪಟ್ಟ ಅಸ್ಥಿ ಸಂಘಾತಗಳನ್ನು ಕೆಲವರು (೧೮), ಎಂದು ಹೇಳುತ್ತಾರೆ. **ಸುಶ್ರುತ ಮತದಂತೆ** (೧೪) ಅಸ್ಥಿ ಸಂಘಾತಗಳೆಂದು ತಿಳಿಯಬೇಕು

ಯಾಕಂದರೆ "ಚತುರ್ದಶೈವ" ಎಂದು ಹೇಳಿರುವದರಿಂದ ಹೆಚ್ಚೆಂದು ಹೇಳಿರುವದು, ಸುಶ್ರುತರ ಮತವಲ್ಲೆಂದು ತಿಳಿಸಲು ಹೀಗೆ ಹೇಳಿದ್ದಾರೆ.

**ಸಂಘಾತಾಃ ಸೀವಿತಾಯೈಸ್ತು ಸೀಮಂತಾಂಸ್ತಾನ್ ಪ್ರಚಕ್ಷ್ಮಹೆ ॥ (ಭೋಜತಂತ್ರೆ)**

ಸಂಘಾತಗಳು ಎಲ್ಲಿ ಹೊಲಿದಂತೆ ಕೂಡಿರುತ್ತವೆಯೋ, ಅವಕ್ಕೆ "ಸೀಮಂತ" ಗಳೆಂದು ಅನ್ನುತ್ತಾರೆ. ಅರ್ಥಾತ್ ಅಸ್ಥಿಗಳ ಕೂಡುವಿಕೆಗಳಲ್ಲಿಯ ಸಂದುಗಳನ್ನು ಸೀಮಂತವೆಂದು ಹೇಳುತ್ತಾರೆ.

## ಸೀಮಂತಗಳ ಗಣನೆ

**ಗುಲ್ಫಜಾನುವಂಕ್ಷಣಮಣಿಬಂಧಕೂರ್ಪರಕಕ್ಷಾಸು ಏಕೈಕಃ, ತ್ರಿಕೇಏಕಃ, ಪಂಚಶಿರಸಿ; ॥ (ವೃದ್ಧವಾಗ್ಭಟ॥)**

ಗುಲ್ಫ, ಜಾನು, ವಂಕ್ಷಣ, ಮಣಿಬಂಧ, ಕೂರ್ಪರ (ಮೊಳಕೈಮೇಲ್ಭಾಗದ ಸಂಧಿ), ಕಕ್ಷಾ (ಬಗಲು), ಇವುಗಳಲ್ಲಿ ಒಂದೊಂದರಂತೆ ಒಟ್ಟು (೧೨), ತ್ರಿಕ ಪ್ರದೇಶದಲ್ಲಿ (೧), ತಲೆಯಲ್ಲಿ (೫), ಎಲ್ಲ ಪ್ರದೇಶಗಳಲ್ಲಿಯು ಸೀಮಂತಗಳು ಕೂಡಿ (೧೮) ಇರುತ್ತವೆ

## ಅಷ್ಟಾದಶ ಸಂಘಾತಗಳು

**ಪೂರ್ವೋಕ್ತಾಃ ಚತುರ್ದಶ, ಶ್ರೋಣಿಕಾಂಡಮುಪರಿ ಏಕಃ, ವಕ್ಷ್ಯುಪರಿ ಏಕ, ಉದರೋರಸೋಃಸಂಧಾನೇ ಏಕಃ, ಅಂಸಕೂಟಮುಪರಿ ಏಕಃ, ಏವಮಷ್ಟಾದಶ ॥ (ಸುಶ್ರುತ ಟೀಕಾ)**

ಮೊದಲು ಹೇಳಿದ ಸಂಘಾತಗಳು (೧೪), ಶ್ರೋಣಿಕಾಂಡಾಸ್ಥಿ ದಂಡಗಳ ಮೇಲ್ಭಾಗದಲ್ಲಿ (೧), ಎದೆಯ ಮೇಲ್ಭಾಗದಲ್ಲಿ (೧), ಹೊಟ್ಟೆ ಎದೆಗಳ ಸಂಧಾನ ಭಾಗದಲ್ಲಿ (೧), ಅಂಸಕೂಟದ ಮೇಲ್ಭಾಗದಲ್ಲಿ (೧), ಒಟ್ಟು ಸಂಘಾತಗಳು (೧೮) ಇರುತ್ತವೆ ಕೆಲವರು ಆಚಾರ್ಯರು ಅಷ್ಟಾದಶ ಅಸ್ಥಿ ಸಂಘಾತಗಳನ್ನುಹೇಳಿದ್ದಾರೆ. ಅವರಮತವನ್ನುಗ್ರಹಿಸಿ ಇಲ್ಲಿ ವಿವರಿಸಲಾಗಿದೆ.

# (೪೪) ದಶಪ್ರಾಣಾಯತನವು

**ದಶಪ್ರಾಣಾಯತನಾನಿ; ತದ್ಯಥಾ:– ಮೂರ್ಧಾ, ಕಂಠೋ, ಹೃದಯಂ, ನಾಭಿಃ, ಗುದಂ, ಬಸ್ತಿಃ, ಓಜಃ, ಶುಕ್ರಂ, ಶೋಣಿತಂ, ಮಾಂಸಮಿತಿ॥ ತೇಷು ಷಟ್ ಪೂರ್ವಾಣಿ ಮರ್ಮ ಸಂಖ್ಯಾತಾನಿ ॥** (ಚರಕ॥ ಶಾರೀರ॥ ಅ ೭ ಸೂ. ೯)

**ಪ್ರಾಣಗಳಿರುವ ಹತ್ತು ಸ್ಥಾನಗಳು.**— (೧) **ಮೂರ್ಧಾ** (ತಲೆ), (೨) **ಕಂಠ** (ಕುತ್ತಿಗೆ), (೩) **ಹೃದಯ,** (೪) **ನಾಭಿ** (ಹೊಕ್ಕಳು), (೫) **ಗುದ** (ಮಲನಿರ್ಗಮನ ದ್ವಾರ), (೬) **ಬಸ್ತಿ** (ಮೂತ್ರಾಶಯ), (೭) **ಓಜಸ್ಸು** (ರಸಾದಿ ಸಪ್ತಧಾತುಗಳ ಸತ್ವ), (೮) **ಶುಕ್ರ,** (೯) **ಶೋಣಿತ** (ರಕ್ತ), (೧೦) ಮಾಂಸ, ಇವುಗಳು ಪ್ರಾಣಾಯತನಗಳೆಂದು ಹೇಳಿದ್ದಾರ ಇವುಗಳಲ್ಲಿ ವಿಶೇಷವಾಗಿ ಪ್ರಾಣಗಳಿರುತ್ತವೆಯಾದ್ದರಿಂದ, ಇಲ್ಲಿ ಆಘಾತಾದಿ ಗಳು ಸಂಭವಿಸಿದರೆ ಮಾರಕವಾಗಿರುತ್ತದೆ ಮೂರ್ಧಾದಿಂದ ಮೊದಲುಮಾಡಿ ಕೊಂಡು (೬) ಮರ್ಮಗಳೆಂದು ಹೇಳಿದ್ದಾರೆ

**ದಶೈವಾಯತನಾನ್ಯಾಹುಃ ಪ್ರಾಣಾಯೇಷು ಪ್ರತಿಷ್ಠಿತಾಃ ॥**
**ಶಂಖೌಮರ್ಮತ್ರಯಂ ಕಂಠೋರಕ್ತಂಶುಕ್ರೌಜಸೀಗುದಂ ॥**

(ಚರಕ॥ ಸೂ ಸ್ಥಾ. ಅ ೨೯ ಸೂ. ೩)

ಪ್ರಾಣಗಳು ಎಲ್ಲಿ ವಿಶೇಷವಾಗಿರುತ್ತವೆಯೋ ಅವಕ್ಕೆ ಪ್ರಾಣಾಯತನ ವೆಂದನ್ನುತ್ತಾರೆ. ಪ್ರಾಣಗಳು ವಿಶೇಷ ಸ್ಥಿತಿ ಮಾಡಿಕೊಂಡಿರುವ (೧೦) ಆಯತನಗಳನ್ನು ಹೇಳುತ್ತಾರೆ.

**ಶಂಖಗಳು** (ಕಣ್ಣು ಹುಬ್ಬುಗಳ ಕೊನೆಯ ಮೇಲ್ಭಾಗಗಳಲ್ಲಿ ಕಿವಿ ಹಣೆಗಳ ಮಧ್ಯ ಪ್ರದೇಶ (೨), **ಮರ್ಮತ್ರಯ** (ಹೃದಯ ತಲೆ ಬಸ್ತಿಗಳು) (೩), **ಕಂಠ** (೧), **ರಕ್ತ** (೧), **ಶುಕ್ರ** (೧), **ಓಜಸ್ಸು** (೧), **ಗುದ** (೧), ಇವು ಹತ್ತು ಪ್ರಾಣಾಯತನಗಳೆಂದು ಹೇಳಿರುತ್ತಾರೆ.

# (೪೫) ಕೋಷ್ಠಾಂಗಗಳು

**ಪಂಚದಶಕೋಷ್ಠಾಂಗಾನಿ; ತದ್ಯಥಾ:— ನಾಭಿಶ್ಚ, ಹೃದಯಂಚ, ಕ್ಲೋಮಚ, ಯಕೃಚ್ಚ, ಪ್ಲೀಹಾಚ, ವೃಕ್ಕೌಚ, ಬಸ್ತಿಶ್ಚ, ಪುರೀಷಾಧಾರಶ್ಚ, ಆಮಾಶಯಶ್ಚ, ಪಕ್ವಾಶಯಶ್ಚ, ಉತ್ತರಗುದಂ, ಅಧರಗುದಂಚ, ಕ್ಷುದ್ರಾಂತ್ರಂ, ಸ್ಥೂಲಾಂತ್ರಂಚ, ವಪಾವಹನಂಚೇತಿ॥** (ಚರಕ॥ಶಾರೀರ॥ ಅ ೩ ಸೂ ೧೦).

ದೇಹದಲ್ಲಿ "**ಕೋಷ್ಠ ವಿಭಾಗಗಳು**" ಯಾವವೆಂದು ಹೇಳುತ್ತಾರೆ. ಈ ಕೆಳಗೆ ಹೇಳಿದ (೧೫) ವಿಭಾಗಗಳಿಂದಯುಕ್ತವಾದ ಸ್ಥಾನಕ್ಕೆ "**ಕೋಷ್ಠ**"ವೆಂದು ಹೇಳುತ್ತಾರೆ

**ಕೋಷ್ಠಾಂಗಗಳು** –[೧] **ನಾಭಿ** [೨] **ಹೃದಯ** [೩] **ಕ್ಲೋಮ** [೪] **ಯಕೃತ್** [೫] **ಪ್ಲೀಹ** [೬] **ವೃಕ್ಕಗಳು** [೭] **ಬಸ್ತಿ** [೮] **ಪುರೀಷಾಧಾರ** [೯] **ಆಮಾಶಯ** [೧೦] **ಪಕ್ವಾಶಯ** [೧೧] **ಉತ್ತರಗುದ** [ಮಲವು ತಡೆದುನಿಲ್ಲುವ ಸ್ಥಳ] [೧೨] **ಅಧರಗುದ** [ಮಲ ನಿರ್ಗಮನ ದ್ವಾರ] [೧೩] **ಕ್ಷುದ್ರಾಂತ್ರ** [೧೪] **ಸ್ಥೂಲಾಂತ್ರ** [೧೫] **ವಪಾವಹನ** [ತಲವರ್ತಿಕಾ] ಇವು ಹದಿನೈದು ಅಂಗವಿಭಾಗಗಳಿಗೆ ಕೋಷ್ಠಾಂಗಗಳೆಂದು ಹೇಳುತ್ತಾರೆ

# [೪೬] ಸಿರಾ ಧಮನಿಗಳ ಸೂಕ್ಷ್ಮ ವಿಭಾಗ

**ಸಿರಾಧಮನೀನಾಂಚಾಣುಶೋ ವಿಭಜ್ಯ ಮಾನಾನಾಮ್ ಏಕೋನ ತ್ರಿಂಶತ್ ಶತಸಹಸ್ರಾಣಿನವ ಚ ಶತಾನಿಷಟ್ ಪಂಚಶತ್ಕಾನಿ ಭವಂತಿ ॥ ತಾಭಿರಿದಂ ಶರೀರಂ ಗವಾಕ್ಷಿತಂ ಪಿನದ್ಧಮಾತತಂ ಚ॥ ತಾವಂತಿಚಕೇಶಶ್ಮಶ್ರುಲೋಮಾನಿ॥ ತಾಸಾಂ ಹಿಮುಖಾನಿತತ್ಪ್ರತಿಬದ್ಧಾನಿ॥ ಅತಸ್ತಾನಿತಾಭಿರಾಪ್ಯಾಯ್ಯಂತೆ॥ ತೈಶ್ಚ ತಾಃ ಸ್ವೇದಮಭಿವಹಂತಿ॥ ತಥಾಽಭ್ಯಂಗಾಲೇಪಾದಿವೀ**

**ಯರ್ಂತ್ವಚಿವಿಪಕ್ವಮಂತರ್ನಯಂತಿ॥ ಸ್ಪರ್ಶಂಚಗೃಣ್ಹಂತಿ॥ ಸ್ರೋತಾಂಸಿಪುನರಸಂಖ್ಯೇಯಾನ್ಯೇವ ॥**
(ಅಷ್ಟಾಂಗ॥ ಸಂ॥ ಶಾ॥ ಅ. ೫)

ಸಿರಾ ಧಮನಿಗಳನ್ನು ವಿಭಾಗಮಾಡುತ್ತಾ ಬಹುಸೂಕ್ಷ್ಮಕೂದಲಿನಷ್ಟು ಪ್ರಮಾಣವಾಗಿ, ದೇಹದಲ್ಲಿ ಪಸರಿಸಿರುವ ಪರ್ಯಂತದ ವರೆಗೆ ಗಣನೇ ಮಾಡಿರುತ್ತಾರೆ. ಹೀಗೆ ಅಣುಶಃ ಸಿರಾಧಮನಿಗಳ ಗಣನೆಯು (೨೯೦೦೯೫೬) ಇರುತ್ತದೆ.

ಸಿರಾಧಮನಿಗಳ ಈ ಸೂಕ್ಷ್ಮತಂತುಗಳಿಂದ ಶರೀರವು ಹೆಣೆದಂತೆಯೂ, ಎಲ್ಲ ಕಡೆಗಳಲ್ಲಿ ಸುತ್ತಲ್ಪಟ್ಟಂತೆಯೂ ಇರುತ್ತದೆ. ಈ ಸಂಖ್ಯೆಗಳಷ್ಟೇ ಕೂದಲು ಶ್ಮಶ್ರು ರೋಮಗಳಿರುತ್ತವೆ. ಧಮನೀ ಸಿರಗಳಲ್ಲಿ ಕೂದಲುಗಳ ಆದಿಭಾಗಗಳು ಅಂಟಿಕೊಂಡಿರುತ್ತವೆ. ಆದ್ದರಿಂದ ಕೂದಲುಗಳು ಧಮನೀ ಸಿರಗಳಿಂದ ಪೋಷಿಸಲ್ಪಡುತ್ತವೆ ಕೂದಲು (ಲೋಮಕೂಪ) ಗಳಿಂದ ಸಿರಾದಿಗಳು ಸ್ವೇದ ವಹನ ಕಾರ್ಯವನ್ನುಮಾಡುತ್ತವೆ ಇದರಂತೆ ಚರ್ಮದಲ್ಲಿಯು ಅಭ್ಯಂಗ ಆಲೆಪಾದಿಗಳ ವಿಪಕ್ವ (ಚನ್ನಾಗಿ ಪಕ್ವಹೊಂದಿದ) ಸತ್ವವನ್ನು ಒಳಗೆ ಒಯ್ಯುತ್ತವೆ. ಸ್ಪರ್ಶಜ್ಞಾನವನ್ನುಮಾಡಿಕೊಡುತ್ತವೆ ಇವು ಸಿರಾಧಮನಿಗಳ ಸೂಕ್ಷ್ಮವಾದ ಅಣುಪರ್ಯಂತವಾಗಿರುವವುಗಳ ಪರಿಚಯಕಾರ್ಯ ಸಂಖ್ಯಾದಿಗಳಾಗಿರುತ್ತವೆ

"ಸ್ರೋತಸ್ಸುಗಳು" ಅಸಂಖ್ಯವಾಗಿ ಎಣಿಸಲುಬಾರದಂತೆ ಇರುತ್ತವೆ

## (೪೭) ದೇಹದಲ್ಲಿಯ ರೋಮಗಳು

**ಅನ್ಯೇತ್ವಾಹುಃ, ಶರೀರೇ ರೋಮ್ಣಾಂದ್ವಾಸಪ್ತತಿಃ ಕೋಟ್ಯೋ ಭವಂತಿ॥** (ಅನ್ಯಮತ)

ಬೇರೆ ಕೆಲವು ಆಚಾರ್ಯರು ದೇಹದಲ್ಲಿ ಕೂದಲುಗಳು (೭೨) ಕೋಟಿಯಷ್ಟು ಇರುತ್ತವೆಂದು ಹೇಳುತ್ತಾರೆ.

# (೪೮) ಶರೀರದಲ್ಲಿಯ ದ್ರವಾದಿ ಪ್ರಮಾಣಗಳು

ಶರೀರದಲ್ಲಿರುವ ದ್ರವ ರೂಪವಾದ ರಸ ರಕ್ತಾದಿಗಳನ್ನು, ಅಂಜಲಿ (ಬೊಗಸೆ) ಪ್ರಮಾಣಗಳಿಂದ ಅಳತೆಯನ್ನು ಹೇಳುತ್ತಾರೆ. ಸ್ಥೂಲ ಕಠಿಣ ಸ್ಥರವಾಗಿ ಎಣಿಸಲು ಬರುವಂಥ ಅಸ್ಥಿ ಸ್ನಾಯು ಮೊದಲಾದವುಗಳನ್ನು, ಗಣನೆಮಾಡಿ ಸಂಖ್ಯಾನಿರ್ದೇಶನಮಾಡಿದ್ದಾರೆ. ನಂತರ ಸ್ಥಿರವಲ್ಲದ ದ್ರವ ದ್ರವ್ಯಗಳನ್ನು ಬೊಗಸೆಯ ಪ್ರಮಾಣದಿಂದ ನಿರ್ದೇಶಿಸಿ ಹೇಳುತ್ತಾರೆ.

**ಯತ್ತ್ವಂಜಲಿಸಂಖ್ಯೇಯಂ ತದುಪದೇಕ್ಷ್ಯಾಮಃ, ತತ್ ಪರಂ ಪ್ರಮಾಣಮಭಿಜ್ಞೇಯಂ, ತಚ್ಚ ವೃದ್ಧಿಹ್ರಾಸಯೋಗಿ, ತರ್ಕ್ಯ ಮೇವ ॥ ತದ್ಯಥಾ:— ದಶೋದಕಸ್ಯಾಂ ಜಲಯಃ ಶರೀರೇ ಸ್ವೇನಾಂಜಲಿಪ್ರಮಾಣೇನ, ಯತ್ತು ಪ್ರಚ್ಯವಮಾನಂ ಪುರೀಷ ಮನುಬಧ್ನಾತ್ಯತಿಯೋಗೇನ ತಥಾಮೂತ್ರಂ ರುಧಿರಮನ್ಯಾಂ ಶ್ಚ ಶರೀರಧಾತೂನ್, ಯತ್ತು ಸರ್ವಶರೀರಚರಂ ಬಾಹ್ಯಾತ್ವ ಗ್ಭಿಭರ್ತಿ, ಯತ್ತು ತ್ವಗಂತರೇವ್ರಣಗತಂ ಲಸೀಕಾಶಬ್ದಂಲಭತೆ, ಯಚ್ಚೋಷ್ಮಣ್ಯಾನುಬದ್ಧಂ ಲೋಮಕೂಪೇಭ್ಯೋನಿಷ್ಪತತ್ ಸ್ವೇದಶಬ್ದಮವಾಪ್ನೋತಿ, ತದುದಕಂದಶಾಂಜಲಿಪ್ರಮಾಣಂ॥**

(ಚರಕ॥ ಶಾರೀರ॥ ಅ ೭ ಸೂ ೧೫)

ಯಾವದು ಅಂಜಲಿಯಿಂದ ಅಳೆಯಲ್ಪಡತಕ್ಕದ್ದಿರುವದೋ ಅದನ್ನು ಹೇಳುತ್ತೇವೆ. ಅದು (ಅಳತೆಯು) ಯೋಗ್ಯಪ್ರಮಾಣದ್ದೆಂದು ತಿಳಿಯಬೇಕು ದೇಹದಲ್ಲಿ ಆವಾವ ದ್ರವದ್ರವ್ಯಗಳ ವೃದ್ಧಿ ಅಥವಾ ಹ್ರಾಸವಾದಾಗ, ಪ್ರಮಾಣಗಳನ್ನು ತರ್ಕಿಸಿ ತಿಳಕೊಳ್ಳಬೇಕು ಇಲ್ಲಿ ಹೇಳಿರುವ ಪ್ರಮಾಣವು ಸಮಸ್ಥಿತಿಯಲ್ಲಿರುವ ದ್ರವದ್ರವ್ಯಪ್ರಮಾಣವಾಗಿರುತ್ತದೆ.

**ಅಳತೆಯು ಹೇಗಂದರೆ:—** ಪ್ರತಿಯೊಬ್ಬರ ತಮ್ಮ ಬೊಗಸೆಯ (ಅಂಜಲಿ) ಪ್ರಮಾಣದಿಂದ ಉದಕವು, ಹತ್ತು (೧೦) ಬೊಗಸೆಯಷ್ಟು ಇರುತ್ತದೆ. ನೀರು ಹೆಚ್ಚಾಗರೆ ಎಲ್ಲ ಕಡೆಯಲ್ಲಿಯೂ ಹರಿಯತಕ್ಕದ್ದಾಗಿ (ಪ್ರಚ್ಯವಮಾನಂ) ಮಲವನ್ನು ಕೂಡಿಕೊಳ್ಳುತ್ತದೆ. ಇದರಂತೆಯೇ ಮೂತ್ರ, ರುಧಿರ (ರಕ್ತ), ಉಳಿದ ಶರೀರ ಧಾತುಗಳನ್ನೂ, ಅನುಸರಿಸುತ್ತದೆ. ಸರ್ವ ಶರೀರ ಸಂಚಾರಿಯಾದ ಜಲಭಾಗವನ್ನು ಬಾಹ್ಯ (ಹೊರಗಡೆಯ) ಚರ್ಮವು ಧಾರಣೇಮಾಡುತ್ತದೆ ಚರ್ಮದ ಒಳಭಾಗದ ವ್ರಣದಲ್ಲಿಯ ಜಲದ್ರವ್ಯವು, ಲಸಿಕಾ (ರಸಿಗೆ) ಯೆಂದು ಹೇಳಲ್ಪಡುತ್ತದೆ ಶರೀರದ ಉಷ್ಣತೆಯಿಂದ ಕೂಡಿ ಲೋಮರಂಧ್ರಗಳಿಂದ ಹೊರಬೀಳುವ ಜಲದ್ರವ್ಯಕ್ಕೆ, ಸ್ವೇದ(ಬೆವರು)ವೆಂದು ಹೇಳುತ್ತಾರೆ ಪೂರ್ವೋಕ್ತ ಸರ್ವವಿಧ ಸಂಚಾರ ಸಂಶ್ರಯಗಳನ್ನು ಹೊಂದಿದ, ಬೆವರು ಮೊದಲಾದ ರೂಪದ ಜಲಪ್ರಮಾಣವು (೧೦) ಅಂಜಲಿಯಷ್ಟು ಇರುತ್ತದೆ. ಮೊದಲು ಉದಕದ ಅಂಜಲಿ ಪ್ರಮಾಣವನ್ನು ಹೇಳಿ ಪುನಃ ಹತ್ತು ಅಂಜಲಿಯೆಂದು ಹೇಳಿದ್ದಾರೆ. ಅಥವಾ ಸ್ವೇದಪ್ರಮಾಣವನ್ನು ಹೇಳಿದ್ದಾರೋ? ಉದಕ ಪ್ರಮಾಣ ಹೇಳಿದ್ದನ್ನು ಪುನಃ ಯಾಕೆ ಹೇಳುತ್ತಾರೆಂಬ ಆಕ್ಷೇಪಬರುತ್ತದೆ.

**ಇದಕ್ಕೆ ಸಮಂಜಸ ಉತ್ತರವೇನಂದರೆ:—** ಪೂರ್ವೋಕ್ತ ಉದಕ ಪ್ರಮಾಣ ವಿವರಣೆಯ ನಂತರದಲ್ಲಿ ಹೇಳಿದ, ಪುರೀಶ ರಕ್ತಾದಿಗಳಲ್ಲಿ ಪ್ರಸರಣೆಯಿಂದ ಸೇರಿದ ಜಲಭಾಗ ಮತ್ತೂ ಬೆವರು ಮೊದಲಾದವುಗಳು, ಉದಕ ಭಿನ್ನವಾದವುಗಳಲ್ಲವೆಂದು ತಿಳಿಸಲು ಹೀಗೆ ಹೇಳಿದ್ದಾರೆ ಆದ್ದರಿಂದ ಪೂರ್ವೋಕ್ತ ಉದಕ ಪ್ರಮಾಣವನ್ನು ಬೆವರಿನ ವಿವರಣೆಯ ನಂತರ ಹೇಳಿರುತ್ತಾರೆ

**ನವಾಂಜಲಯಃ ಪೂರ್ವಸ್ಯಾಹಾರ ಪರಿಣಾಮಧಾತೋಃಯಂ ರಸಇತ್ಯಾಚಕ್ಷತೇ; ಅಷ್ಟೌಶೋಣಿತಸ್ಯ, ಸಪ್ತ ಪುರೀಷಸ್ಯ, ಷಟ್ ಶ್ಲೇಷ್ಮಣಃ, ಪಂಚಪಿತ್ತಸ್ಯ, ಚತ್ವಾರೋಮೂತ್ರಸ್ಯ, ತ್ರಯೋ ವಸಾಯಾಃ, ದ್ವೌಮೇದಸಃ, ಏಕೋಮಜ್ಜಾಯಾಃ, ಮಸ್ತಿಷ್ಕಸ್ಯ ಅರ್ಧಾಂಜಲಿಃ, ಶುಕ್ರಸ್ಯತಾವದೇವಪ್ರಮಾಣಂ, ತಾವ**

**ದೇವ ಶ್ಲೇಷ್ಮಣಶ್ಚಾಜಸಇತಿ ॥ ಸ್ತ್ರೀಣಾವಾರ್ತವಸ್ಯಚತ್ವಾರೋಽಂಜಲಯಃ ॥ ಏತಚ್ಛರೀರ ತತ್ವಮುಕ್ತಮ್ ॥**
( ಚರಕ॥ ಶಾರೀರ॥ ಅ ೭ ಸೂ ೧೫ )

ಪೂರ್ವದಲ್ಲಿಯ ಆಹಾರ ಪರಿಣತವಾದ **"ರಸಧಾತುವಿನ"** ಪ್ರಮಾಣವು (೯) ಅಂಜಲಿಯಷ್ಟು ಇರುತ್ತದೆ. **"ರಕ್ತ"**(೮) ಅಂಜಲಿ, (೩) **"ಮಲ"** (೭) ಅಂಜಲಿ, **"ಕಫ"** (೬) ಅಂಜಲಿ. **"ಪಿತ್ತ"** (೫) ಅಂಜಲಿ, **"ಮೂತ್ರ"** (೪) ಅಂಜಲಿ, **"ವಸಾ"** (೩) ಅಂಜಲಿ, **"ಮೇದಸ್ಸು"** (೨) ಅಂಜಲಿ, **"ಮಜ್ಜಾ"** (೧) ಅಂಜಲಿ, **"ಮಸ್ತಿಷ್ಕ"** (ತಲೆಯ ಒಳಗಿರುವ ವೆ ೀಂದ.) ( ॥ ) ಅಂಜಲಿ, **"ಶುಕ್ರ"** ( ॥ ) ಅಂಜಲಿ, **"ಶ್ಲೇಷ್ಮೋಜಸ್ಸು"** (.॥ ) ಅಂಜಲಿ, **"ಪರಮೋಜಸ್ಸು"** (೮) ಬಿಂದು ಪ್ರಮಾಣವಿರುತ್ತದೆ.

ಸ್ತ್ರೀಯರ **"ಆರ್ತವ"** (೪) ಅಂಜಲಿ, ಈ ಪ್ರಕಾರವಾಗಿ ಶರೀರದಲ್ಲಿಯ ದ್ರವಧಾತುಗಳ ಅಂಜಲಿ ಪ್ರಮಾಣವನ್ನು ನಿರ್ದೇಶಿಸಿದ್ದಾರೆ.

# [೪೯] ದೇಹದ ಪಂಚಭೂತ ವಿಭಾಗ

ದೇಹದಲ್ಲಿಯ ಪಂಚಭೂತಾತ್ಮಕವಾದ ವಿಭಾಗಗಳನ್ನು ಹಿಂದೆ ಹೇಳಿದ್ದಾರೆ. ಆದರೂ ಪುನಃ ವಿಭಾಗ ದೃಷ್ಟಿಯಿಂದ ವಿಸ್ತಾರವಾಗಿ ಹೇಳುತ್ತಾರೆ.

**ತತ್ರಯದ್ವಿಶೇಷತಃ ಸ್ಥೂಲಂ ಸ್ಥಿರಂಮೂರ್ತಿ ಮದ್ಗುರು ಖರ ಕಠಿಣಮಂಗಂ ನಖಾಸ್ಥಿದಂತ ಮಾಂಸ ಚರ್ಮ ವರ್ಚಃ ಕೇಶ ಸ್ಮಶ್ರುಲೋಮಕಂಡರಾದಿ ತತ್‌ಪಾರ್ಥಿವಂ ಗಂಧೋ ಘ್ರಾಣಂಚ॥** [ಚರಕ॥ ಶಾರೀರ॥ ಅ ೭ ಸೂ ೧೬]

## (೧) ಪಾರ್ಥಿವ ದ್ರವ್ಯಗಳು

ದೇಹದಲ್ಲಿ ಯಾವದು ವಿಶೇಷವಾಗಿ **ಸ್ಥೂಲ**[ದೊಡ್ಡದಾದದ್ದು], **ಸ್ಥಿರ** [ ಒಂದೇ ಕಡೆಗೆ ಇರುವಂಥ ಅಥವಾ ದ್ರವವಲ್ಲದ್ದು ], **ಮೂರ್ತಿಮತ್**

[ಆಕಾರವುಳ್ಳದ್ದು] "ಗುರು" [ಭಾರವುಳ್ಳದ್ದು], "ಖರ" [ಕರ್ಕಶ], 'ಕಠಿಣ" [ಘಟ್ಟಿಯುಳ್ಳ], ಈ ಗುಣಲಕ್ಷಣವುಳ್ಳ ಅವಯುವವಿರುತ್ತದೆಯೋ ಅದು ಪೃಥ್ವಿಯ [ಪಾರ್ಥಿವ] ದೆಂದು ತಿಳಿಯಬೇಕು ಮತ್ತು "ನಖ" [ಉಗುರು], "ಅಸ್ಥಿ" [ಎಲಬು], "ದಂತ" [ಹಲ್ಲು], 'ಮಾಂಸ, ಚರ್ಮ, ವರ್ಚಃ" [ಮಲ], "ಕೇಶ" [ತಲೆಯಲ್ಲಿಯ ಕೂದಲು], "ಶ್ಮಶ್ರು" [ಮೋರೆಯಲ್ಲಿಯ ಕೂದಲು], ಲೋಮ [ಉಳಿದ ಭಾಗದಲ್ಲಿಯ ರೋಮ], ಕಂಡರ, ಸಿರಾ, ದಮನೀ, ಪೇಶೀ, ಮೊದಲಾದವುಗಳು "ಪಾರ್ಥಿವ"ವಾಗಿರುತ್ತವೆ. ಇದರಂತೆ "ಗಂಧ" [ವಾಸನೆಯು], ಘ್ರಾಣೇಂದ್ರಿಯಗಳು ಪೃಥ್ವೀ ಸಂಬಂಧದ್ದಾಗಿರುತ್ತವೆ.

## (೨) ಜಲೀಯ ವಿಭಾಗಗಳು

**ಯದ್ರವಸರಮಂಸ್ನಿಗ್ಧಮೃದುಪಿಚ್ಛಿಲಂ ರಸರುಧಿರವಸಾ ಕಫ ಪಿತ್ತ ಮೂತ್ರ ಸ್ವೇದಾದಿ ತದಾಪ್ಯಂ ರಸೋಽರಸನಂ ಚ; ||**
(ಚರಕ|| ಶಾರೀರ|| ಅ. ೭ ಸೂ. ೧೬)

**ದ್ರವ** (ನೀರಿನಂತೆ ಇರುವಂಥಾದ್ದು), **ಸರ** (ಸ್ವಲ್ಪ ಗತಿಯುಳ್ಳದ್ದು), **ಮಂದ** (ತೀಕ್ಷ್ಣವಲ್ಲದ್ದ), **ಸ್ನಿಗ್ಧ** (ಸ್ನೇಹ ಗುಣವುಳ್ಳದ್ದು), **ಮೃದು** (ಕಠಿಣವಲ್ಲದ್ದು), "**ಪಿಚ್ಛಿಲಂ**" (ರಾಡಿಯಂತೆ ಇದ್ದದ್ದು), ಇವುಗಳು ಜಲೀಯ ಗುಣಲಕ್ಷಣವೆಂದು ತಿಳಿಯಬೇಕು **ರಸ, ರಕ್ತ, ವಸಾ** (ಶುದ್ಧ ಮಾಂಸದ ಸ್ನೇಹವು), **ಕಫ, ಪಿತ್ತ, ಮೂತ್ರ, ಸ್ವೇದ,** ಮೊದಲಾದವುಗಳೂ **ರಸ ಮತ್ತು ರಸನೇಂದ್ರಿಯಗಳು** ಆಪ್ಯ (ಜಲೀಯ) ವಿಭಾಗಗಳೆಂದು ತಿಳಿಯಬೇಕು ಅರ್ಥಾತ್, ಜಲಸಂಬಂಧವಾದವುಗಳೆಂದು ತಿಳಿಯಬೇಕು.

## (೩) ಆಗ್ನೇಯ ವಿಭಾಗಗಳು

**ಯತ್‌ಪಿತ್ತಮೂಷ್ಮಾಚಯೋಽಯಾಚಭಾಃ ಶರೀರೇತತ್‌ಸರ್ವಮಾಗ್ನೇಯಂ ರೂಪಂದರ್ಶನಂಚ; ||**
(ಚರಕ|| ಶಾರೀರ|| ಅ ೭ ಸೂ ೧೬)

ಪಿತ್ತವು, ಊಷ್ಮಾ (ಉಷ್ಣತೆಯು) ಯುಕ್ತವಾದದ್ದು ಶರೀರದಲ್ಲಿ ಯಾವದೋ ಅದು, ಯಾವದು "ಭಾಃ" (ಪ್ರಕಾಶವು) ಉಳ್ಳದ್ದೋ ಅದು, ಇವೆಲ್ಲ ಸರ್ವವೂ ಆಗ್ನೇಯವಾಗಿರುತ್ತವೆ **ರೂಪ ರೂಪೇಂದ್ರಿಯಗಳು** ಆಗ್ನೇಯವಾಗಿರುತ್ತವೆ.

## (೪) ವಾಯವೀಯವಿಭಾಗ

**ಯದುಚ್ಛ್ವಾಸಪ್ರಶ್ವಾಸೋನ್ಮೇಷನಿಮೇಷಾಕುಂಚನಪ್ರಸಾರಣಗಮನಪ್ರೇರಣಧಾರಣಾದಿತದ್ವಾಯವೀಯಂ ಸ್ಪರ್ಶಃ ಸ್ಪರ್ಶನಂಚ ॥** (ಚರಕ॥ ಶಾರೀರ॥ ಅ ೭ ಸೂ ೧೬)

ಶ್ವಾಸೋಚ್ಛ್ವಾಸಗಳು, **ಪ್ರಶ್ವಾಸ** (ದೊಡ್ಡದಾದಶ್ವಾಸ), **ಉನ್ಮೇಷ** (ಕಣ್ಣು ತೆರೆಯುವಿಕ), **ನಿಮೇಷ** (ಕಣ್ಣು ಮುಚ್ಚುವಿಕೆ), **ಆಕುಂಚನ** (ಮುದುಡಿಕೊಳ್ಳುವದು), **ಪ್ರಸಾರಣ**(ವಿಸ್ತಾರವಾಗುವದು), **ಗಮನ** (ನಡೆಯುವದು), **ಪ್ರೇರಣ** (ಇಂದ್ರಿಯಗಳ ಪ್ರೇರಣೆ), **ಧಾರಣ** (ದೇಹ ಧಾರಣೆಯು), ಮೊದಲಾದವುಗಳು ವಾಯುವಿನ ಕೆಲಸಗಳಾಗಿರುತ್ತವೆ. **ಸ್ಪರ್ಶ** ಮತ್ತು **ಸ್ಪರ್ಶೇಂದ್ರಿಯಗಳು** ವಾಯವೀಯಗಳಾಗಿರುತ್ತವೆ.

## (೫) ಆಕಾಶೀಯ ವಿಭಾಗ

**ಯದ್ವಿವಿಕ್ತಂ ಯದುಚ್ಯತೆ ಮಹಾಂತಿಚಾಣೂನಿಸ್ರೋತಾಂಸಿತದಾಂತರೀಕ್ಷ್ಣಂ ಶಬ್ದಃ ಶ್ರೋತ್ರಂಚ॥ ಇತಿಶರೀರಾವಯವಸಂಖ್ಯಾಯಥಾಸ್ಥೂಲಭೇದೇನಾವಯವಾನಾಂ ನಿರ್ದಿಷ್ಟಾ ॥**
(ಚರಕ॥ ಶಾರೀರ॥ ಅ ೭ ಸೂ ೧೬)

ಯಾವದು ಪೊಳ್ಳುಯುಕ್ತವಾಗಿರುತ್ತದೆಂದು ಹೇಳಲ್ಪಡುತ್ತದೆಯೋ ಅಂಥದು, ದೊಡ್ಡದಾದ ಅಥವಾ ಸೂಕ್ಷ್ಮವಾದಂಥ ಸ್ರೋತಸ್ಸುಗಳು, ಅಂತರೀಕ್ಷ ಸಂಬಂಧಿಯಾದವುಗಳು. ಶಬ್ದ (ಶರೀರದ ಒಳಗಡೆಯಲ್ಲಿಯ ಶಬ್ದ), **ಶ್ರವಣೇಂದ್ರಿಯಗಳು** ಆಕಾಶ ಸಂಬಂಧೀಯವಾಗಿರುತ್ತವೆ. ಪೃಥಿವ್ಯಾದಿ

ಆಕಾಶಪರ್ಯಂತವಾದ ದೇಹದಲ್ಲಿಯ ಭೂತಾತ್ಮಕ ವಿಭಾಗಗಳನ್ನು ವಿವರಿಸಿದ್ದಾರೆ. ನಂತರ ಜಡವಾದ ಪಾಂಚಭೌತಿಕದೇಹದಲ್ಲಿಯ ಚೇತನಾ ವಿಭಾಗವನ್ನು ಹೇಳುತ್ತಾರೆ ಹೀಗೆ ಶರೀರಾವಯವ ಸಂಖ್ಯೆಯು ಸ್ಥೂಲ ದೃಷ್ಟಿಯಿಂದ ವಿವರಿಸಲ್ಪಟ್ಟಿರುತ್ತದೆ

# (೫೦) ಪ್ರಧಾನ ವಿವರಣೆಯು

**ಯತ್ಪ್ರಯೋಕ್ತೃ ತತ್ ಪ್ರಧಾನಂ ಬುದ್ಧಿರ್ಮನಶ್ಚ ॥**
(ಚರಕ॥ ಶಾರೀರ॥ ಅ ೭ ಸೂ ೧೬)

ಶರೀರಾದಿಗಳಿಗೆ ಚೇತನೆಯನ್ನುಂಟು ಮಾಡುವವನಿಗೆ "ಪ್ರಧಾನಂ" ಎಂದು ಹೇಳುತ್ತಾರೆ. ಮತ್ತು **ಬುದ್ಧಿ ಮನಸ್ಸು**ಗಳಿಗೆ ಸಹ ಪ್ರಧಾನವೆಂದು ಹೆಸರು ಅರ್ಥಾತ್ ಆತ್ಮನ ಸಹಯೋಗದಿಂದ ದೇಹವು ಚೈತನ್ಯವನ್ನು ಪಡೆಯುವದರಿಂದ, ಪ್ರಯೋಕ್ತೃ (ಪ್ರೇರಕ) ಎಂದೂ, ಆತ್ಮನಹೊರತು ಹೇಹವು ನಿಶ್ಚೇಷ್ಟಿತ (ಜಡ) ವಾಗುವದರಿಂದ; ಆತ್ಮನೇ ಪ್ರಧಾನ (ಮುಖ್ಯ) ವೆಂದೂ ಹೇಳಿದ್ದಾರೆ **ಬುದ್ಧಿ** ಮತ್ತು **ಮನಸ್ಸುಗಳು** ಸುಖಾದಿ ಉಪಲಬ್ಧಿ ವಿಷಯ ಜ್ಞಾನಗಳನ್ನು ಆತ್ಮನಿಗೆ ಹೊಂದಿಸುವ ಸಾಧನಗಳಾಗಿರುತ್ತವೆ ದೇಹದಲ್ಲಿಯ ಜೀವನಿಗೆ ಸರ್ವ ಕ್ರಿಯಾಸ್ವೀಕಾರಾದಿಗಳು ಇವುಗಳಿಂದ ನಡೆಯುವದರಿಂದ ಇವಕ್ಕೂ ಪ್ರಧಾನವೆಂದು ಹೇಳಿರುತ್ತಾರೆ.

**ಪ್ರಧಾನಂ ಪ್ರಕೃತೌಬುದ್ಧೌ ಉತ್ತಮೇ ಪರಮಾತ್ಮನಿ ॥**
(ಹೈಮಕೋಶ)

ಪ್ರಕೃತಿ, ಬುದ್ಧಿ, ಶ್ರೇಷ್ಠ, ಪರಮಾತ್ಮ ಇವುವಳಿಗೆ "**ಪ್ರಧಾನ**" ವೆಂದು ಹೇಳುತ್ತಾರೆ ಹಿಂದೆ ವಿವರಣೆಯಲ್ಲಿ "**ಪ್ರಧಾನ**" ವೆಂದರೆ ಆತ್ಮನೆಂದೂ, "**ಅವ್ಯಕ್ತ**" ವೆಂದರೆ ಪ್ರಕೃತಿ ಮತ್ತು ಪರಮಾತ್ಮನೆಂದು ಗ್ರಹಣ ಮಾಡಿರುತ್ತದೆ.

**ಅವ್ಯಕ್ತಃ ಶಂಕರೇವಿಷ್ಣೌ ಅವ್ಯಕ್ತಂ ಮಹದಾದಿಕೇ ॥ ಆತ್ಮನ್ಯಪಿಸ್ಯಾದವ್ಯಕ್ತ ಮಸ್ಫುಟೇತ್ವಭಿಧೇಯವತ್॥** (ವಿಶ್ವಕೋಶಃ)

ಶಂಕರ, ವಿಷ್ಣು, ಮಹದಾದಿಗಳು, ಆತ್ಮ, ಪ್ರತ್ಯಕ್ಷವಾಗಿ ಕಾಣದಿರುವುದು, ಇವೆಲ್ಲವುಗಳಿಗೂ ಅವ್ಯಕ್ತವೆಂದು ಹೇಳುತ್ತಾರೆ. ಆದ್ದರಿಂದ ಮಹದಾದಿ ಪ್ರಕೃತಿ, ಆತ್ಮ ಇವುಗಳಿಗೆ ಅವ್ಯಕ್ತವೆನ್ನುವದು ಯೋಗ್ಯವಾಗಿರುತ್ತದೆ.

**"ಪ್ರಧಾನ ವಿವರಣೆ"** ದೇಹಾದಿ ಉತ್ಪತ್ತಿ ಮೊದಲುಗೊಂಡು **"ಶುಕ್ರ ಶೋಣಿತಗಳಲ್ಲಿ"** ಆತ್ಮವು (ಜೀವ) ಯುಕ್ತವಾಗಿಯೇ ಇರುತ್ತದೆ. ಆದ್ದರಿಂದಲೇ ಬೆಳೆದು ಗರ್ಭವಾಗುತ್ತದೆ. ದೇಹದ ಸರ್ವ ಕರ್ಮಕ್ಕೂ ಪ್ರೇರಕನು ಆತ್ಮನಾಗಿರುತ್ತಾನೆ ಯಾಕಂದರೆ ಜೀವ (ಆತ್ಮ) ಹೊರಟು ಹೋದ ಮೇಲೆ ದೇಹವು ನಿಶ್ಚೇಷ್ಟಿತವಾಗುವದರಿಂದ, ದೇಹವಲ್ಲಿಯ ಚೈತನ್ಯವು ಆತ್ಮನಿಷ್ಠವೆಂದು ಸಿದ್ಧವಾಗುತ್ತದೆ. ಮುಖ್ಯವಾಗಿ ದೇಹದಲ್ಲಿ ಚೇತನೆಯನ್ನುಂಟು ಮಾಡುನವನೂ, ಪ್ರೇರಕನೂಆದ್ದರಿಂದ ಆತ್ಮನಿಗೆ **"ಪ್ರಧಾನಪ್ರಯೋಕ್ತೃ"** ಎಂದು ಹೇಳಿದ್ದಾರೆ

ದೇಹದಲ್ಲಿರುವ ಜೀವನ ಕರ್ತವ್ಯವು "ಬುದ್ಧಿ" "ಮನಸ್ಸುಗಳಿಂದ" ನಡೆಯುವದರಿಂದ ಇವುಗಳಿಗೂ ಪ್ರಧಾನವೆಂದು " ಚರಕಾಚಾರ್ಯರು " ವಿವರಿಸಿದ್ದಾರೆ

## ಏಕತ್ವಪೃಥಕ್ತ್ವಭಾವನೆಯಿಂದ ಸಂಗನಿವೃತ್ತಿಗಳು:—

ಪೂರ್ವೋಕ್ತ ಅನೇಕ ಪ್ರಕಾರಭಿನ್ನರೀತಿ ವಿಭಾಗಗಳುಳ್ಳ ಶರೀರವು, ಅನೇಕ (ಅಸಂಖ್ಯಾತ) ಅವಯುವ ಸಂಘಾತವಾಗಿರುತ್ತದೆ. ಹೀಗೆ ಭಿನ್ನವಾದ ಅನೇಕ ವಿಭಾಗವುಳ್ಳ ಅವಯುವಗಳು ಇದ್ದರೂ ಅಜ್ಞಾನದಿಂದ ಒಂದೇ ಎಂದು ತಿಳಿಯುವದೇ ಸಂಗವು. ಅರ್ಥಾತ್ ಅನೇಕ ಸಂಯುಕ್ತ ಸಂಘಾತವನ್ನು ಒಂದೇ ಎಂದು ತಿಳಿದು ಅದಕ್ಕೇ ಮಹತ್ವ ಕೊಟ್ಟು ಅದರ ವಿಷಯದಲ್ಲಿ ಆಸಕ್ತಿ ಹೊಂದುವದೇ ಸಂಗವು (ಸಂಸಾರ) ಎಂದು ವಿವರಣೆಯು.

ಶರೀರವನ್ನು ಏಕತ್ವದಿಂದ ಭಾವಿಸಿ ಅದರ ಉಪಕಾರ (ಕಾರ್ಯ) ದಲ್ಲಿಯೇ ನಿರತರಾದರೆ, ರಾಗ ದ್ವೇಷಗಳಿಂದ ವ್ಯಾಪ್ತನಾದವನಾಗುತ್ತಾನೆ. ರಾಗ ದ್ವೇಷಗಳು ದೃಢವಾಗಿ ಜನ್ಮ ಪ್ರಾಪ್ತಿಗೆ ಕಾರಣವಾಗುತ್ತವೆ. ಆದ್ದ

ರಿಂದ ಏಕತ್ವ ಭಾವನೆಯು ಸಂಗಕ್ಕೆ (ಸಂಸಾರ) ಕಾರಣವಾಗಿರುತ್ತದೆಂದು ಹೇಳಿದ್ದಾರೆ. ಇದರಂತೆ ಪೃಥಕ್ತ್ವ (ಭೇದ) ಭಾವನೆಯು ಮೋಕ್ಷಕ್ಕೆ ಕಾರಣವಾಗಿದೆ

**ತದೇತಚ್ಛರೀರಂ ಸಂಖ್ಯಾತಮನೇಕಾವಯವಂ ದೃಷ್ಟಮೇಕ ತ್ವೇನಸಂಗಃ,ಪೃಥಕ್ತ್ವೇನಾಪವರ್ಗಃ॥ ತತ್ರ ಪ್ರಧಾನಮಸಕ್ತಂ ಸರ್ವಸತ್ತಾ ನಿವೃತ್ತೌ ನಿವರ್ತತೆ ಇತಿ ॥**

(ಚರಕ॥ ಶಾರೀರ॥ ಅ ೭ ಸೂ ೧೮)

ಬಹುವಿಧ ಭೇದ ಬಹಳಾವಯವಳುಳ್ಳ ದೇಹವನ್ನು ಒಂದೇ ಎಂದು ತಿಳಕೊಳ್ಳುವದು ಸಂಸಾರಕ್ಕೆ (ಜನ್ಮ) ಕಾರಣವು ಬೇರೆ ಬೇರೆ ಎಂದು ತಿಳಿಯುವದೇ ಮೋಕ್ಷವು ದೇಹದಲ್ಲಿಯ ಆತ್ಮವು (ಪ್ರಧಾನ) ಪೃಥಕ್ತ್ವ ಭಾವನೆಯಿಂದ ಅಸಕ್ತ (ಆಸ್ಥಾ ರಹಿತ) ನಾಗಿ ಸರ್ವಸತ್ತಾ(ಆಸಕ್ತಿ) ನಿವೃತ್ತಿ ಹೊಂದುತ್ತಾನೆ. ಸರ್ವಸತ್ತಾ ನಿವೃತ್ತಿಯೇ ಆತ್ಮನಿಗೆ ಮೋಕ್ಷವಾಗಿರುತ್ತದೆ. ಪುನಃ ಜನ್ಮವಿರುವದಿಲ್ಲವಾದ್ದರಿಂದ ಮುಕ್ತನೆಂದು ಅನ್ನುತ್ತಾರೆ.

# (೫೧) ಮಸ್ತಿಷ್ಕ ವಿವರಣೆ

## ತಂತ್ರಾಂತರದಲ್ಲಿಯಮತವು

ತಲೆಯ ಒಳಗಡೆಯಲ್ಲಿರುವ ಘೃತಪಿಂಡದಂಥ ಮೆತ್ತಗಿನ ಭಾಗಕ್ಕೆ "ಮಸ್ತಿಷ್ಕ"ವೆಂದು ಹೇಳುತ್ತಾರೆ ಅದು ಬಹಳ ಮೃದುವಾಗಿದ್ದು ಮಡಿಕೆ (ನೆರಿಗೆ) ಯಾಗಿ ಗುಂಪುಗಟ್ಟಿಕೊಂಡು ಇರುತ್ತದೆ. ಮಸ್ತಿಷ್ಕದಿಂದ ಹೊರಟ ಜ್ಞಾನ (ಮಜ್ಜಾ) ತಂತುಗಳು ಸಮಗ್ರ ದೇಹದಲ್ಲಿ ಪಸರಿಸಿಕೊಂಡಿರುತ್ತವೆ ಜ್ಞಾನೇಂದ್ರಿಯಗಳಲ್ಲಿಯ ಚಕ್ಷುರಾದಿ ನಾಲ್ಕು ಇಂದ್ರಿಯಗಳು ಶಿರೋಭಾಗ ದಲ್ಲಿಯೆ ಇರುತ್ತವೆ. ಸ್ಪರ್ಶೇಂದ್ರಿಯಕ್ಕೆ ಮೂಲವಾದ ಜ್ಞಾನತಂತುಗಳು ಇಲ್ಲಿಂದಲೇಹೊರಟಿರುವದರಿಂದ, ಜ್ಞಾನೇಂದ್ರಿಯಗಳಿಗೆಆಶ್ರಯಸ್ಥಾನವೆಂದೂ ಅನ್ನುತ್ತಾರೆ. **ಆಯುರ್ವೇದ ಮತದಂತೆ** ಅರ್ಧಾಂಜಲಿ (ಅರ್ಧಬೊಗಸೆ)

ಪ್ರಮಾಣ ಮಸ್ತಿಷ್ಕವಿರುತ್ತದೆಂದು ಹೇಳಿದ್ದಾರೆ. ಆತ್ಮಾ ಬುದ್ಧಿವ ನಸ್ಸುಗಳಿಗೆ ಸ್ಥಾನವಾದ್ದರಿಂದ "ಹೃದಯವೇ" ಚೇತನಾಸ್ಥಾನವು ಮುಖ್ಯವಾಗಿರುತ್ತದೆ ಜ್ಞಾನತಂತುಗಳು ಸ್ಪರ್ಶಾದಿ ಜ್ಞಾನಕ್ಕೆ ಸಾಧನವಾಗಿರುತ್ತವೆ ಆತ್ಮಪ್ರಭಾ ಭೂಷಿತವಾಗಿ ಅವನ ಪ್ರೇರಣೆಯಿಂದಲೇ ನಡೆಯುತ್ತದೆಂದು ತಿಳಿಯಬೇಕು **ನವೀನರು** ಜ್ಞಾನತಂತುಗಳೇ ಜ್ಞಾನಕ್ಕೆ ಪ್ರಕೃಷ್ಟ ಸಾಧನವೆಂದು ಹೇಳುತ್ತಾರೆ ಇದು ಕೇವಲ ಭೌತಿಕವಾದವಾಗಿದೆ, ಯಾಕಂದರೆ ಕ್ರಿಯೆಯು ಯಾವಾಗಲೂ ಪ್ರತ್ಯಕ್ಷವಾಗಿರುವದಿಲ್ಲ ಕ್ರಿಯಾಫಲದಿಂದ ಕ್ರಿಯೆಯನ್ನು ಊಹಿಸಿ ತಿಳಕೊಳ್ಳಬೇಕಾಗುತ್ತದೆ ಜಡವಾದ ಭೌತಿಕಗಳಲ್ಲಿಯ ಚೇತನೆ ಕ್ರಿಯೆಗಳು ಆತ್ಮನದೇ ಆಗಿರುತ್ತವೆ ಅದ್ದರಿಂದ ಆತ್ಮಾಶ್ರಯವುಳ್ಳ ಸ್ಥಾನವೇ ಜ್ಞಾನವಿಜ್ಞಾನಸಂಶ್ರಯವೆಂದು ನಮ್ಮ **ಆಚಾರ್ಯರ ಮತವು** ಉಳಿದವುಗಳೆಷ್ಟೇ ಇದ್ದರೂ ಆತ್ಮನಿಗೆ ಸಾಧನಗಳಾಗಿಯೂ ಅವನ ಸಕಾಶದಿಂದಲೇ ಚೈತನ್ಯಹೊಂದಿ ಪ್ರೇರಿತವಾಗಿ ನಡೆಯುತ್ತವೆ

### * ಮಸ್ತಿಷ್ಕ ಸ್ಥಾನವಾದ ಶಿರಸ್ಸು

**ಪ್ರಾಣಾಃ ಪ್ರಾಣಭೃತಾಂಯತ್ರಶ್ರಿತಾಃ ಸರ್ವೇಂದ್ರಿಯಾಣಿ ಚ॥**
**ತದುತ್ತಮಾಂಗಮಂಗಾನಾಂ ಶಿರಸ್ತದಭೀಧೀಯತೇ ॥೧೦೧॥**
**ಜ್ಞಾನತಂತು ಪ್ರಕೋಷ್ಠಾಖ್ಯಂ ಮಸ್ತಿಷ್ಕಂತು ಶಿರೋಧೃತಂ॥**
**ನಜ್ಞಾನಾಧಿಕರಣಸ್ಯಾಸ್ಯ ವಿಜ್ಞಾತುರಂತರಾತ್ಮನಃ ॥**

(ತಂತ್ರಾಂತರೆ)

ದೇಹಿಗಳ ಮುಖ್ಯವಾದ ಸರ್ವ ಇಂದ್ರಿಯಗಳು ಯಾವದನ್ನು ಆಶ್ರಯಿಸಿ ಇರುತ್ತವೆಯೋ, ಅದು ಅಂಗಗಳಲ್ಲಿ ಶ್ರೇಷ್ಠವಾದ ಅಂಗವಾಗಿರುತ್ತದೆ ಆದ್ದರಿಂದ "ಶಿರಸ್ಸು" ಉತ್ತಮಾಂಗವೆಂದು ಹೇಳಲ್ಪಡುತ್ತದೆ. ಜ್ಞಾನತಂತುಗಳಿಗೆ ಸ್ಥಾನವಾದ ಮಸ್ತಿಷ್ಕವು ಶಿರಸ್ಸಿನಲ್ಲಿ ಧಾರಣ ಮಾಡಲ್ಪಟ್ಟಿರುತ್ತದೆ ಜ್ಞಾನದಾಯಕನೂ ಪ್ರೇರಕನೂ ಆದ ಅಂತರಾತ್ಮನ (ಜೀವದ) ಆಶ್ರಯ ಸ್ಥಾನವು ಶಿರಸ್ಸಾಗಿರುವದಿಲ್ಲ ಅರ್ಥಾತ್, ದೇಹವ್ಯಾಪಿಯಾದ

ಅಂತರಾತ್ಮನ ಮುಖ್ಯಸ್ಥಾನವು ಹೃದಯವೆಂದು **ಸುಶ್ರುತ, ಚರಕ, ವಾಗ್ಭಟ ಶಾರ್ಙಧರ, ಭಾವಪ್ರಕಾಶಕಾರ,** ಮೊದಲಾದವರ ಮತವಾಗಿರುತ್ತದೆ.

*** ಮಸ್ತಿಷ್ಕ ಅಧಿಷ್ಠಿತ ಕಾರ್ಯಗಳು**

**ಬುದ್ಧೀಂದ್ರಿಯಾಣಾಂ ಸರ್ವೇಷಾಮಧಿಷ್ಠಾನಂ ವಿಶೇಷತಃ ॥**
**ಕಾರ್ಯಸಾಧನಮಸ್ತಿಷ್ಕಂ ಹೃದಯಸ್ಯಸಕಾಶತಃ ॥**
**ಪುನರ್ಮಸ್ತಿಷ್ಕೇನೇಂದ್ರಿಯೇಣ ಸರ್ವಕೃತ್ಯಂಭವೇತ್ತನೌ ॥**
**ಮಸ್ತಿಷ್ಕೇಹೃದಯಂಕೇಚಿತ್‌ಮನ್ಯಂತೇತನ್ನಶೋಭನಂ ॥**

(ಭೇಡ ಮತ)

ಶಿರಸ್ಸು (ಮಸ್ತಿಷ್ಕ) ಚಕ್ಷುರಾದಿ ಪಂಚಬುದ್ಧೀಂದ್ರಿಯಗಳಿಗೆ ವಿಶೇಷ ವಾಗಿ ಆಶ್ರಯಸ್ಥಾನವಾಗಿರುತ್ತದೆ. ಅರ್ಥಾತ್ ಬುದ್ಧೀಂದ್ರಿಯಗಳು ಶಿರಸ್ಸಿನಲ್ಲಿರುತ್ತವೆಂಬರ್ಥವು.

"ಬುದ್ಧೀಂದ್ರಿಯಗಳಿಗೆ" ಆಶ್ರಯಸ್ಥಾನವೆಂದು ಹೇಳಿದ್ದರಿಂದಲೂ ಮನಸ್ಸನ್ನು ಗ್ರಹಿಸದೇ ಇರುವದರಿಂದಲೂ ಮನಸ್ಸಿಗೆ ಹೃದಯವೇ ಆಶ್ರಯ ಸ್ಥಾನವೆಂದು ತಿಳಿಯಬೇಕು. ಹೃದಯ (ಮನಸ್ಸಿನ) ಸಹಯೋಗದಿಂದ ಮಸ್ತಿಷ್ಕವು ಕಾರ್ಯಸಾಧನವಾಗುತ್ತದೆ. ಅರ್ಥಾತ್ ಮನೋಯೋಗದಿಂದ ಮಸ್ತಿಷ್ಕವು ಜ್ಞಾನೇಂದ್ರಿಯಗಳಿಂದ, ಕಾರ್ಯಮಾಡಿಸುತ್ತದೆಂಬರ್ಥವು ಮಸ್ತಿಷ್ಕದಲ್ಲಿರುವ ಜ್ಞಾನೇಂದ್ರಿಯದಿಂದ, ಶರೀರದಲ್ಲಿಯ ಸರ್ವಕಾರ್ಯಗಳೂ ನಡೆಯುತ್ತವೆ ಮಸ್ತಿಷ್ಕದಲ್ಲಿ ಹೃದಯ (ಮನಸ್ಸು) ಇರುತ್ತದೆಂದು ಕೆಲವರು ಹೇಳುತ್ತಾರೆ. ಅದು ಯೋಗ್ಯವಲ್ಲ. ಯಾಕಂದರೆ ಮನಸ್ಸಿನಆಘಾತಾದಿಗಳಿಂದ ಹೃದ್ರೋಗವಾಗುತ್ತದೆ. ಅದುಹೃದಯದಲ್ಲಿ ಆಗುವದರಿಂದ ಮನಸ್ಸಿನ ಸ್ಥಾನವು ಹೃದಯವೆಂದು ನಿರ್ಧರಿಸಿದ್ದಾರೆ.

**ಆತ್ಮಬುದ್ಧಿಮನೋಯತ್ರಚೈತನ್ಯಂ ಧಾರಿತಿಷ್ಠತಿ ॥**
**ಹೃದಯಂ ಚಾತ್ರವಕ್ಷಸ್ಥಮಾಯುರ್ವೇದವಿದೋವಿದುಃ ॥**

**ಮಸ್ತಿಷ್ಕಂ ಹೃದಯಂ ಕ್ವಾಪಿನೋಕ್ತಂ ಪರ್ಯಾಯ ವಾಚಕಂ ॥**
**ಸ್ಥಾನಾಶ್ರಯಂ ಸಿರಸ್ಯೇವಮಸ್ತಿಷ್ಕಸ್ಯೋದಿತಂ ಪುರಾ ॥**
**ಹೃತ್ಕಾರ್ಯಭೂಮಿರ್ಭೇಲೇನಮುಖ್ಯಾಚಾತ್ರಪ್ರಕಾಶಿತಾ ॥**

(ಭೇಡಮತ)

ಆತ್ಮ, ಬುದ್ಧಿ, ಮನಸ್ಸು, ಚೈತನ್ಯ, ಜೀವಧಾರಣೆಯು, ಹೃದಯದಲ್ಲಿಯೇ ಇರುತ್ತದೆ ಇಂಥ ಹೃದಯವು ವಕ್ಷಸ್ಥಳ (ಎದೆ) ಎಂಬಲ್ಲಿ ಇರುತ್ತದೆಂದು ಆಯುರ್ವೇದಾಚಾರ್ಯರು ಕಂಡುಹಿಡಿದಿದ್ದಾರೆ ಮತ್ತು ಎಲ್ಲಿಯೂ ಆಯುರ್ವೇದ ಅಥವಾ ಕಿಂಬಹುನಾ ಯಾವದೇ ಭಾರತೀಯ ವಾಙ್ಮಯದಲ್ಲಿ ಮಸ್ತಿಷ್ಕಕ್ಕೆ ಹೃದಯವೆಂಬ ಪರ್ಯಾಯವಾಚಕವಿರುವದಿಲ್ಲ ಅರ್ಥಾತ್ ಮಸ್ತಿಷ್ಕವನ್ನು ಹೃದಯವೆಂದು ತಿಳಿಯುವದೊತ್ತಟ್ಟಿಗಿರಲಿ ಹೃದಯಪರ್ಯಾಯವಾಚಕವೆಂದು ಸಹ ಹೇಳಿರುವದಿಲ್ಲ. ಮಸ್ತಿಷ್ಕವು ಶಿರಸ್ಸಿನಲ್ಲಿರುತ್ತದೆಂದು ಮೊದಲೇ ವಿವರಿಸಿದ್ದಾಗಿದೆ ಹೃದಯದಕಾರ್ಯಭೂಮಿಯು ಮಸ್ತಿಷ್ಕವೆಂದು "ಭೇಡಾಚಾರ್ಯರಿಂದ" ಹೇಳಲ್ಪಟ್ಟಿರುತ್ತದೆ

# (೫೨) ದೇಹದಲ್ಲಿಯ ಮಜ್ಜಾತಂತುಗಳು

ತಲೆಯಿಂದ ಹೊರಟ ಮಜ್ಜಾರಜ್ಜು (ಜ್ಞಾನತಂತು) ಪೃಷ್ಠಕಶೇರುಕಾಸ್ಥಿಯ ರಂಧ್ರದಲ್ಲಿ ಹಾಯ್ದು ಸಮಗ್ರ ದೇಹವನ್ನು ವ್ಯಾಪಿಸಿರುತ್ತದೆ. ಇದರಿಂದ ಸ್ಪರ್ಶಜ್ಞಾನವಾಗುತ್ತಿದೆಯಾದ್ದರಿಂದ ಇದಕ್ಕೆ ಜ್ಞಾನತಂತುವೆಂದು ಪ್ರತಿಪಾದಿಸಿದ್ದಾರೆ. ಮನಸ್ಸಿನ ಯೋಗದಿಂದ ಜ್ಞಾನವಾಗುತ್ತದೆಂದು ತಿಳಿಯಬೇಕು. ಜ್ಞಾನಕ್ಕೆ ಮಜ್ಜಾತಂತು ಸಾಧನವಾಗಿ ಮನೋಯೋಗದಿಂದ ಜ್ಞಾನಮಾಡಿಕೊಡುತ್ತದೆ. ಮನೋಯೋಗವಿಲ್ಲದೇ ಸ್ವತಂತ್ರಜ್ಞಾನಮಾಡಿಕೊಡಲಾರದು. ಸ್ಪರ್ಶನೇಂದ್ರಿಯ ಭೂಮಿಯೆಂದರೂ ಅಡ್ಡಿಯಿಲ್ಲ. '**ಭೌತಿಕ ಪಾಶ್ಚಾತ್ಯ ಜ್ಞಾನಾದಿಗಳು**" ಅಲ್ಲಲ್ಲಿಯ ಸ್ಥೂಲಾವಯವಗಳೇ ಜ್ಞಾನೇಂದ್ರಿಯಗಳೆಂದು ಪ್ರತಿಪಾದಿಸುತ್ತಾರೆ. ಅವರ ಮತವನ್ನು ದರ್ಶನಮಾಡಿದ್ದೇವೆಯೇ ವಿನಾ

ಅದೇ ಸತ್ಯವೆಂದು ತಿಳಿಯಬಾರದು. ಕೇವಲ ಭೌತಿಕ ಸ್ಥೂಲ ವಿಭಾಗ ಜಾಣಾಕ್ಷತೆಯಿಂದ ಸೂಕ್ಷ್ಮವೂ ಅತೀಂದ್ರಿಯವಾದ ಕ್ರಿಯಾಚೈತನ್ಯ ಪರಿಚಯ ವಿಭಾಗವಾಗಲಾರದು ಆದ್ದರಿಂದ ಸ್ಥೂಲಭೂತ ವಿಭಾಗಗಳ ಕ್ರಿಯೆಯಲ್ಲಿ, ಮನಸ್ಸು ಆಶ್ರಯಿಸಿ ಕಾರ್ಯಮಾಡುತ್ತದೆಂದು ತಿಳಿಯಬೇಕು. ಅರ್ಥಾತ್ ಜ್ಞಾನವಿಷಯದಲ್ಲಿ ಮನಸ್ಸಿಗೆ ಸ್ಥೂಲಭೂತ ಇಂದ್ರಿಯಗಳು ಸಾಧನವಾಗುತ್ತವೆ ವಿವರಣೆಯಲ್ಲಿ ಸತ್ಯ ಸಿದ್ಧಾಂತವಾದ ಆಯುರ್ವೇದ ತತ್ವಕ್ಕೆ ಕ್ಷತಿಯುಂಟಾಗಬಾರದೆಂದು, ಮೇಲಿಂದ ಮೇಲೆ ವಿಸ್ತಾರವಾಗಿ ಹೇಳಿದೆ

**ವಿವರಣೆಯು:—** ಆಯುರ್ವೇದಾಚಾರ್ಯರು ದೇಹವನ್ನು ಸೂಕ್ಷ್ಮ (ಅತೀಂದ್ರಿಯ), ಸ್ಥೂಲಗಳೆಂಬ ವಿಭಾಗ ದೃಷ್ಟಿಯಿಂದ ವಿಮರ್ಶಿಸಿದ್ದಾರೆ ದೇಹವು ಚೈತನ್ಯಯುಕ್ತವಾಗಿರುವದರಿಂದಲೇ ಅದರಿಂದ ಕ್ರಿಯಾ ನಡೆಯುತ್ತದೆ ಚೈತನ್ಯರಹಿತ ಶರೀರದಲ್ಲಿ ಕ್ರಿಯಾ ಇರುವದಿಲ್ಲವಾದ್ದರಿಂದ ಪ್ರೇರಕನೊಬ್ಬನು, ಸರ್ವ ವ್ಯಾಪಾರವನ್ನೂ ನಡೆಸುತ್ತಾನೆಂದು ಆಯುರ್ವೇದ ಸಿದ್ಧಾಂತದಲ್ಲಿ ಹೇಳಿದೆ. ಚೈತನ್ಯರಹಿತ ದೇಹಸ್ಥಿತಿಯೇ ಜಡವು (ಅಚೇತನ) ಅದರಲ್ಲಿ ಯಾವ ಕ್ರಿಯೆಯೂ ಇರುವದಿಲ್ಲ ಅದರಲ್ಲಿ ಮೊದಲು ಕ್ರಿಯಾ ನಡೆಯುತ್ತಿದ್ದದ್ದು ಚೈತನ್ಯದಾಯಕನಾದ ಆತ್ಮನದಾಗಿರುತ್ತದೆ ದೇಹವು ಜಡ (ನಿಶ್ಚೇಷ್ಟಿತ) ವಾಗಿದ್ದರೂ ಚೇತನಾಧಿಷ್ಠಾನವಿರುವ ವರೆಗೆ ಸಾಧನವಾಗಿ ಕರ್ತವ್ಯವನ್ನು ನಿರ್ವಹಿಸುತ್ತದೆ ಆತ್ಮನು ಅತೀಂದ್ರಿಯನಾದ್ದರಿಂದ ಎಲ್ಲ ಚೇತನೆಯೂ ದೇಹದ್ದೆಂದೇ ಅನಿಸುತ್ತದೆ ಆತ್ಮನು ಹೊರಟುಹೋದ ಮೇಲೆ ದೇಹದಲ್ಲಿ ಭಿನ್ನವಾದ ಚೈತನ್ಯವಿದೆಯೆಂದು ತಿಳಿಯುತ್ತದೆ ಆಗ ದೇಹವು ಜಡವಿರುವದರಿಂದ ಪರಿಶೇಷ ನ್ಯಾಯದಿಂದ ಚೈತನ್ಯ ವಿಭಾಗ ವಿಮರ್ಶೆಯಾಗಿ, ಜಡ ದೇಹಕ್ಕೆ ಪ್ರೇರಕವಾದದ್ದೊಂದು ಇರುತ್ತದೆಂದು ಸಿದ್ಧಾಂತವಾಗಿರುತ್ತದೆ.

**ಸ್ನಾಯವಃ ಸೂತ್ರವತ್ಸೂಕ್ಷ್ಮಾಃ ಶುಭ್ರಾ ನಿಖಿಲದೇಹಗಾಃ ||**
**ಕರಣಾನಿ ಚೇತನಾನಾಂ ಸದಾ ಚೈತನ್ಯ ಸಾಧನೇ ||೧||**

**ಸುಖದುಃಖಾವಬೋಧೇಚ ಪ್ರವೃತ್ತೌಚ ವಿವರ್ತತೇ ||**
**ರೂಪಗಂಧರಸಸ್ಪರ್ಶಶಬ್ದಜ್ಞಾನೇಚ ಹೇತವಃ ||೨||**
**ನಿಖಿಲಾಸ್ತಾಶ್ಚ ಸಂಜಾತಾ ಮಸ್ತಿಷ್ಕಾ ಪೃಷ್ಠಮಜ್ಜತಃ ||**
**ಶಿರೋಮಂಡಲ ಮೇವಾದ್ಯಾಃ ಶೇಷಾ ಶೇಷಾಂಗಮಾಶ್ರಿತಾಃ**

ಮಜ್ಜಾತಂತುವಿನ ಸ್ನಾಯುಗಳು ನೂಲಿನಂತೆ ಸೂಕ್ಷ್ಮವಾಗಿಯೂ ಬಿಳಿವರ್ಣವುಳ್ಳದ್ದಾಗಿಯೂ ದೇಹದ ತುಂಬೆಲ್ಲ ವ್ಯಾಪಿಸಿಕೊಂಡಿರುತ್ತವೆ ದೇಹದಲ್ಲಿ ಚೈತನ್ಯವುಂಟು ಮಾಡುವ ವಿಷಯದಲ್ಲಿ ಆತ್ಮ (ಜೀವ) ನಿಗೆ ಸಾಧನವು. ಸದಾಚೈತನ್ಯಕ್ಕೆ ಸಾಧನಗಳಾಗುತ್ತವೆ ಸುಖದುಃಖ ಜ್ಞಾನವಾಗಲಿಕ್ಕೂ ವಿಷಯ ಪ್ರವೃತ್ತಿಯಲ್ಲಿಯೂ ವಿಶೇಷವಾಗಿರುತ್ತವೆ ರೂಪ, ಗಂಧ, ರಸ, ಸ್ಪರ್ಶ, ಶಬ್ದಜ್ಞಾನಗಳಲ್ಲಿಯೂ ಸಾಧನವಾದ ಕಾರಣವಾಗಿರುತ್ತವೆ. ಎಲ್ಲಾ ಮಜ್ಜಾತಂತ. (ಸ್ನಾಯು) ಗಳು ಮಸ್ತಿಷ್ಕದಲ್ಲಿ ಹಿಂಬದಿ ಮಜ್ಜೆಯಿಂದ ಹೊರಟಿರುತ್ತವೆ ತಲೆಯಿಂದಲೇ ಮೊದಲು ಹೊರಟು ನಂತರ ಉಳಿದ ಸರ್ವಾಂಗಗಳನ್ನು ವ್ಯಾಪಿಸಿರುತ್ತವೆ ತಲೆಯಿಂದ ಹೊರಟ ಮಜ್ಜಾತಂತುಗಳು ಪೃಷ್ಠದಲ್ಲಿರುವ ಕಶೇರುಕಾರಜ್ಜುಗಳ ಪೊಳ್ಳು ಭಾಗಗಳಿಂದ ಸರ್ವದೇಹದಲ್ಲಿಯೂ ಪಸರಿಸಿರುತ್ತವೆ

**ತೇಷುತೇಷುಚ ಭಾವೇಷು ದೇಹಮಾಪ್ತೇಷುವಸ್ನಸಾಃ ||**
**ಕಂಪಮಾನಾಃ ಕಂಪಯಂತೇಮಸ್ತುಲುಂಗಂಚತತ್‌ಕ್ಷಣಾತ್**
**ತಸ್ಯಪ್ರಕಂಪ ಭೇದೇನ ಜ್ಞಾನಭೇದೋಭವೇದ್ಬಹುಃ ||**
**ಅತೋಮಸ್ತಿಷ್ಕಮೇವೈಕಂ ಜ್ಞಾನಹೇತು ಪ್ರಕೀರ್ತಿತಂ ||**
**ಸ್ನಾಯುನಾಶೋಭವೇದ್ಯಸ್ಮಿನ್ನಂಗೇತತ್ಸ್ಯಾನ್ಮ್ಯತೋಪಮಮ್**
**ಪಕ್ಷಾಘಾತಾದಿ ರೋಗೇಷು ಕಾರಣಂ ತದ್ವಿಧಂಮತಂ ||**
**(ತಂತ್ರಾಂತ್ರರೆ)**

ದೇಹದಲ್ಲಿ ಭಿನ್ನಭಿನ್ನಕರ್ತವ್ಯಮಾಡುವ ವ್ಯಾಪಕವಾದ ಸ್ನಾಯುಗಳು ಮಜ್ಜಾತಂತು) ನಡಗುವಂಥವುಗಳಾಗಿ ಆ ಕ್ಷಣದಲ್ಲಿಯೇ ಮಿದುಳನ್ನು ಮಸ್ತುಲುಂಗ) ನಡಗಿಸತ್ತವೆ ಈ ಕಂಪಭೇದಗಳನ್ನು ಅವಲೋಕಿಸಿದರೆ

(ಕಂಪಭೇದಗಳಿಂದ) ಅನೇಕ ರೀತಿ ಜ್ಞಾನವಾಗುತ್ತದೆ ಅರ್ಥಾತ್ ದೇಹ ದಲ್ಲಿ ಜ್ಞಾನತಂತುಗಳು ಪ್ರಸ್ಫುರಿಸುತ್ತಿರಲು ಅವುಗಳಿಂದ ಮಿದುಳು ಆಯಾವ ಜ್ಞಾನವನ್ನು ಮಾಡಿಕೊಳ್ಳುತ್ತದೆಂದು ಅಭಿಪ್ರಾಯವಾಗಿರುತ್ತದೆ. ಆದ್ದ ರಿಂದ ಮಸ್ತಿಷ್ಕವು (ಮಿದುಳು) ಜ್ಞಾನಕ್ಕೆ ಕಾರಣವೆಂದು ಹೇಳಲ್ಪಟ್ಟದ ಯಾವ ಅಂಗದಲ್ಲಿ ಸ್ನಾಯುನಾಶವಾಗುತ್ತದೆಯೋ ಆ ಅವಯವವು ಸತ್ತಂತೇ (ಸ್ಪರ್ಶಶೂನ್ಯ) ಆಗುತ್ತದೆ. ಹೀಗಿರುವದರಿಂದ ಮಜ್ಜಾತಂತುಗಳು ದೇಹ ದಲ್ಲಿ ಸ್ಪರ್ಶಾದಿ ಜ್ಞಾನಮಾಡಿಕೊಡುವ ಸಾಧನಗಳಾಗಿರುತ್ತವೆಂದು ಹೇಳಿ ದ್ದಾರೆ. ಸ್ನಾಯುಗಳು ಸ್ಪರ್ಶಶೂನ್ಯವಾಗುವದೇ ಪಕ್ಷಾಘಾತಾದಿ ರೋಗ ಗಳಿಗೆ ಕಾರಣವಾಗಿರುತ್ತದೆ

## (೫೩) ದೇಹದಲ್ಲಿ ಆಹಾರಕ್ರಮಣ ಪರಿಪಾಕಗಳು

ದೇಹ ರಕ್ಷಣೆಗಾಗಿ ಸ್ವೀಕರಿಸಿದ ಆಹಾರವು ಪ್ರಾಣವಾಯುವಿನಿಂದ ಕೋಷ್ಠದಲ್ಲಿ ಒಯ್ಯಲ್ಪಡುತ್ತದೆ. ಕೋಷ್ಠದಲ್ಲಿ ಹೋಗುವದರೊಳಗೂ ನಂತರ ದಲ್ಲಿಯೂ ಆಹಾರವು, ಕುಡಿದ ಜಲರೂಪ ದ್ರವಾದಿಗಳಿಂದಲೂ, ಬಾಯಿ ಮೊದಲಾದವುಗಳಲ್ಲುಂಟಾದಗುವ ಸ್ವಾದು ರಸದಿಂದಲೂ ತೊಯಿದು, ಅವು ಗಳಿಂದ ಸಂಯುಕ್ತವಾಗುತ್ತದೆ. ಹೀಗೆ ದ್ರವರಸಾದಿಗಳ ಯೋಗದಿಂದ ಘನೀಭೂತ (ಘಟ್ಟಿಯಾದ) ಆಹಾರ ಮುದ್ದೆಯು, ಒಡೆದುವಿರಲಾವಯುವ ವುಳ್ಳದ್ದಾಗಿಯೂ ಸ್ನೇಹ ಸ್ವಾದುರಸಾದಿಗಳಿಂದ ಮಾರ್ದವವುಳ್ಳದ್ದಾಗಿಯೂ ಆಗುತ್ತದೆ. ಘನವಾದ ಆಹಾರವು ಹೀಗೆ ಮೃದುವಾಗಿ (ಮೆತ್ತಗೆ) ದ್ರವ ದಿಂದ ಕೂಡುವದರಿಂದ ಪಚನವಾಗಲು ಸುಗಮವಾಗುತ್ತದೆ.

ಪ್ರಾಣಿಗಳ ಜೀವಧಾರಣೆಗೆ ಆಹಾರವು (ಅನ್ನ) ಆವಶ್ಯವಾಗಿರುತ್ತದೆ. ಅನ್ನಕ್ಕಾಗಿಯೇ ಜಗತ್ತು (ಜನ) ಬಹು ಪ್ರಯತ್ನಮಾಡುತ್ತದೆ ಆಹಾರ ದಿಂದಲೇ ಪ್ರಾಣಧಾರಣೆಯಾಗುವದರಿಂದ ಅನ್ನವೇ ಪ್ರಾಣವೆಂದು ಹೇಳಿ ದ್ದಾರೆ. ಯಾಕಂದರೆ ಅನ್ನವಿಲ್ಲದಿದ್ದರೆ ದೇಹದಿಂದ ಪ್ರಾಣವು ಹೊರಟು

ಹೋಗುತ್ತದೆ. ಸಕಲ ಪ್ರಾಣಿ ವರ್ಗವೂ ಅನ್ನವನ್ನು ಇಚ್ಛಿಸುತ್ತವೆ, ಮತ್ತು ಅದರಿಂದಲೇ ಜೀವಿಸುತ್ತವೆನ್ನುವದೂ ಸ್ಪಷ್ಟಗೋಚರವಾದ ವಿಷಯವೇ ಆಗಿರುತ್ತದೆ ಹೀಗೆ ಅತಿಮುಖ್ಯವೂ ಜೀವಧಾರಣೆ ಪೋಷಣೆಗಳಿಗೆಯೋಗ್ಯವೂ ಆದ ಅನ್ನವನ್ನು **ಚರಕಾಚಾರ್ಯರು** ಪ್ರಾಣದಷ್ಟೇ ಮಹತ್ವಕೊಟ್ಟು ಪ್ರಾಣವೆಂದೇ ಹೇಳಿದ್ದಾರೆ. ಇಷ್ಟೇ ಅಲ್ಲ"**ಸರ್ವಮನ್ನೇಪ್ರತಿಷ್ಠಿತಂ**" ಎಲ್ಲವೂ (ಸರ್ವ ಜೀವಿಗಳ ಅಸ್ತಿತ್ವ ತೃಪ್ತಿ ಸರ್ವ ಫಲಸ್ವರೂಪವಾದದ್ದು) ಅನ್ನದಿಂದಲೇ ಉಂಟಾಗುವದರಿಂದ, ಸರ್ವವೂ ಅನ್ನವನ್ನವಲಂಬಿಸಿರುತ್ತದೆಂದು ವಿವರಿಸಿದ್ದಾರೆ. ಇಂಥ ಮಹತ್ವಪೂರಿತವಾದ ಅನ್ನವನ್ನು ಯೋಗ್ಯವಾಗಿಯೂ ಹಿತಮಿತದಿಂದ ಸಕಾಲದಲ್ಲಿ ಶುಚಿಯಾಗಿ ಉಪಯೋಗಿಸಿದ್ದಾದರೆ, ಪ್ರತ್ಯಕ್ಷ ಮತ್ತು ಪಾರಲೌಕಿಕವಾದ ಮಹಾಫಲವು ಲಭಿಸುತ್ತದೆ.

**ಪ್ರಾಣಾಃ ಪ್ರಾಣಭೃತಾಮನ್ನಂ ಅನ್ನಂ ಲೋಕೋऽಭಿಧಾವತಿ॥**
**ವರ್ಣಃ ಪ್ರಸಾದಃ ಸೌಸ್ವರ್ಯಂ ಜೀವಿತಂ ಪ್ರತಿಭಾಸುಖಮ್॥**
**ತುಷ್ಟಿಃ ಪುಷ್ಟಿರ್ಬಲಂ ಮೇಧಾಸರ್ವಮನ್ನೇಪ್ರತಿಷ್ಠಿತಂ॥**
**ಲೌಕಿಕಂ ಕರ್ಮಯದ್ವೃತ್ತೌ ಸ್ವರ್ಗತೌಯಚ್ಚವೈದಿಕಮ್॥**
**ಕರ್ಮಾಪವರ್ಗೇಯಚ್ಚೋಕ್ತಂ ತಚ್ಚಾಪ್ಯನ್ನೇಪ್ರತಿಷ್ಠಿತಮ್॥**
(ಚರಕ॥ ಸೂ. ಸ್ಥಾ. ಅ ೨೮ ಶ್ಲೋ ೩೫೧)

ಪ್ರಾಣಿಗಳಿಗೆ ಅನ್ನವು ಪ್ರಾಣವಾಗಿರುತ್ತದೆ. ಜೀವಿಲೋಕವು ಅನ್ನವನ್ನಿಚ್ಛಿಸುತ್ತದೆ ದೇಹಕ್ಕೆ ವರ್ಣಕರವಾದ, ಪ್ರಸನ್ನತೆಯೂ, ಒಳ್ಳೇ ಸ್ವರ, ಅಭಿವೃದ್ಧಿ, ಬದುಕುವಿಕೆ, ಪ್ರಜ್ಞಾ, ಸುಖ, ತೃಪ್ತಿ, ಪೋಷಣೆ, ಬಲ (ಶಕ್ತಿ), ಧಾರಣಾ, ಬುದ್ಧಿ, ಮುಂತಾದವುಗಳು ಅನ್ನವನ್ನಾಶ್ರಯಿಸಿಯೇ ಇರುತ್ತವೆ ಅನ್ನದಿಂದಲೇ ದೇಹಧಾರಣೆಯಾಗುವದರಿಂದ, ಅನ್ನಪೋಷಿತದೇಹವು ಸರ್ವ ಕರ್ತವ್ಯವನ್ನು ಮಾಡುತ್ತದೆ. ಈ ಕಾರಣದಿಂದ ಎಲ್ಲ ದೇಹ ಸಂಭವ ವೈಶಿಷ್ಟ್ಯಗಳು ಪೋಷಕ ಧಾರಕ ವರ್ಧಕ ಕಿಂಬಹುನಾ ಪ್ರಾಣವೇ ಆಗಿರುವ ಅನ್ನವನ್ನವಲಂಬಿಸಿರುತ್ತವೆ ಇದಕ್ಕಾಗಿಯೇ "**ಅನ್ನೇ ಸರ್ವಂ ಪ್ರತಿಷ್ಠಿತಂ**" ಎಂದು ಹೇಳಿದ್ದಾರೆ. ಇಷ್ಟು ಮಹತ್ವವುಳ್ಳ ಅನ್ನವನ್ನುವಿಚಾರರಹಿತರಾದವರು ತಾತ್ಕಾಲಿಕ ಭೌತಿಕ ಹಿತದೃಷ್ಟಿಯಿಂದಷ್ಟೇ ಅವಲೋಕಿಸುತ್ತಾರೆ.

ಆದರೆ ತಾತ್ವಿಕ ವಿಚಾರವುಳ್ಳವರು ವರ್ತಮಾನ ಸಾಧ್ಯ ಕೃಷ್ಯಾದಿ ಕರ್ಮಗಳಲ್ಲಿ, ಸ್ವರ್ಗ (ಪರಲೋಕ) ದಲ್ಲಿ, ವೈದಿಕಕರ್ಮವಾದ ಯಜ್ಞ ಯಾಗಾದಿಗಳಲ್ಲಿ, ಮೋಕ್ಷ ಸಾಧನವಾದ ವ್ರತಬ್ರಹ್ಮಚರ್ಯಾದಿಗಳಲ್ಲಿ, ಅನ್ನವೇ ಮೂಲ ಕಾರಣವಾಗಿರುತ್ತದೆಂದು ಹೇಳಿದ್ದಾರೆ ಆದ್ದರಿಂದ ಇವೆಲ್ಲವುಗಳೂ ಅನ್ನವನ್ನಾಶ್ರಯಿಸಿ ಇರುತ್ತವೆಯಾದ್ದರಿಂದ "ಅನ್ನೇ ಸರ್ವಂ ಪ್ರತಿಷ್ಠಿತಂ" ಎಂದು ಪುನಃ ಹೇಳಿರುತ್ತಾರೆ. ಕೇವಲ ಐಹಿಕಲಿಕ್ಕಷ್ಟೇ ಅನ್ನವು ಕಾರಣವಲ್ಲದೇ, ಆತ್ಮೋನ್ನತಿಯನ್ನು ಕುರಿತು ಸಹ ಪ್ರಧಾನಸಾಧನವೆಂದು ಸ್ಪಷ್ಟಪಡಿಸಿದ್ದಾರೆ

## ಅನುಪಾನ

ಆಹಾರ ಸೇವನೆಯ ವೇಳೆಯಲ್ಲಿ ಸಂಗಡ ಯೋಗ್ಯವಾದ ದ್ರವದ್ರವ್ಯ ಅಥವಾ ಜಲವನ್ನು ಪಾನ ಮಾಡುವದಕ್ಕೆ "ಅನುಪಾನ" ವೆಂದು ಹೆಸರು ಅನುಪಾನದಿಂದ ಮುದ್ದೆಯಾದ ಘನೀಭೂತ ಆಹಾರವು, ದ್ರವವಾಗಿ ಅನ್ನಾಶಯಕ್ಕೆ ಹೋಗಲು ಸುಲಭವಾಗುತ್ತದೆ. ಅನ್ನವು ಸುಖವಾಗಿ ಪಚನವಾಗುತ್ತದೆ. ದ್ರವದ್ರವ್ಯ ಅನುಪಾನದಿಂದ ಯುಕ್ತ ಆಹಾರವು ತೃಪ್ತಿಯನ್ನುಂಟು ಮಾಡುತ್ತದೆ.

**ಅನುಪಾನಹಿತಂ ಯುಕ್ತಂ ತರ್ಪಯತ್ಯಾಶು ಮಾನವಂ ||**
**ಸುಖಂ ಪಚತಿ ಚಾಹಾರಮಾಯುಷೇ ಚ ಬಲಾಯ ಚ ||**

(ಚರಕ|| ಸೂ. ಸ್ಥಾ. ಅ ೨೭ ಶ್ಲೋ. ೩೨೬)

ಹಿತಕರವಾದ ಅನುಪಾನಯುಕ್ತ ಆಹಾರವು ಮನುಷ್ಯನಿಗೆ, ಸದ್ಯದಲ್ಲಿಯೇ ಸಂತೋಷ ತೃಪ್ತಿಗಳನ್ನುಂಟುಮಾಡುತ್ತವೆ. ಸೇವಿಸಿದ ಅನ್ನವನ್ನು ಅನಾಯಾಸದಿಂದ ಪಚನಮಾಡುತ್ತದೆ. ಇಂಥ ಅನುಪಾನಸಹಿತವಾದ ಆಹಾರದಿಂದ ಆಯುರಾರೋಗ್ಯ ಬಲಗಳು ಲಭಿಸುತ್ತವೆ ಆದ್ದರಿಂದ ಆಹಾರದ ಸಂಗಡ ಅನುಪಾನಯೋಜನೆಯು ಅವಶ್ಯವೂ ಯೋಗ್ಯವಾದದ್ದೂ ಇರುತ್ತದೆ

**ನರಾಗಾನ್ನಾಪ್ಯವಿಜ್ಞಾನಾದಾಹಾರಾನುಪಯೋಜಯೇತ್ ॥**
**ಪರೀಕ್ಷ್ಯಹಿತಮಶ್ನೀಯಾದ್ದೇಹೋಹ್ಯಾಹಾರ ಸಂಭವಃ ॥**

(ಚರಕ॥ ಸೂ. ಸ್ಥಾ ಅ ೨೮ ಶ್ಲೋ. ೪೧)

ಅಹಿತವಾದದ್ದರಲ್ಲಿ ಆಸಕ್ತಿ ಇದ್ದರೂ ಮತ್ತು ಅಜ್ಞಾನದಿಂದ ಆಹಾರದಲ್ಲಿಯ ಹಿತಾಹಿತಗಳನ್ನರಿಯುದೆಯೂ, ಎಂದೂ ಆಹಾರವನ್ನು ಉಪಯೋಗಿಸಬಾರದು. ಅರ್ಥಾತ್ ಆಹಾರದ್ರವ್ಯಗಳಹಿತಾಹಿತಗಳನ್ನು ವಿಚಾರಿಸಿ,ಅಹಿತಕರವಾದದ್ದನ್ನು ಅದರಲ್ಲಿ ಪ್ರೀತಿಯಿದ್ದರೂತ್ಯಜಿಸಿ, ಯೋಗ್ಯವಾದದ್ದನ್ನೇಸೇವಿಸಬೇಕೆಂಬಭಿಪ್ರಾಯವು. ಹಿತವಾದ ಪದಾರ್ಥವನ್ನೇಸೇವಿಸಬೇಕು. ಇದರಂತೇ ಅಪಥ್ಯಕರವಾಗಿರುವದನ್ನು ಬಿಡಬೇಕು ಯಾಕಂದರೆ ದೇಹವು ಆಹಾರ ರಸದಿಂದಲೇಹುಟ್ಟಿ ಅದರಿಂದಲೇ ಬದುಕುವದರಿಂದ, ಜೀವನಯಾತ್ರೆಯು ಪ್ರಸನ್ನವಾಗಬೇಕಾದರೆ ಯೋಗ್ಯ ಆಹಾರವನ್ನೇ ಸೇವಿಸಬೇಕು.

**ಅನ್ನೇನಕುಕ್ಷೇರ್ದ್ವಾವಂಶೌಪಾನೇನೈಕಂಪ್ರಪೂರಯೇತ್ ॥**
**ಆಶ್ರಯಂ ಪವನಾದೀನಾಂ ಚತುರ್ಥಮವಶೇಷಯೇತ್ ॥**

(ವಾಗ್ಭಟ॥ ಸೂ. ಸ್ಥಾ ಅ. ೮ ಶ್ಲೋ. ೪೬)

ಅನ್ನದಿಂದ ಹೊಟ್ಟೆಯ ಎರಡು ಭಾಗವನ್ನೂ ಪಾನದಿಂದ ಒಂದು ಭಾಗವನ್ನೂ ತುಂಬಿಸಬೇಕು. ಉಳಿದ ಒಂದು ಭಾಗವನ್ನು ವಾಯುವಿಗೆ ಆಶ್ರಯವಾಗಿಯೂ ಸುಲಭ ಸಂಚಾರಕ್ಕಾಗಿಯೂ ಉಳಿಸಬೇಕು. ಇದು ಬಹು ಯೋಗ್ಯವಾದ ಪ್ರಮಾಣವಾಗಿರುತ್ತದೆ ಇಲ್ಲಿ ವಿಶೇಷವೇನಂದರೆ:— ಆಹಾರಕ್ಕಾಗಿ ಎರಡು ಭಾಗದಷ್ಟು ಪ್ರಮಾಣವನ್ನು ಹೇಳಿರುವದರಿಂದ ಸರ್ವವನ್ನು ಆಹಾರದಿಂದಲೇ ತುಂಬಿಸಬಾರದೆಂದೂ, ಪಾನದಿಂದ ಒಂದು ಭಾಗದ ಗ್ರಹಣದಿಂದ, ಅತಿಜಲಪಾನ ಪೂರ್ಣಜಲಾಹಾರ ನಿಷೇಧವನ್ನೂಮಾಡಿದ್ದಾರೆ. ಒಂದು ವಿಭಾಗ ಬರಿದಾಗಿಡುವದರಿಂದ ಆಹಾರಗ್ರಹಣ ನಂತರದಲ್ಲಿ ಹಗುರಾಗಿರುತ್ತದೆ ಮತ್ತು ಸುಖಜೀರ್ಣವಾಗುವದರಿಂದ ಆಹಾರವು ಆರೋಗ್ಯಕ್ಕೆ ಯೋಗ್ಯವಾಗುತ್ತದೆ ಆದ್ದರಿಂದ ನಾಲ್ಕುಭಾಗಮಾಡಿ, ಆಹಾರಕ್ಕಾಗಿ ಎರಡು

ಭಾಗವನ್ನೂ ಪಾನಕ್ಕಾಗಿ ಒಂದು ಭಾಗವನ್ನೂ ವಾಯುಸಂಚಾರಕ್ಕೆ ಉಳಿದ ಒಂದು ಭಾಗವನ್ನೂ ಯೋಜನೆಮಾಡಿದ್ದಾರೆ. ಇದರಂತೆಯೇ ಆಹಾರ ಪದ್ಧತಿಯು ಪರಮೋತ್ತಮ ಪ್ರಮಾಣವುಳ್ಳದ್ದೆಂದು ತಿಳಿಯಬೇಕು.

**ಸುಖಮುಚ್ಚೈಃ ಸಮಾಸೀನಃ ಸಮದೇಹೋಽನ್ನತತ್ಪರಃ ||**
**ಕಾಲೇಸಾತ್ಮ್ಯಂ ಲಘುಸ್ನಿಗ್ಧಮುಷ್ಣಂಕ್ಷಿಪ್ರಂದ್ರವೋತ್ತರಂ ||**
**ಬುಭುಕ್ಷಿತೋಽನ್ನಮಶ್ನೀಯಾತ್ ಮಾತ್ರಾವದ್ವಿದಿತಾಗಮಃ ||**

(ಸುಶ್ರುತ|| ಸೂ ಸ್ಥಾ. ೪ ೪೬ ಶ್ಲೋ ೪೬೫)

ಸುಖವಾಗಿ ಸಮಾಧಾನದಿಂದ ಸರಿಯಾಗಿ ಕುಳಿತುಕೊಂಡು ಅನ್ನದಲ್ಲಿಯೇ ತತ್ಪರತೆಯಿದ್ದವನಾಗಿ, ಆಹಾರ ಸೇವನೆಯನ್ನು ಮಾಡಬೇಕು. ಗಾಬರಿಯಿಂದ ಉದ್ವಿಗ್ನನಾಗಿ ಹೇಗಾದರೂ ಕುಳಿತು ವಿಧಿಯಿಲ್ಲದೆ ಅಕಾಲದಲ್ಲಿ ಯದ್ವಾತದ್ವಾ ಆಹಾರವನ್ನು ಭುಂಜಿಸಕೂಡದೆಂದು ಅಭಿಪ್ರಾಯವು ಯೋಗ್ಯವಾದ ಆಹಾರ ತೆಗೆದುಕೊಳ್ಳುವ ವೇಳೆಯಲ್ಲಿ ಮತ್ತು ಆಯಾಯ ಕಾಲದಲ್ಲಿಯ ದೋಷಪ್ರಕೋಪ ಮೊದಲಾದವುಗಳನ್ನು ಲಕ್ಷಿಸಿಹೇಳಿದ ಕಾಲಿಕವಾದ ಆಹಾರವನ್ನನುಸರಿಸಿ, ಹಿತಕರ (ಸಾತ್ಮ್ಯ)ವಾದ ಅನ್ನವನ್ನು ಭುಂಜಿಸಬೇಕು. ಅದು ಆರೋಗ್ಯಕ್ಕೆ ಯೋಗ್ಯವಾಗಿಯೂ, **ಲಘು** (ಜಡವಿಲ್ಲದೆ ಸ್ವಲ್ಪ ವೇಳೆಯಲ್ಲಿ ಜೀರ್ಣವಾಗುವಂಥಾದ್ದು), **ಸ್ನಿಗ್ಧ** (ರೂಕ್ಷವಿರದೆ ಸ್ನೇಹಗುಣಯುಕ್ತವಾದ), **ಉಷ್ಣ** (ಬಿಸಿಯುಳ್ಳ ಸದ್ಯೋನಿರ್ಮಿತವಾದ), ದ್ರವೋತ್ತರಂ (ಆಹಾರ ಸ್ವೀಕಾರದಕಡೆಯ ಭಾಗದಲ್ಲಿ, ದ್ರವರೂಪ, ಅಥವಾ ದ್ರವಯುಕ್ತವಾದ), ಅನ್ನವನ್ನು ಭುಂಜಿಸಬೇಕು. **ಕಾಲ** (ಋತು ಅನ್ನಕಾಲ ಆಹಾರ ಪಚನಕಾಲಾದಿಗಳು), **ಸಾತ್ಮ್ಯ** (ದೋಷಕ್ಕನುಗುಣ ತನ್ನ ಆರೋಗ್ಯಕ್ಕೆ ಹಿತವನ್ನುಂಟು ಮಾಡುವಂಥ) ಆಹಾರವನ್ನು ಚನ್ನಾಗಿ ಹಸಿವೆಯಾದ ನಂತರ ಹಿತಮಿತವಾಗಿಯೂ (ಮಾತ್ರಾವತ್), ಶಾಸ್ತ್ರದಲ್ಲಿಯ ಭೋಜನ ವಿಧಾನ ಪದಾರ್ಥಗಳ ಗುಣದೋಷ ಯೋಜನೆ ತಿಳಿದವನಾಗಿಯೂ, ಪದ್ಧತಿಯಂತೆಯೇ ಸೇವಿಸಬೇಕು. ಇದರಿಂದ ತೃಪ್ತಿಯಾಗುವದಲ್ಲದೆ ಆರೋಗ್ಯವು ಲಭಿಸುತ್ತದೆ

# ಅನಿಯಮಿತ ಆಹಾರದೋಷಗಳು

**ನಾಪ್ರಾಪ್ತಾತೀತಕಾಲಂ ವಾಹೀನಾಧಿಕಮಥಾಪಿವಾ ||**
**ಅಪ್ರಾಪ್ತಕಾಲಂ ಭುಂಜಾನಃ ಶರೀರೇಲಘೌನರಃ ||**
**ತಾಂಸ್ತಾನ್ ವ್ಯಾಧೀನವಾಪ್ನೋತಿ ಮರಣಂ ವಾನಿಯಚ್ಛತಿ ||**
**(ಸುಶ್ರುತ|| ಸೂ. ಸ್ಥಾ. ಅ ೪೬ ಶ್ಲೋ ೪೭೩)**

ಮನುಷ್ಯನು ಚನ್ನಾಗಿ ಹಸಿವಾಗದೇ ಇರವಾಗಲೂ ಹಸಿವಿನ ಕಾಲವನ್ನು ಮೀರಿಯೂ, ಆಹಾರವನ್ನು ತೆಗೆದುಕೊಳ್ಳಬಾರದು. ಊಟ ಮಾಡಿದ ಆಹಾರ ಪೂರ್ಣ ಜೀರ್ಣವಾಗುವದರೊಳಗೆ ಆಹಾರಸೇವನೆ, ಮತ್ತು ಅತಿ ಹಸಿವೆಯಾದರೂ ತಡೆದು ಆಹಾರ ತಕ್ಕೊಳ್ಳುವದೂ, ಆರೋಗ್ಯಕ್ಕೆ ಹಿತಕರವಾಗಿರುವದಿಲ್ಲ. ಇದರಂತೆಯೇ ತೃಪ್ತಿಯಾಗದಷ್ಟು ಅತಿ ಕಡಿಮೆ ಆಹಾರ ತಕ್ಕೊಳ್ಳುವದೂ, ಅಧಿಕಾಹಾರಸೇವನೆಯೂ, ನಿಷಿದ್ಧವಾದದ್ದಿರುತ್ತದೆ. ಹಸಿವೆಯಾಗದೇ ಮೇಲಿಂದಮೇಲೆ ಆಹಾರ ಸೇವಿಸುವಂಥವನೂ, ನಿಯಮವಿಧಿ, ದೋಷಾದೋಷ, ಗುಣಾಗುಣ ಯೋಗ್ಯ ಕಾಲಾದಿಗಳ ಜ್ಞಾನವಿಲ್ಲದೆ ಭುಂಜಿಸುವವನೂ, ದೇಹದಲ್ಲಿ ಜಡತ್ವವುಳ್ಳವನಾಗಿ ಅವಿಧಿಭೋಜನಜನ್ಯವಾದ ರೋಗಗಳನ್ನುಹೊಂದುತ್ತಾನೆ ಇಷ್ಟೇ ಅಲ್ಲ ಆರೋಗ್ಯಕ್ಕೆ ಯೋಗ್ಯವಲ್ಲದ ರೀತಿಯ ವರ್ತನೆಯಿಂದ ವ್ಯಾಧಿಗೆ ಆಶ್ರಯಸ್ಥಾನವಾಗಿ, ಅಲ್ಪಾಯುಷ್ಯದಿಂದ ಮೃತ್ಯುವನ್ನು ಪಡೆಯುತ್ತಾನೆ.

**ತಸ್ಮಾತ್ ಸುಸಂಸ್ಕೃತಂ ಯುಕ್ತ್ಯಾದೋಷೈಃಸರ್ವೈಃವಿವರ್ಜಿತಂ||**
**ಯಥೋಕ್ತಗುಣಸಂಪನ್ನಮುಪಸೇವೇತಭೋಜನಂ||**
**ವಿಭಜ್ಯದೋಷಕಾಲಾದೀನ್ ಕಾಲಯೋರುಭಯೋರಪಿ||**
**(ಸುಶ್ರುತ|| ಸೂ. ಸ್ಥಾ ಅ. ೪೬ ಶ್ಲೋ ೪೭೬)**

ಆಹಾರದ ಯೋಗ್ಯೋಪಯೋಗದಿಂದ ಆರೋಗ್ಯ(ಸ್ವಾಸ್ಥ್ಯ), ಅನಿಯಮಿತೋಪಯೋಗದಿಂದ ರೋಗೋತ್ಪತ್ತಿಯನ್ನು ಸೂಚಿಸಿ, ಯೋಗ್ಯವಾದ ಆಹಾರವಿಧಿಯನ್ನು ನಿಯಮಿಸಿರುತ್ತಾರೆ. ಇಂಥ ಯೋಗ್ಯವಾದ ಆಹಾರ

**ವಿಧಿ ನಿಯಮಕ್ಕೆ:-** ವಿಧಿ, ನಿಯಮ , ಯುಕ್ತಿ, ಮಾತ್ರಾ, ಪ್ರಮಾಣ, ಪರಿಮಿತಿ,ಗಳೆಂಬ ಪರ್ಯಾಯವಾಚಕ ಹೆಸರುಗಳಿರುತ್ತವೆ ಮನುಷ್ಯನು ಭೋಜನ ವಿಷಯದಲ್ಲಿ ಆಹಾರ ವಿಧಿಗನುಗುಣವಾಗಿ (ಯುಕ್ತ್ಯಾ), ಸರ್ವ ದೋಷ ರಹಿತ ಯೋಗ್ಯಗುಣವುಳ್ಳ ಆಹಾರವನ್ನು ಸೇವಿಸಬೇಕು **ದೋಷ, ದೂಷ್ಯ, ದೇಶ, ಕಾಲ, ವಯಸ್ಸು, ಆಹಾರ ಪದಾರ್ಥಗಳ ದೋಷ ಗುಣಗಳನ್ನು ತಿಳಿದು,** ಸಾಯಂಪ್ರಾತಃಕಾಲಗಳಲ್ಲಿ, ಎರಡು ಹೊತ್ತು ಆಹಾರವನ್ನು ತಕ್ಕೊಳ್ಳಬೇಕು. ಹೀಗೆ ಸಾತ್ಮ್ಯಕಾರಕ ಆಹಾರ ವಿಧಿಯನ್ನು ಸುಶ್ರುತಾದಿ ಮಹರ್ಷಿಗಳು ಆಯುರ್ಹಿತಾರ್ಥವಾಗಿ ವಿಶದೀಕರಿಸಿದ್ದಾರೆ

## ತ್ಯಾಜ್ಯಾಹಾರಗಳು

**ಅಚೋಕ್ಷಂ ದುಷ್ಟಮುತ್ಸೃಷ್ಟಂ ಪಾಷಾಣತೃಣಲೋಷ್ಟ**
**ವತ್ ॥ ದ್ವಿಷ್ಟಂವ್ಯುಷಿತಮಸ್ವಾದುಪೂತಿಚಾನ್ನಂವಿವರ್ಜ**
**ಯೇತ್॥ಚಿರಸಿದ್ಧಂ ಸ್ಥಿರಂ ಶೀತಮನ್ನಮುಷ್ಣೀಕೃತಂಪುನಃ ॥**
**ಅಶಾಂತಮುಪದಗ್ಧಂಚ ತಥಾಸ್ವಾದು ನಲಕ್ಷ್ಯತೇ ॥**
(ಸುಶ್ರುತ॥ **ಸೂ. ಸ್ಥಾ. ಅ ೪೬ ಶ್ಲೋ ೪೭೮**॥)

ಯೋಗ್ಯ ಸೇವನೆಗೆ ವಿಧಿಸಿದ ಆಹಾರವನ್ನು ಹೇಳಿ ತ್ಯಾಜ್ಯವಾದಂಥ ವುಗಳನ್ನು ಹೇಳುತ್ತಾರೆ. **ಅಚೋಕ್ಷ** ( ಅಪವಿತ್ರ ಮಲಿನವಾದದ್ದು ), **ದುಷ್ಟ** (ದೋಷ ಪ್ರಕೋಪಕರ ಅಥವಾ ವಿಷಾದಿಗಳಿಂದ ಯುಕ್ತವಾದ), **ಉತ್ಸೃಷ್ಟ** (ಉಂಡುಳಿದ ಎಂಜಲನ್ನ), ಮತ್ತು ಕಲ್ಲಿನಪುಡಿ, ಉಸುಬು, ಹುಲ್ಲು, ಕಸ, ಕೂದಲು, ಮಣ್ಣು ಮುಂತಾದವುಗಳಿಂದ ಯುಕ್ತವಾದದ್ದು, **ದ್ವಿಷ್ಟ** (ತನಗೆ ಸೇರದಂಥಾದ್ದು), **ವ್ಯುಷಿತ** (ಹಳಿಸಿದ್ದು), **ಅಸ್ವಾದು** (ರುಚಿ ಇಲ್ಲದಿರುವ), **ಪೂತಿ** (ದುರ್ಗಂಧವುಳ್ಳ ಅಥವಾ ಕೊಳೆತಂಥ), **ಚಿರಸಿದ್ಧ** ( ತಯಾರಾಗಿ ಬಹುದಿನ ಕಳೆದ ), **ಸ್ಥಿರ** ( ಕಠಿಣವಾದ ದುರ್ಜರವಾದ ), **ಶೀತ** ( ಮೊದಲು ಬಿಸಿಯಿದ್ದು ನಂತರ ಬಹಳ ತಂಪಾದ ), **ಉಷ್ಣೀಕೃತ** (ಒಮ್ಮೆ ಬೇಯಿಸಿ ಆರಿದ ಮೇಲೆ ಪುನಃ ಬಿಸಿ ಮಾಡಿದ), ಅಥವಾ "**ಶೀತ**

ಮನ್ನಂ ಉಷ್ಣೀಕೃತಂ ಪುನಃ (ಮೊದಲು ಬೇಯಿಸಿದ ಆಹಾರವು ಕಾಲಾಂತರದಲ್ಲಿ ಶೀತವಾದದ್ದನ್ನು ಪುನಃ ಬಿಸಿಮಾಡಿದ್ದು), ಅಶಾಂತ (ಪೂರ್ಣ ಪಚನ ಕ್ರಿಯೆ ಮುಗಿಯದ), ಉಪದಗ್ಧ (ಬಹಳ ಬೆಂದು ಹೊತ್ತಿ ಕತ್ತಿ ಹೋದಂಥ) "ಚ" ಕಾರ ಸಮುಚ್ಚಯದಿಂದ ಹೊಗೆವಾಸನೆಯಾದ ಅಥವಾ ಯದ್ವಾತದ್ವಾ ಬೆಂದಿರುವಂಥ, "ಸ್ವಾದುನಲಕ್ಷ್ಯತೆ" (ಮಾಧುರ್ಯವಿಲ್ಲದಿರುವ ಅಥವಾ ರುಚಿ ಸುಟ್ಟು ಹೋದ, ಇಲ್ಲವೇ ಅಪೂರ್ಣ ಪಾಕದಿಂದ ರುಚಿ ಬಾರದಿರುವ), ಈ ಮೊದಲಾದ ಯೋಗ್ಯವಲ್ಲದ್ದೆಂದು ನಿಷೇಧಿಸಿರುವ ಆಹಾರಗಳನ್ನು ಸೇವಿಸಬಾರದು "ಇನ್ನು ಚಕಾರ ಸಮುಚ್ಚಯದಿಂದ" ಬಾಹ್ಯ ಕರ್ಮದೂಷಿತವಾದ ಆಹಾರವನ್ನು ನಿಷಿದ್ಧವೆಂದು ಹೇಳಿದ್ದಾರೆ. ವೈರಿಯ ಅನ್ನ, ವೇಶ್ಯಾ, ಪಾತಕಿ, ಕೃತಘ್ನ, ವಿಧಿನಿಷೇಧವಿಲ್ಲದೇ ಕುಡುಕರ ಸಂಘದಲ್ಲಿಯ ಅನ್ನವು ಅಯೋಗ್ಯವೆಂದು ಹೇಳಿದ್ದಾರೆ ಅರ್ಥಾತ್ ಇವು ಬಾಹ್ಯ ಕರ್ಮದೂಷಿತ ಕರ್ಮ ಚಾಂಡಾಲರ ಆಹಾರವಾಗಿರುತ್ತವೆ ಇಂಥ ಆಹಾರ ಸೇವನೆಯಿಂದ ಆಹಾರ ಸದೃಶಬುದ್ಧಿಯು ಉತ್ಪನ್ನವಾಗುವದೆಂದು, ಸ್ಮೃತ್ಯಾದಿಗಳಲ್ಲಿ ವಿವರಿಸಲ್ಪಟ್ಟಿರತ್ತದೆ ಆದ್ದರಿಂದ ನಿಷಿದ್ಧವೆಂದು ಹೇಳಿದ್ದಾರೆ

**ಅಶಿತಶ್ಚೋದಕಂ ಯುಕ್ತ್ಯಾ ಭುಂಜಾನಶ್ಚಾಂತರಾಪಿಬೇತ್ ॥**
(ಸುಶ್ರುತ॥)

ಊಟ ಮಾಡಿದ ನಂತರದಲ್ಲಿ ಪ್ರಮಾಣವನ್ನು ಮೀರದೆ ಮಿತವಾಗಿ ನೀರನ್ನು ಕುಡಿಯಬೇಕು. ಅಥವಾ ಭೋಜನ ಮಧ್ಯದಲ್ಲಿ ಸ್ವಲ್ಪ ಸ್ವಲ್ಪವಾಗಿ ಕುಡಿಯಬೇಕು. ಭೋಜನಾಂತ್ಯ ಮಧ್ಯದಲ್ಲಿ ನೀರನ್ನು ಕುಡಿಯಬೇಕೆಂದು ವಿಧಾನ ಮಾಡಿದ್ದರಿಂದ, ಊಟದ ಮೊದಲು ನೀರನ್ನು ಕುಡಿಯ ಬಾರದೆಂದು ತಿಳಿಯಬೇಕು **ಸುಶ್ರುತದಲ್ಲಿ**, ಭೋಜನಾದಿಯಲ್ಲಿ ನೀರನ್ನು ಕುಡಿಯಬಾರದೆಂದು ನಿಷೇಧವನ್ನು ಸಹ ಮಾಡಿದ್ದಾರೆ.

**ಯದನ್ನಂದೇಹಧಾತ್ವೋಜೋ ಬಲವರ್ಣಾದಿ ಪೋಷಣಂ ॥**
**ತತ್ರಾಗ್ನಿರ್ಹೇತುರಾಹಾರಾನ್ನಹ್ಯಪಕ್ವಾದ್ರಸಾದಯಃ ॥**
(ವಾಗ್ಭಟ॥ ಶಾರೀರ॥ ಅ ೩ ಶ್ಲೋ ೫೪॥)

ಯಾವ ಅನ್ನವು ದೇಹಧಾತು ಓಜಸ್ಸು ಬಲವರ್ಣಗಳಿಗೆ ಪೋಷಕ ವಾಗಿರುತ್ತದೆಯೋ, ಅದು ರಸಾದಿಗಳಾಗಲಿಕ್ಕೆ ಅಗ್ನಿಯೇ (ಜಠರಾಗ್ನಿ), ಕಾರಣವಾಗಿರುತ್ತದೆ ಅಪಕ್ವಾನ್ನದಿಂದ ರಸಾದಿಗಳಾಗಲಾರವು ಅರ್ಥಾತ್ ಆಹಾರವು ದೇಹಪೋಷಕವಾಗಬೇಕಾದರೆ ಜಠರಾಗ್ನಿಯಿಂದ ಪಕ್ವವಾಗಿ ರಸವಾಗಬೇಕಾಗುತ್ತದೆ ಆಹಾರವು ಪಚನವಾಗಿ ರಸಾದಿಗಳಾಗುವದಕ್ಕೆ, ಆಹಾರ ಪರಿಪಾಕಕ್ರಮವೆಂದು ಹೇಳುತ್ತಾರೆ

**ಅನ್ನಂಕಾಲೇಽಭ್ಯವಹೃತಂ ಕೋಷ್ಠೇಪ್ರಾಣಾನಿಲಾಹೃತಂ ||**
**ದ್ರವೈರ್ವಿಭಿನ್ನಸಂಘಾತಂ ನೀತಂಸ್ನೇಹೇನಮಾರ್ದವಂ ||**
(ವಾಗ್ಭಟ|| ಶಾರೀರ|| ಅ ೩ ಶ್ಲೋ ೫೫)

ಪ್ರಾಣವಾಯುವಿನಿಂದ ಊಟ ಮಾಡಿದ ಆಹಾರವು, ಕೋಷ್ಠಕ್ಕೆ ಒಯ್ಯಲ್ಪಡುತ್ತದೆ ಹಿಂದೆ ಕಾಲವಿಧಿಗಳನ್ನು ನಿಯಮಿಸಿದ್ದರಿಂದ ಯೋಗ್ಯ ಕಾಲದಲ್ಲಿ ವಿಧಿನಿಯಮಕ್ಕನುಸಾರ ಯೋಜಿಸಿದ ಆಹಾರವು ಸುಲಭ ಜೀರ್ಣ ವಾಗುವದೆಂದು ಸೂಚಿಸಲು "**ಕಾಲೇಅಭ್ಯವಹೃತಂ**" ಎಂಬ ವಾಕ್ಯವನ್ನಿಟ್ಟಿದ್ದಾರೆ ಇದರಿಂದ ವಿಧಿಯುಕ್ತವಾಗಿಯೇ ಆಹಾರವನ್ನು ತಕ್ಕೊಳ್ಳಬೇಕೆಂದು ವಿಶೇಷ ನಿಯಮನಕ್ಕಾಗಿ ಪುನಃ ಹೇಳಿದ್ದಾರೆಂದು ತಿಳಿಯಬೇಕು.

ಕಂಠ ಮಾರ್ಗವಾಗಿ ಅನ್ನವಾಹೀ ಸ್ರೋತೋಮಾರ್ಗದಿಂದ, ಪ್ರಾಣ ವಾಯು ಪ್ರೇರಣದಿಂದ ಕೋಷ್ಠದಲ್ಲಿ ಹೋಗುತ್ತದೆ. ಅಲ್ಲಿಗೆ ಹೋಗುವದರೊಳಗೆ ಮತ್ತು ನಂತರದಲ್ಲಿ ಜಲಾದಿದ್ರವ ಪದಾರ್ಥ ಸ್ವಾದುರಸಯುಕ್ತ ವಾಗುವದರಿಂದ ಘನೀಭೂತ ಆಹಾರ ಮುದ್ದೆಯು, ತೊಯ್ದು ವಿರಲಾವಯವ ವುಳ್ಳದ್ದೂ ಸ್ನೇಹಾದಿಗಳಿಂದ ಮೃದುವೂ ಆಗುತ್ತದೆ.

**ಯಾತ್ಯಾಮಾಶಯಮಾಹಾರಃ ಪೂರ್ವಂ ಪ್ರಾಣಾನಿಲೇರಿತಃ||**
**ಮಾಧುರ್ಯಂ ಫೇನಭಾವಂಚ ಷಡ್ರಸೋಽಪಿಲಭೇತಸಃ||**
(ಶಾರ್ಙಧರ|| ಪ್ರ. ಖ ಅ. ೬ ಶ್ಲೋ ೧)

ಭುಕ್ತಾನ್ನವು ಪ್ರಾಣವಾಯುವಿನ ಸಹಯೋಗದಿಂದ ಮೊದಲು "ಆಮಾಶಯಕ್ಕೆ" ಹೋಗುತ್ತದೆ. **ಆಮವೆಂದರೆ** ಅಪಕ್ವವಾದ ಆಹಾರವು

**ಆಶಯವೆಂದರೆ** ಆಶ್ರಯಸ್ಥಾನ, ಅಪಕ್ವವಾದಆಹಾರವು ಮೊದಲು ಹೋಗಿ ಆಶ್ರಯಿಸುವ ಸ್ಥಾನವು ಅದಕ್ಕೆ "**ಆಮಾಶಯ**" "**ಅನ್ನಾಶಯ**" ವೆಂದು ಹೇಳುತ್ತಾರೆ ಇದು ಕೋಷ್ಠದಲ್ಲಿರುವದರಿಂದ ವಾಗ್ಭಟಾಚಾರ್ಯರು ಆಹಾರವು ಕೋಷ್ಠದಲ್ಲಿ ಹೋಗುತ್ತದೆಂದು ಹೇಳಿದ್ದಾರೆ. ಆಮಾಶಯದಲ್ಲಿ ಸರ್ವ ಆಹಾರವೂ (ಷಡ್ರಸಯುಕ್ತ) ಮಧುರ ದ್ರವಸ್ವರೂಪವನ್ನು ಹೊಂದುತ್ತದೆ

## ವಿಶೇಷ ವಿಚಾರ

**ಎದೆಯ ಭಾಗದಲ್ಲಿ** ಆಮಾಶಯ(ಅನ್ನಾಶಯ)ವಿರುತ್ತದೆಂದು ಶಾರ್ಙ್ಗಧರ, ವಾಗ್ಭಟ, ಮತವಾಗಿರುತ್ತದೆ **ಚರಕದಲ್ಲಿ** ನಾಭಿಯಿಂದ ಸ್ತನ ಪರ್ಯಂತರ ಭಾಗಕ್ಕೆ ಆಮಾಶಯವೆಂದು ಹೇಳಿದ್ದಾರೆ

**ನಾಭಿಸ್ತನಾಂತರಂಜಂತೋರಾಮಾಶಯಇತಿಸ್ಮೃತಃ ||**
(**ಚರಕ|| ವಿಮಾನ||** ಅ ೨ ಶ್ಲೋ ೧೭)

"**ವಾಗ್ಭಟದಲ್ಲಿ**' ಆಮಾಶಯ ಕೆಳಭಾಗದಲ್ಲಿಯ ಕೋಷ್ಠಕ್ಕೆ "**ಗ್ರಹಿಣೀ ಸ್ಥಾನ**" ವೆಂದು ಹೇಳುತ್ತಾರೆ. ಇಲ್ಲಿ ವಿಶೇಷವಾಗಿ ಆಹಾರವು ಪಚನ ವಾಗುತ್ತದೆ

"**ಸುಶ್ರುತದಲ್ಲಿ**" ಧನ್ವಂತರಿಯ ಮತದಂತೆ "**ಪಿತ್ತಧರಾಕಲಾ**" ಎಂದು ಹೇಳುತ್ತಾರೆ. ಇದಕ್ಕೆ ಪಚ್ಯಮಾನನ್ನಾಶ್ರಯವೆಂದು ವಿವರಿಸಿದ್ದಾರೆ. ಅನೇಕ ಮತದಿಂದ ಸ್ಥಾನ ಹೆಸರು ಭಿನ್ನವಾಗಿದ್ದರೂ ಎಲ್ಲರೂ "**ಕ್ರಿಯೆಯನ್ನು**" ಭಿನ್ನವಾಗಿ ಹೇಳಿರುವದಿಲ್ಲ. ಆಹಾರವು ಪಚನವಾಗುವ ಸ್ಥಾನವೆಂದುಹೇಳಿದ್ದಾರೆ. ಆದ್ದರಿಂದ ಭಿನ್ನಮತಗಳು ಸ್ಥಾನಾಶ್ರಯಗಳನ್ನುಕುರಿತು ಹೇಳಿರುವದು ಇಲ್ಲಿ ಬಾಧಕವೂ ಪ್ರಯೋಜನಭಿನ್ನತೆಯೂ ಆಗುವದಿಲ್ಲವಾದ್ದರಿಂದ ಸಮಂಜಸವಾಗಿರುತ್ತದೆ. ಗ್ರಹಿಣೀ ರೋಗದಲ್ಲಿಯೂ, ಪಿತ್ತ ವಿಷಯದಲ್ಲಿ ರೇಚನ ಕರ್ಮವಿಷಯದಲ್ಲಿಯೂ ಭಿನ್ನವಾದ ಸ್ಥಾನಾಶ್ರಯ ಹೇಳಿದ್ದರ ಪ್ರಯೋಜನವಾಗಿರುತ್ತದೆ. ಆದ್ದರಿಂದ ಅಪ್ರಾಮಾಣಿಕ ಅನುಪಯೋಗ ಭೇದಕಲ್ಪನೆಯೆಂದು ಭಾವಿಸದೆ, ಶಾಸ್ತ್ರೀಯ ವಿಜ್ಞಾನಯುತಭೇದ ಪ್ರಯೋ

ಜನ ಇದೆಯೆಂದು ತಿಳಿಯಬೇಕು. ಚರಕ, ಸುಶ್ರುತ, ವಾಗ್ಭಟಗಳನ್ನವ ಲೋಕಿಸಿದರೆ ಭೇದ ಪ್ರಯೋಜನದ ಅರಿವಾಗುತ್ತದೆ ಭೇದವಮಾಡಿರುವದು ಯೋಗ್ಯವೆಂದೇ ಅನಿಸುತ್ತದೆ

**ಅಥಪಾಚಕಪಿತ್ತೇನವಿದಗ್ಧಶ್ಚಾವ್ಲತಾಂ ವ್ರಜೇತ್ ॥**
**ತತಃ ಸಮಾನಮರುತಾಗ್ರಹಿಣೀಮಭಿನೀಯತೇ ॥**
(ಶಾರ್ಙಧರ॥ ಪ್ರ ಖ ಅ ೬ ಶ್ಲೋ. ೭)

ಪಾಚಕ ಪಿತ್ತದಿಂದ ಯುಕ್ತವಾಗಿ ವಿದಗ್ಧವಾದ ಬುರುಗಿನಂತಿರುವ (ನೊರೆ) ಆಹಾರವು ಹುಳಿಯಾಗುತ್ತದೆ. ನಂತರ ಸಮಾನ ವಾಯುವಿನಿಂದ ಪ್ರೇರಿತವಾಗಿ ಗ್ರಹಿಣೀ ಸ್ಥಾನದಲ್ಲಿ ಒಯ್ಯಲ್ಪಡುತ್ತದೆ

**ಗ್ರಹಿಣೀಸ್ಥಾನವೆಂದರೆ:—** ಕರುಳೆಂದು ತಿಳಿಯಬೇಕು ದೊಡ್ಡ ಕರುಳಿನಲ್ಲಿ ಆಹಾರದ ಅಪಕ್ವ ಭಾಗವು ಸಾಮಾನ್ಯತಃ ಪಚನಹೊಂದುತ್ತದೆ. ಆದ್ದರಿಂದ ಎಲ್ಲ ಕರುಳುಗಳನ್ನು ಗ್ರಹಿಸಿರುತ್ತದೆ. ಹೆಚ್ಚಿಗೇ ವಿಶೇಷವಾಗಿ ಸಣ್ಣ ಕರಳಿನಲ್ಲಿಯೇ ಆಹಾರ ಪಚನವಾಗುತ್ತದೆ ನಂತರ ದೊಡ್ಡ ಕರುಳಿನಲ್ಲಿ ಸ್ಥೂಲಭಾಗವು ವಿಭಾಜಿತವಾಗಿಹೋಗುತ್ತದೆ

ಆಹಾರವು ಆಮಾಶಯದಿಂದ ಗ್ರಹಿಣೀಸ್ಥಾನಕ್ಕೆ ಬರಬೇಕಾದರೆ ಪಿತ್ತಾಶಯದಿಂದ ಪಿತ್ತವು ಬಂದು ಕೂಡಿಕೊಳ್ಳುತ್ತದೆ ಪಿತ್ತರಸ ಸಂಯೋಗ ದಿಂದ ಆಹಾರವು ವಿದಗ್ಧವಾಗಿ ಹುಳಿಯೂ ಬುರುಗುಳ್ಳದ್ದಾಗಿಯೂ ಆಗು ತ್ತದೆ. ನಂತರ ಗ್ರಹಣೀಸ್ಥಾನವೆಂದು ಹೇಳುವ ಕರುಳಿನಲ್ಲಿ ಬರುತ್ತದೆ. ಅಲ್ಲಿ ಬಂದ ನಂತರ ಕರುಳಿನ ಆಕುಂಚನಪ್ರಸರಣಾತ್ಮಕವಾದ ಕ್ರಿಯೆಯಿಂದಲೂ ಹಿಚುಕುವಿಕೆಯಿಂದಲೂ ಆಹಾರವು ಚನ್ನಾಗಿಪಚನವಾಗುತ್ತದೆ ಪಚನವಾಗಿ ಉಳಿದದ್ರವವಲ್ಲದ ಸ್ಥೂಲಭಾಗವು ಸಣ್ಣ ಕರುಳಿನ ಮಾರ್ಗವಾಗಿ ಸ್ಥೂಲಾಂ ತ್ರದಲ್ಲಿ ಬರುತ್ತದೆ ಬಲಪಾರ್ಶ್ವದ ಕೊನೆಯ ಭಾಗದ ಸ್ಥೂಲಾಂತ್ರದಲ್ಲಿ ಸಣ್ಣ ಕರುಳು ಸಂಧಿತವಾಗಿ ಕೂಡಿರುತ್ತದೆ. ದೊಡ್ಡ ಕರುಳಿನಲ್ಲಿ ಬಂದ ಆಹಾರದ ಸ್ಥೂಲ (ಸ್ಥಿರ) ಭಾಗವು ಪಕ್ವವಾಗುತ್ತಾಗುತ್ತ ನಿಃಸ್ಸಾರವಾದ ಕಿಟ್ಟ (ಮಲ) ಭಾಗವು, ದೊಡ್ಡಕರುಳಿನಎಡಭಾಗದಲ್ಲಿಯ ಕೊನೆಯ ಭಾಗವಾದ ಮಲಾಶ ಯದಲ್ಲಿ ಬರುತ್ತದೆ ನಂತರ ಅಲ್ಲಿಂದ ಹೊರಬೀಳುತ್ತದೆ.

**ಷಷ್ಠೀಪಿತ್ತಧರಾನಾಮಯಾಕಲಾಪರಿಕೀರ್ತಿತಾ ॥**
**ಪಕ್ವಾಮಾಶಯಮಧ್ಯಸ್ಥಾಗ್ರಹಿಣೀತ್ಯಭಿಧೀಯತೇ ॥**
(ಶಾರ್ಙ್ಗಧರ॥ ಪ್ರ ಖ ಅ. ೬ ಶ್ಲೋ ೩)
**ತದಧಿಷ್ಠಾನಮನ್ನಸ್ಯಗ್ರಹಣಾದ್ಗ್ರಹಣೀಮತಾ ॥**
**ಸೈವಧನ್ವಂತರಿಮತೇಕಲಾಪಿತ್ತಧರಾಹ್ವಯಾ ॥**
(ವಾಗ್ಭಟ॥ ಶಾರೀರ॥ ಅ. ೩ ಶ್ಲೋ. ೫೦)
**ಆಯುರಾರೋಗ್ಯವೀರ್ಯೌಜೋಭೂತಧಾತ್ವಗ್ನಿಪುಷ್ಟಯೇ॥**
**ಸ್ಥಿತಾಪಕ್ವಾಶಯದ್ವಾರಿಭುಕ್ತಮಾರ್ಗಾರ್ಗಲೇವಸಾ ॥**
(ವಾಗ್ಭಟ॥ ಶ್ಲೋ. ೫೧)

ಪಕ್ವಾಶಯ (ಮಲಾಶಯ) ಆಮಾಶಯಗಳಮಧ್ಯಭಾಗಕ್ಕೆ **ಗ್ರಹಣೀ, ಗ್ರಹಿಣೀ,** ಎಂದು ಅನ್ನುತ್ತಾರೆ **ಧನ್ವಂತರಿಮತದಂತೆ** ಪಿತ್ತಧರಾ **ಎಂಬ** ಆರನೇ ಕಲಾಭಾಗವಾಗಿರುತ್ತದೆ. ಆಮಾಶಯದಿಂದ ಹೊರಬಿದ್ದ ಅಪಕ್ವ ಅನ್ನವನ್ನು ಧಾರಣಾಮಾಡಿ ಪಚನಮಾಡುತ್ತದೆ. ಆದ್ದರಿಂದ ಗ್ರಹಿಣೀ ಸ್ಥಾನವು ಅಪಕ್ವಾಹಾರಕ್ಕೆ ಆಶ್ರಯವು. ತನ್ನ ಸ್ಥಾನದಲ್ಲಿ ಆಹಾರವನ್ನು ಗ್ರಹಣಮಾಡಿಟ್ಟುಕೊಳ್ಳುವದರಿಂದ, **"ಗ್ರಹಣಾತ್ ಗ್ರಹಣೀಮತಾ"** ಗ್ರಹಣೀ ಎಂದು ಹೇಳುತ್ತಾರೆ. ಪಕ್ವಾಶಯ ದ್ವಾರದಲ್ಲಿ ಅರ್ಗಲ (ಅಗಳಿ) ಇರುವಂತೆ ಗ್ರಹಣೀಸ್ಥಾನವಿರುತ್ತದೆ ಯಾಕಂದರೆ ಆಹಾರವನ್ನು ತಡೆದು ಚನ್ನಾಗಿ ಪಚನಮಾಡಿ ಕಿಟ್ಟಭಾಗವನ್ನು ಮಲಾಶಯಕ್ಕೆ ಬಿಡುತ್ತದೆ ಗ್ರಹಣಿಯು ತಡೆಯದಿದ್ದರೆ ಅಪಕ್ವವೇ ಮಲಾಶಯದಲ್ಲಿ ಹೋಗುತ್ತಿತ್ತು, ತಡೆ ಹಿಡಿಯುವದರಿಂದಪಕ್ವವಾಗಿಹೋಗುತ್ತದೆ. ಗ್ರಹಣೀದೋಷವಿದ್ದರೆ, ಆಮವೇ ಹೋಗುವ ಕಾರಣವೇ ಇದಾಗಿರುತ್ತದೆ ಯಾಕಂದರೆ ಗ್ರಹಣೀಸ್ಥಾನ ದುರ್ಬಲವಿರುವದರಿಂದ ತಡೆಹಿಡಿದು ಪಚನಮಾಡುವ ಶಕ್ತಿಯು ಚನ್ನಾಗಿರದೇ ಹೀಗಾಗುತ್ತದೆ.

ಹೀಗೆ ಆಹಾರವನ್ನು ಪಚನಮಾಡುವದರಿಂದ ಆಯುರಾರೋಗ್ಯಾದಿಗಳ ಪುಷ್ಟಿಗೆ (ಅಭಿವೃದ್ಧಿಗೆ) ಕಾರಣವೆಂದು ಹೇಳಿದ್ದಾರೆ **ಆಯುಃ:—** ಶರೀರೇಂದ್ರಿಯ ಸತ್ವಾತ್ಮ ಸಂಯೋಗ ವಿಶೇಷಃ॥, **ಆರೋಗ್ಯಂ:—** ಧಾತುಸಾ

ವ್ಯಾಪ್||, ವೀರ್ಯಂ:— ಶಕ್ತಿಃ, ಕರ್ಮಣಿ ಸಾಮರ್ಥ್ಯಂ||, ಓಜಃ:— ರಸಾದಿ ಸರ್ವಧಾತುಪ್ರಸಾದಜಾತಂ ಪರಂ ಸತ್ವರೂಪಂ||, ಭೂತಧಾತು:— ಪಂಚಭೂತಾತ್ಮಕ ಶರೀರ ಧಾತವಃ||, ಚ.— ವಾತ ಪಿತ್ತ ಕಫಾಃ||. ಅಗ್ನಿ.— ಧಾತೂನಾಮೂಷ್ಮಾಧಾತ್ವಗ್ನಿರಿತಿ||, ನಾ:— ಶರೀರಸ್ಥ ಪಾಚಕಾಗ್ನಿಜಠರರಃ||.

# ಅನ್ನರಸದ ಕ್ರಮಣವು

**ವ್ಯಾನೇನ ರಸಧಾತುರ್ಹಿ ವಿಕ್ಷೇಪೋಚಿತ ಕರ್ಮಣಾ ||**
**ಯುಗಪತ್ ಸರ್ವತೋಜಸ್ರಂದೇಹೇವಿಕ್ಷಿಪ್ಯತೇ ಸದಾ ||**
**(ಚರಕ|| ಚಿಕಿತ್ಸಾ|| ಅ ೧೫ ಶ್ಲೋ. ೩೬)**

ದೇಹದಲ್ಲಿ ಆಹಾರದ ಅಪಕ್ವ ಭಾಗಕ್ಕೆ "ಆಮ" ವೆಂಬ ಹೆಸರು ಅದು ಗ್ರಹಿಣೀ ಸ್ಥಾನದಲ್ಲಿ ಪಕ್ವವಾಗಿ "**ರಸ**" ವಾಗುತ್ತದೆ ಇದಕ್ಕೆ ಸರ್ವಧಾತು ದೇಹವನ್ನು ಪೋಷಿಸುವ "**ರಸಧಾತು**" ಎಂದು ಅನ್ನುತ್ತಾರೆ. ರಸಧಾತುವು ಏಕ ಕಾಲದಲ್ಲಿ (ಯುಗಪತ್) ಸರ್ವ ಶರೀರದಲ್ಲಿಯೂ ಒಯ್ಯಲ್ಪಡುವ ಶಕ್ತಿಯುಳ್ಳ ವ್ಯಾನವಾಯುನಿಂದ ಒಯ್ಯಲ್ಪಡುತ್ತದೆ. ವಿಕ್ಷೇಪ ಕರ್ಮಕಾರಿಯಾದ ವ್ಯಾನವಾಯುವಿನಿಂದ ಒಮ್ಮೆಲೇ ಸಮಗ್ರ ದೇಹದಲ್ಲಿಯೂ, "**ರಸಧಾತು**" ಕಳಿಸಲ್ಪಡುತ್ತದೆ. ಅರ್ಥಾತ್ ಸಮಗ್ರ ದೇಹ ಸಂಚಾರಿಯಾದ ವ್ಯಾನ ವಾಯುವಿನ ಯೋಗದಿಂದ ಸಂಪೂರ್ಣ ದೇಹದಲ್ಲಿ ಒಮ್ಮೆಲೇ ಸಂಚರಿಸುತ್ತ ದೆಂದು ಅಭಿಪ್ರಾಯವು.

**ಅನ್ನಸ್ಯ ಪಕ್ತಾಪಿತ್ತಂತು ಪಾಚಕಾಖ್ಯಂ ಪುರೇರಿತಂ ||**
**ದೋಷಧಾತು ಮಲಾದೀನಾಮೂಷ್ಮೇತ್ಯಾತ್ರೇಯ ಶಾಸನಂ||**
(ವಾಗ್ಭಟ|| ಶಾರೀರ|| ಅ ೩ ಶ್ಲೋ ೪೯)

ಅನ್ನವನ್ನು ಪಚನ ಮಾಡುವ ಪಿತ್ತವು "**ಪಾಚಕಾಗ್ನಿ**" ಯೆಂದು ಹಿಂದೆ ವಿವರಿಸಲ್ಪಟ್ಟಿರುತ್ತದೆ. ಅದು ಪಕ್ವಾಶಯ ಆಮಾಶಯಗಳ ಮಧ

ಭಾಗದಲ್ಲಿರುತ್ತದೆ. "**ಪಕ್ವಾಮಾಶಯೆು ಮಧ್ಯಸ್ಥಂ**" ಎಂದು ಹೇಳಿದ್ದಾರೆ. "**ಆತ್ರೇಯರು**" ದೋಷಧಾತು ಮಲಾದಿಗಳ ಉಷ್ಣತೆಯೇ ಆಹಾರವನ್ನು ಪಚನಮಾಡುತ್ತದೆಂದು, ಪ್ರತಿಜ್ಞಾಪೂರ್ವಕವಾಗಿ ಹೇಳಿದ್ದಾರೆ. ಅವರ ಮತ ದಂತೆ **ಪಿತ್ತವು** (ಪಾಚಕಾಗ್ನಿಯೆಂದು ಹೆಸರುಳ್ಳದ್ದು) ಆಹಾರವನ್ನು **ಪಚನ** ಮಾಡುವದಿಲ್ಲೆಂದು ಹೇಳಿರುತ್ತಾರೆಂದು ತಿಳಿಯಬೇಕು. ಚರಕದಲ್ಲಿ ಧಾತ್ವಗ್ನಿ (೭), ಭೌತಿಕಾಗ್ನಿ (೫), ಒಟ್ಟು (೧೨) ಅಗ್ನಿಗಳಿರುತ್ತವೆಂದು ಹೇಳಿದ್ದಾರೆ **ಸುಶ್ರುತಾಚಾರ್ಯರು** ಪಿತ್ತವೇ ಅಗ್ನಿಯಾಗಿರುತ್ತದೆಂದೂ, ದೇಹದಲ್ಲಿ ಪಿತ್ತದ ಹೊರತಾಗಿ ಅನ್ಯ ಅಗ್ನಿಯು **ಲಭ್ಯ**ವಿಲ್ಲೆಂದೂ ಹೇಳಿದ್ದಾರೆ ಆಹಾರ ವನ್ನು ಪಚನ ಮಾಡುವ ಪಿತ್ತಕ್ಕೇ ಪಾಚಕಾಗ್ನಿಯೆಂದು ಹೇಳಿದ್ದಾರೆ

> **ವಾಮಪಾರ್ಶ್ವಾಶ್ರಿತಂ ನಾಭೇಃ ಕಿಂಚಿತ್ ಸೂರ್ಯಸ್ಯಮಂಡಲಂ ||**
> **ತನ್ಮಧ್ಯೇ ಮಂಡಲಂ ಸೌಮ್ಯಂತನ್ಮಧ್ಯೇಽಗ್ನಿರ್ವ್ಯವಸ್ಥಿತಃ ||**
> **ಜರಾಯುಮಾತ್ರ ಪ್ರಚ್ಛನ್ನಃ ಕಾಚಕೋಶಸ್ಥ ದೀಪವತ್ ||**
> (ವಾಗ್ಭಟ)

ನಾಭಿಯ ಎಡಗಡೆ ಸ್ವಲ್ಪಮೇಲ್ಭಾಗದಲ್ಲಿ ಸೂರ್ಯಮಂಡಲವಿರುತ್ತದೆ. ಸೂರ್ಯಮಂಡಲ ಮತ್ತು ನಾಭಿಯಮಧ್ಯದಲ್ಲಿ, ಸೋಮಮಂಡಲವು ಇರುತ್ತದೆ ಅವುಗಳ ಮಧ್ಯದಲ್ಲಿ ಅಗ್ನಿಯು ಇರುತ್ತದೆ. ಸೋಮಮಂಡಲ ಮಧ್ಯದಲ್ಲಿ ಅಗ್ನಿ ಇರುವದರಿಂದ, ಕಾಜಿನಬುರುಡೆಯ ಒಳಗೆ ದೀಪವಿರುವಂತೆ ಇರುತ್ತದೆ. ಜಠರಾಗ್ನಿಯ ಸುತ್ತಲೂ ಜರಾಯು (ಮಾಂಸದ ತೆಳ್ಳಗಿನ ಪರದೆ) ವ್ಯಾಪಿಸಿ ರುವದರಿಂದ ಕಾಜಿನ ಒಳಗಡೆ ಇರುವ ದೀಪದಸಾದೃಶ್ಯವನ್ನು ಕೊಟ್ಟಿದ್ದಾರೆ. ಇದು ಪಾಚಕಾಗ್ನಿಯಾಗಿದ್ದು ಆಹಾರವನ್ನು ಪಚನ ಮಾಡುತ್ತದೆ.

## ಆಹಾರಪಾಕವಿಷಯದಲ್ಲಿ ವಿಶೇಷ

**ಆಹಾರಪರಿಪಾಕದಲ್ಲಿ** ರಸದಿಂದಲೇ ಎಲ್ಲ ಧಾತು ದೋಷಾದಿಗಳು ಹುಟ್ಟುತ್ತವೆಂದು ಹೇಳಿದ್ದಾರೆ. ಅನ್ನರಸದಿಂದಲೇ ಉತ್ಪನ್ನವಾಗತಕ್ಕ ಇವು ಗಳು ಹೇಗಾಗುತ್ತವೆಂದು ಕ್ರಮವನ್ನುಸೂಚಿಸುತ್ತಾರೆ ಆಹಾರವನ್ನುಸೇವಿಸಿದ

ಕೂಡಲೇ ಮೊದಲು ಷಡ್ರಸಯುಕ್ತವಾದ ಅನ್ನವು ಮಧುರವಾಗುತ್ತದೆಂದು ಹೇಳಿದ್ದಾರೆ. ಫೇನದಂತೆಯೂ ಮಧುರವೂ ಆದ ಆಹಾರ ಪರಿಣಾಮ ದಿಂದ ಮೊದಲು ಕಫವು ಉತ್ಪನ್ನವಾಗುತ್ತದೆ. ಮಧುರ ರಸದಿಂದ ಕಫೋತ್ಪತ್ತಿಯನ್ನು ಹೇಳಿ, ಈಗ ಷಡ್ರಸವೂ ಸಹ ಮಾಧುರ್ಯಹೊಂದಿದ ಕಫವಾಗುತ್ತವೆಂದು ಹೇಳುವದರಿಂದ; "ಪೂರ್ವೋಕ್ತಿನಿರಸನ"ವಾಗುತ್ತದೆಂದು ಅನಿಸುತ್ತದೆ. ಆದರೆ ಇಲ್ಲಿ ಆಹಾರದಲ್ಲಿಯ ಮಧುರರಸವಿಶೇಷದಿಂದ ಕಫವಾಗುತ್ತದೆ. ಉಳಿದ ರಸವಿಭಾಗಗಳ ಅಂಶವು ಕಫವಾಗುವದಿಲ್ಲ ಆಮಾಶಯದಿಂದ ಹೊರ ಹೊರಟ ನಂತರ ಗ್ರಹಿಣೀಸ್ಥಾನದಲ್ಲಿ ಪಾಚಕಾಗ್ನಿಯ ಸಹಾಯದಿಂದ ಪಚನವಾಗಬೇಕಾದರೆ, ಆಹಾರದಲ್ಲಿ ಪಿತ್ತರಸವು ಕೂಡಿ ವಿಪಕ್ವವಾಗಲು ಅದರಿಂದ ಪಿತ್ತೋತ್ಪತ್ತಿಯಾಗುತ್ತದೆ. ಆಮೇಲೆ ಪಕ್ವಾಶಯಕ್ಕೆ ಆಹಾರ ಹೋದನಂತರ ವಾಯುವಿನಿಂದ ಶೋಷಿಸಲ್ಪಟ್ಟು ಕಟುಭಾವವನ್ನು ಹೊಂದಿ, ವಾಯುವನ್ನು ಹೆಚ್ಚಿಸುತ್ತದೆ ಇದು ತ್ರಿದೋಷವನ್ನು ಅನ್ನವು ಉತ್ಪನ್ನಮಾಡುವ ಕ್ರಮವಾಗಿರುತ್ತದೆ. ಇನ್ನು ರಸಾದಿಧಾತುಗಳಧಾತ್ವಗ್ನಿಗಳಿಂದ, ರಸದಿಂದ ಶುಕ್ರಪರ್ಯಂತವಾದಧಾತುಗಳು "ಪ್ರಸಾದಜವಾಗಿ" ಉತ್ಪನ್ನವಾಗುತ್ತವೆ. ರಸಾಗ್ನಿಯಿಂದ ಆಹಾರ ರಸವು ಪಾಕಹೊಂದಿ ಶರೀರಧಾರಕ ರಸದ ಸಂಗಡ ಕೂಡಿಕೊಳ್ಳುವದಕ್ಕೆ ಧಾತ್ವಗ್ನಿಪಾಕವೆಂದು ಹೆಸರು. ಅದೇ ಪ್ರಸಾದಜ ರಸವು.

**ಸಂಧುಕ್ಷಿತಃ ಸಮಾನೇನಪಚತ್ಯಾಮಾಶಯಸ್ಥಿತಂ ||**
**ಔದರ್ಯೋಗ್ನಿರ್ಯಥಾಬಾಹ್ಯಃ ಸ್ಥಾಲೀಸ್ಥಂತೋಯತಂಡುಲಂ||**
(ವಾಗ್ಭಟ|| ಶಾರೀರ|| ಅ. ೩ ಶ್ಲೋ ೫೬)

ಹೇಗೆ ಪಾತ್ರೆಯಲ್ಲಿಯ ಅಕ್ಕಿನೀರನ್ನು, ಹೊರಗೆ ಅಗ್ನಿಯಿದ್ದು ಪಾತ್ರೆಯ ಸಂಯೋಗದಿಂದ ಪಚನಮಾಡುತ್ತದೆಯೋ, ಅದರಂತೇ ಆಮಾಶಯದಲ್ಲಿಯ ಅಪಕ್ವ ಅನ್ನವನ್ನು ಜಠರಾಗ್ನಿಯು ವ್ಯಾನವಾಯುವಿನಿಂದ ಉದ್ದೀಪನ (ಸಂಧುಕ್ಷಿತ) ವಾಗಿ ಪಚನಮಾಡುತ್ತದೆ

**ಆದೌಷಡ್ರಸಮಪ್ಯನ್ನಂ ಮಧುರೀಭೂತಮೀರಯೇತ್ ||**
**ಫೇನೀಭೂತಂ ಕಫಂ, ಯಾತಂ ವಿದಾಹಾದಮ್ಲತಾಂ ತತಃ||೫೭||**

**ಪಿತ್ತಮಾಮಾಶಯಾತ್ ಕುರ್ಯಾತ್ ಚ್ಯವಮಾನಂ, ಚ್ಯುತಂ ಪುನಃ ॥**
**ಅಗ್ನಿನಾಶೋಷಿತಂ ಪಕ್ವಂ ಪಿಂಡಿತಂ ಕಟುಮಾರುತಂ ॥**

(ವಾಗ್ಭಟ॥ ಶಾರೀರ॥ ಅ. ೩ ಶ್ಲೋ ೫೮)

ಷಡ್ರಸೋಪೇತವಾದರೂ ಅನ್ನವು ಮೊದಲು ಮಧುರವೂ ಬುರುಗಿನಂತೆಯೂ ಆಗುತ್ತವೆ ಇದರಿಂದ ಮೊದಲನೇ ಅವಸ್ಥೆಯಲ್ಲಿ ಆಹಾರದ (ಫೇನೀಭೂತ) ಬುರುಗಿನಿಂದ ಕಫವಾಗುತ್ತದೆ ಆಮಾಶಯದಿಂದ ಹೊರಟ ನಂತರ ವಿಶೇಷ ಪಚನದಿಂದ ಆಮ್ಲವಾಗಿ ಪಿತ್ತ ಉತ್ಪನ್ನವಾಗುತ್ತದೆ ಇದು ಆಹಾರ ಪಚನದ ಎರಡನೇ ಅವಸ್ಥೆಯಾಗಿರುತ್ತದೆ. ಗ್ರಹಿಣೀಸ್ಥಾನದಲ್ಲಿ ಪಚನವಾಗುತ್ತಿರಲು ಅದರಿಂದ ಪಿತ್ತೋತ್ಪತ್ತಿಯಾಗುತ್ತದೆ. ನಂತರ ಮಲಾಶಯಕ್ಕೆ ಹೋಗಲಾಗಿ ವಾಯುವಿನಿಂದ ಶೋಷಿಸಲ್ಪಟ್ಟು ಪಿಂಡದಂತೆ (ಘಟ್ಟಿ) ಆಗುತ್ತದೆ. ಆಗ ಕಟುತ್ವ ಬರುವದರಿಂದ ವಾಯುವು ಅಧಿಕವಾಗುತ್ತದೆ. ಹೀಗೆ ಆಹಾರದಿಂದ **ಕಫ ಪಿತ್ತ** ವಾತಗಳು ಆಹಾರ ತೆಗೆದುಕೊಂಡ ನಂತರ ಪಚನಾವಸ್ಥೆಯ **ಆದಿ ಮಧ್ಯ ಅಂತ್ಯ ಸಮಯಗಳಲ್ಲಿ** ಉಂಟಾಗುತ್ತವೆ. ಇದು ಸಮಂಜಸ ವಿಚಾರವೇ ಆಗಿರುತ್ತದೆ

**ಯಾಕಂದರೆ:—** ಯುಕ್ತಿವಾದಪ್ರತ್ಯಕ್ಷಗಳಿಂದ ಇದು ಸಿದ್ಧಮಾಡಲ್ಕಬರುವಂತಿದೆ. ಮಧುರ ಆಮ್ಲ ಲವಣಾದಿಗಳಿಂದ ಕೂಡಿದ ಆಹಾರವನ್ನು ನಾವು ಭುಂಜಿಸುತ್ತೇವಾದ್ದರಿಂದ, ಅದರಿಂದುಂಟಾದ ರಸವು ಮಧುರವೂ ಸೌಮ್ಯಗುಣವುಳ್ಳದ್ದೂ ಯಾಕಾಗಬೇಕು? ನಾವು ಸೇವಿಸಿದ ಅನ್ನದಂತೆಯೇ ಉದ್ಭೂತ (ಪ್ರಖರ, ಸ್ಪಷ್ಟವಾದ) ಗುಣವುಳ್ಳ, ಆಮ್ಲ ಕಟುಲವಣ ಉಷ್ಣ ವೀರ್ಯಗಳಿಂದಕೂಡಿದ "ರಸವು" ಆಗಲೇಬೇಕು. ಹೀಗಾಗುವದಿಲ್ಲವಾದ್ದರಿಂದ ರಸದಲ್ಲಿರದ ಅನ್ಯಗುಣವುಳ್ಳ ವಿಭಾಗ ಅಂಶಗಳು, ಅನ್ಯತ್ರ ಮಿಲಿತವಾಗುತ್ತವೆನ್ನುವದು ಯುಕ್ತಿಸಿದ್ಧಾಂತವು ಹೀಗೆ ಆಹಾರದಿಂದ ಆಯಾವ ರಸ ವಿಭಾಗಗಳಿಂದ ಕಫಾದಿಗಳುತ್ಪನ್ನವಾಗುವದರಿಂದ, ನಂತರ ತಯಾರಾದ ಪರಿಪಕ್ವ "ರಸದಲ್ಲಿ" ನಾವು ಊಟಮಾಡಬೇಕಾದರೆ ಇದ್ದಂಥ ಪ್ರಖರವಾದ ರಸವಿರು

ವದಿಲ್ಲ. ಅವ್ಯಕ್ತ ಮಧುರವೆಂದರೂ ಅಡ್ಡಿಯಿಲ್ಲ. ಇಂಥ ರಸ, ಸೌಮ್ಯಗುಣ, ಯುಕ್ತವಾದ "ರಸ"ವಾಗಿರುತ್ತದೆ ಹೀಗೆ ತಯಾರಾದ ರಸವು ದೇಹದಲ್ಲಿಯು ರಸಾದಿ ಅಗ್ನಿಗಳಿಂದ ಪಚನವಾಗುತ್ತ, ಆಯಾವ ಧಾತುಸ್ಥಿತಿಯನ್ನು ಹೊಂದಿ ಅವುಗಳಲ್ಲಿ ಕೂಡಿಕೊಳ್ಳುತ್ತದೆ.

ಹೀಗೆ ಧಾತ್ವಗ್ನಿಗಳಿಂದ ಪಚನವಾಗಬೇಕಾದರೆ ದ್ವಿಪ್ರಕಾರಕ ಭೇದವುಳ್ಳ ಪಾಕವಾಗುತ್ತದೆ ಪ್ರಸಾದ (ಸಾರ), ಕಿಟ್ಟಗಳೆಂಬ ಭೇದದ್ವಯೋಪೇತವಾಗ ಪಾಕವಾಗುತ್ತದೆ. ರಸದ ಪಾಕವು ರಸಧಾತ್ವಗ್ನಿಯಿಂದ ನಡೆಯುತ್ತಿದ್ದಾಗ, ಪ್ರಸಾದ (ಸಾರ) ಭೂತವಾಗಿ ರಕ್ತವು ಉತ್ಪನ್ನವಾಗುತ್ತದೆ. ಮಲ(ಕಿಟ್ಟ)ಭೂತವಾದಕಫವುಸಂಭವಿಸುತ್ತದೆ. ಇದರಂತೆರಕ್ತಪ್ರಸಾದದಿಂದ ಮಾಂಸವೂ ಮಲರೂಪ ಪಿತ್ತವೂ ಉಂಟಾಗುತ್ತವೆ ಪೂರ್ವದಲ್ಲಿ ಜಠರಾಗ್ನಿಯಲ್ಲಿ ಪಾಕವಾಗುವಾಹಾರದಿಂದ ಕಫ ಪಿತ್ತವಾಯು ಉತ್ಪನ್ನವಾಗುವಂತೇ, ಧಾತ್ವಗ್ನಿಪಾಕದಲ್ಲಿಯೂ ರಸದಿಂದ ಕಫ, ರಕ್ತದಿಂದ ಪಿತ್ತ, ಮಲರೂಪವಾಗಿ ಸಂಭವಿಸುತ್ತವೆ. ಧಾತ್ವಾದಿ ಪಾಕದಲ್ಲಿ ವಾಯುವನ್ನು ಗ್ರಹಿಸಿರುವದಿಲ್ಲ. ಮಾಂಸಪಾಕದಿಂದ ಪ್ರಸಾದರೂಪ ಮೇದಸ್ಸೂ ಮಲರೂಪವಾದ ರಂಧ್ರಗಳಲ್ಲಿಯ (ಕಿವಿ ನೇತ್ರ ನಾಸಿಕಾ ಬಾಯಿ ಜನನೇಂದ್ರಿಯಗಳಲ್ಲಿಯ) ಮಲಗಳು ಉತ್ಪನ್ನವಾಗುತ್ತವೆ. ಮೇದಸ್ಸಿನ ಪಾಕದಿಂದ ಪ್ರಸಾದ ರೂಪವಾದ ಅಸ್ಥಿಗಳೂ ಮಲರೂಪವಾದ ಬೆವರೂ ಉತ್ಪನ್ನವಾಗುತ್ತವೆ. ಅಸ್ಥಿ ಪಾಕದಿಂದ ಸಾರಭೂತವಾದ ಮಜ್ಜೆಯೂ ಮಲರೂಪವಾದ ಕೇಶ ರೋಮ ನಖಗಳೂ ಉಂಟಾಗುತ್ತವೆ. ಮಜ್ಜಾಪಾಕದಿಂದ ಸಾರಭೂತವಾದ ಶುಕ್ರವೂ ಮಲಭೂತವಾದ ಕಣ್ಣಿನಮಲದಲ್ಲಿಯು ಮತ್ತು ಚರ್ಮಗಳಲ್ಲಿಯ ಸ್ನೇಹ (ಸ್ನಿಗ್ಧತೆ) ಉಂಟಾಗುತ್ತವೆ ಶುಕ್ರವು ಎಷ್ಟೇ ಪಚನವಾದರೂ ಮಲ ಉಂಟಾಗುವದಿಲ್ಲ ಸ್ನೇಹ ಭಾಗವಾದ ಸೂಕ್ಷ್ಮತೇಜೋಭೂತ (ಸಾರ) ವಾದ ಓಜಸ್ಸು ಉಂಟಾಗುತ್ತದೆ. ಆದ್ದರಿಂದ ಶುಕ್ರವು ನಿರ್ಮಲವಾಗಿರುತ್ತದೆಂದೂ ಪುನಃ ಪುನಃ ಪಾಕ ಹೊಂದುವದಿಲ್ಲೆಂದು ಹೇಳಿದ್ದಾರೆ ಧಾತುಗಳನ್ನು ಪ್ರಸಾದ ಜನ್ಯ (ಸಾರ) ವೆಂದು ಹೇಳಿ, ಉಪಧಾತುಗಳನ್ನು ಹೇಳಿದ್ದಾರೆ ಉಪಧಾತುಗಳೂ ಸಹ ಸಾರಜನ್ಯವೇ ಆಗಿರುತ್ತವೆಂದು ಸಮ್ಮತಿಸಿದ್ದಾರೆ.

## ಪೂರ್ವೋಕ್ತ ಅನ್ನಪಾಕಾದಿ ವಿಷಯ ವಿವರಣೆಯು:—

ಆಹಾರವನ್ನು ಪಚನಮಾಡುವ ಅಗ್ನಿಯು (ಪಿತ್ತ), ಪಾಚಕಾಗ್ನಿಯೆಂದು ಸುಶ್ರುತ ವಾಗ್ಭಟರ ಮತವು ಭೂತಧಾತ್ವಗ್ನಿಗಳೆಂದು ಆತ್ರೇಯರ ಮತವಾಗಿರುತ್ತದೆ. ಪಂಚಭೂತಗಳಅಗ್ನಿ (೫), ಧಾತ್ವಗ್ನಿ (೭), ಒಟ್ಟು (೧೨) ಅಗ್ನಿಗಳಿಂದ ಅಹಾರವು ಪಚನವಾಗುತ್ತದೆ. ಉಭಯ ಮತವನ್ನೂ ಸಂಮತಿಸಿದರೆ ಪಿತ್ತಾಗ್ನಿ (೫), ಕೂಡಿದರೆ ಹದಿನೇಳು ಅಗ್ನಿಗಳಾಗುತ್ತವೆ. ಆಹಾರ ಪಚನ ಮಾಡುವ ಅಗ್ನಿಗಳು (೧೭) ಇರುತ್ತವೆ. ಆಹಾರಮಲವು ಪುರೀಷ ಮೂತ್ರವಾಗಿರುತ್ತವೆ ಆಹಾರವು ಜಠರಾಗ್ನಿಯಿಂದ ಪಚನವಾಗಿ ರಸವಾಗುತ್ತದೆ ನಂತರಪುನಃ ಧಾತುಪಾಕವಾಗುವದರಿಂದ ದ್ವಿವಿಧಪಾಕವೆಂದು ಕೆಲವರು ಹೇಳುತ್ತಾರೆ. ಇದು ಯೋಗ್ಯವಲ್ಲ, ಯಾಕಂದರೆ ರಸದ ನಂತರ ಧಾತುಗಳ ಪಾಕದಲ್ಲಿ ಪುನಃ ಪುನಃ ಏಳು ಪಾಕಗಳು ಸಂಭವಿಸುವದರಿಂದ, ಪಾಕದ್ವಯವೆನ್ನುವದು ಸಮಂಜಸವಾಗಿರುವದಿಲ್ಲ. ಪಾಚಕಾಗ್ನಿಯಿಂದ ಸ್ಥೂಲಾಹಾರಪಚನವಾಗುವದಕ್ಕೆಅವಸ್ಥಾಪಾಕವೆಂದು ಅನ್ನುತ್ತಾರೆ. ಅವಸ್ಥಾಪಾಕವೆಂದರೆ ಊಟ ಮಾಡಿದ ನಂತರ ಪ್ರಥಮ ಮಧ್ಯಮ ಅಂತ್ಯವೆಂಬ ಪಚನಕ್ರಿಯೆ ಪೂರ್ಣವಾಗುವ ವರೆಗಿನ ಸ್ಥಿತಿಯಾಗಿರುತ್ತದೆ. ಈ ಅವಸ್ಥಾಪಾಕಜರಸವು ಧಾತ್ವಗ್ನಿಗಳಿಂದ ಪಚನವಾಗುವದಕ್ಕೆ ನಿಷ್ಠಾಪಾಕವೆಂದು ಹೇಳುತ್ತಾರೆ. ನಿಷ್ಠಾಪಾಕವೆಂದರೆ ನಿಯತವಾದ ಅಥವಾ ಕಡೆಯದ್ದಾದ ಪಚನರೀತಿಯೆಂದು ತಿಳಿಯಬೇಕು. ಇದರಿಂದ ಆದಿಯ ಪಚನಕ್ರಿಯೆಯು ಅವಸ್ಥಾಪಾಕವೆಂದೂ ನಂತರನಿಷ್ಠಾಪಾಕವೆಂದೂ ಹೇಳುವದರಿಂದ, ಎರಡು ಪಾಕವೆನ್ನುವದಕ್ಕೆ ಸ್ಥಾನವೇಇರುವದಿಲ್ಲ. ರಸದಲ್ಲಿಯಾದರೂ ಧಾತ್ವಗ್ನಿಯುಳ್ಳ ರಸವು, ಅದರಿಂದ ಪಕ್ವವಾಗುವ ರಸ ಹೀಗೆ ಎರಡು ರಸಗಳೆಂದು ಅನಿಸಬಹುದು. ಇಲ್ಲಿಯೂ ಸಹ ಪೋಷ್ಯ ಪೋಷಕ ಅಥವಾ ಸ್ಥಾಯೀ ಪೋಷಕರಸಗಳೆಂದು ಎರಡು ವಿಧರಸಗಳೆಂದು ಆಕ್ಷೇಪ ಬರುತ್ತದೆ. ಆಹಾರಜ ರಸವು ಧಾತ್ವಾದಿ ಪೋಷಕವಾದ್ದರಿಂದ ಪೋಷಕ ರಸವೆಂದೂ, ಧಾತ್ವಗ್ನಿಯುಳ್ಳ ರಸವು ಆಹಾರಜ ರಸವನ್ನು ಪಚನ ಮಾಡುವದರಿಂದ ಸ್ಥಾಯೀ ರಸವೆಂದೂ ಹೇಳುತ್ತಾರೆ. ಪರಸ್ಪರಾನುಗ್ರಹ ಕ್ರಿಯಾ ವಿಶೇಷ

ಗಳಿಂದಲೂ ಸಪ್ತಧಾತು ನಿರ್ದೇಶದಿಂದಲೂರಸದ್ವಯಸಿದ್ಧಾಂತವು ಸಮಂಜ ಸವಾಗುವದಿಲ್ಲ ಮತ್ತು ಗುಣಧರ್ಮಾದಿಗಳಿಂದ ಭೇದವುಉಪಪನ್ನವಾಗಿರುವ ದಿಲ್ಲ. ಆದ್ದರಿಂದ ದ್ವಿವಿಧ ರಸವನ್ನು ಹೇಳಿಲ್ಲ

**ಅನ್ಯಮತಗಳು.**— ಧಾತುಗಳು ತ್ರಿವಿಧವಾಗಿಪಾಕವೈಶಿಷ್ಟ್ಯದಿಂದ, ನಿಷ್ಪನ್ನನಾಗುತ್ತವೆಂದು . ಕೆಲವರು ಹೇಳುತ್ತಾರೆ **ಸ್ಥೂಲ, ಸೂಕ್ಷ್ಮ (ಅಣು), ಮಲ,** ಭೇದಗಳಿಂದ ಧಾತುಗಳು ಮೂರು ಪ್ರಕಾರವಾಗುತ್ತ ವೆಂದು ಹೇಳಿದ್ದಾರೆ

ಅನ್ನವು ಪಚನವಾಗುತ್ತಿರಲು ಅದರಿಂದ, ಪುರೀಷಮೂತ್ರಗಳು ಮಲ ರೂಪವಾಗಿ ಸಂಭವಿಸುತ್ತವೆ. ಸಾರಭಾಗವು ರಸವಾಗಿರುತ್ತದೆ ಅಲ್ಲಿ ಅವಸ್ಥಾ ರೂಪದಿಂದ ಕಫ ಪಿತ್ತ ವಾಯುಗಳುಂಟಾಗುತ್ತವೆ ಧಾತ್ವಗ್ನಿಯಿಂದ ರಸವು ಪಾಕವಾಗುತ್ತಿರಲು ಸ್ಥೂಲ ಭಾಗವು ರಸವು, ಸೂಕ್ಷ್ಮ ಭಾಗವು ರಕ್ತವು, ಮಲಭಾಗವು ಕಫವಾಗಿರುತ್ತದೆ ರಕ್ತದ ಪಾಕವಾಗುತ್ತಿರಲು ಸ್ಥೂಲ ಭಾಗವು ರಕ್ತವು, ಸೂಕ್ಷ್ಮ (ಅಣು) ಭಾಗವು ಮಾಂಸವು, ಮಲಭಾಗವು ಪಿತ್ತವಾಗಿರು ತ್ತದೆ. ಇದರಂತೆ ಮುಂದಿನ ಧಾತುಗಳನ್ನು ತಿಳಿಯಬೇಕು ಹೀಗೆ ಮೂರು ವಿಧವಾಗಿ ಪಾಕದಿಂದ ಧಾತು ನಿಷ್ಪತ್ತಿಯೆಂದು ಹೇಳಿದ್ದಾರೆ

**ಸ್ಥೂಲಾಽಣ್ವಂಶಮಲೈಃ ಸರ್ವೇಭಿದ್ಯಂತೆಧಾತವಸ್ತ್ರೀಧಾ ||**
**ಸ್ವಃ ಸ್ಥೂಲೋಽಂಶಃ ಪರಂಸೂಕ್ಷ್ಮಃ ತನ್ಮಲಂಯಾತಿತನ್ಮಲಃ||**
**ಸ್ವಾಗ್ನಿಭಿಃ ಪಚ್ಯಮಾನೇಷುಮಲಃ ಷಟ್‌ಸುರಸಾದಿಷು ||**
**ನಶುಕ್ರೇಪಚ್ಯಮಾನೇಽಪಿಹೇಮನೀವಾಽಕ್ಷಯೋಽಮಲಃ ||**

(ತಂತ್ರಾಂತರೆ)

ರಸಾದಿ ಧಾತುಗಳು ಸ್ಥೂಲ ಅಣು (ಸೂಕ್ಷ್ಮ) ಮಲ ಭೇದಗಳಿಂದ ಮೂರು ಪ್ರಕಾರವಾಗಿರುತ್ತವೆ ತಾನು ಸ್ಥೂಲವಾದದ್ದು, ಅದರಿಂದುತ್ಪನ್ನ ವಾಗುವ ಧಾತು ಸೂಕ್ಷ್ಮವು, ಅದರಿಂದುಂಟಾಗುವ ಮಲ, ಹೀಗೆ ಧಾತು ಗಳಲ್ಲಿ ಮೂರು ವಿಭಾಗಗಳೆಂದು ಹೇಳಿದ್ದಾರೆ. ಸ್ವಧಾತ್ವಗ್ನಿಗಳಿಂದ ರಸಾದಿ

ಗಳು ಪಾಕವಾಗುತ್ತಿರಲು ರಸಾದಿ ಷಡ್ಧಾತುಗಳಿಂದಲೂ ಮಲವು ಉಂಟಾ ಗುತ್ತವೆ. ಶುಕ್ರವು ಪಾಕವಾಗಲು ಅದರಿಂದ ಭಂಗಾರವನ್ನು ಎಷ್ಟೇ ಕಾಸಿ ಕರಗಿಸಿದರೂ ಮಲವಿಲ್ಲದೇ ನಿರ್ಮಲವಿರುತ್ತದೆಯೋ, ಅದರಂತೇ ಮಲ ಉತ್ಪನ್ನವಾಗದೆ ಶುಕ್ರವು ನಿರ್ಮಲವಾಗಿರುತ್ತದೆ ಶುಕ್ರದಿಂದ ಮಲವು ಉತ್ಪನ್ನವಾಗುವದಿಲ್ಲ-ಬರ್ಥವು ಶುಕ್ರಪಾಕವು ಆಗುತ್ತಿರಲು ಸಾರಭೂತ ಅಣುಅಂಶ ಓಜಸ್ಸು ಉತ್ಪನ್ನವಾಗುತ್ತವೆ ಚರಕಾಚಾರ್ಯರು ಗರ್ಭವೂ ಸಹ ಶುಕ್ರದ ಸಾರಾಂಶವೆಂದು ಹೇಳುತ್ತಾರೆ

ರಸಾದಿಗಳಿಂದ ಉಪಧಾತುಗಳುಂಟಾಗುತ್ತವೆ ಸ್ತನ್ಯರಜಸ್ಸು ವೊದ ಲಾದವುಗಳುಸ್ವಾಭಾವಿಕವಾಗಿಉತ್ಪನ್ನವಾಗುತ್ತವೆ. ಅಸ್ಥ್ಯಾದಿಧಾತುಗಳಿಂದ ಉತ್ಪನ್ನವಾಗುವದಿಲ್ಲ. ಉಪಧಾತುಗಳು ಯಾವವೆಂದು ಹಿಂದೆ ವಿವರಿಸ ಲ್ಪಟ್ಟಿರುತ್ತವೆ.

## ವಿಪಾಕವಿಶೇಷದಿಂದ ಮೂರು ವಿಧರಸಗಳು

**ಮಧುರೋಹೃದಯಾದೂರ್ಧ್ವಂ ರಸಃ ಕೋಷ್ಠೇವ್ಯವಸ್ಥಿತಃ ||**
**ತತಃ ಸಂವರ್ಧತೇಶ್ಲೇಷ್ಮಾಶರೀರಬಲವರ್ಧನಃ ||೧||**

**ನಾಭೀಹೃದಯಮಧ್ಯೇಚರಸಸ್ತ್ವಮ್ಲೋವ್ಯವಸ್ಥಿತಃ ||**
**ಸ್ವಭಾವೇನಮನುಷ್ಯಾಣಾಂ ತತಃ ಪಿತ್ತಂ ವಿವರ್ಧತೇ ||೨||**

**ಅಧೋನಾಭ್ಯಾಸ್ತುಖಲ್ವೇಕಃ ಕಟುಕೋವ್ಯವಸ್ಥಿತೋರಸಃ ||**
**ಪ್ರಾಯಃ ಶ್ರೇಷ್ಠತಮಸ್ತತ್ರಪ್ರಾಣಿನಾಂ ವರ್ಧತೇನಿಲಃ ||೩||**

(ತಂತ್ರಾಂತರೆ)

ಹೃದಯದ ಮೇಲ್ಭಾಗದ ಕೋಷ್ಠದಲ್ಲಿ ಮಧುರ ರಸವು ಇರುತ್ತದೆ ಅದರಿಂದ ಶರೀರ ಬಲವನ್ನು ವರ್ಧನೇ ಮಾಡುವ ಕಫವು ಉತ್ಪನ್ನವಾಗು ತ್ತದೆ. ಹೃದಯ ನಾಭಿಗಳ ಮಧ್ಯ ಪ್ರದೇಶದಲ್ಲಿ, ಚಲಿಸುತ್ತಿರುವ ಆಮ್ಲ (ಹುಳಿ) ರಸವು ಇರುತ್ತದೆ ಸ್ವಾಭಾವಿಕವಾಗಿ ಆಮ್ಲರಸದಿಂದ ಪಿತ್ತವು

ಉತ್ಪನ್ನವಾಗುತ್ತದೆ. ನಾಭಿಯ ಕೆಳಭಾಗದಲ್ಲಿ ಕಟು (ಖಾರ) ರಸವು ಇರುತ್ತದೆ ಬಹುಶಃ ಶ್ಲೇಷ್ಮವಾದ ವಾಯುವು ಅಲ್ಲಿಂದಲೇ ಉಂಟಾಗುತ್ತದೆ. ಹೀಗೆ ತ್ರಿವಿಧವಾದ ಕೋಷ್ಠ ಸ್ಥಾನದಲ್ಲಿರುವ ರಸಗಳನ್ನು ತಂತ್ರಾಂತರದಲ್ಲಿ ಹೇಳಿದ್ದಾರೆ.

# ದೇಹದಲ್ಲಿಯ ಭೌತಿಕಾಗ್ನಿಯ ಭೇದಗಳು

## ಪಂಚಭೂತಾತ್ಮಕ ಅಗ್ನಿಗಳು

**ಭೌಮಾಪ್ಯಾಗ್ನೇಯವಾಯವ್ಯಾಃಪಂಚೋಷ್ಮಾಣಃ ಸನಾಭಸಾಃ॥**
**ಪಂಚಾಹಾರಗುಣಾನ್ ಸ್ವಾನ್ ಸ್ವಾನ್ ಪಾರ್ಥಿವಾದೀನ್ ಪಚಂತಿಹಿ ॥** (ಚರಕ॥ ಚಿಕಿತ್ಸಾ॥ ಅ. ೧೫ ಶ್ಲೋ. ೧೩)

ಪೃಥವೀ ಆಪ್ಯ ಆಗ್ನೇಯ ವಾಯುವ್ಯ ಆಕಾಶೀಯವಾದ ಪಂಚ ಅಗ್ನಿಗಳು, ಪೃಥಿವ್ಯಾದಿಗುಣವುಳ್ಳ ಪಾಂಚಭೌತಿಕ ಆಹಾರ ದ್ರವ್ಯಗಳನ್ನು ಪಚನ ಮಾಡುತ್ತವೆ ದೇಹದಲ್ಲಿರುವ ಪೃಥಿವ್ಯಾದಿ ಪಾಂಚಭೌತಿಕ ವಿಭಾಗಗಳಲ್ಲಿ ಭೂತಾತ್ಮಕ ಅಗ್ನಿಗಳು ಇರುತ್ತವೆ.

## ಭೌತಿಕಾಹಾರಗುಣ

**ಯಥಾ ಸ್ವಂಸ್ವಂ ಚ ಪುಷ್ಣಂತಿದೇಹೇದ್ರವ್ಯಗುಣಾಃ ಪೃಥಕ್ ॥**
**ಪಾರ್ಥಿವಾಃ ಪಾರ್ಥಿವಾನೇವಶೇಷಾಃ ಶೇಷಾಂಶ್ಚ ಕೃತ್ಸ್ನಶಃ ॥**
(ಚರಕ॥ ಚಿಕಿತ್ಸಾ॥ ಅ ೧೫ ಶ್ಲೋ. ೧೪)

ದೇಹದಲ್ಲಿರುವ ಸ್ವಕೀಯವಾದ ದ್ರವ್ಯಗುಣಗಳುಳ್ಳ ಭೌತಿಕ ಪದಾರ್ಥಗಳನ್ನು, ಆಹಾರದಲ್ಲಿರುವ ಭೌತಿಕದ್ರವ್ಯಗಳು ಪೋಷಣೆಯನ್ನುಮಾಡುತ್ತವೆ ಅರ್ಥಾತ್, ಸಜಾತೀಯ ದ್ರವ್ಯಗುಣಗಳು ದೇಹದಲ್ಲಿಯ ಸಜಾತೀಯ ದ್ರವ್ಯಗುಣಗಳನ್ನು ಪೋಷಿಸುತ್ತವೆ. ಪಾರ್ಥಿವ ದ್ರವ್ಯಗುಣಗಳು ಪಾರ್ಥಿವ ದ್ರವ್ಯಗುಣಗಳನ್ನು ಪೋಷಿಸುತ್ತವೆ. ಉಳಿದ ಭೌತಿಕವಾದ ದ್ರವ್ಯಗುಣಗಳು ಸ್ವಕೀಯ ದ್ರವ್ಯಗುಣಗಳನ್ನು ಪೋಷಿಸುತ್ತವೆ.

# ಧಾತ್ವಗ್ನಿಗಳು

**ಸಪ್ತಭಿರ್ದೇಹಧಾತಾರೋಧಾತವೋದ್ವಿವಿಧಂ ಪುನಃ ||**
**ಯಥಾಸ್ವಮಗ್ನಿಭಿಃ ಪಾಕಂ ಯಾಂತಿಕಿಟ್ಟಪ್ರಸಾದವತ್ ||**
(ಚರಕ|| ಚಿಕಿತ್ಸಾ|| ಅ ೧೫ ಶ್ಲೋ ೧೫)

ದೇಹದಲ್ಲಿರುವ ದೇಹಧಾರಕವಾದ ರಸಾದಿಧಾತುಗಳು, ಸ್ವಕೀಯವಾದ (೭) ಧಾತ್ವಗ್ನಿಗಳಿಂದ ಪ್ರಸಾದ (ಸಾರ) ಕಿಟ್ಟ ರೂಪವುಳ್ಳ, ಎರಡು ವಿಧ ಪಾಕವನ್ನು ಹೊಂದುತ್ತವೆ ಜಠರಾಗ್ನಿ ಪಾಕವಾದ ನಂತರ ರಸಧಾತುವು ಧಾತುಪಾಕವನ್ನು ಹೊಂದುತ್ತದೆ. ಸ್ಥೂಲ ಸೂಕ್ಷ್ಮ (ಅಣು) ಮಲರೂಪ ಪಾಕ ಗಳು ಹಿಂದೆ ವಿವರಿಸಲ್ಪಟ್ಟಿರುತ್ತವೆ. ಇಲ್ಲಿ ಸಾರ (ಪ್ರಸಾದ) ಕಿಟ್ಟಗಳೆಂಬ ಎರಡು ವಿಧಗಳನ್ನೇ ಹೇಳಿದ್ದಾರೆ "ಪುನಃ" ಎನ್ನುವ ಶಬ್ದವನ್ನಿಟ್ಟಿರುವದ ರಿಂದ ಸಾಮಾನ್ಯತಃ ಜಠರಾಗ್ನಿಪಾಕಾ ನಂತರದಲ್ಲಿಯು ಪಾಕವಾದ್ದರಿಂದ, ಎರಡು ಪಾಕವೆಂಬ ಭ್ರಮವು ಉತ್ಪನ್ನವಾಗುತ್ತದೆ ಅದು ಭ್ರಮವೇ ವಿನಾ ಸತ್ಯವಾಗಿರುವದಿಲ್ಲ. ಯಾಕಂದರೆ, ಅವಸ್ಥಾ ಪಾಕವೆಂದು ಹೇಳಿರುವದರಿಂದ ನಿಷ್ಠಾ (ನಿಯತ) ಪಾಕವಿದೆಯೆಂದೂ ಪಾಕನಿಷ್ಪತ್ತಿ ಆಗಿಲ್ಲವೆಂದೂ ಸಿದ್ಧ ವಾಗುತ್ತದೆ. ನಿಷ್ಠಾ ಪಾಕಾನಂತರವೇ ಪಾಕಪೂರ್ಣತೆಯನ್ನು ಹೇಳಿದ್ದಾರೆ. ಹಾಗಿಲ್ಲವಾದರೆ ಪೂರ್ವದಲ್ಲಿಯದು ಅವಸ್ಥಾ ಪಾಕವೆಂದು ಹೇಳದೇ ಪೂರ್ಣ ಪಾಕವೆಂದು ಹೇಳುತ್ತಿದ್ದರು ಆದ್ದರಿಂದ ಅನೇಕಸಲ ಪಾಕವಾಗುವ ವಿಚಾ ರವನ್ನು ವಿಮರ್ಶೆಯಿಂದ ಸಿದ್ಧಮಾಡಿ, ಪಾಕ ಪೂರ್ಣವಾದ ನಂತವೇ ರಸ ಸ್ಥಿತಿಯೆಂದು ಹೇಳಿದ್ದಾರೆ

# ಪಾಚಕಾಗ್ನಿಪಾಕವೇಮುಖ್ಯ

**ಇತಿಭೌತಿಕಧಾತ್ವನ್ನಪಕ್ತ್ರೂಣಾಂ ಕರ್ಮಭಾಷಿತಂ ||**
**ಅನ್ನಸ್ಯಪಕ್ತಾ ಸರ್ವೇಷಾಂ ಪಕ್ತ್ರೂಣಾಮಧಿಪೋಮತಃ ||**
(ಚರಕ|| ಚಿಕಿತ್ಸಾ|| ಅ ೧೫ ಶ್ಲೋ ೩೮)

ಭೌತಿಕ ದ್ರವ್ಯ ಧಾತು ಅನ್ನಗಳನ್ನು ಪಚನ ಮಾಡುವ ಅಗ್ನಿಗಳ ಕರ್ಮವು ವಿಸ್ತಾರವಾಗಿ ವಿವರಿಸಲ್ಪಟ್ಟಿರುತ್ತದೆ ಅನ್ನವನ್ನು ಪಚನಮಾಡುವ ಜಠರಾಗ್ನಿಯೇ ಸರ್ವ ಅಗ್ನಿಗಳಿಗೂ ಮುಖ್ಯ ( ಅಧಿಪ ) ವಾದದ್ದಿರುತ್ತದೆ. ಅರ್ಥಾತ್ ಜಠರಾಗ್ನಿಯಿಂದಲೇ ಸರ್ವಅಗ್ನಿಗಳೂ ಪ್ರಭಾವ ಹೊಂದಿ ತಮ್ಮ ಕರ್ತವ್ಯವನ್ನು ಮಾಡುತ್ತವೆ ಆದ್ದರಿಂದ ಧಾತ್ವಾದಿ ಎಲ್ಲ ಅಗ್ನಿಗಳಲ್ಲಿ ಅನ್ನ ಪಾಚಕ ಜಠರಾಗ್ನಿಯೇ ಮುಖ್ಯವಾದದ್ದು, ಅದರ ಪ್ರಭಾವದಿಂದಲೇ ಎಲ್ಲ ಅಗ್ನಿಗಳ ಕಾರ್ಯ ನಡೆಯುವದರಿಂದ ಅದೇ ಪ್ರಧಾನವಾಗಿರುತ್ತದೆ

ಭೌತಿಕಾಗ್ನಿ [೫], ಧಾತ್ವಗ್ನಿ [೭], ಪಿತ್ತಾಗ್ನಿ [೫], ಅನ್ನ ಪಾಚಕವಾದ ಜಠರಾಗ್ನಿ [೧], ಸರ್ವ ಅಗ್ನಿಗಳು ಕೂಡಿ [೧೮], ಅಗ್ನಿಗಳೆಂದು ವಿವರಣೇ ಮಾಡಿದ್ದಾರೆ

ಅನ್ಯಮತವು ಪೂರ್ವೋಕ್ತ ಈ ಅಗ್ನಿಗಳ ಹೊರತಾಗಿ, ಉಪಧಾತು ಮಲಗತ ಅಗ್ನಿಗಳು ಸಹ ಇರುತ್ತವೆ. ಇವುಗಳು ಸಹ ಪಚನ ಕ್ರಿಯೆಯನ್ನುಂಟು ಮಾಡುವದರಿಂದ ಗ್ರಹಿಸಬೇಕೆಂದು ಹೇಳುತ್ತಾರೆ. ಗ್ರಹಿಸಲು ತೊಂದರೆಯೇನಿಲ್ಲ, ವಿಶೇಷ ಪ್ರಾಧಾನ್ಯವಿಲ್ಲದ್ದರಿಂದಲೂ ಅಲ್ಪ ಕರ್ತವ್ಯ ಮಾಡುವದರಿಂದಲೂ ಪ್ರತ್ಯೇಕ ಹೇಳಿರುವದಿಲ್ಲ. ಈ ಪೂರ್ವೋಕ್ತ ಅಗ್ನಿಗಳಲ್ಲಿಯೇ ಸಮಾವೇಶವಾಗುತ್ತವೆ.

# ಗುದವು

**ತತ್ರಸ್ಥೂಲಾಂತ್ರಪ್ರತಿಬದ್ಧಮರ್ಧಪಂಚಾಂಗುಲಂ ಗುದಮಾಹುಃ, ತಸ್ಮಿನ್ ವಲಯಸ್ತಿಸ್ರೋsಧ್ಯರ್ಧಾಂಗುಲಾಂತರಸಂಭೂತಾಃ ಪ್ರವಾಹಣೀ ವಿಸರ್ಜನೀ ಸಂವರಣೀಚೇತಿಚತುರಂಗುಲಾಯತಾಃ; ಸರ್ವಾಸ್ತಿರ್ಯಗೇಕಾಂಗುಲೋಚ್ಛ್ರಿತಾಃ॥**

(ಸುಶ್ರುತ॥ ನಿದಾನ॥ ಅ ೨ ಸೂ ೫)

ಸ್ಥೂಲಾಂತ್ರದಲ್ಲಿ ಪ್ರತಿಬದ್ಧವಾದ ಗುದವು (೪||) ಅಂಗುಲ ಉದ್ದವಾದದ್ದಿರುತ್ತದೆಂದು ಹೇಳುತ್ತಾರೆ. **"ಅರ್ಧ ಪಂಚಾಂಗುಲಂ" ಅರ್ಧೇನೋನಾನಿ ಪಂಚ ಅಂಗುಲಾನಿ ಯಸ್ಯಸ್ಯೋ ಅರ್ಧಪಂಚಾಂಗುಲಃ||** (ಸಾರ್ಧ ಚತುರಂಗುಲ ಇತ್ಯರ್ಥಃ) ಶಾಕ ಪಾರ್ಥಿವಾದಿತ್ವಾತ್ ಸಮಾಸಃ|| ಏವಂ **"ಅರ್ಧ ಪಂಚಾಂಗುಲಂ"** (೪||) ಅಂಗುಲ ಪ್ರಮಾಣಮಿತಿಸಿದ್ಧಂ||

ಪೂರ್ವೋಕ್ತ ಪ್ರಮಾಣವುಳ್ಳ ಗುದ ನಲಿಕೆಯಲ್ಲಿ ಮೂರುವಲಿಗಳು ಇರುತ್ತವೆ [೧] **ಪ್ರವಾಹಣೀ,** [೨] **ವಿಸರ್ಜನೀ,** [೩] **ಸಂವರಣೀ** ಹೀಗೆ ಮೂರು ವಲಿಗಳು ಗುದ ಪ್ರದೇಶದಲ್ಲಿರುತ್ತವೆ. ಪ್ರತಿಯೊಂದು ವಲಿಗಳು (೧||) ಅಂಗುಲ ಉದ್ದವಿರುತ್ತವೆ (೧-೨) ವಲಿಗಳು (೧||) ಅಂಗುಲೀ ಪ್ರಮಾಣವುಳ್ಳವಾಗಿರುತ್ತವೆ. (೩) ನೇ ವಲಿಯು (೧) ಅಂಗುಲಪ್ರಮಾಣವುಳ್ಳದ್ದಿರುತ್ತದೆ (||) ಅಂಗುಲ ಪ್ರಮಾಣದಷ್ಟು ಗುದದ ಓಷ್ಠ ಭಾಗವಿರುತ್ತದೆ. ಆದ್ದರಿಂದ ಕಡೆಯದಾದ ಸಂವರಣೀ ವಲಿಯ ಪ್ರಮಾಣದಲ್ಲಿ ಗುದಾಚ್ಛಾದಕ ಭಾಗವು (||) ಅಂಗುಲವಿರುವದರಿಂದ, (೧) ಅಂಗುಲ ಪ್ರಮಾಣವುಳ್ಳ ವಲಿಯೆಂದು ತಿಳಿಯಬೇಕು.

(೧) **ಮಲಪ್ರವಹಣಾದಂತಃ " ಪ್ರವಾಹಣೀ "** ಒಳಗಡೆಯಲ್ಲಿ ಮಲವನ್ನು ಪ್ರವಹಿಸುತ್ತದೆಯಾದ್ದರಿಂದ ಪ್ರವಾಹಣಿಯೆಂದು ಹೇಳಿದ್ದಾರೆ. **"ಪ್ರವಾಹಯತೀತಿ ಪ್ರವಾಹಣಿ".**

(೨) ಪ್ರವಹತೋಮಲಸ್ಯ ಬಹಿರ್ವಿಸರ್ಜನಾತ್ **"ವಿಸರ್ಜನೀ"** ತನ್ನ ಸ್ಥಾನದಲ್ಲಿ ಬಂದಿರುವ ಮಲವನ್ನು ಹೊರಗೆ ಹಾಕುವದರಿಂದ ವಿಸರ್ಜನೀಯೆಂದು ಹೆಸರು. **"ವಿಸೃಜತೀತಿ ವಿಸರ್ಜನಿ".**

**ಮಲಸ್ಯ ಸಂವರಣಾತ್ "ಸಂವರಣೀ"** ಮಲವನ್ನು ಮುಚ್ಚುವದರಿಂದ ಸಂವರಣಿಯೆಂದು ಹೇಳುತ್ತಾರೆ. ಮಲನಿರ್ಗಮನ ನಂತರ ಪುನಃ ದ್ವಾರವನ್ನು ಮುಚ್ಚಿಬಿಡುತ್ತದೆಯಾದ್ದರಿಂದ ಗುದದ್ವಾರಕ್ಕೆ ಇದು ಸಂವರಣಿಯಾಗಿರುತ್ತದೆ. **"ಸಂವೃಣೋತೀತಿಸಂವರಣೀ".**

ಮೇಲ್ಗಡೆಯಲ್ಲಿ ಮೊದಲಿರುವ ವಲಿಯೆಂದರೆ "**ಪ್ರವಾಹಣಿ**"ಯಾಗಿರುತ್ತದೆ ಅದರ ನಂತರ ಮಧ್ಯದ್ದಾದ "**ವಿಸರ್ಜನೀ**" ವಲಿಯು ಬಹಿದ್ವಾರದಲ್ಲಿರುವ ಕಡೇಯದಾದ "**ಸಂವರಣೀ**" ಎಂಬ ವಲಿಯಾಗಿರುತ್ತದೆ. ಹೀಗೆ ಮೇಲಿನಿಂದ ಕೆಳವರೆಗೆ ಕೂಡಿ (೩) ವಲಿಗಳಿರುತ್ತವೆ. ಕಡೇವಲಿಯಾದ ಸಂವರಣಿಯನಂತರ ಅರ್ಧಾಂಗುಲ ಪ್ರಮಾಣ ಗುದೌಷ್ಠವಿರುತ್ತದೆ. ಮೂಲವ್ಯಾಧಿ ಮೊದಲಾದ ಗುದರೋಗಗಳಲ್ಲಿ ಸ್ಥಾನ ಜ್ಞಾನವಾಗಲೆಂದು ಪ್ರಮಾಣವನ್ನು ಹೇಳಿದ್ದಾರೆ. ಮೂರು ವಲಿಗಳು ಕೂಡಿದ (೪॥) ಅಂಗುಲ ಪ್ರಮಾಣವು ಗುದವು ಸಂಕುಚಿತ ಸ್ಥಿತಿಯಲ್ಲಿದ್ದಾಗಿನ ಪ್ರಮಾಣವಾಗಿರುತ್ತದೆ ವಿಕಸನವಾದಾಗ ೫ ಅಥವಾ ೬ ಅಂಗುಲ ಪ್ರಮಾಣವಾಗಿರುತ್ತದೆ. ಆದ್ದರಿಂದ ಅರ್ಶೋಯಂತ್ರ ಪ್ರಮಾಣವನ್ನು ಇದರಂತೇ ಹೇಳಿದ್ದಾರೆ. ಬಸ್ತಿ ನಲಿಕಾ ಮೊದಲಾದವುಗಳನ್ನು ಸಹ ಈ ಪ್ರಮಾಣದಂತೇ ತಿಳಿಯಬೇಕು

## (೫೪) ಅಸ್ಥಿ ವಿವರಣೆ

**ಅಭ್ಯಂತರಗತೈಃ ಸಾರೈಃ ಯಥಾತಿಷ್ಠಂತಿಭೂರುಹಾಃ ॥**
**ಅಸ್ಥಿಸಾರೈಸ್ತಥಾದೇಹಾಧ್ರಿಯಂತೇದೇಹಿನಾಂ ಧ್ರುವಂ ॥**
**ಯಥಾಹಿಸಾರೋವೃಕ್ಷಸ್ಯತಿಷ್ಠತ್ಯಭ್ಯಂತರಾಶ್ರಿತಃ ॥**
**ಏವಮಸ್ಥೀನಿಜಂತೂನಾಂ, ಶರೀರಂಧ್ರಿಯತೇತತೈಃ ॥**
**ತಸ್ಮಾಚ್ಚಿರವಿನಷ್ಟೇಷುತ್ವಙ್ಮಾಂಸೇಷುಶರೀರಿಣಾಂ ॥**
**ಅಸ್ಥೀನಿನವಿನಶ್ಯಂತಿಸಾರಾಣ್ಯೇತಾನಿದೇಹಿನಾಂ ॥**
**ಮಾಂಸಾನ್ಯತ್ರನಿಬದ್ಧಾನಿಸಿರಾಭಿಃ ಸ್ನಾಯುಭಿಸ್ತಥಾ ॥**
**ಅಸ್ಥೀನ್ಯಾಲಂಬನಂ ಕೃತ್ವಾನಶೀರ್ಯಂತೇಪತಂತಿವಾ ॥**

(ಸುಶ್ರುತ॥ ಶಾರೀರ॥ ಅ ೫ ಶ್ಲೋ ೨೩)

ಒಳಗಡೆಯಲ್ಲಿರುವ ಘಟ್ಟಿಯುಳ್ಳ ಸಾರಭಾಗಗಳನ್ನವಲಂಬಿಸಿ ವೃಕ್ಷಗಳು ಸ್ಥಿರವಾಗಿ ನಿಲ್ಲುತ್ತವೆಯೋ, ಅದರಂತೆ ಒಳಗಡೆಯಲ್ಲಿರುವ ಅಸ್ಥಿಸಾರಮಯದಿಂದ ದೇಹವು ಧಾರಣಾಮಾಡಲ್ಪಡುತ್ತದೆ. ವೃಕ್ಷವು ಸ್ಥಿರವಾಗಿ ನಿಲ್ಲ

ಲಿಕ್ಕೆ ಒಳಗಡೆಯಲ್ಲಿ ಘಟ್ಟಿಯಾದ ಸ್ಥಿರಸಾರಭಾಗಗಳಿರುತ್ತವೆ ಹಾಗೆಯೇ ದೇಹವು ಸ್ಥಿರವಾಗಿ ನಿಲ್ಲಲಿಕ್ಕೆ ಒಳಗಡೆ ಕಠಿಣವಾದ ಸಾರಭೂತ ಅಸ್ಥಿಗಳು ಇರುತ್ತವೆ. ಈ ಅಸ್ಥಿಗಳಿಂದ ಶರೀರವು ಸ್ಥಿರವಾಗಿ ಧರಿಸಲ್ಪಟ್ಟಿರುತ್ತದೆ. ಹೀಗಿರುವದರಿಂದ, ದೇಹದಲ್ಲಿಯ ಸ್ಥಿರವೂ (ಕಠಿಣ) ಸಾರಭೂತವೂ ಆದ ಅಸ್ಥಿಗಳು, ಚರ್ಮ ಮಾಂಸಗಳು ಬಹಳ ಸೊರಗಿ ಕರಗಿದರೂ ಕೂಡ; ಕ್ಷೀಣವಾಗುವದಿಲ್ಲ. ಮಾಂಸಾದಿಗಳು ಸೊರಗಿ ಕರಗಿ ಹೋದರೂ ಅಸ್ಥಿಗಳು ಕ್ಷೀಣವಾಗುವದಿಲ್ಲವಾದ್ದರಿಂದ, ದೇಹದಸಾರವೇ ಅಸ್ಥಿಗಳೆಂದು ಹೇಳುತ್ತಾರೆ ದೇಹಧಾರಕವಾದ ಅಸ್ಥಿಗಳಲ್ಲಿ ಮಾಂಸವಿಭಾಗಗಳು ಸ್ನಾಯುಸಿರಾಗಳಿಂದ ಕಟ್ಟಲ್ಪಟ್ಟಿರುತ್ತವೆ. ಸ್ನಾಯುಸಿರಾಗಳಿಂದ ಪ್ರತಿಬದ್ಧವಾದ ಮಾಂಸಗಳು ಅಸ್ಥಿಗಳನ್ನವಲಂಬಿಸಿ ಸ್ಥಿರ ಧೃಡವಾಗಿರುತ್ತವೆ. ಹೀಗೆ ಯೋಗ್ಯ ಸ್ಥಾನ ಸಂನ್ನಿವೇಶೋಚಿತವಾಗಿರುವದರಿಂದ, ಆಯಾವ ಸ್ಥಾನಿಕ ಮಾಂಸಾದಿಗಳು ಬೀಳದೆ ಸ್ಥಿರವಾಗಿ ನಿಲ್ಲುತ್ತವೆ. ವಸ್ತುತಃ ದೇಹಕ್ಕೆ ಅಸ್ಥಿಗಳು ಆಧಾರಸ್ತಂಭವಾಗಿರುತ್ತವೆ. ಇಷ್ಟೇ ಅಲ್ಲದೆ ಅಸ್ಥಿಯು ಶರೀರಪೋಷಕವಾದ ಧಾತುವುಸಹ ಆಗಿರುತ್ತದೆ. ಶರೀರಪೋಷಣೆ ಧಾರಣೆಗಳೆರಡನ್ನೂ ಮಾಡುತ್ತದೆಂದು ಹೇಳಬಹುದು.

# ಅಸ್ಥಿಗಳ ಸ್ವರೂಪ (ಆಕಾರ)

**ಏತಾನಿಪಂಚವಿಧಾನಿಭವಂತಿ; ತದ್ಯಥಾ:— ಕಪಾಲ ರುಚಕ ತರುಣ ವಲಯ ನಲಕ ಸಂಜ್ಞಾನಿ॥ ತೇಷಾಂಜಾನುನಿತಂಬಾಂಸಗಂಡತಾಲುಶಂಖಶಿರಃಸು ಕಪಾಲಾನಿ, ದಶನಾಸ್ತು ರುಚಕಾನಿ, ಘ್ರಾಣಕರ್ಣಗ್ರೀವಾಕ್ಷಿಕೋಶೇಷು ತರುಣಾನಿ, ಪಾರ್ಶ್ವಪೃಷ್ಠೋರಃಸು ವಲಯಾನಿ, ಶೇಷಾಣಿನಲಕಸಂಜ್ಞಾನಿ ॥**

**(ಸುಶ್ರುತ॥ ಶಾರೀರ॥ ಅ ೫ ಸೂ ೨೦)**

ಅಸ್ಥಿಗಳು (೫) ಪ್ರಕಾರವಾಗಿರುತ್ತವೆ ೧ **ಕಪಾಲ** (ಶರಾವಾಕೃತಿ), ೨ **ರುಚಕ** (ಕೀಲಾಕೃತಿ), ೩ **ತರುಣ** (ಕೋಮಲ), ೪ **ವಲಯ** (ದಬ್ಬೆ

ಯಂತೆ ಬಗ್ಗಿದವುಗಳು), ೫ **ನಲಕ** (ನಳಿಗೆಯಂತೆ ಇದ್ದವು), ದೇಹದಲ್ಲಿ ಅಸ್ಥಿಗಳು ಬೇರೆ ಬೇರೆ ಆಕೃತಿ ಸ್ಥಿತಿಯುಳ್ಳವಗಳು ಇರುತ್ತವೆ. ಅವು ಯಾವ ವೆಂದರೆ ಕಪಾಲಾದಿಗಳು. ಆಕೃತಿಸ್ಥಿತಿಸ್ವರೂಪಗಳನ್ನವಲೋಕಿಸಿ ವಿಭಾಗ ದಿಂದ ಆಯಾವ ಹೆಸರುಗಳಿಂದ ವಿವರಿಸಿದ್ದಾರೆ.

(೧) **ಕಪಾಲಾಸ್ಥಿ ಸ್ಥಾನಗಳು, ಜಾನು** (ಮೊಣಕಾಲು ಸಂಧಿ), **ನಿತಂಬ** (ಕಟಿಯ ಹಿಂಭಾಗ, ತಿಕ), **ಅಂಸ** (ಹೆಗಲಿನ ಸ್ಥಾನ), **ಗಂಡ** (ಕಪೋಲಗಳು), **ತಾಲು** (ನಾಲಿಗೆಯ ಮೇಲ್ಭಾಗದ ಭಿತ್ತಿ, ಕೆಳ ಭಾಗ ವನ್ನೂ ಕೆಲವರುಗ್ರಹಿಸುತ್ತಾರೆ), **ಶಂಖ**(ಮೆಲಕು), **ಶಿರಃ**(ತಲೆ), ಈ ಸ್ಥಾನ ಗಳಲ್ಲಿ **ಕಪಾಲ** (ಪರಿಮಾಣದಂತಿರುವ), ಆಕೃತಿಯುಳ್ಳ ಅಸ್ಥಿಗಳು ಇರುತ್ತವೆ

(೨) **ರುಚಕಾಸ್ಥಿಸ್ಥಾನ,** ಹಲ್ಲುಗಳಿಗೆ ರುಚಕಾಸ್ಥಿಗಳೆಂದು ಅನ್ನು ತ್ತಾರೆ. ಹಲ್ಲುಗಳಿರುವ ಸ್ಥಾನಗಳಿಗೆ ರುಚಕಾಸ್ಥಿಸ್ಥಾನಗಳೆಂದು ಹೇಳುತ್ತಾರೆ.

(೩) **ತರುಣಾಸ್ಥಿಸ್ಥಾನಗಳು, ಘ್ರಾಣ** (ಮೂಗು), **ಕರ್ಣ** (ಕಿವಿ), **ಗ್ರೀವಾ** (ಕುತ್ತಿಗೆ), **ಅಕ್ಷಿಕೋಷ** (ಕಣ್ಣಿನ ಸುತ್ತಲಿನ ಪ್ರದೇಶ, ಕಣ್ಣು ಗುಡ್ಡೆಗಳು), ಇವುಗಳಲ್ಲಿ ತರುಣಾಸ್ಥಿ (ಮೃದ್ವಸ್ಥಿ)ಗಳು ಇರುತ್ತವೆ

(೪) **ವಲಯಾಸ್ಥಿಸ್ಥಾನಗಳು, ಪಾರ್ಶ್ವ** (ಎಡಬಲ ಪಕ್ಕಗಳು), **ಪೃಷ್ಠ** (ಬೆನ್ನು), **ಉರಃ** (ವಕ್ಷಸ್ಥಳ, ಎದೆ), ಮೊದಲಾದ ಭಾಗಗಳಲ್ಲಿ ವಲಯ (ದಬ್ಬೆಯಂತೆಮಣಿದ) ಆಕೃತಿಯುಳ್ಳ ಅಸ್ಥಿಗಳು ಇರುತ್ತವೆ. ಉಳಿದ ಅಸ್ಥಿಗಳು ನಲಕ (ಕೊಳವೆ) ಆಕೃತಿಯುಳ್ಳವುಗಳಾಗಿರುತ್ತವೆ. ಅಸ್ಥಿಗಳು ಮುರಿದು ಒಡೆದು ಮುಂತಾಗಿ ಆದಾಗ ಅವುಗಳನ್ನು ಕೂಡಿಸಲು ಸುಲಭವಾ ಗಲೆಂದು ಆಕಾರಗಳನ್ನು ವಿವರಿಸಿದ್ದಾರೆ.

## ನಲಕಾಸ್ಥಿಗಳು

**ಹಸ್ತಪಾದಾಂಗುಲಿತಲೇಕೂರ್ಚೇಷುಮಣಿಬಂಧಯೋಃ ॥**
**ಬಾಹುಜಂಘಾದ್ವಯೇಚಾಪಿಜಾನೀಯಾನ್ನಲಕಾನಿತು ॥**
(ಭೋಜತಂತ್ರೇ)

(೫) **ನಲಕಾಸ್ಥಿಸ್ಥಾನಗಳು,** ಕೈ, ಪಾದಾಂಗುಲಿ ಮತ್ತು ತಲಭಾಗ ಗಳು, ಕೂರ್ಚಗಳು, ಮಣಿಬಂಧಗಳು, ಬಾಹುದ್ವಯಜಂಘಾದ್ವಯಗಳು, ಮೊದಲಾದವುಗಳಲ್ಲಿ ನಳಿಗೆಯಂತೇ ಇರುವ ನಲಕಾಸ್ಥಿಗಳು ಇರುತ್ತವೆ. ನಳಿ ಗೆಯಂತೇ ಇರುವ ಅಸ್ಥಿಗಳನ್ನು ನಲಕಾಸ್ಥಿಗಳೆಂದು ತಿಳಿಯಬೇಕು ಹೀಗೆ ನಾಮವಿಶೇಷದಿಂದ ಅವುಗಳ ರಚನೆಯು ಸಹ ಜ್ಞಾನವಾಗುತ್ತದೆ.

# ಅಸ್ಥಿ ಸಂಖ್ಯೆಯು

**ತ್ರೀಣಿಸಷಷ್ಟಾನ್ಯಸ್ಥಿಶತಾನಿವೇದವಾದಿನೋಭಾಷಂತೇ; ಶಲ್ಯ ತಂತ್ರೇಷುತುತ್ರೀಣ್ಯೇವಶತಾನಿ ॥**

(ಸುಶ್ರುತ॥ ಶಾರೀರ॥ ಅ ೫ ಸೂ. ೧೮)

ಆಯುರ್ವೇದಮತವಾದಿಗಳು (೩೬೦) ಅಸ್ಥಿಗಳೆಂದು ಹೇಳುತ್ತಾರೆ. ಶಲ್ಯತಂತ್ರವಾದ ಸುಶ್ರುತಾದಿತಂತ್ರಗಳಲ್ಲಿ (೩೦೦) ಅಸ್ಥಿಗಳೇ ಇರುತ್ತವೆನ್ನುವ ಮತವಾಗಿರುತ್ತದೆ ಇಲ್ಲಿ ವೇದವಾದಿಗಳ ಮತದಂತೆಯೇ ಅಧಿಕ ಸಂಖ್ಯೆಯೇ ಹೊರತು ವೇದಮತದಿಂದಾಗಿರುವದಿಲ್ಲ. ವೇದಮತವೇ ಇದ್ದರೆ ತದ್ಭಿನ್ನವಾದ ವುಗಳು ಅಪ್ರಾಮಾಣಿಕವಾಗಿರುತ್ತವೆ ಆದ್ದರಿಂದ "**ವೇದವಾದಿನೋಭಾ ಷಂತೆ**" ವೇದವಾದಿಗಳು ಹೇಳುತ್ತಾರೆ ವೇದದಲ್ಲಿ ಹಾಗಿರುವದಿಲ್ಲವೆಂಬ ಅರ್ಥವು.

**ಚರಕ ಮತದಂತೆ ಅಸ್ಥಿಗಳು** (೩೬೦)

**ಸುಶ್ರುತ ವಾಗ್ಭಟ ಶಾರ್ಙ್ಗಧರ ಮತಗಳಂತೆ ಅಸ್ಥಿಗಳು** (೩೦೦)

ಅಸ್ಥಿಗಳ ಸಂಖ್ಯೆಗಳನ್ನು ಒಂದೊಂದು ಗ್ರಂಥದಲ್ಲಿ ಬೇರೆ ಬೇರೆ ಹೇಳಿ ರುವದರಿಂದ, ಯಾವದು ಯೋಗ್ಯವಾದದ್ದು ಎನ್ನುವದು ಗೋಚರಿಸುವದಿಲ್ಲ. ದೇಹದಲ್ಲಿ ಅಸ್ಥಿಗಳು ಎಷ್ಟು ಇರಬೇಕೋ ಅಷ್ಟೇ ಇರುತ್ತವೆ, ಹೀಗಿದ್ದರೂ ಭಿನ್ನಭಿನ್ನ ಮತವಾಗಲು ಕಾರಣವೇನು? ಎಂಬ ಆಕ್ಷೇಪ ಬರುತ್ತದೆ. ಆಯು

ರ್ವೇದ ಶಾರೀರದಲ್ಲಿ ಅಸ್ಥಿಗಣನೆಯೇ ಯೋಗ್ಯವಾಗಿರುವದಿಲ್ಲ ಒಬ್ಬರ ಮತ ಕ್ಕಿಂತ ಮತ್ತೊಬ್ಬರ ಮತ ಭಿನ್ನವಾಗಿರುವದರಿಂದ ನಿಶ್ಚಯವೇ ಇಲ್ಲ ಹೀಗೆಂದು ಆಕ್ಷೇಪಿಸುವವರೂ ಇದ್ದಾರೆ. ಅಸ್ಥಿಸಂಖ್ಯೆಗಳಲ್ಲಿ ಭಿನ್ನಮತವಾಗಲು ಕಾರಣವೇನಂದರೆ, ಪ್ರತಿಯೊಂದು ಹಲ್ಲುಗಳು ಕೂಡ್ರತಕ್ಕ ರಂಧ್ರಗಳೂ ಉಗುರುಗಳನ್ನೂ ಸಹ ಅಸ್ಥಿಗಳಲ್ಲಿ ಸಮಾವೇಶಮಾಡಿದ್ದರಿಂದ, ಸಂಖ್ಯೆಯು ಅಧಿಕವಾಗಿರುತ್ತದೆಯೇ ವಿನಾ ಮತ್ತಾವ ಕಾರಣವೂ ಅನವಸ್ಥಿತಿಯೂ ಕಾಣುವದಿಲ್ಲ. ಚರಕದಲ್ಲಿ ಹೇಳಿರುವ ಅಸ್ಥಿಗಣನೆಯು ಹೆಚ್ಚಾಗಲು ಇದೇ ಕಾರಣವಾಗಿರುತ್ತದೆ ಇದರಿಂದ ಹಾನಿಯೇನೂ ಅನಿಸುವದಿಲ್ಲ ಆರೀತಿ ಗಣ ನೆಯ ವಿಭಾಗಪರಿಚಯಮಾಡಿಕೊಳ್ಳದೇ ಅಧಿಕಸಂಖ್ಯೆಯನ್ನು ಗ್ರಹಿಸುವದು ಅವ್ಯವಸ್ಥೆಯಾಗುತ್ತದೆ. ಆವಾವ ಗ್ರಂಥಗಳಲ್ಲಿ ಹೇಳಿದ ಅಸ್ಥಿ ಸಂಖ್ಯೆಗಳನ್ನು ಅಲ್ಲಿಯ ಗಣನೆಯಂತೆಯೇ ವಿಭಾಗಿಸಿದರೆ ಯಾಕೆ ಸಂಖ್ಯಾ ಹೆಚ್ಚಾಗಿರುತ್ತದೆ ನ್ನುವದು ಸ್ಪಷ್ಟವಾಗುತ್ತದೆಯೇ ಹೊರತು ಇಲ್ಲವಾದರೆ ಆಗಲಾರದು. ಅಸ್ಥಿ ಸಂಖ್ಯೆಯ ನ್ಯೂನ್ಯಾಧಿಕತೆಯು ಆಯುರ್ವೇದದಲ್ಲಿಯ ದೋಷವೆಂದು ಯಾರೂ ತಿಳಿಯಬಾರದು.

## ಅಸ್ಥಿಗಣನೆಯು

**ತೇಷಾಮ್ ವಿಂಶಮಸ್ಥಿ ಶತಂ ಶಾಖಾಸು, ಸಪ್ತದಶೋತ್ತರಂ ಶತಂ ಶ್ರೋಣಿಪಾರ್ಶ್ವಪೃಷ್ಠೋರಃಸು, ಗ್ರೀವಾಂ ಪ್ರತ್ಯೂರ್ಧ್ವಂ ತ್ರಿಷಷ್ಟಿಃ, ಏವಮಸ್ಥ್ನಾಂ ತ್ರೀಣಿಶತಾನಿಪೂರ್ಯಂತೇ ||**

(ಸುಶ್ರುತ|| ಶಾರೀರ|| ಅ. ೫ ಸೂ. ೧೮)

**ಶಾಖಾಗಳಲ್ಲಿ** (ಕಾಲು ಕೈಗಳಲ್ಲಿ) ಒಟ್ಟು ಕೂಡಿ (೧೨೦) ಅಸ್ಥಿಗಳು ಇರುತ್ತವೆ. **ಶ್ರೋಣಿ** (ಕಟಿಪ್ರದೇಶ), **ಪಾರ್ಶ್ವ** (ಎಡಬಲ ಪಕ್ಕಗಳು), **ಪೃಷ್ಠ** (ಬೆನ್ನು), **ಉರಃ** (ಎದೆ), **ಕುತ್ತಿಗೆಯ ಮೇಲ್ಭಾಗಗಳಲ್ಲಿ** (೬೩) ಅಸ್ಥಿಗಳು ಇರುತ್ತವೆ.

**ಶಾಖಾಗಳಲ್ಲಿ** (೧೨೦), **ಶ್ರೋಣ್ಯಾದಿಗಳಲ್ಲಿ** (೧೧೭), **ಕುತ್ತಿಗೆ** ಮೇಲ್ಭಾಗಗಳಲ್ಲಿ (೬೩), ಒಟ್ಟು ಸ್ಥೂಲವಾದ ವಿಭಾಗ ಗಣನೆಯಿಂದ (೩೦೦) ಅಸ್ಥಿಗಳು ಆಗುತ್ತವೆ

# ಪ್ರತ್ಯೇಕವಿಭಾಗಶಃಗಣನೆಯು

**ಏಕೈಕಸ್ಯಾಂತು ಪಾದಾಂಗುಲ್ಯಾಂ ತ್ರೀಣಿ ತ್ರೀಣಿ ತಾನಿಪಂಚ ದಶ, ತಲಕೂರ್ಚ ಗುಲ್ಫಸಂಶ್ರಿತಾನಿದಶ, ಪಾರ್ಷ್ಣ್ಯಾಮೇಕಂ ಜಂಘಾಯಾಂದ್ವೇ, ಜಾನುನ್ಯೇಕಂ, ಏಕಮೂರಾವಿತಿ, ತ್ರಿಂಶ ದೇವಮೇಕಸ್ಮಿನ್ ಸಕ್ಥ್ನಿಭವಂತಿ, ಏತೇನೇತರಸಕ್ಥಿ ಬಾಹೂಚ ವ್ಯಾಖ್ಯಾತೌ || ಶ್ರೋಣ್ಯಾಂಪಂಚ, ತೇಷಾಂ ಗುದಭಗನಿತಂ ಬೇಷುಚತ್ವಾರಿ, ತ್ರಿಕಸಂಸ್ಥಿತಮೇಕಂ ಪಾರ್ಶ್ವೇಷಟ್ ತ್ರಿಂಶ ದೇಕಸ್ಮಿನ್, ದ್ವಿತೀಯೇऽಪ್ಯೇವಂ, ಪೃಷ್ಠೇತ್ರಿಂಶತ್, ಅಷ್ಟಾವುರಿಸಿ, ದ್ವೇಅಂಸಫಲಕೇ || ಗ್ರೀವಾಯಾಂನವ, ಕಂಠನಾಡ್ಯಾಂಚತ್ವಾರಿ, ದ್ವೇಹನ್ವೋಃ, ದಂತಾದ್ವಾತ್ರಿಂಶತ್, ನಾಸಾಯಾಂತ್ರೀಣಿ, ಏಕಂತಾಲುನಿ, ಗಂಡಕರ್ಣ ಶಂಖೇಷ್ವೇಕೈಕಂ ಷಟ್ ಶಿರಸೀತಿ||** (ಸುಶ್ರುತ|| ಶಾರೀರ|| ಅ ೫ ಸೂ ೨೦||)

## ಶಾಖಾದಲ್ಲಿಯ ಅಸ್ಥಿಗಣನೆ

ಪಾದದ ಒಂದೊಂದುಬೆರಳಿನಲ್ಲಿ ಮೂರುಅಸ್ಥಿಗಳಂತೆ, ಒಂದು ಪಾದದ ಬೆರಳುಗಳಲ್ಲಿ (೧೫) ಅಸ್ಥಿಗಳು ಇರುತ್ತವೆ. **ತಲ** (ಪಾದತಲ), **ಕೂರ್ಚ** (ಕುಂಚದಂತಿರುವ ಭಾಗ), **ಗುಲ್ಫ** (ಪಾದದಪಾರ್ಶ್ವಗಳಲ್ಲಿಯ ಗಂಟುಗಳು) ಇವುಗಳಲ್ಲಿ (೧೦) ಅಸ್ಥಿಗಳು ಇರುತ್ತವೆ. **ಪಾರ್ಷ್ಣಿ** (ಪಾದದ ಹಿಂಬದಿಯಲ್ಲಿಯ ಹದಡವು) ಈ ಪ್ರದೇಶದಲ್ಲಿ (೧) ಅಸ್ಥಿಯು. **ಜಂಘಾ**(ಮೊಣಕಾಲು) ಪ್ರದೇಶದಲ್ಲಿ (೨) ಅಸ್ಥಿಗಳು ಇರುತ್ತವೆ **ಜಾನು** (ಮೊಣಕಾಲಿನ ಮೇಲಿನ ಸಂಧಿ) ಪ್ರದೇಶದಲ್ಲಿ (೧) ಅಸ್ಥಿಯು. **ಊರು** (ತೊಡೆ) ಪ್ರದೇಶದಲ್ಲಿ (೧) ಅಸ್ಥಿಯು. ಹೀಗೆ ಒಂದು ಕಾಲಿನಲ್ಲಿ (೩೦) ಅಸ್ಥಿಗಳು ಇರುತ್ತವೆ. ಇದ

ರಂತೆಯೇ ಮತ್ತೊಂದು ಕಾಲು, ಎರಡು ಬಾಹುಗಳಲ್ಲಿಯೂ ಇರುತ್ತವೆಂದು ತಿಳಿಯಬೇಕು ಒಟ್ಟು ಕೂಡಿ ಶಾಖಾಗಳಲ್ಲಿ (೧೨೦) ಅಸ್ಥಿಗಳಾಗುತ್ತವೆ

**ತಲಕೂರ್ಚ ಗುಲ್ಫಸಂಶ್ರಿತಾನಿದಶ, ತೇಷುಪಾದತಲೇ ಪಂಚ ಶಲಾಕಾಃ, ತತ್ಪ್ರತಿಬಂಧನಮೇಕಾಸ್ಥಿ, ದ್ವೇದ್ವೇ ಕೂರ್ಚ ಗುಲ್ಫಯೋಃ॥** (ಸುಶ್ರುತ ಟೀಕಾಯಾಂ)

ತಲಕೂರ್ಚಾದಿಗಳಲ್ಲಿ ಹತ್ತು ಅಸ್ಥಿಗಳೆಂದು ಹೇಳಿದ್ದಾರೆ ಅವುಗಳ ಸ್ಥಾನ ವಿವರಣೆಯು:— **ಪಾದತಲ** (ಪಾದದ ಕೆಳಭಾಗ) ದಲ್ಲಿ ದಂಟೆನಂತಿರುವ (೫) ಅಸ್ಥಿಗಳಿರುತ್ತವೆ ಶಲಾಕಾದಂತಿರುವಅಸ್ಥಿಗಳಬಂಧನಕ್ಕಾಗಿ (೧) ಅಸ್ಥಿಯು. **ಕೂರ್ಚ, ಗುಲ್ಫ** (ಪಾದದ ಪಾರ್ಶ್ವಗಳಲ್ಲಿಯ ಗಂಟುಗಳು), ಇವುಗಳಲ್ಲಿ ಒಂದೊಂದರಲ್ಲಿ ಎರಡೆರಡರಂತೆ (೪) ಅಸ್ಥಿಗಳು ಒಟ್ಟು ತಲ ಕೂರ್ಚ ಗುಲ್ಫಗಳಲ್ಲಿ (೧೦) ಅಸ್ಥಿಗಳು ಇರುತ್ತವೆ.

**ಕಾಲಿನ ಅಸ್ಥಿಗಣನೆಯು:**— ಬೆರಳುಗಳಲ್ಲಿ (೧೫), ತಲ ಕೂರ್ಚಾದಿಗಳಲ್ಲಿ (೧೦), ಪಾರ್ಷ್ಣಿಯಲ್ಲಿ (೧), ಜಂಘಾದಲ್ಲಿ (೨), ಜಾನುದಲ್ಲಿ (೧), ತೊಡೆಯಲ್ಲಿ (೧), ಒಟ್ಟು (೩೦) ಅಸ್ಥಿಗಳು ಒಂದು ಕಾಲಿನಲ್ಲಿ (ಸಕ್ಥಿ), ಇರುತ್ತವೆ. ಇದರಂತೇ ಎರಡೂ ಕಾಲು ಕೈಗಳಲ್ಲಿ ಕೂಡಿ ಒಟ್ಟು (೧೨೦) ಅಸ್ಥಿಗಳು ಇರುತ್ತವೆ. ಹಿಂದೆ ಸ್ಥೂಲ ರೀತಿಯ ಗಣನೆಯಲ್ಲಿ "**ಶಾಖಾಗಳಲ್ಲಿ**" ಹೇಳಿರುವ ಸಂಖ್ಯೆಯೇ ಇದಾಗಿರುತ್ತದೆ

## ಶ್ರೋಣ್ಯಾದಿ ಅಸ್ಥಿಗಣನೆಯು

**ಶ್ರೋಣಿ** (ಕಟಿ) ಅಸ್ಥಿಗಳು (೫) ಇರುತ್ತವೆ. ಅವುಗಳಲ್ಲಿ **ಗುದ** (ಮಲ ವಿಸರ್ಜನಸ್ಥಾನ) ಪ್ರದೇಶದಲ್ಲಿಯ ಅಸ್ಥಿ (೧), **ಭಗ** (ಸ್ತ್ರೀ ಜನನೇಂದ್ರಿಯ ಸ್ಥಾನ) ಪ್ರದೇಶದಲ್ಲಿಯ ಅಸ್ಥಿ (೧), **ನಿತಂಬ** (ಠಿಕ, ಕಟಿಯ ಹಿಂಭಾಗ) ಸ್ಥಾನಗಳಲ್ಲಿಯ ಅಸ್ಥಿಗಳು (೨), **ತ್ರಿಕ** (ಕಾಲುಗಳ ಅಸ್ಥಿ ಪೃಷ್ಠಾಸ್ಥಿಗಳು ಕೂಡುವ ಸ್ಥಳ)ದಲ್ಲಿಯ ಅಸ್ಥಿ (೧), ಒಟ್ಟು ಶ್ರೋಣೀ (ಕಟಿ) ಪ್ರದೇಶಗಳಲ್ಲಿ (೫) ಅಸ್ಥಿಗಳು ಇರುತ್ತವೆ.

**ಪಾರ್ಶ್ವ** (ಪಕ್ಕ, ಎಡಬಲ ಪಾರ್ಶ್ವಗಳು) ಒಂದರಲ್ಲಿ (೩೬) ಅಸ್ಥಿಗಳು ಇರುತ್ತವೆ ಅವುಗಳ ಪ್ರತ್ಯೇಕ ವಿವರಣೆಯು ಇಂತಿರುತ್ತದೆ:—

**ಪ್ರತಿಪಾರ್ಶ್ವಂ ದ್ವಾದಶಪರ್ಶುಕಾಃ, ದ್ವಾದಶಸ್ಥಾಲಕಾನಿ, ದ್ವಾದಶಸ್ಥಾಲಕಾರ್ಬುದಾನೀತಿಮಿಲಿತ್ವಾ ಷಟ್‌ತ್ರಿಂಶದಸ್ಥೀನಿಜ್ಞೇಯಾನಿ ॥** (ಸುಶ್ರುತ ಟೀಕಾಯಾಂ)

ಪ್ರತಿಯೊಂದು ಪಕ್ಕದಲ್ಲಿ (೧೨) **ಪರ್ಶುಕಾಃ** (ಪಾರ್ಶ್ವಾಸ್ಥಿಗಳು) ಇರುತ್ತವೆ **ಸ್ಥಾಲಕಾನಿ** (ಪಾರ್ಶ್ವಾಸ್ಥಿಗಳ ಮೂಲದಲ್ಲಿರುವ ಅಸ್ಥಿಗಳು) (೧೨) ಇರುತ್ತವೆ. **ಸ್ಥಾಲಕಾರ್ಬುದಾನಿ** (ಪರ್ಶುಕಾಸ್ಥಿಗಳ ಮಧ್ಯ ಭಾಗದಲ್ಲಿರುವ ಅರ್ಬುದಾಕಾರ ಅಸ್ಥಿಗಳು) ಇವುಗಳು (೧೨) ಇರುತ್ತವೆ.

**ಪರ್ಶುಕಾ** (೧೨), **ಸ್ಥಾಲಕಾನಿ** (೧೨), **ಸ್ಥಾಲಕಾರ್ಬುದಾನಿ** (೧೨), ಒಟ್ಟು ಒಂದು ಪಾರ್ಶ್ವದಲ್ಲಿ (೩೬) ಅಸ್ಥಿಗಳು ಇರುತ್ತವೆ. ಎರಡೂ ಪಾರ್ಶ್ವಗಳು ಕೂಡಿ (೭೨) ಇರುತ್ತವೆ

**ಪೃಷ್ಠ** (ಬೆನ್ನುಹುರಿ, ಕಶೇರುಕಾ, ಪೃಷ್ಠಾಸ್ಥಿಗಳೆಂಬ ಬೇರೆ ಬೇರೆ ಹೆಸರುಗಳಿರುತ್ತವೆ ) ಈ ಸ್ಥಾನದಲ್ಲಿ (೩೦) ಅಸ್ಥಿಗಳು ಇರುತ್ತವೆ

**ಉರಃ** (ಎದೆ, ವಕ್ಷಃಸ್ಥಳ) ಸ್ಥಾನದಲ್ಲಿ (೮) ಅಸ್ಥಿಗಳು ಇರುತ್ತವೆ

**ಅಷ್ಟಾವುರಸೀತಿ, ಉರಃ ಫಲಕೇಷಟ್, ಅಕ್ಷಸಂಜ್ಞೆದ್ವೇ, ಇತಿ ಮಿಲಿತ್ವಾಽಷ್ಟಾವುರಸ್ಯಸ್ಥೀನಿಜ್ಞೇಯಾನಿ॥**
(ಸುಶ್ರುತ ಟೀಕಾಯಾಂ)

**ವಕ್ಷಸ್ಥಳದಲ್ಲಿ** [೮] ಅಸ್ಥಿಗಳನ್ನು ಹೇಳಿದ್ದಾರೆ. ಅವುಗಳನ್ನು ಪುನಃ ವಿಭಾಗಶಃ ವಿವರಿಸಿ ಹೇಳುತ್ತಾರೆ.

**ಉರಃಫಲಕಾಸ್ಥಿ** [ಎದೆಯಲ್ಲಿಯ ದಬ್ಬೆಗಳಂತಿರುವ ಅಸ್ಥಿಗಳು] ಒಟ್ಟು [೬] ಇರುತ್ತವೆ.

**ಅಕ್ಷಸಂಜ್ಞೇ** [ಜತ್ರುಸಂಧಿಯ ಸಂತರದ ಕೋಲಿನಂತಿರುವ ಎಲುಬುಗಳು] ಅಕ್ಷವೆಂಬ ಹೆಸರುಳ್ಳ ಅಸ್ಥಿಗಳು [೨] ಇರುತ್ತವೆ. ಒಟ್ಟು ವಕ್ಷಃಸ್ಥಳದಲ್ಲಿ [೮] ಅಸ್ಥಿಗಳು ಇರುತ್ತವೆ

**ಅಂಸಫಲಕ** [ಹೆಗಲಿನಲ್ಲಿಯ ಹಲಿಗೆಯಂಥ ಎಲುಬುಗಳು] ಸ್ಥಾನಗಳಲ್ಲಿಯ ಅಸ್ಥಿಗಳು [೨], **ಶ್ರೋಣಿಯಲ್ಲಿ [೫], ಪಾರ್ಶ್ವಗಳಲ್ಲಿ [೭೨], ಪೃಷ್ಠದಲ್ಲಿ [೩೦], ಎದೆಯಭಾಗದಲ್ಲಿ [೮], ಅಂಸಫಲಕಗಳಲ್ಲಿ [೨],** ಒಟ್ಟು ಶ್ರೋಣ್ಯಾದಿಗಳಲ್ಲಿ [೧೧೭] ಅಸ್ಥಿಗಳು ಇರುತ್ತವೆ.

## ಗ್ರೀವಾರಭ್ಯ ಮೇಲ್ಭಾಗದ ಅಸ್ಥಿಗಳು

**ಗ್ರೀವಾ** (ಕುತ್ತಿಗೆ) ಸ್ಥಾನಗಳಲ್ಲಿ (೯) ಅಸ್ಥಿಗಳು ಇರುತ್ತವೆ **ಕಂಠನಾಡೀ** (ಕುತ್ತಿಗೆಯ ನಳಿಗೆ) ಸ್ಥಾನಗಳಲ್ಲಿ (೪) ಅಸ್ಥಿಗಳು ಇರುತ್ತವೆ. **ಹಸು** (ಕಪೋಲಗಳ ಕೆಳಭಾಗಗಳು) ಇವುಗಳಲ್ಲಿ ಅಸ್ಥಿಗಳು (೨), **ದಂತ** (ಹಲ್ಲುಗಳು) ಇವುಗಳು (೩೨) ಇರುತ್ತವೆ **ನಾಸಾ** (ಮೂಗು) ಸ್ಥಾನದಲ್ಲಿ ಅಸ್ಥಿಗಳು (೩) ಇರುತ್ತವೆ. **ತಾಲು** (ನಾಲಿಗೆಯ ಮೇಲ್ಭಾಗ) ಸ್ಥಾನದಲ್ಲಿ (೧), **ಗಂಡ** (ಕಪೋಲ) ಸ್ಥಾನಗಳಲ್ಲಿ (೨), **ಕರ್ಣ** (ಕಿವಿ) ಸ್ಥಾನಗಳಲ್ಲಿ (೨), **ಶಂಖ** (ಮೆಲಕು) ಸ್ಥಾನಗಳಲ್ಲಿ (೨) ಅಸ್ಥಿಗಳಿರುತ್ತವೆ. **ಶಿರಃ** (ತಲೆ) ಸ್ಥಾನದಲ್ಲಿ (೬) ಇರುತ್ತವೆ.

**ಗ್ರೀವಾದಲ್ಲಿ** (೯), **ಕಂಠನಾಡಿಯಲ್ಲಿ** (೪), **ಹನ್ವಸ್ಥಿ** (೨), **ದಂತಗಳು** (೩೨), **ನಾಸಾಸ್ಥಿ** (೩), **ತಾಲ್ವಸ್ಥಿ** (೧), **ಗಂಡೌ** (೨), **ಕರ್ಣೌ** (೨), **ಶಂಖೌ** (೨), **ಶಿರೋಽಸ್ಥಿಗಳು** (೬) ಇರುತ್ತವೆ ಒಟ್ಟು ಗ್ರೀವಾರಭ್ಯ ಮೇಲ್ಭಾಗಗಳಲ್ಲಿ (೬೩) ಅಸ್ಥಿಗಳು ಇರುತ್ತವೆ.

## ವಿಶೇಷ

ಇವೆಲ್ಲ ಪ್ರತ್ಯೇಕ ವಿಭಾಗ ಸ್ಥಾನಗಳಲ್ಲಿಯ ಅಸ್ಥಿಗಳು ಕೂಡಿದರೆ (೩೦೦) ಅಸ್ಥಿಗಳಾಗುತ್ತವೆ. ಅವುಗಳ ಸ್ಥೂಲ ವಿಭಾಗ ಸಂಖ್ಯೆಗಳನ್ನು

ಮೊದಲೇ ವಿವರಿಸಿರುತ್ತದೆ ಚರಕಾದಿಗಳಲ್ಲಿ ಭಿನ್ನಭಿನ್ನ ರೀತಿಯಿಂದ ಗಣನೆಯನ್ನು ಮಾಡಿದ್ದಾರೆ. ಅವುಗಳನ್ನೂ ಕೂಡಿಸಿ ಬರೆದರೆ ಅಭ್ಯಾಸಿಗಳಿಗೆ ಅನವಶ್ಯಕ ಗೊಂದಲವಾಗಬಹುದೆಂದು ಅವುಗಳನ್ನು ಸಮಾವೇಶಮಾಡಿ ವಿವರಿಸಿಲ್ಲ. ವಿಶೇಷ ಅವಲೋಕನೇ ಮಾಡುವವರು ಚರಕದಲ್ಲಿ ನೋಡಿರಿ. (ಚರಕ|| ಶಾರೀ೮|| ಅ ೭ ಸೂ ೬) ಇಲ್ಲಿ ಭಿನ್ನ ರೀತಿಯಿಂದ ಗಣನೆಯನ್ನು ಮಾಡಿದ್ದಾರೆ.

## (೫೫) ಸಂಧಿವಿವರಣೆಯು

ದೇಹದಲ್ಲಿರುವ ಅಸ್ಥಿಗಳು ಮಡುಚಲಿಕ್ಕೆ ಬರುವಂತೆ ಅಲ್ಲಲ್ಲಿ ಸಂಧಿಗಳಿರುತ್ತವೆ. ಒಂದು ಎಲುಬಿನ ರಂಧ್ರದಲ್ಲಿ ಮತ್ತೊಂದೆಲುಬು ಕೂಡಿಕೊಂಡಿರುತ್ತದೆ. ಎಲಬುಗಳು ಕೂಡಿದ ಸಂಧಿಯ ರಂಧ್ರದಲ್ಲಿ ಮುಂದಿನ ಅಸ್ಥಿಯು ದುಂಡಾದ (ಗುಂಡಿನಂತಿರುವ) ಕೀಲು ಇರುತ್ತದೆ ಹೀಗೆ ದುಂಡಗಿರುವ (ವರ್ತುಲ) ಕೀಲು ಇರುವದರಿಂದ, ಆಕುಂಚನ ಪ್ರಸಾರಣಗಳಲ್ಲಿ ಚನ್ನಾಗಿ ಚಲನವಲನೆಯಾಗುತ್ತದೆ. ದುಂಡಗಿನ ಕೀಲುಳ್ಳ ಚೇಷ್ಟಾವಂತ (ಚಲನವಲನೆಯುಳ್ಳ) ಸಂಧಿಗಳಲ್ಲಿ ಚಲಿಸಲು ಅನುಕೂಲವಾಗುವಂತೆ ಒಳಗೆ ಕಫವು ಇರುತ್ತದೆ ಹೇಗೆ ರಥಚಕ್ರ ಪಿಂಡಿಕೆಯ ರಂಧ್ರಗಳಲ್ಲಿ ಎಣ್ಣೆಯನ್ನು ಹಾಕಿದರೆ, ರಂಧ್ರಗಳಲ್ಲಿಯು ಅಚ್ಚಿನ ದಂಡವು ಚನ್ನಾಗಿ ಚಲಿಸುತ್ತದೆಯೋ, ಅದರಂತೇ ಸಂಧಿಗಳಲ್ಲಿ ಕಫವು ಇರುವದರಿಂದ ಸಂಧಿ ರಂಧ್ರಗಳಲ್ಲಿಯು ಕೀಲುಗಳು (ಕೀಲಾಸ್ಥಿ) ಚನ್ನಾಗಿ ಚಲಿಸುತ್ತವೆ. ಸಂಧಿಗಳಲ್ಲಿ ಎರಡು ವಿಭಾಗಗಳನ್ನು ಮಾಡಿದ್ದಾರೆ (೧) ಚಲಸಂಧಿಗಳು (ಚೇಷ್ಟಾವಂತಃ), (೨) ಸ್ಥಿರ ಸಂಧಿಗಳು (ಚಲನೆಯಿಲ್ಲದವುಗಳು), ಕೆಲವರು ಮೂರು ವಿಭಾಗಗಳೆಂದು ಅನ್ನುತ್ತಾರೆ. (೧) ಸ್ಥಿರಸಂಧಿ, (೨) ಬಹುಚಲ, (೩) ಅಲ್ಪಚಲಗಳೆಂದು ಮೂರು ವಿಧವಾಗಿ ವಿಭಾಗಿಸುತ್ತಾರೆ ಇದಾದರೂ ಸಮಂಜಸವಾದದ್ದೇ ಇರುತ್ತದೆ. ಎರಡು ಮೂರು ಅಸ್ಥಿಗಳು ಕೂಡಿದ ಸಂಧಿಗಳು ಸಹ ಇರುತ್ತವೆ. ದೇಹದಲ್ಲಿ ಅಖಂಡವಾದ ಅಸ್ಥಿಗಳಿದ್ದರೆ ಮನುಷ್ಯನಿಗೆ ಮಣಿಯಲಿಕ್ಕೂ ಆಕುಂಚನ ಪ್ರಸಾರಣ, ಗಮನ, ಚಲನವಲನಕ್ಕೂ, ಸುಲಭವಾಗುತ್ತಿದ್ದಿಲ್ಲ. ಒಂದು ವೇಳೆ ಚಲನಾದಿಗಳು ಸಾಧ್ಯವಾಗುತ್ತಿದ್ದಿಲ್ಲವೆಂದರೂ ಅಡ್ಡಿಯಿಲ್ಲ

ಅಸ್ಥಿಗಳು ಅಖಂಡವಿರದೇ ಸಂಧಿಯುತವಾಗಿರುವದರಿಂದ, ದೇಹದ ಕಾರ್ಯ ಕ್ರಮಗಳು ಬಹಳೇ ಸೌಕರ್ಯದಿಂದ ನಡೆಯಲು ಅನುಕೂಲವಾಗುತ್ತವೆ. ಸಂಧಿಮುಕ್ತವಾಗುವದು, ಮುರಿಯುವದು, ಸರಿಯುವದು, ಮೊದಲಾದ ಅಪ ಘಾತಗಳು ಸಂಭವಿಸುತ್ತವೆ. ಆಗ ಅವುಗಳನ್ನು ಹೇಗೆಸರಿ ಕೂಡಿಸಬೇಕೆಂಬು ವದನ್ನು ತಿಳಿಸಲಿಕ್ಕಾಗಿ ಸಂಧಿಗಳ ಸ್ಥಿತಿ ಆಕಾರಗಳನ್ನು ಹೇಳುತ್ತಾರೆ. ಮತ್ತು ಯಾವ ಯಾವ ಸ್ಥಳಗಳಲ್ಲಿ ಯಾವರೀತಿ ಸಂಧಿಗಳಿರುತ್ತವೆಂದು ಹೇಳುತ್ತಾರೆ ಇದರಂತೇ ಚಲಸ್ಥಿರಸಂಧಿಗಳ ವಿವರಣೆಯನ್ನು ಚಲಸಂಧಿಗಳಲ್ಲಿ ಮುಕ್ತಾದಿ ಗಳು ಸಂಭವಿಸಿದರೆ, ಪುನಃ ಚಲಿಸಲಿಕ್ಕೆ ಅನುಕೂಲವಾಗುವಂತೆ ಕೂಡಿಸು ವಂತೆಯೂ ಸ್ಥಿರ ಸಂಧಿಗಳಲ್ಲಿ ಚಲಿಸಿದಂತೆ ಯೋಜಿಸಲೂ ಸುಲಭವಾಗುವದ ಕ್ಕಾಗಿ ಹೇಳಿದ್ದಾರೆ ಸಂಧಿಗಳು (೨೧೦) ಇರುತ್ತವೆ

## ಅಸ್ಥಿಸಂಧಿಪ್ರಕಾರಗಳು

**ಸಂಧಯಸ್ತು ದ್ವಿವಿಧಾಶ್ಚೇಷ್ಟಾವಂತಃ ಸ್ಥಿರಾಶ್ಚ ||**

(ಸುಶ್ರುತ|| ಶಾರೀರ|| ಅ ೫ ಸೂ ೨೪)

**ಚೇಷ್ಟಾವಂತಃ ಸಂಧಯೋದ್ವಿವಿಧಾಃ ಬಹುಚೇಷ್ಟಾ ಅಲ್ಪ ಚೇಷ್ಟಾಶ್ಚೇತಿ ||** (ತಂತ್ರಾಂತರೆ)

ಸಂಧಿಗಳು ಎರಡು ಪ್ರಕಾರದವುಗಳು ಇರುತ್ತವೆ. (೧) ಚಲನವಲನೆ ಯಾಗುತ್ತಿರುವ (ಚಲ, ಚೇಷ್ಟಾವಂತ) ಸಂಧಿಗಳು, (೨) ಸ್ಥಿರ (ಚಲನೆ ಇಲ್ಲದಿರುವ) ಸಂಧಿಗಳು, ಹೀಗೆ ಎರಡು ವಿಧ ಸಂಧಿಗಳೆಂದು ಸುಶ್ರುತದಲ್ಲಿಯು ಮತವಾಗಿರುತ್ತದೆ

ತಂತ್ರಾಂತರದಲ್ಲಿ ಚಲಸಂಧಿಗಳು ಎರಡು ವಿಧವಾಗಿರುತ್ತವೆಂದು ಹೇಳಿದ್ದಾರೆ. (೧) ಬಹು ಚಲಸಂಧಿಗಳು, (೨) ಅಲ್ಪ ಚಲಸಂಧಿಗಳು. ಹೀಗೆ ಚಲಸಂಧಿಯಲ್ಲಿಯ ಭೇದಗಳನ್ನು ಗ್ರಹಿಸಿದ್ದಾರೆ. ಅನಂತರ ಸ್ಥಿರ ಸಂಧಿ (೧), ಒಟ್ಟು (೩) ಸಂಧಿಗಳನ್ನು ಹೇಳಿದ್ದಾರೆ.

## ಸ್ಥಿರಚಲಸಂಧಿಯುಸ್ಥಾನಗಳು

**ಶಾಖಾಸು ಹನ್ವೋಃ ಕಟ್ಯಾಂಚ ಚೇಷ್ಟಾವಂತಸ್ತು ಸಂಧಯಃ॥**
**ಶೇಷಾಸ್ತು ಸಂಧಯಃ ಸರ್ವೇ ವಿಜ್ಞೇಯಾಹಿಸ್ಥಿರಾಬುಧೈಃ ॥**
(ಸುಶ್ರುತ॥ ಶಾರೀರ॥ ಅ ೫ ಶ್ಲೋ ೨೫)

ಕೈ ಮತ್ತು ಕಾಲುಗಳಲ್ಲಿರುವ ಸಂಧಿಗಳು, ಹನುಗಳಲ್ಲಿ, **ಕಟಿ** ಪ್ರದೇಶ, ಇವುಗಳಲ್ಲಿ ಚಲಸಂಧಿಗಳು ಇರುತ್ತವೆ "ಚ" ಎಂದು ಸಮುಚ್ಚಯದಿಂದ ಹೇಳಿರುವದರಿಂದ ಗ್ರೀವಾ ಪ್ರದೇಶದಲ್ಲಿಯೂ ಚಲಸಂಧಿಗಳಿರುತ್ತವೆಂದು ತಿಳಿಯಬೇಕು. ಚಲಸಂಧಿಗಳ ಹೊರತಾಗಿ ಉಳಿದ ಸಂಧಿಗಳಲ್ಲವೂ ಸ್ಥಿರಸಂಧಿಗಳೆಂದು ತಿಳಿಯಬೇಕು

## ಬಹುಚಲ ಅಲ್ಪಚಲ ಸಂಧಿಗಳು

**ತತ್ರಶಾಖಾಸು ಅಧೋಹನುಕೋಟ್ಯೋಶ್ಚ ಬಹುಚೇಷ್ಟಾಃ, ಪೃಷ್ಠವಂಶಾದಿಷ್ವಲ್ಪಚೇಷ್ಟಾಃ, ಅನ್ಯತ್ರಪುನರಚೇಷ್ಟಾಃ ॥**
(ತಂತ್ರಾಂತ್ರರೆ)

ಕೈಕಾಲುಗಳಲ್ಲಿಯ ಸಂಧಿಗಳು, **ಹನು** ( ಕಪೋಲಗಳ ಕೆಳಭಾಗ ) ಗಳು ಕೂಡುವ ಸಂಧಿಗಳು, ಬಹುಚೇಷ್ಟಾವಂತ (ಹೆಚ್ಚು **ಚಲನವಲನೆ** ಯುಳ್ಳವುಗಳು) ಆಗಿರುತ್ತವೆ

**ಪೃಷ್ಠವಂಶಾದಿಗಳಲ್ಲಿ** (ಬೆನ್ನಹುರಿ, ಕಶೇರುಕಾ ಅಸ್ಥಿಗಳಲ್ಲಿ) ಅಲ್ಪ ಚೇಷ್ಟಾ ಸಂಧಿಗಳು ಇರುತ್ತವೆ ಉಳಿದ ಸಂಧಿಗಳು ಸ್ಥಿರಸಂಧಿಗಳೆಂದು ತಿಳಿಯಬೇಕು

## ಸಂಧಿಗಳಲ್ಲಿಯ ಭೇದಗಳು

**ತಏತೇಸಂಧಯೋಽಷ್ಟವಿಧಾಃ, ಕೋರೋಲೂಖಲಸಾಮುದ್ಗ ಪ್ರತರ ತುನ್ನಸೇವನೀ ವಾಯಸತುಂಡ ಮಂಡಲ ಶಂಖಾವರ್ತಾಃ॥**
[ಸುಶ್ರುತ॥ ಶಾರೀರ॥ ಅ. ೫ ಸೂ ೨೭]

ಅಸ್ಥಿಸಂಧಿಗಳು ಬೇರೆಬೇರೆ ಆಕೃತಿವಿಶಿಷ್ಟವಾಗಿರುವದರಿಂದ, ಅವುಗಳ ಆಕಾರಗಳನ್ನು ಹೇಳುತ್ತಾರೆ. ಮತ್ತು ಆಕಾರಗಳ ಭೇದಗಳಿಂದ [೮] ವಿಧವಾದ ಸಂಧಿಗಳಿರುತ್ತವೆಯೆಂದು ಹೇಳಿದ್ದಾರೆ. ಆಯಾಯ ವಸ್ತುಗಳಿಗೆ ಹೋಲಿಸಿಯೇ ಸಂಧಿಗಳ ಹೆಸರುಗಳನ್ನಿಟ್ಟಿದ್ದಾರೆ. ಇದರಿಂದ ಹೆಸರುಗಳಿಂದಲೇ ಅಸ್ಥಿಸಂಧಿಗಳ ಆಕಾರಗಳು ತಿಳಿಯುವಂತೇ ಇರುತ್ತವೆ. ಆದ್ದರಿಂದ ಸಂಧಿಗಳ ಹೆಸರುಗಳನ್ನು ತಿಳಿದುಕೊಂಡರೆ ಆಕೃತಿಯ ಜ್ಞಾನವಾಗುತ್ತದೆ.

**(೧)ಕೋರ, (೨) ಉಲೂಖಲ, (೩) ಸಾಮುದ್ಗ, (೪) ಪ್ರತರ, (೫)ತುನ್ನಸೇವನೀ, (೬)ವಾಯಸತುಂಡ, (೭)ಮಂಡಲ, (೮)ಶಂಖಾವರ್ತ**ಗಳೆಂಬ ಎಂಟು ಪ್ರಕಾರವಾದ ಅಸ್ಥಿಸಂಧಿಗಳು ಇರುತ್ತವೆ

**[೧] ಕೋರ** [ತೆಗ್ಗು, ಹೂವಿನ ಮೊಗ್ಗೆ] ಇವುಗಳಂತೆ ಇರುವ ಸಂಧಿಗಳು ಅಸ್ಥಿಗಳು ಕೂಡುವ ಪೊಳ್ಳು ಭಾಗವು ಬಹಳ ತಗ್ಗುಳ್ಳದ್ದಾಗಿರುತ್ತದೆ ಅಥವಾ ಹೂವಿನ ಮುಗ್ಗೆಯಂತೆ ಇರುತ್ತದೆ. ಇಂಥ ಸಂಧಿಗಳಿಗೆ "ಕೋರ" ಎಂದು ಅನ್ನುತ್ತಾರೆ

**[೨] ಉಲೂಖಲ** [ವಳ್ಳು, ವರಳು] ಇದರಂತೇ ಇರುವ ಸಂಧಿಗಳಿಗೆ "ಉಲೂಖಲ" ಸಂಧಿಗಳೆಂದು ಹೇಳುತ್ತಾರೆ.

**[೩] ಸಾಮುದ್ಗ** [ಸಂಪುಟ] ಆಕಾರದಂತೆ ಇರುವ ಅಸ್ಥಿಸಂಧಿಗಳು. ಇವುಗಳಿಗೆ "ಸಾಮುದ್ಗ"ವೆಂದು ಹೇಳುತ್ತಾರೆ

**[೪] ಪ್ರತರ** [ಸಮತಲವುಳ್ಳ] ಅಸ್ಥಿಗಳ ಸಂಧಿಗಳು ಒಂದಕ್ಕೊಂದು ಹತ್ತಿಕೊಂಡು ಸ್ವಲ್ಪೇ ಚಲನೆಯುಳ್ಳವುಗಳಿರುತ್ತವೆ. ಪ್ರತರವೆಂದರೆ ಸಮಪ್ರದೇಶ, ಇದರಂತೇ ಇರುವ ಅಸ್ಥಿಗಳು ಕೂಡುವ ಸಂಧಿಗಳಿಗೆ "ಪ್ರತರ"ವೆಂದು ಹೇಳುತ್ತಾರೆ.

**[೫[ ತುನ್ನಸೇವನೀ** [ಹೊಲಿಗೆಯಂತೇ ಇರುವ] ಅಸ್ಥಿಸಂಧಿಗಳು ಎರಡು ವಸ್ತ್ರಗಳನ್ನು ಕೂಡಿಸಿ ಹೊಲಿದರೆ, ಹೇಗೆ ಹೊಲಿದ ಸ್ಥಳದಲ್ಲಿ ಸಂಧಿ

ಯುಕ್ತವಾಗುತ್ತದೆಯೋ, ಆದರಂತಿರುವ ಸಂಧಿಗಳಿಗೆ "ತುನ್ನಸೇವನೀ" ಎಂದು ಅನ್ನುತ್ತಾರೆ

[೬] **ವಾಯಸತುಂಡ** [ಕಾಗೆಯಬಾಯಿ, ಚುಂಚು] ಇದರಂತೆಯೇ ಇರುವ ಅಸ್ಥಿಸಂಧಿಗಳು. ಇವುಗಳಿಗೆ "ವಾಯಸತುಂಡ'ವೆಂದು ಹೇಳುತ್ತಾರೆ

[೭] **ಮಂಡಲ** [ವರ್ತುಲ, ದುಂಡಾಗಿರುವ] ಅಸ್ಥಿಸಂಧಿಗಳು. ಇವುಗಳಿಗೆ "ಮಂಡಲ"ವೆಂದು ಹೇಳುತ್ತಾರೆ

[೮] **ಶಂಖಾವರ್ತ** [ಶಂಖದ ಮುರಿಗೆ] ಇರುವಂತೇ ಇರುವ ಅಸ್ಥಿಸಂಧಿಗಳು. ಇವುಗಳು ಒಳಗೆ ಶಂಖದ ಆವರ್ತದಂತೆ ಮುರಿಗೆಯಿಂದ ಕೂಡಿರುತ್ತವೆ ಆದ್ದರಿಂದ ಇವುಗಳಿಗೆ "ಶಂಖಾವರ್ತ"ವೆಂಬ ಹೆಸರು

## ಕೋರಾದಿಸಂಧಿಗಳಸ್ಥಾನ

**ತೇಷಾಮಂಗುಲಿಮಣಿಬಂಧ ಗುಲ್ಫ ಜಾನುಕೂರ್ಪರೇಷುಕೋರಾಃಸಂಧಯಃ॥ ಕಕ್ಷಾವಂಕ್ಷಣದಶನೇಷೂಲೂಖಲಾಃ॥ ಅಂಸಪೀಠಗುದಭಗನಿತಂಬೇಷುಸಾಮುದ್ಗಾಃ॥ ಗ್ರೀವಾಪೃಷ್ಠವಂಶಯೋಃ ಪ್ರತರಾಃ॥ ಶಿರಃ ಕಟಿಕಪಾಲೇಷುತುನ್ನಸೇವನ್ಯಃ॥ ಹನ್ವೋರುಭಯತಸ್ತುವಾಯಸತುಂಡಾಃ॥ ಕಂಠಹೃದಯನೇತ್ರಕ್ಲೋಮನಾಡೀಷುಮಂಡಲಾಃ॥ ಶ್ರೋತ್ರಶೃಂಗಾಟಕೇಷುಶಂಖಾವರ್ತಾಃ॥ ತೇಷಾಂನಾಮಭಿರೇವಾಕೃತಯಃ ಪ್ರಾಯೇಣವ್ಯಾಖ್ಯಾತಾಃ ॥** [ಸುಶ್ರುತ॥ ಶಾರೀರ॥ ಅ ೫ ಸೂ. ೨೭]

ಅಸ್ಥಿ ಸಂಧಿಗಳಲ್ಲಿಯ ಕೋರಾದಿ ಭೇದಗಳನ್ನು ಹೇಳಿ, ಅವುಗಳಿರುವ ಸ್ಥಾನಗಳನ್ನು ಹೇಳುತ್ತಾರೆ. ಮತ್ತು ತಂತ್ರಾದಿಗಳಲ್ಲಿ ಹೇಳಿದ ಚಲಸ್ಥಿರಾದಿ ಭೇದಗಳನ್ನೂ ಸೂಚಿಸುತ್ತಾರೆ

(೧) **ಅಂಗುಲಿ** (ಬೆರಳು), **ಮಣಿಬಂಧ** (ಹಸ್ತದ ಬುಡದ ಸಂಧಿ, ಕೈಹದಡು), **ಗುಲ್ಫ** (ಪಾದದಪಾರ್ಶ್ವಗಂಟಿನಭಾಗದಲ್ಲಿಯ ಸಂಧಿ), **ಜಾನು**

(ಮೊಳಕಾಲ ಸಂಧಿ), **ಕೂರ್ಪರ** (ಮೊಳಕೈ ಸಂಧಿ), ಇವುಗಳಲ್ಲಿ "**ಕೋರ**" ಸಂಧಿಗಳು ಇರುತ್ತವೆ. ಕೋರ ಸಂಧಿಗಳು ಬಹುಚಲ (ಬಹುಚೇಷ್ಟಾ) ಸಂಧಿಗಳಾಗಿರುತ್ತವೆ

(೨) **ಕಕ್ಷಾ** (ಬಾಹುಮೂಲಸಂಧಿ), **ವಂಕ್ಷಣ** (ತೊಡೆಯ ಮೇಲಿನ ಸಂಧಿ), **ದಶನ** (ಹಲ್ಲುಗಳು), ಇವುಗಳಲ್ಲಿ "**ಉಲೂಖಲ**" ಸಂಧಿಗಳು ಇರುತ್ತವೆ ಸ್ಥಿರವಾದ ಹಲ್ಲುಗಳ ಸಂಧಿ ಹೊರತಾಗಿ, ಉಳಿದ ಉಲೂಖಲ ಸಂಧಿಗಳು ಬಹುಚಲ ಸಂಧಿಗಳಾಗಿರುತ್ತವೆ

(೩) **ಅಂಸಪೀಠ** (ಅಂಸಫಲಕ, ಭುಜಾಸ್ಥಿ ಕೊನೇಭಾಗ), **ಗುದ** (ಮಲನಿರ್ಗಮನ ದ್ವಾರ ಭಾಗ), **ಭಗ** (ಸ್ತ್ರೀ ಜನನೇಂದ್ರಿಯ ಸ್ಥಾನ), **ನಿತಂಬ** (ಕಟಿಯ ಹಿಂದಿನ ಭಾಗ, ತಿಕ), ಇವುಗಳಲ್ಲಿ ಸಂಪುಟಕದಂತಿರುವ "**ಸಾಮುದ್ಗ**" ಸಂಧಿಗಳಿರುತ್ತವೆ ಸಾಮುದ್ಗ ಸಂಧಿಗಳು ಅಲ್ಪಚೇಷ್ಟಾ ಸಂಧಿಗಳಾಗಿರುತ್ತವೆ. ತಂತ್ರಾಂತರದಲ್ಲಿ **ಪಾದದಲ್ಲಿ** ಸಹ ಸಾಮುದ್ಗ ಸಂಧಿಗಳಿರುತ್ತವೆಂದು ಹೇಳಿದ್ದಾರೆ

(೪) **ಗ್ರೀವಾ** (ಕುತ್ತಿಗೆ), **ಪೃಷ್ಠವಂಶ** (ಬೆನ್ನುಹುರಿ, ಕಶೇರುಕಾಸ್ಥಿ), ಇವುಗಳಲ್ಲಿ "**ಪ್ರತರ**" ಎಂಬ ಅಸ್ಥಿ ಸಂಧಿಗಳಿರುತ್ತವೆ. ಪ್ರತರ ಸಂಧಿಗಳು ಅಲ್ಪಚಲ ಸಂಧಿಗಳಾಗಿರುತ್ತವೆ.

(೫) **ಶಿರಃ** ಕಪಾಲ (ತಲೆ ಪರಟೆ), **ಕಟಿ** ಕಪಾಲ (ಟೊಂಕದಲ್ಲಿಯ ಎಲುಬಿನ ಪರಟೆ), ಇವುಗಳಲ್ಲಿಯ ಅಸ್ಥಿ ಸಂಧಿಗಳಿಗೆ "**ತುನ್ನಸೇವನೀ**" ಎಂದು ಹೇಳುತ್ತಾರೆ. ಇವು ಸ್ಥಿರ ಸಂಧಿಗಳಾಗಿರುತ್ತವೆ.

(೬) **ಹನು** (ಕಪೋಲಗಳಕೆಳಪ್ರದೇಶ)ಗಳಲ್ಲಿರುವ ಅಸ್ಥಿ ಸಂಧಿಗಳಿಗೆ "**ವಾಯಸತುಂಡ**"ವೆಂದು ಹೇಳುತ್ತಾರೆ. ಹನು ಪ್ರದೇಶ ಸಂಧಿಗಳು ಬಹುಚಲವಾಗಿರುತ್ತವೆ

(೭) **ಕಂಠನಾಡೀ** (ಕುತ್ತಿಗೆನಾಳ), **ಹೃದಯನಾಡೀ** (ಹೃದಯ ಸ್ಥಾನ ಎದೆಯಲ್ಲಿ), **ಕ್ಲೋಮನಾಡೀ** (ಪಿಪಾಸಾಸ್ಥಾನ ನಾಡಿ), **ನೇತ್ರ**

(ಕಣ್ಣಿನಸ್ಥಾನ), ಇವುಗಳಲ್ಲಿ "**ಮಂಡಲ**" ಸಂಧಿಗಳು ಇರುತ್ತವೆ. ನಾಡೀ ಶಬ್ದ ವನ್ನು ಕಡೆಗೆ ಇಟ್ಟಿದ್ದರಿಂದ ಪ್ರತಿಯೊಂದಕ್ಕೂ ಸಂಬಂಧವಿರುವದೆಂದು ತಿಳಿಯಬೇಕು.

(೮) **ಶ್ರೋತ್ರ** (ಕಿವಿ), **ಶೃಂಗಾಟಕಗಳಲ್ಲಿ,** ಅಸ್ಥಿ ಸಂಧಿಗಳು ಶಂಖಾವರ್ತ (ಶಂಖದ ಮುರಿಗೆಯಂತೆ) ಮುರಿಗೆಯುಳ್ಳವಾಗಿರುತ್ತವೆ. ಆದ್ದರಿಂದ ಇವುಗಳಿಗೆ "**ಶಂಖಾವರ್ತ**' ವೆಂಬ ಹೆಸರನ್ನು ಹೇಳುತ್ತಾರೆ. ಶೃಂಗಾಟಕವೆಂದರೆ ನಾಲ್ಕು ವಿಭಾಗಗಳು ಕೂಡಿದಂಥವುಗಳೆಂದು ಅರ್ಥವಾಗುತ್ತದೆ. ಇಲ್ಲಿ ನಾಲ್ಕು ವಿಭಾಗ ಕೂಡಿದ ಸ್ಥಳಗಳನ್ನು ಮಂಡಲವೆಂದೂ ಹೇಳಿದ್ದಾರೆ. ಶೃಂಗಾಟಕವೆಂದರೆ ಮರ್ಮಸ್ಥಾನದಲ್ಲಿ ಹೇಳಲ್ಪಟ್ಟಂಥವುಗಳು. **ನಾಸಿಕಾ, ಕರ್ಣ, ನೇತ್ರ, ಜಿಹ್ವಾದಬುಡ,** ಸ್ಥಾನಗಳಾಗಿರುತ್ತವೆ. ನೇತ್ರ ಸ್ಥಾನದಲ್ಲಿ "**ಮಂಡಲ**" ಸಂಧಿಯೆಂದು ಹಿಂದೆ ಹೇಳಿದ್ದಾರೆ. ಆದ್ದರಿಂದ "**ಕಿವಿ ನಾಸಿಕಾ**"ಗಳಲ್ಲಿಯು ವ್ಯಕ್ತಾಸ್ಥಿ ಸಂಧಿಗಳು ಶಂಖಾವರ್ತಗಳೆಂದು ಪ್ರತ್ಯಕ್ಷ ಶಾರೀರದವರು ಗ್ರಹಿಸಿರುತ್ತಾರೆ. ಅಥವಾ "**ಶ್ರೋತ್ರ ಶೃಂಗಾಟಕೇಷು**" ಕಿವಿಗಳ ಸುತ್ತಲೂ ಆವರಿಸಿದ್ದರಿಂದ ಶೃಂಗಾಟಕವೆಂದು ಹೇಳಬಹುದು ಇವುಗಳಲ್ಲಿ ಶಂಖದ ಮುರಿಗೆ ಇದ್ದಂತೇ ಸಂಧಿಗಳಿರುವದರಿಂದ, ಕಿವಿಗಳಲ್ಲಿ ಶಂಖಾವರ್ತಸಂಧಿಗಳೆಂದುಹೇಳಬಹುದು. ಇಲ್ಲಿ ಎರಡು ಮತಗಳನ್ನು ಸೂಚಿಸಿದಂತೆ ಆಯಿತು. (೧)ನಾಸಿಕಾ, ಕರ್ಣ, ನೇತ್ರ, ಜಿಹ್ವಾ ಇವುಗಳಲ್ಲಿಯು ಸಿರಾ ಕೂಡುವ ಸ್ಥಾನಕ್ಕೆ ಶೃಂಗಾಟಕವೆಂದ ಮರ್ಮಸ್ಥಾನದಲ್ಲಿಗ್ರಹಿಸಿರುವದರಿಂದ, ಇವುಗಳೂ ಶೃಂಗಾಟಕ ಸಂಜ್ಞೆವುಳ್ಳವುಗಳಿರುತ್ತವೆ (೨) ನಾಲ್ಕೂ ಭಾಗಗಳು ಸುತ್ತಲೂ ಯುಕ್ತವಾಗಿರುವದರಿಂದ "**ಶ್ರೋತ್ರ ಶೃಂಗಾಟಕ**" ಕಿವಿಗಳ ಸುತ್ತಲೂ ಆವರಿಸಿದ ಭಾಗ, ಮುರಿಗೆಯಂತಿರುವದರಿಂದ ಶಂಖಾವರ್ತಗಳೆಂದು ಅನ್ನುತ್ತಾರೆ. ಇದೇ ಯೋಗ್ಯ ಮತವಾಗಿರುತ್ತದೆ. ಯಾಕಂದರೆ ಮೊದಲು ನೇತ್ರವನ್ನು **ಮಂಡಲ** ಸಂಧಿಯಲ್ಲಿ ಗ್ರಹಿಸಿದ್ದಾರೆ. **ಪ್ರತ್ಯಕ್ಷ ಶಾರೀರದಲ್ಲಿ** ನಾಸಿಕಾ ಸ್ಥಾನ ಮತ್ತು ಕರ್ಣಗಳ ಸುತ್ತಲಿರುವ ಮುರಿಗೆಯಂತಿರುವ ಭಾಗಗಳೆಂದು ವಿವರಿಸಿದ್ದಾರೆ. ಶೃಂಗಾಟಕ ಶಬ್ದದ ಅರ್ಥ ಸ್ಥಾನಗಳನ್ನು ಸಂಧಿಗಳಲ್ಲಿ ವಿವರಿಸಿಲ್ಲವಾದ್ದರಿಂದ, ಸಾಮಾನ್ಯತಃ ಅರ್ಥಾನು

ಸಾರ ಮರ್ಮಸ್ಥಾನದಲ್ಲಿ ಹೇಳಿದ ಶೃಂಗಾಟಕದಿಂದ, ಸ್ಥಾನಸಾಮ್ಯವನ್ನು ಗ್ರಹಿಸಿ ಹೇಳಿದ್ದೇನೆ

ಇವು ಎಂಟುವಿಧವಾದ ಅಸ್ಥಿಸಂಧಿಗಳೂ ಮತ್ತು ಅವುಗಳ ಸ್ಥಾನಗಳೂ ಆಗಿರುತ್ತವೆ. ಬಹುಚಲ ಅಲ್ಪಚಲ ಸಂಧಿಗಳನ್ನು ವಿವರಿಸಿದೆ. ಉಳಿದವುಗಳು ಸ್ಥಿರಸಂಧಿಗಳೆಂದು ತಿಳಿದುಕೊಳ್ಳಬೇಕು

## ಸಂಧಿಸಂಖ್ಯಾವಿವರಣೆ

**ಸಂಖ್ಯಾತಸ್ತು ದಶೋತ್ತರೇದ್ವೇಶತೇ ॥**
[ಸುಶ್ರುತ॥ ಶಾರೀರ॥ ಅ. ೫ ಸೂ. ೨೬]
**ಸಂಧೀನಾಂತು ಸಹಸ್ರೇದ್ವೇ ನಿಜಗಾದಾತ್ರಿ ನಂದನಃ ॥**
[ವಾಗ್ಭಟ॥ ಶಾರೀರ॥ ಅ. ೩ ಶ್ಲೋ ೧೭]

ಸುಶ್ರುತದಲ್ಲಿ ಭಗವಾನ್ ಧನ್ವಂತರಿ ಮತದಂತೆ [೨೧೦] ಅಸ್ಥಿಸಂಧಿಗಳು ಹೇಳಲ್ಪಟ್ಟಿರುತ್ತವೆ.

ವಾಗ್ಭಟದಲ್ಲಿ ಆತ್ರೇಯ ಮತದಂತೆ [೨೦೦೦] ಅಸ್ಥಿಸಂಧಿಗಳು ಉಕ್ತವಾಗಿವೆ

**ಅಸ್ಥ್ನಾಂತುಸಂಧಯೋಹ್ಯೇತೇ ಕೇವಲಾಃ ಪರಿಕೀರ್ತಿತಾಃ ॥**
**ಪೇಶೀಸ್ನಾಯುಸಿರಾಣಾಂತುಸಂಧಿ ಸಂಖ್ಯಾನವಿದ್ಯತೆ ॥**
[ಸುಶ್ರುತ॥ ಶಾರೀರ॥ ಅ. ೫ ಶ್ಲೋ ೨೮]

ಈಗ ಹೇಳಿದ ಸಂಧಿಗಳೆಂದರೆ ಅಸ್ಥಿಸಂಧಿಗಳೆಂದು ತಿಳಿಯಬೇಕು. ಕೇವಲ ಅಸ್ಥಿಸಂಧಿಗಳಷ್ಟೇ ಹೇಳಲ್ಪಟ್ಟಿರುತ್ತವೆ. ಪೇಶೀ ಸ್ನಾಯು ಸಿರಗಳ ಸಂಧಿ ಸಂಖ್ಯೆಯು ಹೇಳಲ್ಪಟ್ಟಿರುವದಿಲ್ಲ. ಅಥವಾ ಪೇಶ್ಯಾದಿಗಳ ಸಂಧಿ ಸಂಖ್ಯೆಯು ಅಸಂಖ್ಯಾತವಿರುತ್ತದೆಂದು ತಿಳಿಯಬೇಕು ಆದ್ದರಿಂದ ಸಂಧಿಗಳೆಂದರೆ ಅಸ್ಥಿಸಂಧಿಗಳೆಂದೇ ತಿಳಿಯಬೇಕು.

## ಸಂಧಿಗಳ ಗಣನೆಯು

**ತೇಷಾವರ್ ಶಾಖಾಸ್ವಷ್ಟಷಷ್ಟಿಃ, ಏಕೋನಷಷ್ಟಿಃ ಕೋಷ್ಠೇ, ಗ್ರೀವಾಂ ಪ್ರತ್ಯೂರ್ಧ್ವಂತ್ರ್ಯಶೀತಿಃ ॥**
(ಸುಶ್ರುತ॥ ಶಾರೀರ॥ ಅ ೫ ಸೂ ೨೬)

ಆಯಾವ ಸ್ಥಾನಗಳನ್ನನುಸರಿಸಿ ಅಸ್ಥಿಸಂಧಿಗಳ ಸ್ಥೂಲವಿಭಾಗ ಸಂಖ್ಯೆಯನ್ನು ಹೇಳುತ್ತಾರೆ ಕೈ ಕಾಲುಗಳಲ್ಲಿ ಕೂಡಿ [೬೮], ಕೋಷ್ಠಸ್ಥಾನಗಳಲ್ಲಿ [೫೯], ಕುತ್ತಿಗೆಯಿಂದ ಆರಂಭಿಸಿದ ಮೇಲ್ಗಡೆಗೆ [೮೩], ಅಸ್ಥಿಸಂಧಿಗಳು ಇರುತ್ತವೆ

**ಶಾಖಾಸು** [೬೮], **ಕೋಷ್ಠೇ** [೫೯], **ಗ್ರೀವೋರ್ಧ್ವಂ** [೮೩], ಒಟ್ಟು ಸ್ಥೂಲವಾದ ವಿಭಾಗದಿಂದ ಅಸ್ಥಿಸಂಧಿ ಸಂಖ್ಯೆಯು [೨೧೦] ಇರುತ್ತದೆ

### ಅಸ್ಥಿಸಂಧಿಗಳ ವಿಭಾಗಶಃ ಪ್ರತ್ಯೇಕ ವಿವರಣೆ

**ಏಕೈಕಸ್ಯಾಂಪಾದಾಂಗುಲ್ಯಾಂತ್ರಯಸ್ತ್ರಯಃ, ದ್ವಾವಂಗುಷ್ಠೇ, ತೇಚತುರ್ದಶ; ಜಾನುಗುಲ್ಫವಂಕ್ಷಣೇಷ್ವೇಕೈಕಃ, ಏವಂ ಸಪ್ತದಶೈಕಸ್ಮಿನ್ ಸಕ್ಥ್ನಿಭವಂತಿ; ಏತೇನೇತರಸಕ್ಥಿಬಾಹೂಚವ್ಯಾಖ್ಯಾತೌ;॥ ತ್ರಯಃ ಕಟೀಕಪಾಲೇಷು, ಚತುರ್ವಿಂಶತಿಃ ಪೃಷ್ಠವಂಶೇ, ತಾವಂತಏವಪಾರ್ಶ್ವಯೋಃ, ಉರಸ್ಯಷ್ಟೌ;॥ ತಾವಂತಏವ ಗ್ರೀವಾಯಾಂ, ತ್ರಯಃ ಕಂಠೇ, ನಾಡೀಷುಹೃದಯಕ್ಲೋಮನಿಬದ್ಧಾಸ್ವಷ್ಟಾದಶ, ದಂತಪರಿಮಾಣಾ ದಂತಮೂಲೇಷು, ಏಕಃ ಕಾಕಲಕೇ ನಾಸಾಯಾಂ ಚ, ದ್ವೌವರ್ತ್ಮಮಂಡಲಯೋರ್ನೇತ್ರಾಶ್ರಯೌ, ಗಂಡಕರ್ಣಶಂಖೇಷ್ವೇಕೈಕಃ, ದ್ವೌ ಹನುಸಂಧೀ, ದ್ವಾವುಪರಿಷ್ಟಾದ್ಭ್ರುವೋಃ ಶಂಖಯೋಶ್ಚ, ಪಂಚಶಿರಃ ಕಪಾಲೇಷು, ಏಕೋಮೂರ್ಧ್ನಿ ॥**
[ಸುಶ್ರುತ ಶಾರೀರ॥ ಅ. ೫ ಸೂ. ೨೬]

## ಶಾಖಾಗಳಲ್ಲಿಯು ಸಂಧಿಗಳು

ಒಂದೊಂದುಪಾದದಬೆರಳಿನಲ್ಲಿ (೩) ಸಂಧಿಗಳು ಇರುತ್ತವೆ. ಅಂಗುಷ್ಠ ಬೆರಳಿನಲ್ಲಿ ಮಾತ್ರ (೨) ಸಂಧಿಗಳಿರುತ್ತವೆ. ಒಟ್ಟು ಒಂದು ಪಾದದಲ್ಲಿಯು ಬೆರಳುಗಳ ಸಂಧಿಗಳು (೧೪) ಇರುತ್ತವೆ **ಜಾನು** (ಮೊಣಕಾಲು ಮೇಲಿನ ಸಂಧಿ), **ಗುಲ್ಫ** (ಪಾದದಲ್ಲಿಯ ಪಾರ್ಶ್ವಗಂಟುಗಳಲ್ಲಿ ಸಂಧಿಗಳು), **ವಂಕ್ಷಣ** (ತೊಡೆಯ ಅಸ್ಥಿಸಂಧಿಗಳು), ಇವುಗಳಲ್ಲಿ ಪ್ರತಿಯೊಂದರಲ್ಲಿ ಒಂದೊಂದರಂತೆ (೩) ಸಂಧಿಗಳು. ಹೀಗೆ ಒಂದು ಕಾಲಿನಲ್ಲಿ (೧೭) ಅಸ್ಥಿಸಂಧಿಗಳು ಇರುತ್ತವೆ ಇದರಂತೇ ಮತ್ತೊಂದು ಕಾಲು ಎರಡು ಬಾಹುಗಳಲ್ಲಿಯು ಸಂಖ್ಯೆಗಳನ್ನು ತಿಳಿಯಬೇಕು. ಒಟ್ಟು (೬೮) ಅಸ್ಥಿಸಂಧಿಗಳು ಶಾಖಾಗಳಲ್ಲಿ ಇರುತ್ತವೆಂದು ಹೇಳುತ್ತಾರೆ

## ಕೋಷ್ಠ ಸ್ಥಾನದಲ್ಲಿಯು ಸಂಧಿಗಳು

**ಕಟಿಕಪಾಲ** (ಟೊಂಕದ ಕಪಾಲಾಸ್ಥಿಗಳು) ಈ ಸ್ಥಾನಗಳಲ್ಲಿ (೩) ಅಸ್ಥಿಸಂಧಿಗಳಿರುತ್ತವೆ

**ಪೃಷ್ಠವಂಶೇ** (ಕಶೇರುಕಾಸ್ಥಿಗಳು) ಇವುಗಳಲ್ಲಿ ಅಸ್ಥಿ ಸಂಧಿಗಳು (೨೪) ಇರುತ್ತವೆ.

**ಪಾರ್ಶ್ವಗಳಲ್ಲಿ** (ಎಡಬಲದ ಪಕ್ಕಗಳು) ಇವುಗಳಲ್ಲಿ (೨೪) ಸಂಧಿಗಳು ಇರುತ್ತವೆ **ಉರಸಿ** (ಎದೆಯಲ್ಲಿ) ಅಸ್ಥಿಸಂಧಿಗಳು (೮) ಇರುತ್ತವೆ.

**ಕಟಿಕಪಾಲಗಳಲ್ಲಿ** (೩), **ಪೃಷ್ಠವಂಶೇ** (೨೪), **ಪಾರ್ಶ್ವಗಳಲ್ಲಿ** (೨೪), **ಉರಸಿ** (೮), ಒಟ್ಟು ಕೋಷ್ಠ ಪ್ರದೇಶದಲ್ಲಿ (೫೯) ಅಸ್ಥಿಸಂಧಿಗಳಿರುತ್ತವೆ.

**ಗ್ರೀವಾ** (ಕುತ್ತಿಗೆ) ಸ್ಥಾನದಲ್ಲಿ ಅಸ್ಥಿ ಸಂಧಿಗಳು (೮) ಇರುತ್ತವೆ. **ಕಂಠ** (ಕಂಠನಾಡೀ) ಭಾಗದಲ್ಲಿ (೩) ಸಂಧಿಗಳಿರುತ್ತವೆ **ಹೃದಯನಾಡೀ** (ಹೃದಯಕ್ಕೆ ಅಂಟಿಕೊಂಡಿರುವ ನಾಡಿ), **ಕ್ಲೋಮನಾಡೀ** (ಪಿಪಾಸಾಸ್ಥಾನ

ನಾಡಿ) ಇವುಗಳಲ್ಲಿ (೧೮) ಸಂಧಿಗಳು **ದಂತಮೂಲೇಷು** (ಹಲ್ಲುಗಳ ಬುಡ ಗಳು) ಈ ಸ್ಥಾನಗಳಲ್ಲಿ [೩೨] ಸಂಧಿಗಳಿರುತ್ತವೆ **ಕಾಕಲಕ** [ಗಲಮಣಿ, ಕುರನಾಳದಲ್ಲಿಯ ಗಂಟು] ಸ್ಥಾನದಲ್ಲಿ [೧] ಸಂಧಿಯು ಇರುತ್ತದೆ **ನಾಸಾ** [ಮೂಗು] ಈ ಸ್ಥಾನದಲ್ಲಿ [೧] ಸಂಧಿಯು **ವರ್ತ್ಮಮಂಡಲ** [ಕಣ್ಣು ರೆಪ್ಪೆ ಗಳ ಸ್ಥಾನ ಕಣ್ಣನ್ನು ಆಶ್ರಯಿಸಿ ಇದ್ದಂಥವುಗಳ.] ತರುಣಾಸ್ಥಿ ಸಂಧಿಗಳು (೨) ಇರುತ್ತವೆ. **ಗಂಡ** (ಕಪೋಲ), **ಕರ್ಣ** (ಕಿವಿ), **ಶಂಖ** ಸ್ಥಾನಗಳಲ್ಲಿ ಒಂದೊಂದರಂತೆ (೬) ಸಂಧಿಗಳಿರುತ್ತವೆ **ಹನು** (ಕಪೋಲ ಕೆಳಭಾಗ) ಸ್ಥಾನಗಳಲ್ಲಿ (೨) ಸಂಧಿಗಳು ಇರುತ್ತವೆ. **ಭ್ರುವೋರುಪರಿಷ್ಟಾತ್** (ಹುಬ್ಬು ಗಳ ಮೇಲ್ಭಾಗದಲ್ಲಿ) ಅಸ್ಥಿ ಸಂಧಿಗಳು (೨), **ಶಂಖಯೋಃ** (ಶಂಖವರ್ಮ ಗಳ ಮೇಲ್ಭಾಗ) ಸ್ಥಾನಗಳಲ್ಲಿ (೨) ಸಂಧಿಗಳು, **ಶಿರಃಕಪಾಲ** (ತಲೇಪಂಟೆ) ಗಳಲ್ಲಿ (೫) ಸಂಧಿಗಳಿರುತ್ತವೆ, **ಮೂರ್ಧ್ನಿ** (ನೆತ್ತಿಯ ಸ್ಥಾನ) ಈ ಪ್ರದೇಶದಲ್ಲಿ (೧) ಅಸ್ಥಿಸಂಧಿಯು ಇರುತ್ತದೆ.

**ಗ್ರೀವಾ** (೮), **ಕಂಠ** (೩), **ಹೃದಯಾದಿ ನಾಡೀಗಳಲ್ಲಿ** (೧೮), **ದಂತಸ್ಥಾನ** (೩೨), **ಕಾಕಲಕ**(೧), **ನಾಸಾ**(೧), **ವರ್ತ್ಮಮಂಡಲ** (೨), **ಗಂಡಾದಿ**(೬), **ಹನು**(೨), **ಭ್ರುವೋರೂರ್ಧ್ವಂ** (೨), **ಶಂಖೋರ್ಧ್ವಂ** (೨), **ಶಿರಃಕಪಾಲ** (೫), **ನೆತ್ತಿಯಲ್ಲಿ** (೧), ಈ ಮೊದಲಾದ ಸ್ಥಾನಗಳ ಲ್ಲಿಯ ಅಸ್ಥಿ ಸಂಧಿಗಳು ಒಟ್ಟು ಕೂಡಿ (೮೩) ಇರುತ್ತವೆ.

ಎಲ್ಲ ಮುಖ್ಯ ಸ್ಥಾನಗಳಲ್ಲಿಯ ಅಸ್ಥಿ ಸಂಖ್ಯೆಯನ್ನು ಒಟ್ಟು ಹಿಂದೆ ಹೇಳಿರುತ್ತದೆ.

## (೫೬) ಸ್ನಾಯುಗಳವಿವರಣೆಯು

ದೇಹದಲ್ಲಿರುವ ಮಾಂಸ ಮೊದಲಾದ ದ್ರವ್ಯಗಳನ್ನು ಆಯಾಯ ಸ್ಥಾನ ಗಳಲ್ಲಿ ಬಿಗಿದು ಕಟ್ಟಿದ ಪಟ್ಟಿಯಂತಿರುವ ಬಂಧನ ವಿಶೇಷಗಳಿಗೆ "**ಸ್ನಾಯು**" ವೆಂದು ಹೇಳುತ್ತಾರೆ. ಈ ಸ್ನಾಯು ಬಂಧನಗಳಿಂದಲೇ ಶರೀರದಲ್ಲಿರುವ ದ್ರವ್ಯಗಳು ಅಲ್ಲಲ್ಲಿ ಕದಲದೇ ಸ್ಥಿರವಾಗಿ ನಿಂತಿರುತ್ತವೆ.

ಸ್ನಾಯುಗಳು [೯೦೦] ಇರುತ್ತವೆ ದೇಹದಲ್ಲಿ ಸ್ನಾಯುಗಳು ಆಯಾಯ ಸ್ಥಾನಗಳಿಗೆ ಅನುಗುಣವಾಗಿ ಬೇರೆ ಬೇರೆ ಆಕಾರವುಳ್ಳವುಗಳಾಗಿರುತ್ತವೆ. ಆಕೃತಿಗಳಿಗನುಗುಣವಾಗಿ ವಿಭಾಗಿಸಿ ನಾಲ್ಕು ವಿಧವಾದ ಸ್ನಾಯುಗಳು ಇರುತ್ತವೆಂದು ಹೇಳಿದ್ದಾರೆ.

**ಸ್ನಾಯೂಶ್ಚತುರ್ವಿಧಾವಿದ್ಯಾತ್ತಾಸ್ತು ಸರ್ವಾನಿಬೋಧಮೇ ||**
**ಪ್ರತಾನವತ್ಯೋವೃತ್ತಾಶ್ಚ ಪೃಥ್ವ್ಯಶ್ಚಶುಷಿರಾಸ್ತಥಾ ||೩೦||**
**ಪ್ರತಾನವತ್ಯಃ ಶಾಖಾಸು ಸರ್ವಸಂಧಿಷು ಚಾಪ್ಯಥ ||**
**ವೃತ್ತಾಸ್ತು ಕಂಡರಾಸರ್ವಾವಿಜ್ಞೇಯಾಃ ಕುಶಲೈರಿಹ ||೩೧||**
**ಆಮಪಕ್ವಾಶಯಾಂತೇಷು ಬಸ್ತೌಚ ಶುಷಿರಾಃ ಖಲು ||**
**ಪಾರ್ಶ್ವೋರಸಿತಥಾಪೃಷ್ಠೇಪೃಥುಲಾಶ್ಚಶಿರಸ್ಯಥ ||**
[ಸುಶ್ರುತ|| ಶಾರೀರ|| ಅ. ೫ ಶ್ಲೋ ೩೨]

ಸ್ನಾಯುಗಳು ನಾಲ್ಕು ಪ್ರಕಾರವುಳ್ಳಂಥವುಗಳಿರುತ್ತವೆ ಅವು ಯಾವ ದೆಂಬದನ್ನು ನಿಶ್ಚಯವಾಗಿ ನನ್ನಿಂದ ಸರ್ವವನ್ನೂ ತಿಳಿದುಕೋ, ಎಂದು ಭಗವಾನ್ ಧನ್ವಂತರಿಯು ಸುಶ್ರುತಾದಿ ಶಿಷ್ಯರಿಗೆ ಬೋಧಿಸಿದ ಉಪದೇಶವಾಗಿರುತ್ತದೆ.

[೧] **ಪ್ರತಾನವತ್ಯಃ** [ಬಳ್ಳಿಗಳಂತೇ ಇರುವಂಥವುಗಳು], [೨] **ವೃತ್ತಾಃ** [ವರ್ತುಲ], [೩] **ಪೃಥ್ವ್ಯಃ** [ದಪ್ಪವಾದ, ವಿಸ್ತಾರವಾದವುಗಳು], [೪] **ಶುಷಿರಾಃ** [ಪೊಳ್ಳಿರುವ, ರಂಧ್ರವುಳ್ಳಂಥವುಗಳು], ಹೀಗೆ ನಾಲ್ಕು ಪ್ರಕಾರವಾದ ಸ್ನಾಯುಗಳು ಇರುತ್ತವೆ

**[೧] ಶಾಖಾಸು** [ಕೈ ಕಾಲುಗಳಲ್ಲಿ], **ಸರ್ವಸಂಧಿಷು** [ಎಲ್ಲಾ ಅಸ್ಥಿ ಸಂಧಿಗಳಲ್ಲಿ], ಬಳ್ಳಿಯಂತಿರುವ [ಪ್ರತಾನವತೀ] ಸ್ನಾಯುಗಳು ಇರುತ್ತವೆ

**[೨] ವೃತ್ತ** [ವರ್ತುಲ] ಸ್ನಾಯುಗಳಿಗೆ "**ಕಂಡರಾ**" ಎಂದು ಹೇಳುತ್ತಾರೆ. ಈ ಹಿಂದೆ ಕಂಡರಗಳ ವಿವರಣೆಯು ಬಂದಿರುತ್ತದೆ ಕಂಡರಗಳೆಂದರೆ ಮಹಾಸ್ನಾಯುಗಳೆಂದು ಹೇಳಿರುತ್ತಾರೆ.

[೩] ಆಮಾಶಯ [ಅಪಕ್ವ ಅನ್ನವಿರುವ ಸ್ಥಾನ], ಪಕ್ವಾಶಯ [ಮಲಾಶಯ], ಬಸ್ತಿ [ಮೂತ್ರಾಶಯ], ಇವುಗಳಲ್ಲಿ ಸಚ್ಛಿದ್ರ [ಶುಷಿರ] ಸ್ನಾಯುಗಳು ಇರುತ್ತವೆ.

[೪] ಪಾರ್ಶ್ವ [ಎಡಬಲ ಪಕ್ಕಗಳು], ಉರಃ [ಎದೆ], ಪೃಷ್ಠ [ಬೆನ್ನು], ಶಿರಃ [ತಲೆ], ಇವುಗಳಲ್ಲಿ "ಪೃಥುಲಾ" [ದಪ್ಪವಾದ, ಅಗಲವಾಗಿರುವ] ಸ್ನಾಯುಗಳು ಇರುತ್ತವೆ.

ಹೀಗೆ ಸ್ನಾಯುಗಳ ಪ್ರಕಾರ ಮತ್ತು ಸ್ಥಾನಗಳನ್ನೂ ವಿವರಿಸಿದ್ದಾರೆ.

### ಸ್ನಾಯುಬಂಧನ ದೃಷ್ಟಾಂತ

ನೌರ್ಯಥಾಫಲಕಾಸ್ತೀರ್ಣಾಬಂಧನೈರ್ಬಹುಭಿರ್ಯುತಾ ॥
ಭಾರಕ್ಷಮಾಭವೇದಪ್ಸು ನೃಯುಕ್ತಾ ಸುಸಮಾಹಿತಾ ॥೩೩॥
ಏವಮೇವಶರೀರೇಽಸ್ಮಿನ್ ಯಾವಂತಃ ಸಂಧಯಃ ಸ್ಮೃತಾಃ ॥
ಸ್ನಾಯುಭಿರ್ಬಹುಭಿರ್ಬದ್ಧಾಸ್ತೇನಭಾರಸಹಾನರಾಃ ॥

[ಸುಶ್ರುತ॥ ಶಾರೀರ॥ ಅ. ೫ ಶ್ಲೋ. ೩೪]

ಅನೇಕ ಹಲಿಗೆಗಳಿಂದ ಕೂಡಿದ ನೌಕೆಯು ಬಂಧನಗಳಿಂದ ಬಹು ಪ್ರಕಾರ ಬಿಗಿದು ಕಟ್ಟಿರುವದರಿಂದ, ನೀರಿನಲ್ಲಿ ಭಾರವನ್ನು ಒಯ್ಯಲಿಕ್ಕೂ ಮನುಷ್ಯರು ಕೂಡ್ರಲಿಕ್ಕೂ ಸಮರ್ಥವೂ ಯೋಗ್ಯವಾದದ್ದೂ ಆಗುತ್ತದೆ ಇದರಂತೆ ಶರೀರದಲ್ಲಿಯೂ ಕೂಡ ಎಷ್ಟು ಸಂಧಿಗಳಿರುತ್ತವೆಯೋ ಅವುಗಳು, ಸ್ನಾಯುಗಳಿಂದ ಚನ್ನಾಗಿ ಬಿಗಿದು ಕಟ್ಟಲ್ಪಟ್ಟಿರುತ್ತವೆ ಹೀಗೆ ಚೆನ್ನಾಗಿ ಸಂಧಿಗಳಲ್ಲಿ ಸ್ನಾಯುಬಂಧನವಿರುವದರಿಂದ ಮನುಷ್ಯರು ಭಾರವನ್ನು ಸಹಿಸುತ್ತಾರೆ. ಸಂಧಿಗಳೂ ದೃಢವಾಗಿರುತ್ತವೆ ಹೇಗೆ ನೌಕೆಯು ಹಲಿಗೆಗಳು ಅನೇಕ ಬಂಧನಗಳಿಂದ ಚನ್ನಾಗಿ ಬಂಧಿತವಾಗಿ ನೌಕೆಯಾಗಿ ಕಾರ್ಯಕ್ಷಮವಾಗುತ್ತದೆಯೋ, ಅದರಂತೆ ಶರೀರ ಸಂಧಿಗಳು ಸ್ನಾಯುಗಳಿಂದ ಬಂಧಿತವಾದ್ದರಿಂದ ದೇಹವು ಕರ್ತವ್ಯ ಸಮರ್ಥವಾಗುತ್ತದೆ.

## ಸ್ನಾಯುಗಳ ಮಹತ್ವವು

**ನಹ್ಯಸ್ಥೀನಿನವಾಪೇಶ್ಯೋನಸಿರಾನಚಸಂಧಯಃ ||**
**ವ್ಯಾಪಾದಿತಾಸ್ತಥಾಹನ್ಯುರ್ಯಥಾಸ್ನಾಯುಃ ಶರೀರಿಣಮ್ ||**
**ಯಃ ಸ್ನಾಯೂಃ ಪ್ರವಿಜಾನಾತಿಬಾಹ್ಯಾಶ್ಚಾಭ್ಯಂತರಾಸ್ತಥಾ ||**
**ಸಗೂಢಂಶಲ್ಯಮಾಹರ್ತುಂ ದೇಹಾತ್ ಶಕ್ನೋತಿದೇಹಿನಾಂ ||**
(ಸುಶ್ರುತ|| ಶಾರೀರ|| ಅ ೫ ಶ್ಲೋ ೩೬)

ದೇಹದಲ್ಲಿ ಅಸ್ಥ್ಯಾದಿ ಎಲ್ಲ ಸ್ಥಳಗಳಿಗಿಂತಲೂ ಸ್ನಾಯು ಸ್ಥಾನಗಳಲ್ಲಿ ಹೊಡತಬಿದ್ದರೆ ಮನುಷ್ಯನನ್ನು ಬಹಳದುಃಖಕ್ಕೆ ಗುರಿಮಾಡುತ್ತವೆ ಅಥವಾ ನಾಶವನ್ನೂ ಮಾಡಬಹುದು. ಅಸ್ಥಿ ಪೇಶಿ ಸಿರಾ ಸಂಧಿ ಇವುಗಳು ಆಘಾತ ಹೊಂದಿದರೆ, ಸ್ನಾಯುಗಳು ಆಘಾತ ಹೊಂದಿ ಮನುಷ್ಯನನ್ನು ನಾಶಪಡಿಸು ವಂತೇ ಉಳಿದವುಗಳು ನಾಶಪಡಿಸಲಾರವು. ಅರ್ಥಾತ್ ಸ್ನಾಯುಗಳಲ್ಲಿ ಆಘಾತ ಕಡಿತ ಹೊಡೆತಗಳುಂಟಾದರೆ ತೀವ್ರನಾಶಕವಾಗಿರುತ್ತವೆ. ಇದ ರಷ್ಟು ಇನ್ನಾವ ಸ್ಥಳದಲ್ಲಿ ಹೊಡತಾದಿಗಳು ಬಿದ್ದರೂ ಹಾನಿಯಾಗುವ ದಿಲ್ಲೆಂದು ಹೇಳಿದ್ದಾರೆ. ಯಾವ ವೈದ್ಯನು ದೇಹದ ಒಳಗಡೆ ಮತ್ತು ಹೊರಗಿರುವ ಸ್ನಾಯುಗಳನ್ನು ಅರಿತಿರುತ್ತಾನೆಯೋ, ಅವನು ದೇಹದಲ್ಲಿ ನಟ್ಟಿರುವ ಧೃಢ ಬಾಣಗಳನ್ನು ಕಿತ್ತು ಹೊರಗೆ ತೆಗಿಯುಲಿಕ್ಕೆ ಸಮರ್ಥನಾಗು ತ್ತಾನೆ. "**ಗೂಢ**" ಶಬ್ದದಿಂದ ಅತಿ ಗಾಢವಾಗಿ ಒಳಗೆ ಪ್ರವೇಶಮಾಡಿದ ಬಾಣಾದಿಗಳನ್ನು, ಸ್ನಾಯುವನ್ನು ಹಿಂಸೆಪಡಿಸದೇ ಹೊರಗೆತೆಗೆಯಬೇಕಾಗಿರು ತ್ತದೆನ್ನುವದುಧ್ವನಿತವಾಗುತ್ತದೆ. ಇಂಥ ಪ್ರಸಂಗದಲ್ಲಿ ದೇಹದಲ್ಲಿಯ ಅಂತ ರ್ಬಾಹ್ಯ ಸ್ನಾಯುಗಳ ಸ್ಥಾನವು ಚನ್ನಾಗಿ ಪರಿಚಯವುಳ್ಳವನೇ ಸಮರ್ಥ ನಾಗುತ್ತಾನೆ. ಅಂಥವನು ಸ್ನಾಯುಗಳಿಗೆ ಹಿಂಸೆಯಾಗದಂತೇ ಬಾಣಗಳನ್ನು ಹೊರತೆಗೆಯಬಲ್ಲನು.

## ಸ್ನಾಯುಗಳ ವಿವರಣೆ

**ನವಸ್ನಾಯುಶತಾನಿ, ತಾಸಾಂಶಾಖಾಸುಷಟ್‌ಶತಾನಿ, ದ್ವೇಶ**
**ತೇತ್ರಿಂಶಚ್ಚಕೋಷ್ಠೇ, ಗ್ರೀವಾಂಪ್ರತ್ಯೂರ್ಧ್ವಂ ಸಪ್ತತಿಃ ||**
(ಸುಶ್ರುತ|| ಶಾರೀರ ಅ ೫ ಸೂ ೨೯)

ದೇಹದಲ್ಲಿ ಸ್ನಾಯುಗಳು (೯೦೦) ಇರುತ್ತವೆ. ಅವುಗಳು ಪ್ರತ್ಯೇಕ ವಿಭಾಗಗಳಲ್ಲಿ ಎಷ್ಟಿರುತ್ತವೆಂದು ಸ್ಥೂಲವಾನದಿಂದ ಸಂಖ್ಯಾ ನಿರ್ದೇಶ ಮಾಡುತ್ತಾರೆ.

ಶಾಖಾಸು (೬೦೦), ಕೋಷ್ಠೇ (೨೩೦), ಗ್ರೀವೋರ್ಧ್ವಂ (೭೦), ಒಟ್ಟು ಸ್ನಾಯುಗಳ ಸಂಖ್ಯೆಯು (೯೦೦) ಇರುತ್ತದೆ.

## ಪ್ರತ್ಯೇಕ ವಿಭಾಗಶಃ ಸ್ನಾಯುವಿವರಣೆ

ಏಕೈಕಸ್ಯಾಂತುಪಾದಾಂಗುಲ್ಯಾಂ ಷಣ್ಣಿಚಿತಾಸ್ತಾಃ ತ್ರಿಂಶತ್, ತಾವತ್ಯ ಏವತಲಕೂರ್ಚಗುಲ್ಫೇಷು, ತಾವತ್ಯ ಏವಜಂಘಾಯಾಂ, ದಶಜಾನುನಿ, ಚತ್ವಾರಿಂಶದೂರೌ, ದಶವಂಕ್ಷಣೇಶತಮಧ್ಯರ್ಧಮೇಕಸ್ಮಿನ್‌ಸಕ್ಥ್ನಿಭವಂತಿ; ಏತೇನೇತರಸಕ್ಥಿಬಾಹೂಚವ್ಯಾಖ್ಯಾತೌ ॥ ಷಷ್ಟಿಃಕಟ್ಯಾಂ, ಪೃಷ್ಠೇsಶೀತಿಃ, ಪಾರ್ಶ್ವಯೋಃಷಷ್ಟಿಃ,ಉರಸಿತ್ರಿಂಶತ್॥ ಷಟ್‌ತ್ರಿಂಶತ್‌ಗ್ರೀವಾಯಾಂ, ಮೂರ್ಧ್ನಿಚತುಸ್ತ್ರಿಂಶತ್॥ ಏವಂನವಸ್ನಾಯುಶತಾನಿವ್ಯಾಖ್ಯಾತಾನಿಭವಂತಿ ॥ (ಸುಶ್ರುತ॥ ಶಾರೀರ ಅ ೫ ಸೂ. ೨೯)

## ಶಾಖಾದಲ್ಲಿಯ ಸ್ನಾಯುಗಳು

ಪ್ರತ್ಯೇಕ ವಿಭಾಗಶಃ ಆವಾವ ಸ್ಥಾನಗಳಲ್ಲಿರುವ ಸ್ನಾಯುಗಳ ಸಂಖ್ಯಾ ವಿವರಣೆಯು **ಪಾದಾಂಗುಲಿಗಳಲ್ಲಿ** ಪ್ರತಿಯೊಂದರಲ್ಲಿಯೂ (೬) ಸ್ನಾಯುಗಳು ಇರುತ್ತವೆ. ಒಟ್ಟು ಒಂದು ಪಾದದ ಬೆರಳುಗಳಲ್ಲಿ (೩೦) ಸ್ನಾಯುಗಳಿರುತ್ತವೆ. **ತಲ** (ಪಾದದ ಕೆಳಭಾಗ), **ಕೂರ್ಚ** (ಕುಂಚದಂತಿರುವಗುಲ್ಫಾದಿ ಪ್ರದೇಶ), **ಗುಲ್ಫ** (ಪಾದದಮೇಲ್ಭಾಗ ಪಾರ್ಶ್ವಗಳಲ್ಲಿಯ ಗಂಟುಗಳು), ಈ ಭಾಗಗಳಲ್ಲಿ (೩೦) ಸ್ನಾಯುಗಳು ಇರುತ್ತವೆ **ಜಂಘಾ** (ಮೊಣಕಾಲು) ಸ್ಥಾನದಲ್ಲಿ (೩೦) ಸ್ನಾಯುಗಳು **ಜಾನು** (ಮೊಣಕಾಲ ಸಂಧಿ ಪ್ರದೇಶ) ಾಗದಲ್ಲಿ (೧೦) ಸ್ನಾಯುಗಳು. **ಊರು** (ತೊಡೆಯ ಪ್ರದೇಶ) ಸ್ಥಾನದಲ್ಲಿ

(೪೦) ಸ್ನಾಯುಗಳಿರುತ್ತವೆ. **ವಕ್ಷಣ** (ತೊಡೆಯ ಅಸ್ಥಿಗಳು ಕೂಡುವ ಸಂಧಿ) ಸ್ಥಾನದಲ್ಲಿ (೧೦) ಸ್ನಾಯುಗಳಿರುತ್ತವೆ. ಒಂದು ಕಾಲಿನಲ್ಲಿ ಒಟ್ಟು (೧೫೦) ಸ್ನಾಯುಗಳಿರುತ್ತವೆ. ಒಟ್ಟು ಕೈಕಾಲುಗಳಲ್ಲಿ ಕೂಡಿ (೬೦೦) ಸ್ನಾಯುಗಳು ಶಾಖಾಪ್ರದೇಶಗಳಲ್ಲಿರುತ್ತವೆ.

**ಪಾದಾಂಗುಲಿ** (೩೦), **ತಲಕೂರ್ಚಾದಿ** (೩೦), **ಜಂಘಾ** (೩೦), **ಜಾನು** (೧೦), **ಊರು** (೪೦), **ವಂಕ್ಷಣ** (೧೦), ಮುಂತಾದ ಸ್ಥಾನಗಳಲ್ಲಿಯ ಸ್ನಾಯುಗಳು ಕೂಡಿ ಒಟ್ಟು ಒಂದು ಕಾಲಿನಲ್ಲಿ (೧೫೦) ಇರುತ್ತವೆ ಎರಡು ಕಾಲು ಬಾಹುಗಳಲ್ಲಿ ಕೂಡಿ (೬೦೦) ಸ್ನಾಯುಗಳಿರುತ್ತವೆ.

## ಕೋಷ್ಠದಲ್ಲಿಯ ಸ್ನಾಯುಗಳು

**ಕಟಿ** (ಟೊಂಕ) ಪ್ರದೇಶದಲ್ಲಿ (೬೦) ಸ್ನಾಯುಗಳು ಇರುತ್ತವೆ **ಪೃಷ್ಠ** (ಬೆನ್ನು) ಭಾಗದಲ್ಲಿ (೮೦) ಸ್ನಾಯುಗಳು. **ಪಾರ್ಶ್ವ** (ಎಡಬಲ ಪಕ್ಕ) ಸ್ಥಾನಗಳಲ್ಲಿ (೬೦) ಸ್ನಾಯುಗಳಿರುತ್ತವೆ. **ಉರಃ** (ಎದೆ) ಪ್ರದೇಶದಲ್ಲಿ (೩೦) ಸ್ನಾಯುಗಳು ಇರುತ್ತವೆ ಒಟ್ಟು ಕೋಷ್ಠ ಪ್ರದೇಶದಲ್ಲಿ (೨೩೦) ಸ್ನಾಯುಗಳಿರುತ್ತವೆ

**ಕಟಿ** (೬೦), **ಪೃಷ್ಠ** (೮೦), **ಪಾರ್ಶ್ವ** (೬೦), **ಉರಃ** (೩೦), ಮೊದಲಾದ ವಿಭಾಗಗಳಲ್ಲಿಯ ಸ್ನಾಯುಗಳು ಕೂಡಿ ಒಟ್ಟು (೨೩೦) ಇರುತ್ತವೆ.

## ಗ್ರೀವೋರ್ಧ್ವ ಸ್ನಾಯುಗಳು

**ಗ್ರೀವಾ** (ಕುತ್ತಿಗೆ) ಸ್ಥಾನದಲ್ಲಿ (೩೬) ಸ್ನಾಯುಗಳಿರುತ್ತವೆ **ಮೂರ್ಧಾ** (ತಲೆ) ಪ್ರದೇಶದಲ್ಲಿ (೩೪) ಸ್ನಾಯುಗಳಿರುತ್ತವೆ. ಒಟ್ಟು ಕುತ್ತಿಗೆಯಿಂದ ಹಿಡಿದು ಮೇಲ್ಭಾಗಗಳಲ್ಲಿ (೭೦) ಸ್ನಾಯುಗಳು ಇರುತ್ತವೆ. ಹೀಗೆ (೯೦೦) ಸ್ನಾಯುಗಳನ್ನು ಆಯಾವ ಸ್ಥಾನಗಳಲ್ಲಿ ಪ್ರತ್ಯೇಕವಾಗಿ ವಿವರಿಸಿದ್ದಾರೆ.

# (೫೭) ಪೇಶೀ ವಿವರಣೆಯು

ಪೇಶೀಗಳೆಂದರೆ ಮಾಂಸದ ಚೀಲಗಂತಿರುವ ವಿಭಾಗಗಳು ಸಿರಾ ಸ್ನಾಯು ಅಸ್ಥಿಗಳ ಹೊಂದಿಕೆ ( ಜೋಡಣೆ ) ಯಾಗುವ ಸ್ಥಾನಗಳಲ್ಲಿದ್ದು ಅವುಗಳನ್ನು ಅಚ್ಛಾದಿಸಿ ಸ್ಥಿರವಾಗಿಯೂ ಬಲವಂತವಾಗಿ ನಿಲ್ಲುವಂತೆಯೂ ಮಾಡುತ್ತವೆ ಅಸ್ಥಿ ಸಂಧಿಗಳೂ ಕೂಡಾ ಪೇಶಿಗಳಿಂದ ಅಚ್ಛಾದಿಸಲ್ಪಟ್ಟು ದೃಢವಾಗುತ್ತವೆ. ದೇಹದಲ್ಲಿ ಪೇಶಿಗಳು ಆಯಾಯ ಸ್ಥಾನದಲ್ಲಿದ್ದುಕೊಂಡು ಸಿರಾಸ್ನಾಯು ಅಸ್ಥಿಸಂಧಿಗಳನ್ನು ಬಲವಾಗುವಂತೆಯೂ ಒಂದೇ ಸ್ಥಾನದಲ್ಲಿ ನಿಲ್ಲುವಂತೆಯೂ ತಮ್ಮ ಹಿಡಿತದಿಂದ ಆಚ್ಛಾದಿಸಿ ಬೇರೇ ಕಡೆಗೆ ಕದಲದಂತೆ ಮಾಡುತ್ತವೆ ಪೇಶಿಗಳು ಸ್ಥಾನಗಳಿಗನುಗುಣವಾಗಿ ಆಕಾರವುಳ್ಳವುಗಳಾಗಿರುತ್ತವೆ ದೇಹದಲ್ಲಿ (೫೦೦) ಪೇಶಿಗಳು ಇರುತ್ತವೆ

**ಸಿರಾಸ್ನಾಯ್ವಸ್ಥಿ ಪರ್ವಾಣಿಸಂಧಯಶ್ಚ ಶರೀರಿಣಾಂ ||**
**ಪೇಶೀಭಿಃ ಸಂವೃತಾನ್ಯತ್ರ ಬಲವಂತಿ ಭವಂತ್ಯತಃ||**
(ಸುಶ್ರುತ|| ಶಾರೀರ|| ೬ ೫ ಶ್ಲೋ ೩೮)

ದೇಹದಲ್ಲಿ ಸಿರಾ ಸ್ನಾಯು ಅಸ್ಥಿಗಳ ಸಂಯೋಗ ಸ್ಥಾನ ಮತ್ತು ಸಂಧಿಗಳು ಪೇಶಿಗಳಿಂದ ಸಂವೃತ (ಅಚ್ಛಾದಿತ) ವಾಗಿ ಬಲವಂತವಾಗುತ್ತವೆ.

## ಪೇಶಿಗಳ ಆಕೃತಿ ಸ್ವರೂಪಗಳು

**ತಾಸಾಂ ಬಹಲಪೇಲವಸ್ಥೂಲಾಣುಪೃಥುವೃತ್ತ ಹ್ರಸ್ವದೀರ್ಘ ಸ್ಥಿರಮೃದುಶ್ಲಕ್ಷ್ಣ ಕರ್ಕಶಭಾವಾಃ|| ಸಂಧ್ಯಸ್ಥಿ ಸಿರಾಸ್ನಾಯು ಪ್ರಚ್ಛಾದಕಾಯಥಾಪ್ರದೇಶಂಸ್ವಭಾವತಏತಭವಂತಿ ||**
(ಸುಶ್ರುತ|| ಶಾರೀರ|| ಅ ೫ ಸೂ ೪೦)

ಪೇಶಿಗಳು ಇರತಕ್ಕ ಸ್ಥಾನಾನುಗುಣವಾಗಿರುವ ನಾನಾ ಪ್ರಕಾರವಾದ ಆಕೃತಿ ಸ್ವರೂಪಗಳನ್ನು ಹೇಳುತ್ತಾರೆ ಪೇಶಿಗಳ ಆಕೃತಿ ಸ್ವರೂಪಗಳ ವಿವರಣೆಯು.

**ಬಹಲ** (ದೊಡ್ಡದು), **ಪೇಲವ** (ಸಣ್ಣದು), **ಅಣು** (ಸೂಕ್ಷ್ಮ), **ಸ್ಥೂಲ** (ಧಪ್ಪ, ಸೂಕ್ಷ್ಮವಲ್ಲದ್ದು), **ಪೃಥು** (ವಿಸ್ತಾರವುಳ್ಳದ್ದು), **ವೃತ್ತ** (ವರ್ತುಲ), **ಹ್ರಸ್ವ** (ದೀರ್ಘವಲ್ಲದ್ದು), **ದೀರ್ಘ** (ಉದ್ದವಾದದ್ದು), **ಸ್ಥಿರ** (ಕಠಿಣ), **ಮೃದು** (ಕೋಮಲ), **ಶ್ಲಕ್ಷ್ಣ** (ಸ್ಪರ್ಶಸುಖವುಳ್ಳದ್ದು, ಕರ್ಕಶವಲ್ಲದ್ದು), **ಕರ್ಕಶ** (ಹುರಬರಕು ಇರುವಂಥಾದ್ದು, ಸುಖಸ್ಪರ್ಶವಿಲ್ಲದ್ದು), ಈ ಪ್ರಕಾರವಾಗಿ ಪೇಶಿಗಳ ಆಕೃತಿ ಸ್ವಭಾವ ಗುಣಗಳು ಇರುತ್ತವೆ ಸಂಧಿ ಅಸ್ಥಿ ಸಿರಾ ಸ್ನಾಯುಗಳಲ್ಲಿ ಸಂವೃತ (ಆಚ್ಛಾದಿತ) ವಾಗಿರುವದರಿಂದ ಆ ಸ್ಥಾನಗಳಿಗನುಗುಣವಾಗಿ, ಮೃದು ಕಠಿಣಾದಿಗುಣಗಳು ಸ್ಥೂಲಾಣು ಮೊದಲಾದ ಆಕಾರಗಳು ಸ್ವಭಾವತಃ "**ಪೇಶಿಗಳಲ್ಲಿ**"ಉಂಟಾಗಿರುತ್ತವೆ. ಅರ್ಥಾತ್ ಸಿರಾಸ್ನಾಯ್ವಾದಿಗಳ ಸ್ಥಾನಾನುಸಾರವಾಗಿ, ದೊಡ್ಡ ಸಣ್ಣ ಆಕಾರವುಳ್ಳ, ಮೃದು ಕರ್ಕಶಾದಿ ಸ್ವಭಾವಿಕ ಗುಣವುಳ್ಳವೂ ಇರುತ್ತವೆಂದಭಿಪ್ರಾಯವಾಗಿರುತ್ತದೆ.

**ಪಂಚ ಪೇಶೀಶತಾನಿ ಭವಂತಿ ॥ ತಾಸಾಂ ಚತ್ವಾರಿಶತಾನಿ ಶಾಖಾಸು, ಕೋಷ್ಠೇಷಟ್ ಷಷ್ಟಿಃ, ಗ್ರೀವಾಂ ಪ್ರತ್ಯೂರ್ಧ್ವಂ ಚತುಸ್ತ್ರಿಂಶತ್ ॥**

(ಸುಶ್ರುತ॥ ಶಾರೀರ॥ ಅ. ೫ ಸೂ. ೩೭)

ದೇಹದಲ್ಲಿ ಪೇಶಿಗಳು (ಮಾಂಸಚೀಲಗಳು) "**ಸುಶ್ರುತ ಮತದಂತೆ**" (೫೦೦) ಇರುತ್ತವೆ. ಅವು ಯಾವ ಸ್ಥಾನಾದಿಗಳಲ್ಲಿ ಎಷ್ಟಿರುತ್ತವೆಂದು ಸ್ಥೂಲ ವಿವರಣೆಯು. "**ತಂತ್ರಾಂತರ ಮತದಲ್ಲಿ**" (೪೦೦) ಪೇಶಿಗಳಿರುತ್ತವೆಂದು ಹೇಳಿದ್ದಾರೆ

## ಪೇಶಿಗಳ ಸ್ಥೂಲಸಂಖ್ಯಾವಿವರಣೆ

**ಶಾಖಾಗಳಲ್ಲಿ** [೪೦೦] ಪೇಶಿಗಳಿರುತ್ತವೆ. **ಕೋಷ್ಠದಲ್ಲಿ** [೬೬], **ಗ್ರಿವೋರ್ಧ್ವಂ** (ಕತ್ತಿಗಯಿಂದಾರಂಭಿಸಿ ಮೇಲ್ಗಡೆಯಲ್ಲಿ),ಪೇಶಿಗಳು [೩೪] ಇರುತ್ತವೆ. ಒಟ್ಟು ದೇಹದಲ್ಲಿ [೫೦೦] ಪೇಶಿಗಳಿರುತ್ತವೆ

## ಶಾಖಾಗಳಲ್ಲಿಯು ಪೇಶಿಗಳು

**ಏಕೈಕಸ್ಯಾಂ ಪಾದಾಂಗುಲ್ಯಾಂತಿಸ್ರಸ್ತಿಸ್ರಸ್ತಾಃ ಪಂಚದಶ, ದಶಪ್ರಪದೇ, ಪಾದೋಪರಿಕೂರ್ಚಸನ್ನಿವಿಷ್ಟಾಸ್ತಾವತ್ಯಏವ, ದಶಗುಲ್ಫತಲಯೋಃ, ಗುಲ್ಫಜಾನ್ವಂತರೇವಿಂಶತಿಃ, ಪಂಚಜಾನುನಿ, ವಿಂಶತಿರೂರೌ, ದಶವಂಕ್ಷಣೇ, ಶತಮೇವಮೇಕಸ್ಮಿನ್ ಸಕ್ಥ್ನಿಭವತಿ ॥ ಏತೇನೇತರಸಕ್ಥಿಬಾಹೂಚವ್ಯಾಖ್ಯಾತೌ ॥**
(ಸುಶ್ರುತ ಶಾರೀರ॥ ಅ ೫ ಸೂ. ೩೭)

ಶಾಖಾಗಳಲ್ಲಿರುವ ಪೇಶಿಗಳನ್ನುವಿವರಿಸುತ್ತಾರೆ:- ಪಾದದ ಒಂದೊಂದು ಬೆರಳುಗಳಲ್ಲಿ [೩] ಪೇಶಿಗಳಿರುತ್ತವೆ. ಒಟ್ಟು ಒಂದು ಪಾದದ ಬೆರಳುಗಳಲ್ಲಿ ಕೂಡಿ [೧೫] ಪೇಶಿಗಳಿರುತ್ತವೆ. **ಪ್ರಪದ** (ಪಾದಾಗ್ರ, ಪಾದದ ಆದಿಭಾಗದಲ್ಲಿ) [೧೦] ಪೇಶಿಗಳು. **ಪಾದೋರ್ಧ್ವಗಂ ಕೂರ್ಚ** (ಪಾದದ ಮೇಲ್ಗಡೆ ಕೂರ್ಚ) ಪ್ರದೇಶದಲ್ಲಿ [೧೦] ಪೇಶಿಗಳು. **ಗುಲ್ಫ, ತಲ** (ಪಾದಪಾರ್ಶ್ವಗಂಟು, ಮತ್ತು ಪಾದದ ಕೆಳಭಾಗ) ಇವೆರಡು ಸ್ಥಾನಗಳಲ್ಲಿ ಕೂಡಿ [೧೦] ಪೇಶಿಗಳು ಇರುತ್ತವೆ **ಗುಲ್ಫಜಾನ್ವಂತರ** (ಪಾದದ ಗಂಟಿನಿಂದ ಮೊಣಕಾಲ ಸಂಧಿ ವರೆಗಿನ ಭಾಗ) ಅರ್ಥಾತ್ ಮೊಣಕಾಲಿನ ಪ್ರದೇಶದಲ್ಲಿ [೨೦] ಪೇಶಿಗಳು **ಜಾನು** (ಮೊಣಕಾಲ ಮೇಲಿನ ಸಂಧಿ) ಸ್ಥಾನದಲ್ಲಿ [೫] ಪೇಶಿಗಳಿರುತ್ತವೆ. **ಊರು** (ತೊಡೆ) ಪ್ರದೇಶದಲ್ಲಿ [೨೦] ಪೇಶಿಗಳು. **ವಂಕ್ಷಣ** (ತೊಡೆ ಎಲುಬಿನ ಸಂಧಿ) ಭಾಗದಲ್ಲಿ [೧೦] ಪೇಶಿಗಳಿರುತ್ತವೆ ಒಟ್ಟು ಒಂದು ಕಾಲಿನಲ್ಲಿ [೧೦೦] ಪೇಶಿಗಳಿರುತ್ತವೆ ಒಟ್ಟು ಶಾಖಾಗಳಲ್ಲಿ ಕೂಡಿ [೪೦೦] ಪೇಶಿಗಳಾಗುತ್ತವೆ

**ಪಾದಾಂಗುಲಿ [೧೫], ಪ್ರಪದ [೧೦], ಪಾದೋರ್ಧ್ವಗಂ ಕೂರ್ಚ [೧೦], ಗುಲ್ಫ, ತಲ [೧೦], ಗುಲ್ಫಜಾನ್ವಂತರ [೨೦], ಜಾನು [೫], ಊರು [೨೦], ವಂಕ್ಷಣ [೧೦],** ಈ ಸ್ಥಾನಗಳೆಲ್ಲವುಗಳಲ್ಲಿಯೂ **ಒಟ್ಟು ಕೂಡಿ** [೧೦೦] ಪೇಶಿಗಳಿರುತ್ತವೆ. ಇದು ಒಂದು ಕಾಲಿನಲ್ಲಿಯ ಪೇಶೀ ಸಂಖ್ಯೆಯಾಗಿರುತ್ತದೆ. ಎರಡೂ ಕೈಕಾಲುಗಳಲ್ಲಿ ಕೂಡಿ [೪೦೦] ಪೇಶಿಗಳು ಇರುತ್ತವೆ.

## ಕೋಷ್ಠಪ್ರದೇಶದಲ್ಲಿಯ ಪೇಶಿಗಳು

**ತಿಸ್ರಃ ಪಾಯೌ, ಏಕಾಮೇಢ್ರೇ, ಸೇವನ್ಯಾಂಚಾಪರಾ, ದ್ವೇ ವೃಷಣಯೋಃ, ಸ್ಫಿಚೋಃ ಪಂಚಪಂಚ, ದ್ವೇಬಸ್ತಿಸಿರಸಿ, ಪಂಚೋದರೇ, ನಾಭ್ಯಾಮೇಕಾ, ಪೃಷ್ಠೋರ್ಧ್ವಸನ್ನಿವಿಷ್ಟಾಃ ಪಂಚಪಂಚದೀರ್ಘಾಃ, ಷಟ್ ಪಾರ್ಶ್ವಯೋಃ, ದಶವಕ್ಷಸಿ, ಅಕ್ಷಕಾಂಸೌಪ್ರತಿಸಮಂತಾತ್ ಸಪ್ತ, ದ್ವೇಹೃದಯಾಮಾಶಯಯೋಃ, ಷಟ್ ಯಕೃತ್‌ಪ್ಲಿಹೋಂಡುಕೇಷು; ||**
(ಸುಶ್ರುತ|| ಶಾರೀರ|| ಅ. ೫ ಸೂ. ೩೭)

### ಕೋಷ್ಠಸ್ಥಾನಗಳಲ್ಲಿಯ ಪ್ರತ್ಯೇಕ ಪೇಶೀಸಂಖ್ಯಾ ವಿವರಣೆಯು

**ಪಾಯು** (ಮಲ ನಿರ್ಗಮನ ಪ್ರದೇಶ, ಗುದ) ಭಾಗದಲ್ಲಿ [೩] ಪೇಶಿಗಳಿರುತ್ತವೆ. **ಮೇಢ್ರ** (ಪುರುಷ ಜನನೇಂದ್ರಿಯ) ಸ್ಥಾನದಲ್ಲಿ [೧] ಪೇಶಿಯು. **ಸೇವನೀ** (ಜನನೇಂದ್ರಿಯ ಕೆಳಭಾಗದಲ್ಲಿ ಹೊಂದಿಕೊಂಡ ಹೊಲಿಗೆ) ಭಾಗದಲ್ಲಿ [೧] ಪೇಶಿಯು ಇರುತ್ತದೆ. **ವೃಷಣ** (ಅಂಡಕೋಶ) ಪ್ರದೇಶದಲ್ಲಿ [೨] ಪೇಶಿಗಳು. **ಸ್ಫಿಚ್** (ಕಟಿಪ್ರದೇಶ, ಮಾಂಸಪಿಂಡಗಳು) ಈ ಪ್ರದೇಶಗಳಲ್ಲಿ [೧೦] ಪೇಶಿಗಳಿರುತ್ತವೆ. **ಬಸ್ತಿಸಿರಃ** (ಬಸ್ತಿಯ ತಲೇ ಭಾಗ) ಸ್ಥಾನದಲ್ಲಿ [೨] ಪೇಶಿಗಳು. **ಉದರ** (ಹೊಟ್ಟೆ) ಪ್ರದೇಶದಲ್ಲಿ [೫] ಪೇಶಿಗಳು **ನಾಭಿ** (ಹೊಕ್ಕಳು) ಸ್ಥಾನದಲ್ಲಿ [೧] ಪೇಶಿಯು. **ಪೃಷ್ಠೋರ್ಧ್ವ** (ಬೆನ್ನಿನ ಮೇಲ್ಗಡೆ) ಭಾಗದಲ್ಲಿ ಉದ್ದವಾಗಿರುವ [೧೦] ಪೇಶಿಗಳಿರುತ್ತವೆ **ಪಾರ್ಶ್ವ** (ಎಡಬಲ ಪಕ್ಕಗಳು) ಈ ಸ್ಥಾನಗಳಲ್ಲಿ [೬] ಪೇಶಿಗಳಿರುತ್ತವೆ. **ವಕ್ಷಃ** (ಎದೆ) ಪ್ರದೇಶದಲ್ಲಿ [೧೦] ಪೇಶಿಗಳಿರುತ್ತವೆ. **ಅಕ್ಷಕ** (ಭುಜ ಸಂಧಿಗಳು), **ಅಂಸ** (ಭುಜ, ಹೆಗಲುಗಳು), ಇವೆರಡರ ಸುತ್ತಲಿನ ಪ್ರದೇಶಗಳಲ್ಲಿ [೭] ಪೇಶಿಗಳಿರುತ್ತವೆ **ಹೃದಯ** ಮತ್ತು **ಆಮಾಶಯ**ಗಳಲ್ಲಿ [೨] ಪೇಶಿಗಳು **ಯಕೃತ್, ಪ್ಲೀಹ, ಉಂಡುಕ**ಗಳಲ್ಲಿ [೬] ಪೇಶಿಗಳು ಇರುತ್ತವೆ. ಒಟ್ಟು ಕೋಷ್ಠ ಪ್ರದೇಶದಲ್ಲಿ [೬೬] ಪೇಶಿಗಳಿರುತ್ತವೆ.

ಪಾಯು (೩), ಮೇಢ್ರ (೧), ಸೇವನೀ (೧), ವೃಷಣ (೨), ಸ್ಫಿಚ್ (೧೦), ಬಸ್ತಿಶಿರಃ (೨), ಉದರ (೫), ನಾಭೀ (೧), ಪೃಷ್ಠೋರ್ಧ್ವ (೧೦), ಪಾರ್ಶ್ವ (೬), ವಕ್ಷಃ (೧೦), ಅಕ್ಷಕಾಂಸೌ (೭), ಹೃದಯ, ಆಮಾಶಯ (೨), ಯಕೃತ್, ಪ್ಲೀಹ, ಉಂಡುಕ (೬), ಈ ಮೊದಲಾದ ಸ್ಥಾನಗಳಲ್ಲಿ ಕೂಡಿ ಕೋಷ್ಠದಲ್ಲಿ ಒಟ್ಟು [೬೬] ಪೇಶಿಗಳಿರುತ್ತವೆ.

## ಕುತ್ತಿಗೆಯ ಮೇಲ್ಗಡೇ ಪೇಶಿಗಳು

ಗ್ರೀವಾಯಾಂಚತಸ್ರಃ, ಅಷ್ಟೌಹನ್ವೋಃ, ಏಕೈಕಾಕಾಕಲಗಲಯೋಃ, ದ್ವೇತಾಲುನಿ, ಏಕಾಜಿಹ್ವಾಯಾಂ, ದ್ವೇಓಷ್ಠಯೋಃ, ದ್ವೇನಾಸಾಯಾಂ, ದ್ವೇನೇತ್ರಯೋಃ, ಗಂಡಯೋಶ್ಚತಸ್ರಃ, ಕರ್ಣಯೋರ್ದ್ವೇ, ಚತಸ್ರೋಲಲಾಟೇ, ಏಕಾಸಿರಸೀತಿ॥ ಏವಮೇತಾನಿಪಂಚಪೇಶೀಶತಾನಿ॥

ಕುತ್ತಿಗೆಯಿಂದಾರಂಭಿಸಿ ಮೇಲ್ಗಡೆಯ ಪ್ರದೇಶಗಳಲ್ಲಿರುವ ಪೇಶಿಗಳ ವಿವರಣೆಂ ು.

ಗ್ರೀವಾ (ಕುತ್ತಿಗೆ) ಸ್ಥಾನದಲ್ಲಿ [೪] ಪೇಶಿಗಳು ಹನು (ಕಪೋಲಗಳ ಕೆಳಗಡೆ) ಪ್ರದೇಶಗಳಲ್ಲಿ [೮] ಪೇಶಿಗಳಿರುತ್ತವೆ. ಗಲ (ಕಂಠಪ್ರದೇಶ), ಕಾಕಲ (ಗಲಮಣಿ, ಕಂಠನಾಲದಲ್ಲಿಯ ಗಂಟು) ಇವೆರಡು ಪ್ರದೇಶಗಳಲ್ಲಿ [೨] ಪೇಶಿಗಳಿರುತ್ತವೆ ತಾಲು ಪ್ರದೇಶದಲ್ಲಿ [೨] ಪೇಶಿಗಳು. ಜಿಹ್ವಾ ಸ್ಥಾನದಲ್ಲಿ [೧] ಪೇಶಿಯು ಓಷ್ಠ (ತುಟಿಗಳು) ಈ ಪ್ರದೇಶಗಲ್ಲಿ [೨] ಪೇಶಿಗಳಿರುತ್ತವೆ. ನಾಸಾ(ಮೂಗು) ಈ ಸ್ಥಾನದಲ್ಲಿ[೨] ಪೇಶಿಗಳು ನೇತ್ರ (ಕಣ್ಣುಗಳು) ಈ ಸ್ಥಾನಗಳಲ್ಲಿ [೨] ಪೇಶಿಗಳಿರುತ್ತವೆ ಗಂಡ (ಕಪೋಲಗಳು) ಎರಡು ಕಪೋಲ ಸ್ಥಾನಗಳಲ್ಲಿ [೪] ಪೇಶಿಗಳಿರುತ್ತವೆ. ಕರ್ಣ (ಕಿವಿ) ಪ್ರದೇಶಗಳಲ್ಲಿ [೨] ಪೇಶಿಗಳಿರುತ್ತವೆ. ಲಲಾಟ (ಹಣೆ) ಭಾಗದಲ್ಲಿ [೪] ಪೇಶಿಗಳಿರುತ್ತವೆ. ಶಿರಃ (ತಲೆ) ಪ್ರದೇಶದಲ್ಲಿ [೧] ಪೇಶಿಯು ಇರುತ್ತದೆ. ಒಟ್ಟು ಕುತ್ತಿಗೆಯಿಂದ ಮೇಲ್ಭಾಗಗಳಲ್ಲಿ [೩೪] ಪೇಶಿಗಳು ಇರುತ್ತವೆ.

**ಗ್ರೀವಾ** (೪), **ಹನು** (೮), **ಕಾಕಲ, ಗಲ** (೨), **ತಾಲು** (೨), **ಜಿಹ್ವಾ** (೧), **ಓಷ್ಠ** (೨), **ನಾಸಾ** (೨), **ನೇತ್ರ** (೨), **ಕಪೋಲ** (೪), **ಕರ್ಣ** (೨), **ಲಲಾಟ** (೪), **ಶಿರಃ** (೧), ಇವುಗಳಲ್ಲಿರುವ ಒಟ್ಟು ಪೇಶಿಗಳು ಕೂಡಿ ಗ್ರೀವೋರ್ಧ್ವ ಪ್ರದೇಶದಲ್ಲಿ (೩೪) ಪೇಶಿಗಳಿರುತ್ತವೆ. ಹೀಗೆ ದೇಹದಲ್ಲಿಯ (೫೦೦) ಪೇಶಿಗಳ ವಿವರಣೆಯು ಯಥಾಸ್ಥಾನಾತ್ಮಕವಾಗಿ ಮಾಡಲ್ಪಟ್ಟಿರುತ್ತದೆ

**ಸ್ತ್ರೀಯರಿಗೆ ವಿಶೇಷ** (೨೦) ಪೇಶಿಗಳು ಹೆಚ್ಚಿಗೇ ಇರುತ್ತವೆ ಸ್ತ್ರೀ ದೇಹದಲ್ಲಿ (೫೨೦) ಪೇಶಿಗಳಿರುತ್ತವೆಂದು ತಿಳಿಯಬೇಕು.

**ಸ್ತ್ರೀಣಾಂತುವಿಂಶತಿರಧಿಕಾ॥ ದಶತಾಸಾಂ ಸ್ತನಯೋರೇಕೈಕಸ್ಮಿನ್ ಪಂಚಪಂಚೇತಿ, ಯೌವನೇತಾಸಾಂ ಪರಿವೃದ್ಧಿಃ; ಅಪತ್ಯಪಥೇಚತಸ್ರಃ— ತಾಸಾಂ ಪ್ರಸೃತೇಅಭ್ಯಂತರತೋದ್ವೇ, ಮುಖಾಶ್ರಿತೇ ಬಾಹ್ಯೇಚವೃತ್ತೇದ್ವೇ, ಗರ್ಭಛಿದ್ರಸಂಶ್ರಿತಾಸ್ತಿಸ್ರಃ, ಶುಕ್ರಾರ್ತವಪ್ರವೇಶಿನ್ಯಸ್ತಿಸ್ರಏವ॥ ಪಿತ್ತಪಕ್ವಾಶಯಯೋರ್ಮಧ್ಯೇಗರ್ಭಶಯ್ಯಾ, ಯತ್ರಗರ್ಭಸ್ತಿಷ್ಠತಿ ॥**

(ಸುಶ್ರುತ॥ ಶಾರೀರ॥ ಅ ೫ ಸೂ ೩೯)

ಸ್ತ್ರೀ ದೇಹದಲ್ಲಿರುವ (೨೦) ಅಧಿಕ ಪೇಶಿಗಳ ಸ್ಥಾನಾದಿಗಳ ವಿವರಣೆಯು. **ಸ್ತನ (ಮೊಲೆ)** ಒಂದರಲ್ಲಿ ಐದರಂತೆ ಎರಡರಲ್ಲಿಯೂ ಕೂಡಿ (೧೦) ಪೇಶಿಗಳಿರುತ್ತವೆ. ಯೌವನ ಕಾಲದಲ್ಲಿ ಸ್ತನಗಳಲ್ಲಿಯ ಪೇಶಿಗಳು ವೃದ್ಧಿ ಹೊಂದುತ್ತವೆ. **ಅಪತ್ಯಪಥ** (ಯೋನಿ ಮಾರ್ಗ) ಪ್ರದೇಶಗಳಲ್ಲಿ (೪) ಪೇಶಿಗಳಿರುತ್ತವೆ, ಅವುಗಳ ಪ್ರತ್ಯೇಕ ವಿವರ:- ಯೋನಿಯ ಒಳ ಭಾಗದಲ್ಲಿ ವಿಸ್ತಾರ ಹೊಂದಿದ ಪೇಶಿಗಳು (೨) ಇರುತ್ತವೆ. ಇವುಗಳಿಗೆ ಮೂತ್ರ ಸ್ರೋತಸ್ಸುಗಳೆಂದು ಹೇಳುತ್ತಾರೆ. ಯೋನಿ ಮುಖದಲ್ಲಿ ಹೊರಗೆ ವರ್ತುಲವಾದ (೨) ಪೇಶಿಗಳಿರುತ್ತವೆ. ಹೀಗೆ ಅಪತ್ಯಪಥದಲ್ಲಿ ಹೇಳಿದ ಪೇಶಿಗಳ

ರುವ ಸ್ಥಾನವಾಗಿರುತ್ತವೆ ಗರ್ಭಾಶಯ ರಂಧ್ರದಲ್ಲಿ ಆವರ್ತ (ಮುರಿಗೆ) ರೂಪದಿಂದ (೩) ಇರುತ್ತವೆ ಶುಕ್ರಾರ್ತವಗಳನ್ನು ಪ್ರವೇಶ ಮಾಡುವ (೩) ಪೇಶಿಗಳಿರುತ್ತವೆ. ಒಟ್ಟು ಸ್ತ್ರೀ ದೇಹದಲ್ಲಿ (೨೦) ಪೇಶಿಗಳು ಅಧಿಕ ವಾಗಿರುತ್ತವೆ. ಯೋನಿದ್ವಾರದ ಮೂರನೇ ಆವರ್ತ (ಮುರಿಗೆ) ಸ್ಥಾನದಲ್ಲಿ ಗರ್ಭಾಶಯುವು ಅಂಟಿಕೊಂಡಿರುತ್ತದೆ ಪಿತ್ತಾಶಯ ಪಕ್ವಾಶಯ ಮಧ್ಯ ಪ್ರದೇಶದಲ್ಲಿ ಗರ್ಭಾಶಯುವಿರುತ್ತದೆ. **ಪ್ರತ್ಯಕ್ಷ ಶಾರೀರ ಮತವು** ಬಸ್ತಿ ಪಕ್ವಾಶಯ ಮಧ್ಯೇ ಗರ್ಭಾಶಯುವಿರುತ್ತದೆಂದು ಹೇಳಿದ್ದಾರೆ. ಗರ್ಭಾಶಯ ವೆಂದರೆ ಗರ್ಭೋತ್ಪತ್ತಿಯಾಗಿ ಬೆಳೆಯುವ ಸ್ಥಾನವು .

**ಸ್ತನಗಳಲ್ಲಿ** (೧೦), **ಅಪತ್ಯಪಥ** (೪), **ಗರ್ಭಛಿದ್ರ** (೩), **ಶುಕ್ರಾರ್ತವ ಪ್ರವೇಶಿಕಾ** (೩), ಈ ಮೊದಲಾದ ಸ್ಥಾನಗಳಲ್ಲಿ ಕೂಡಿ (೨೦) ಸ್ತ್ರೀಯರಿಗೆ ಹೆಚ್ಚು ಪೇಶಿಗಳು ಇರುತ್ತವೆ.

**ಪುಂಸಾಂಪೇಶ್ಯಃಪುರಸ್ತಾದ್ಯಾಃ ಪ್ರೋಕ್ತಾ ಲಕ್ಷ್ಣಮುಷ್ಕಜಾಃ||**
**ಸ್ತ್ರೀಣಾಮಾವೃತ್ಯತಿಷ್ಠಂತಿಫಲಮಂತರ್ಗತಂಹಿತಾಃ||**

(ಸುಶ್ರುತ|| ಶಾರೀರ|| ಅ ೫ ಶ್ಲೋ ೪೧)

ಈಗ ಹೇಳಿದ ಪುರುಷರ "**ಲಕ್ಷ್ಣ**"(ಶಿಶ್ನ), **ಮುಷ್ಕ** (ಅಂಡಕೋಶ), ಸ್ಥಾನಗಳಲ್ಲಿರತಕ್ಕ ಪೇಶಿಗಳು ಸ್ತ್ರೀಯರ ಅಂತರ್ಗತ ಗರ್ಭಾಶಯುವನ್ನು ಆವ ರಿಸಿಕೊಂಡಿರುತ್ತವೆ. ಅರ್ಥಾತ್ ಪುರುಷರ ಸ್ಥಾನ ವಿಶೇಷಗಳಲ್ಲಿರುವ (೩) ಪೇಶಿ ಗಳು ಸ್ತ್ರೀಯರ ಗರ್ಭಾಶಯುವನ್ನು (ಫಲ) ಆವರಿಸಿಕೊಂಡಿರುತ್ತವೆ. **ತಂತ್ರಾಂತರಮತವು** ಪುರುಷರಲ್ಲಿರುವ ಶಿಶ್ನ ಅಂಡಕೋಶಗಳು ಸ್ತ್ರೀಯರಲ್ಲಿ ಇಲ್ಲದಿರುವದರಿಂದ, ಗರ್ಭಾಶಯುವನ್ನಾವರಿಸಿಕೊಂಡು ಆ ಸ್ಥಾನದಲ್ಲಿರುತ್ತ ವೆಂದು ಹೇಳಿದ್ದಾರೆ. ಸುಶ್ರುತಾಚಾರ್ಯರು ಇದನ್ನು ಸಮ್ಮತಿಸಿ ಗ್ರಹಿಸಿದ್ದಾರೆ.

**ಭೋಜ ಮತದಲ್ಲಿ** ಸ್ತ್ರೀಯರಿಗೆ **ಲಕ್ಷ್ಣ** (ಶಿಶ್ನ), **ಮುಷ್ಕ** (ಅಂಡ ಕೋಶ), ಸ್ಥಾನಗಳಲ್ಲಿರುವ (೩) ಪೇಶಿಗಳು ಇರುವದಿಲ್ಲೆಂದು ಹೇಳಿದ್ದಾರೆ.

# (೫೮) ಮರ್ಮವಿವರಣೆಯು

ದೇಹದ ಯಾವ ಸ್ಥಳದಲ್ಲಿ ಆಘಾತಾದಿಗಳು ಸಂಭವಿಸಿದರೆ ಸದ್ಯೋ ಮರಣ ಅಥವಾ ತೀವ್ರವಾದ ಅಸಹ್ಯ ವೇದನೆ ಊನತ್ವ ಮೊದಲಾದವುಗಳುಂಟಾಗುತ್ತವೆಯೋ ಆ ಸ್ಥಾನಗಳಿಗೆ "**ಮರ್ಮ**" ವೆಂದು ಹೆಸರು. **ಮಾಂಸ, ಸಿರಾ, ಸ್ನಾಯು, ಅಸ್ಥಿ, ಸಂಧಿ** ಇವುಗಳಲ್ಲಿ ಮರ್ಮಸ್ಥಾನವಿರುತ್ತವೆ. ಆದ್ದರಿಂದ ಮಾಂಸಾದಿಗಳ ಹೆಸರಿನಿಂದಲೇ ಆಯಾಯ ಮರ್ಮಗಳನ್ನು ಹೇಳಿದ್ದಾರೆ. ವಿಶೇಷವಾಗಿ ಪ್ರಾಣಿಗಳ ಪ್ರಾಣವು ಮರ್ಮಗಳಲ್ಲಿರುತ್ತವೆ ಆದ್ದರಿಂದ ಮರ್ಮಾಘಾತವು ಅತ್ಯಂತ ಘಾತಕವಾದದ್ದಿರುತ್ತದೆ. ಇನ್ನು ಶಸ್ತ್ರ ಚಿಕಿತ್ಸಕರಾದ ವೈದ್ಯರೂ ಕೂಡ ಮರ್ಮಾದಿಗಳನ್ನು ಬಿಟ್ಟು ಶಸ್ತ್ರಕರ್ಮ ಮೊದಲಾದವುಗಳನ್ನು ಮಾಡಬೇಕು. ಯಾಕಂದರೆ ಮರ್ಮನಿಹಿತ ಶಸ್ತ್ರದಿಂದ ಹಾನಿ ಸಂಭವಿಸುತ್ತದೆ ಶಸ್ತ್ರ ಪಂಡಿತರಾದ "**ಸುಶ್ರುತಾಚಾರ್ಯರು ಶಸ್ತ್ರ ಕರ್ಮದಲ್ಲಿ**" ಹೀಗೆ ಹೇಳಿದ್ದಾರೆ. "**ಮರ್ಮ ಸಿರಾ ಸ್ನಾಯು ಸಂಧ್ಯಸ್ಥಿ ಧಮನೀಃ ಪರಿಹರನ್**" ಮರ್ಮಾದಿಗಳನ್ನು ಬಿಟ್ಟು ಶಸ್ತ್ರಕರ್ಮ ಮಾಡಬೇಕೆಂದು ವಿವರಿಸಿದ್ದಾರೆ. ಆಶುಕಾರಿ (ಸದ್ಯದಲ್ಲಿಯೇ ಪರಿಣಾಮವನ್ನುಂಟು ಮಾಡುವದು) ಇರುವದರಿಂದ ಮರ್ಮಾದಿಗಳ ವಿಷಯದಲ್ಲಿ ಅತ್ಯಂತ ಜಾಗ್ರತೆ ವಹಿಸಬೇಕಾಗುತ್ತದೆ. ಶಾಸ್ತ್ರಕಾರರು ಮರ್ಮಾದಿಗಳನ್ನು ಕುರಿತು ಮೇಲಿಂದ ಮೇಲೆ ಎಚ್ಚರಿಕೆ ಕೊಟ್ಟು ಆಯಾಯ ಸಂದರ್ಭಗಳಲ್ಲಿ ಪರಿಣಾಮವನ್ನು ಸಹ ವಿವರಿಸಿದ್ದಾರೆ. "**ಮಾರಯಂತೀತಿ, ಮರ್ಮಾಣಿ**" ಮನುಷ್ಯನನ್ನು ಕೊಲ್ಲುತ್ತವೆಯಾದ್ದರಿಂದ ಮರ್ಮಗಳು. ಹೀಗೆ ಮರ್ಮ ಶಬ್ದ ವ್ಯಾಖ್ಯೆಯನ್ನು ಮಾಡಿದರೆ ನಾಶಮಾಡತಕ್ಕವುಗಳಷ್ಟೇ ಮರ್ಮವೆಂದು ಗ್ರಹೀತವಾಗಿ, ಊನತ್ವ ಅಥವಾ ತೀವ್ರ ನೋವನ್ನುಂಟು ಮಾಡುವಂಥವುಗಳು ಮರ್ಮವಲ್ಲೆಂದು ಆಕ್ಷೇಪ ಬರುತ್ತದೆ ಮರ್ಮವೆಂದು ಗ್ರಹೀತವಾದವುಗಳಿಲ್ಲದರಲ್ಲಿಯೂ ವಿಶೇಷ ಜೀವನ ಸ್ಥಿತಿಯು ಅವಲಂಬಿಸಿರುವದರಿಂದ, ಅಧಿಕಾಘಾತವುಂಟಾದರೆ ಮರಣ ಸಂಭವಿಸುತ್ತದೆ. ಅಥವಾ ರುಕ್ಕರ ವೈಕಲ್ಯಕರ ಮರ್ಮಗಳಲ್ಲಿ ಆಘಾತದಿಂದ, ಪೂರ್ವೋಕ್ತ **ಅಗ್ನಿಷೋಮಾದಿ ಪ್ರಾಣಗಳಲ್ಲಿ** (ಪ್ರಾಣದಷ್ಟೇ ಮುಖ್ಯವಾದವುಗಳಲ್ಲಿ) **ಯಾವದಾದರೊಂದರ**

ನಾಶ ಸಂಭವಿಸುವದರಿಂದ "ಮರ್ಮ"ವೆಂದು ಗ್ರಹಿಸುವದು ಯೋಗ್ಯ ವಾಗಿರುತ್ತದೆ. ಆ ಸ್ಥಾನಗಳಲ್ಲಿರುವ ಅಗ್ನಿಷೋಮಾದಿ ಪ್ರಾಣದಲ್ಲಿಯು ಯಾವ ದಾದರೊಂದರ ನಾಶ ಸಂಭವದಿಂದಲೇ ಊನತ್ವಾದಿಗಳುಂಟಾಗುತ್ತವೆ ಆ ಸ್ಥಾನಾಶ್ರಿತ ಸತ್ವ ( ಶಕ್ತಿ ) ನಾಶವಾಗಿದೆಂಬುದೇ ಸ್ಪಷ್ಟಾಭಿಪ್ರಾಯವು. ಧಮನೀ ಸ್ರೋತಸ್ಸುಗಳನ್ನು ಹೇಳಿಲ್ಲವಾದ್ದರಿಂದ ಅವುಗಳು ಗ್ರಹಿತವಲ್ಲೆಂದು ಅನಿಸುತ್ತದೆ ಆದರೂ "**ಸ್ರೋತೋವಿದ್ಧಂತು ಪ್ರತ್ಯಾಖ್ಯೇಯ ಉಪ ಚರೇತ್**" ( ಶಾ ಅ. ೯ ) ಎಂದು ವಿವರಿಸಿರುವದರಿಂದ ಮರ್ಮವೆಂದು ಗ್ರಹಿಸದಂತಾಯಿತು. ಹೀಗೆ ವಿಕಲ್ಪದಿಂದ ದ್ವಿವಿಧಮತವಿದೆಯೆಂದು ತಿಳಿಯ ಬೇಕು. ಇಲ್ಲವೇ ಮಾಂಸದ ಹೊರತಾಗಿ ಧಮನೀ ಸ್ರೋತಸ್ಸುಗಳು ಭಿನ್ನ ವಾಗಿರುವದಿಲ್ಲವಾದ್ದರಿಂದ, ಮಾಂಸ ಮರ್ಮ ಗ್ರಹಣದಿಂದಲೇ ಇವುಗಳು ಉಕ್ತವಾಗಿರುತ್ತವೆಂದು ಪ್ರತಿಪಾದಿಸಿದ್ದಾರೆ ಆದ್ದರಿಂದ ಅನುಕ್ತ ಮಾಂಸ ಮರ್ಮವಿಭಾಗವಾದ ಧಮನೀ ಸ್ರೋತಸ್ಸುಗಳೂ ಮರ್ಮವೆಂದು ತಿಳಿಯ ಬೇಕು. ಮರ್ಮವೆಂದು ಧಮನೀ ಸ್ರೋತಸ್ಸುಗಳನ್ನು ಗ್ರಹಿಸುವದು ಯೋಗ್ಯ ವೆಂದು ವ್ಯಾಖ್ಯಾಕಾರರ ಅಭಿಪ್ರಾಯವಾಗಿರುತ್ತದೆ ಇವೆಲ್ಲ ಕಾರಣದಿಂದ ದೇಹದಲ್ಲಿ ಮರ್ಮಗಳು ಮಹತ್ವವಾಗಿರುವದರಿಂದ ಅವುಗಳ ವಿವರಣೆಯನ್ನು ಮಾಡುತ್ತಾರೆ. ದೇಹದಲ್ಲಿ ಮಾಂಸಾದಿ ಮರ್ಮಗಳು ಕೂಡಿ ( ೧೦೭ ) ಮರ್ಮಗಳಿರುತ್ತವೆ.

## ವಿಶೇಷ ಸೂಚನೆ

ಮರ್ಮಗಳನ್ನು ಅನೇಕರೀತಿಯಿಂದ ವಿಭಾಗಿಸಿದ್ದಾರೆ. ಇಲ್ಲಿ ಮೊದಲೇ ಅವುಗಳ ಸ್ಥಾನಗಳನ್ನು ವಿವರಿಸುತ್ತದೆ. ದೇಹ ವಿಭಾಗದಲ್ಲಿ ಹೇಳಿದ (೧೦೭) ಮರ್ಮಗಳೇ, ಉಳಿದ ವಿಭಾಗ ಮಾಡಿ ಹೇಳಿದವುಗಳಲ್ಲಿಯೂ ಅವೇ ಇರು ತ್ತವೆ **ವಿಭಾಗಗಳ ವಿವರಣೆಯು:—** (೧) ಮಾಂಸಾದಿ ಮರ್ಮಗಳು (೫) ಇರುತ್ತವೆ. (೨) ಕಾಲು ಮೊದಲಾದ ಸ್ಥಾನ ವಿಭಾಗಗಳಲ್ಲಿಯು ಮರ್ಮಗಳು. (೩) ಸದ್ಯಃ ಪ್ರಾಣಹರಾದಿ ಮರ್ಮಗಳು (೫) ವಿಧವಾದವು ಗಳಿರುತ್ತವೆ. ಇವು ಮುಖ್ಯವಾದ ವಿಭಾಗಗಳಾಗಿರುತ್ತವೆ. ಇನ್ನು ಆಗ್ನೇ

ಯಾದಿ ಸ್ಥಾನಾಶ್ರಿತ ಗುಣಗಳಿಂದ ವಿಭಾಗವನ್ನೂ ಮಾಂಸಾದಿಗಳ ಪರಸ್ಪರ ಸಂನ್ನಿಧಾನ ಅಧಿಕ ನ್ಯೂನತೆಗಳಿಂದ ವಿಭಾಗವನ್ನೂ ಮತ್ತು ಮರ್ಮಗಳ ಸಮೀಪದಲ್ಲಿಯ ಆಘಾತ ಮರ್ಮಗಳಲ್ಲಿಯೇ ಆಘಾತವಾದದ್ದರ ಪರಿಣಾಮಾದಿಗಳನ್ನು ಸಹ ವಿಶದೀಕರಿಸುತ್ತಾರೆ. ಬಹಳೇವಿಸ್ತಾರವೂ ಕ್ಲಿಷ್ಟವಾದದ್ದೂ ಇರುವದರಿಂದ ವಿಶೇಷ ಲಕ್ಷ ಕೊಟ್ಟರೇನೇ ಮರ್ಮ ವಿಷಯಗಳಲ್ಲಿ ಜ್ಞಾನವಾಗುವಂತಿದೆ.

## ಮರ್ಮಗಳಲ್ಲಿಯ ಭೇದಗಳು (೫),

**ಸಪ್ತೋತ್ತರಂ ಮರ್ಮಶತಂ॥ ತಾನಿಮರ್ಮಾಣಿಪಂಚಾತ್ಮಕಾನಿಭವಂತಿ; ತದ್ಯಥಾ.- ಮಾಂಸಮರ್ಮಾಣಿ, ಸಿರಾಮರ್ಮಾಣಿ, ಸ್ನಾಯುಮರ್ಮಾಣಿ, ಅಸ್ಥಿಮರ್ಮಾಣಿಸಂಧಿಮರ್ಮಾಣಿಚೇತಿ ॥ ನಖಲುಮಾಂಸಸಿರಾಸ್ನಾಯ್ವಸ್ಥಿಸಂಧಿವ್ಯತಿರೇಕೇಣಾನ್ಯಾನಿಮರ್ಮಾಣಿಭವಂತಿ, ಯಸ್ಮಾನ್ನೋಪಲಭ್ಯಂತೆ ॥**
(ಸುಶ್ರುತ॥ ಶಾರೀರ॥ ಅ ೬ ಸೂ ೩)

ಶರೀರದಲ್ಲಿ (೧೦೭) ಮರ್ಮಗಳು ಇರುತ್ತವೆ ಮರ್ಮಗಳು ಐದು ಪ್ರಕಾರವಾದವುಗಳಿರುತ್ತವೆ. (೧) **ಮಾಂಸಮರ್ಮ** (೨) **ಸಿರಾಮರ್ಮ** (೩) **ಸ್ನಾಯುಮರ್ಮ** (೪) **ಅಸ್ಥಿಮರ್ಮ** (೫) **ಸಂಧಿಮರ್ಮ** ಇವುಗಳ ಹೊರತಾಗಿ ಅನ್ಯ ಮರ್ಮಗಳು ಉಪಲಭ್ಯವಿರುವದಿಲ್ಲವಾದ್ದರಿಂದ, ಮಾಂಸಾದಿಗಳಷ್ಟೇಮರ್ಮಗಳಾಗಿರುತ್ತವೆ. ಇನ್ನುಳಿದ ಸ್ರೋತೋ ಧಮನಿಗಳು ಮಾಂಸವ್ಯತಿರೇಕವಾಗಿಲ್ಲವಾದ್ದರಿಂದ, ಮಾಂಸಮರ್ಮಗಳಲ್ಲಿಯೇ ಅಂತರ್ಭಾವವಾಗುತ್ತವೆ.

## ಮಾಂಸಾದಿ ಮರ್ಮಸಂಖ್ಯೆಯು

**ತತ್ರೈಕಾದಶಮಾಂಸಮರ್ಮಾಣಿ, ಏಕಚತ್ವಾರಿಂಶತ್ ಸಿರಾಮರ್ಮಾಣಿ, ಸಪ್ತವಿಂಶತಿಃ ಸ್ನಾಯುಮರ್ಮಾಣಿ, ಅಷ್ಟಾವಸ್ಥಿಮರ್ಮಾಣಿ, ವಿಂಶತಿಃ ಸಂಧಿಮರ್ಮಾಣಿಚೇತಿ॥ ತದೇತತ್ ಸಪ್ತೋತ್ತರಂ ಮರ್ಮಶತಂ ॥**

ಮಾಂಸಾದಿ ಮರ್ಮಗಳ ಪ್ರತ್ಯೇಕವಾದ ಸಂಖ್ಯೆಗಳನ್ನು ಸ್ಥೂಲ ರೀತಿಯಿಂದ ಹೇಳುತ್ತಾರೆ. (೧) ಮಾಂಸಮರ್ಮಗಳು (೧೧) ಇರುತ್ತವೆ. (೨) ಸಿರಾಮರ್ಮಗಳು (೪೧) ಇರುತ್ತವೆ. (೩) ಸ್ನಾಯುಮರ್ಮಗಳು (೨೭) ಇರುತ್ತವೆ. (೪) ಅಸ್ಥಿಮರ್ಮಗಳು (೮) ಇರುತ್ತವೆ (೫) ಸಂಧಿಮರ್ಮಗಳು (೨೦) ಇರುತ್ತವೆ ಒಟ್ಟು ಎಲ್ಲ ಮರ್ಮಗಳು ಕೂಡಿ (೧೦೭) ಇರುತ್ತವೆ.

## ದೇಹ ವಿಭಾಗದಲ್ಲಿಯ ಮರ್ಮಗಳು

**ತೇಷಾಮೇಕಾದಶೈಕಸ್ಮಿನ್ ಸಕ್ಥ್ನಿ ಭವಂತಿ, ಏತೇನೇತರಸಕ್ಥಿ ಬಾಹೂಚವ್ಯಾಖ್ಯಾತೌ॥ ಉದರೋರಸೋರ್ದ್ವಾದಶ, ಚತುರ್ದಶ, ಪೃಷ್ಠೇ॥ ಗ್ರೀವಾಂ ಪ್ರತ್ಯೂರ್ಧ್ವಂ ಸಪ್ತತ್ರಿಂಶತ್ ॥**
(ಸುಶ್ರುತ॥ ಶಾರೀರ॥ ಅ ೬ ಸೂ ೫)

## ಶಾಖಾಮರ್ಮಗಳು (೪೪)

ಒಂದು ಕಾಲಿನಲ್ಲಿ (೧೧) ಮರ್ಮಗಳಿರುತ್ತವೆ ಇದರಂತೆ **ಎರಡೂ** ಕೈಕಾಲುಗಳಲ್ಲಿ ಕೂಡಿ ಒಟ್ಟು (೪೪) ಮರ್ಮಗಳಾಗುತ್ತವೆ.

## ಕೋಷ್ಠಮರ್ಮಗಳು [೨೬]

**ಉದರ (ಹೊಟ್ಟೆ), ಉರಃ (ಎದೆ), ಈ ಭಾಗಗಳಲ್ಲಿ (೧೨) ಮರ್ಮಗಳಿರುತ್ತವೆ. ಪೃಷ್ಠ (ಬೆನ್ನು) ಭಾಗದಲ್ಲಿ ಮರ್ಮಗಳು (೧೪) ಇರುತ್ತವೆ. ಒಟ್ಟು ಕೋಷ್ಠ ಪ್ರದೇಶಗಳಲ್ಲಿ (೨೬) ಮರ್ಮಗಳಿರುತ್ತವೆ.**

## ಗ್ರೀವೋರ್ಧ್ವಮರ್ಮ (೩೭)

ಕುತ್ತಿಗೆಯಿಂದಾರಂಭಿಸಿ ಮೇಲ್ಭಾಗಗಳಲ್ಲಿ (೩೭) ಮರ್ಮಗಳಿರುತ್ತವೆ ಇವುಗಳಿಗೆ ಗ್ರೀವೋರ್ಧ್ವಮರ್ಮಗಳೆಂದು ಹೆಸರು

ಒಟ್ಟು ಎಲ್ಲಾ ಭಾಗಗಳಲ್ಲಿ ಕೂಡಿ ದೇಹದಲ್ಲಿ (೧೦೭) ಮರ್ಮಗಳಿರುತ್ತವೆ. **ಶಾಖಾ** (೪೪), **ಕೋಷ್ಠ** (೨೬), **ಗ್ರೀವೋರ್ಧ್ವ** (೩೭), ಈ

ಮೊದಲಾದ ಭಾಗಗಳಲ್ಲಿ ಕೂಡಿ (೧೦೭) ಮರ್ಮಗಳು ಶರೀರದಲ್ಲಿರುತ್ತವೆ. ಇದು ಆಯಾಯ ಭಾಗಗಳಲ್ಲಿಯು ಸ್ಥೂಲವಾದ ಸಂಖ್ಯಾ ನಿರ್ದೇಶವಾಗಿರುತ್ತದೆ

## ಸಕ್ಥಿಮರ್ಮಗಳು [೧೧]

**ತತ್ರಸಕ್ಥಿಮರ್ಮಾಣಿ:— ಕ್ಷಿಪ್ರತಲಹೃದಯಕೂರ್ಚಕೂರ್ಚ ಶಿರೋ ಗುಲ್ಫೇಂದ್ರಬಸ್ತಿ ಜಾನ್ವಾಣ್ಯುರ್ವೀಲೋಹಿತಾಕ್ಷಾಣಿ ವಿಟಪಂಚೇತಿ ॥ ಏತೇನೇತರಸಕ್ಥಿವ್ಯಾಖ್ಯಾತಂ ॥**

(ಸಶ್ರುತ॥ ಶಾರೀರ॥ ಅ ೬ ಸೂ ೬)

**[೧] ಕ್ಷಿಪ್ರ, [೨] ತಲಹೃದಯ, [೩] ಕೂರ್ಚ, [೪] ಕೂರ್ಚ ಶಿರ, [೫] ಗುಲ್ಫ,** [೬] **ಇಂದ್ರಬಸ್ತಿ,** [೭] **ಜಾನು,** [೮] **ಆಣೀ,** [೯] **ಉರ್ವೀ,** [೧೦] **ಲೋಹಿತಾಕ್ಷ,** [೧೧] **ವಿಟಪ,** ಇವು ಸಕ್ಥಿ (ಕಾಲಿನ) ಮರ್ಮಗಳಾಗಿರುತ್ತವೆ. ಒಂದು ಕಾಲಿನ ಪ್ರದೇಶದಲ್ಲಿ (೧೧) ಮರ್ಮಗಳಿರುತ್ತವೆ. ಕಾಲಿನಲ್ಲಿರುವ ಮರ್ಮಗಳ ಸ್ಥಾನ ವಿವರಣೆಯು:—

೧ **ಕ್ಷಿಪ್ರ** (ಪಾದಾಂಗುಷ್ಠ ಅದರ ಹತ್ತಿರ ಬೆರಳು ಇವುಗಳ ಮಧ್ಯದಲ್ಲಿ, "ಹೆಬ್ಬೆರಳು ಮತ್ತು ಸಮೀಪದ ಬೆರಳುಗಳ ಅಂತರದಲ್ಲಿರುವ ಪ್ರದೇಶ"ದಲ್ಲಿ),

೨ **ತಲಹೃದಯ** (ಪಾದದ ನಡುವಿನ ಬೆರಳ ಕೆಳಗೆ ಸರಳರೇಖೆಯಿಂದ ಅಂಗಾಲಿನ ಮಧ್ಯದಲ್ಲಿ),

೩ **ಕೂರ್ಚ** (ಕ್ಷಿಪ್ರಮರ್ಮದ ಮೇಲ್ಗಡೆ ಎಡಬಲಗಳಲ್ಲಿ, "ಮತಾಂತರ":- ಕ್ಷಿಪ್ರಮರ್ಮದ ಮೇಲ್ಗಡೆಯಲ್ಲಿ, ಮೇಲಿನ ಮತ್ತು ಕೆಳಅಂಗಾಲಿನ ಪ್ರದೇಶಗಳಲ್ಲಿ),

೪ **ಕೂರ್ಚಶಿರ** (ಪಾದ ಸಂಧಿ ಗಂಟುಗಳ ಕೆಳಗೆ ಎಡಬಲ ಭಾಗಗಳಲ್ಲಿ, "ಮತಾಂತರ":— ಪಾದದ ಹಿಮ್ಮಡ ಮತ್ತು ಮುಂಭಾಗಗಳಲ್ಲಿ),

೫ **ಗುಲ್ಫ** (ಪಾದ ಮತ್ತು ಮೊಣಕಾಲುಗಳು ಕೂಡಿದ ಸಂಧಿ, ಪಾದದ ಮೇಲಿನ ಸಂಧಿ ಗಂಟುಗಳಿರುವಲ್ಲಿ),

೬ **ಇಂದ್ರಬಸ್ತಿ** (ಹಿಮ್ಮಡದಿಂದ(ಪಾರ್ಷ್ಣಿ)ಮೇಲೆ ಮೊಣಕಾಲಮಧ್ಯದಲ್ಲಿ),

೭ **ಜಾನು** (ಮೊಣಕಾಲು ತೊಡೆಗಳು ಕೂಡಿದ ಸಂಧಿ, ಮೊಣಕಾಲ ಮೇಲಿನ ಸಂಧಿ),

೮ **ಆಣೀ** (ಜಾನುಮರ್ಮದ ಮೇಲ್ಗಡೆ ಎಡಬಲ ಪಾರ್ಶ್ವಗಳಲ್ಲಿ. "ಮತಾಂತರ— ಜಾನುವಿನ ಮೇಲ್ಗಡೆ ಎದುರು ಮತ್ತು ಹಿಂದಿನ ಭಾಗಗಳಲ್ಲಿ),

೯ **ಉರ್ವೀ** (ತೊಡೆಯ ಮಧ್ಯ ಪ್ರದೇಶದಲ್ಲಿ),

೧೦ **ಲೋಹಿತಾಕ್ಷ** (ಉರ್ವೀ ಮರ್ಮದ ಮೇಲ್ಗಡೇ ತೊಡೆ ಅಸ್ಥಿಸಂಧಿಗಳ ಕೆಳಭಾಗಗಳಲ್ಲಿ),

೧೧ **ವಿಟಪ** (ತೊಡೆಗಳ ಅಸ್ಥಿಸಂಧಿಗಳಿಂದ ಎರಡೂ ಕಡೆ ಅಂಡದ ವರೆಗಿನ ಪ್ರದೇಶಗಳಲ್ಲಿ),

ಈ ಮೊದಲಾದ ಸ್ಥಾನಗಳಲ್ಲಿ ಕ್ಷಿಪ್ರಾದಿ ಸಕ್ಥಿ ಮರ್ಮಗಳಿರುತ್ತವೆ ಎರಡೂ ಕಾಲುಗಳಲ್ಲಿ ಕೂಡಿ ಒಟ್ಟು (೨೨) ಮರ್ಮಗಳಾಗುತ್ತವೆ ಇವು ಕಾಲುಗಳಲ್ಲಿಯ ಮರ್ಮ ಮತ್ತು ಅವುಗಳ ಸ್ಥಾನಗಳಾಗಿರುತ್ತವೆ.

### ಹೊಟ್ಟೆ ಮತ್ತು ಎದೆ ಪ್ರದೇಶ ಮರ್ಮಗಳು (೧೨)

**ಉದರೋರಸೋಸ್ತು, ಗುದಬಸ್ತಿನಾಭಿ ಹೃದಯಸ್ತನಮೂಲ ಸ್ತನರೋಹಿತಾಪಲಾಪಾನ್ಯಪಸ್ತಂಭೌ ಚೇತಿ ||**

(ಸುಶ್ರುತ|| ಶಾರೀರ|| ಅ ೬ ಸೂ ೬)

ಹೊಟ್ಟೆ ಮತ್ತು ಎದೆ ಪ್ರದೇಶಗಳಲ್ಲಿಯ ಮರ್ಮಗಳು (೧೨) ಇರುತ್ತವೆ. **(೧) ಗುದ, (೨) ಬಸ್ತಿ, (೩) ನಾಭಿ, (೪) ಹೃದಯ, (೫)**

**ಸ್ತನಮೂಲ, (೬) ಸ್ತನರೋಹಿತ, (೭) ಅಪಲಾಪ, (೮) ಅಪಸ್ತಂಭ,** ಇವು ಉದರ ಮತ್ತು ಎದೇ ಪ್ರದೇಶಗಳಲ್ಲಿರುತ್ತವೆ ಸ್ತನಮೂಲದಿಂದಾರಂಭಿಸಿ ಪ್ರತಿಯೊಂದು ಮರ್ಮಗಳು ಎರಡು ಇರುತ್ತವೆ. ಆದ್ದರಿಂದ ಉದರ ಉರಸ್ಸುಗಳ ಭಾಗದಲ್ಲಿ (೧೨) ಮರ್ಮಗಳಾಗುತ್ತವೆ.

೧ **ಗುದ** (ಅಧೋವಾಯು ಮಲಗಳನ್ನು ಹೊರಗೆ ಹಾಕುವ ಸ್ಥೂಲಾಂತ್ರ ಬದ್ಧವಾದ ದ್ವಾರ ಪ್ರದೇಶ, ಮಲ ನಿರ್ಗಮನ ದ್ವಾರವು),

೨ **ಬಸ್ತಿ** (ಕಟಿಪ್ರದೇಶದಲ್ಲಿ ಎದುರಿಗೆ ಕೆಳಭಾಗದಲ್ಲಿ, ಇದಕ್ಕೆ ಮೂತ್ರಾಶಯ ವೆಂಬ ಹೆಸರು),

೩ **ನಾಭಿ** (ಹೊಕ್ಕಳು),

೪ **ಹೃದಯ** (ಎದೆಯಲ್ಲಿ ಸ್ತನಗಳ ಮಧ್ಯ ಪ್ರದೇಶದಲ್ಲಿ, ಆಮಾಶಯ ದ್ವಾರದ ಹತ್ತಿರದಲ್ಲಿರುತ್ತದೆ),

೫ **ಸ್ತನಮೂಲ** (ಎರಡೂ ಸ್ತನಗಳ ಕೆಳಗೆ ಎರಡಂಗುಲ ಪ್ರದೇಶಗಳಲ್ಲಿ),

೬ **ಸ್ತನರೋಹಿತ** (ಸ್ತನಗಳ ಮೇಲ್ಭಾಗದಲ್ಲಿ ಎರಡಂಗುಲಪ್ರದೇಶಗಳಲ್ಲಿ),

೭ **ಅಪಲಾಪ** (ಎಡಬಲ ರಟ್ಟೇ ಸಂಧಿಗಳ ಕೆಳಗೆ ಪಾರ್ಶ್ವಗಳ ಮೇಲ್ಭಾಗಗಳಲ್ಲಿ, ಬಗಲುಗಳ ಅದಿಯ ಪಾರ್ಶ್ವ ಭಾಗಗಳಲ್ಲಿ),

೮ **ಅಪಸ್ತಂಭ** (ಎದೆಯ ಎಡಬಲಭಾಗಗಳಲ್ಲಿರುವ ವಾತವಹಾನಾಡಿಗಳು, "ಮತಾಂತರ":–ಎದೆಯ ಎರಡೂ ಪಾರ್ಶ್ವ (ಪಕ್ಕ)ಗಳಲ್ಲಿಯ ವಾತವಹ ನಾಡಿಗಳು),

ಈ ಮೊದಲಾದ ಸ್ಥಾನಗಳಲ್ಲಿ ಗುದ ಮುಂತಾದ ಮರ್ಮಗಳಿರುತ್ತವೆ. ಇವು ಉದರ ಎದೆಗಳಲ್ಲಿರುವ ಮರ್ಮ ಮತ್ತು ಅವುಗಳ ಸ್ಥಾನಗಳು

## ಬೆನ್ನಿನಲ್ಲಿ ಮರ್ಮಗಳು (೧೪)

**ಪೃಷ್ಠಮರ್ಮಾಣಿತು, ಕಟೀಕ ತರುಣ ಕುಕಂದರ ನಿತಂಬ ಪಾರ್ಶ್ವಸಂಧಿಬೃಹತೀ ಅಂಸಫಲಕಾನ್ಯಂಸೌ ಚೇತಿ ॥**
(ಸುಶ್ರುತ॥ ಶಾರೀರ॥ ಅ ೬ ಸೂ. ೬)

**೧ ಕಟೀಕ, ೨ ತರುಣ, ೩ ಕುಕುಂದರ, ೪ ನಿತಂಬ, ೫ ಪಾರ್ಶ್ವಸಂಧಿ, ೬ ಬೃಹತೀ, ೭ ಅಂಸಫಲಕ, ೮ ಅಂಸ,** ಇವು ಬೆನ್ನು [ಪೃಷ್ಠ] ಪ್ರದೇಶಗಳಲ್ಲಿಯ ಮರ್ಮಗಳು. ಕುಕುಂದರದಿಂದ ಪ್ರತಿಯೊಂದು ಮರ್ಮಗಳು ಎರಡರಂತೆ ಇರುವದರಿಂದ ಬೆನ್ನಿನ ಪ್ರದೇಶಗಳಲ್ಲಿ [೧೪] ಮರ್ಮಗಳಾಗುತ್ತವೆ

೧-೨ **ಕಟೀಕ** ಮತ್ತು **ತರುಣ** [ಕಶೇರುಕಾಸ್ಥಿ ಕೂಡುವ ಸ್ಥಳದಲ್ಲಿ ಟೊಂಕದ ಎರಡೂ ಪಾರ್ಶ್ವಗಳಲ್ಲಿ, ಕಟಿಯ ಮೇಲ್ಭಾಗದಲ್ಲಿ ಎಡಬಲ ತ್ರಿಕಾಸ್ಥಿಗಳಲ್ಲಿ],

೩ **ಕುಕುಂದರ** [ಪೃಷ್ಠ ವಂಶದ ಎರಡೂ ಕಡೆ ಪಾರ್ಶ್ವಗಳಲ್ಲಿ ಜಘನ ಬಹಿರ್ಭಾಗದಲ್ಲಿ, "ಮತಾಂತರ":- ಟೊಂಕದ ಎಡಬಲಗಳಲ್ಲಿ ಹಿಂದಿನ ಮೇಲ್ಭಾಗಗಳಲ್ಲಿ, "ಗಯೀಮತ" ಪಾರ್ಶ್ವಗಳಲ್ಲಿ [ತಿಕದ] ಜಘನದ ಅಧೋ ಭಾಗ ತಗ್ಗು ಪ್ರದೇಶಗಳಲ್ಲಿ, "ವಿವೇಚನೆ":— ಬೆನ್ನು ಹುರಿಯ ಎಡಬಲ ಭಾಗಗಳಲ್ಲಿ ಟೊಂಕದ ಅಸ್ಥಿಸಂಧಿಗಳಿರುತ್ತವೆ. ಆ ಸ್ಥಳಕ್ಕೆ ಕುಕುಂದರವೆನ್ನುತ್ತಾರೆ],

೪ **ನಿತಂಬ** [ಕಟಿ ಸಂಧಾನ ತ್ರಿಕಾಸ್ಥಿಗಳ ಮೇಲ್ಭಾಗದಲ್ಲಿ ಮಲಾಶಯಕ್ಕೆ ಆಚ್ಛಾದಕವಾಗಿ ಎಡ ಬಲ ಪಾರ್ಶ್ವಗಳಲ್ಲಿ ಪ್ರತಿಬದ್ಧವಾದ ಅಸ್ಥಿಫಲಕಗಳು, "ಸ್ಪಷ್ಟಾರ್ಥ":— ಟೊಂಕದ ಪೃಷ್ಠಾಸ್ಥಿದಂಡಕ್ಕೆ ಎಡಬಲ ಪಾರ್ಶ್ವಗಳಲ್ಲಿ ಹೊಂದಿಕೊಂಡು ಮಲಾಶಯಾದಿಗಳನ್ನು ಆಚ್ಛಾದಿಸುವ ಸ್ವಲ್ಪ ವರ್ತುಲಾಕಾರವುಳ್ಳ ಅಸ್ಥಿಫಲಕಗಳು, ಇವುಗಳ ಮಧ್ಯದಲ್ಲಿ ಪೃಷ್ಠಾಸ್ಥಿದಂಡವು [ಬೆನ್ನುಹುರಿ] ಪ್ರತಿಬದ್ಧವಾಗಿರುತ್ತದೆ],

೫ **ಪಾರ್ಶ್ವಸಂಧಿ** [ಪಕ್ಕಡಿ, ಎಡಬಲ ಪಾರ್ಶ್ವಗಳಲ್ಲಿ ಅಸ್ಥಿಫಲಕವುಳ್ಳ ಸಂಧಿಗಳು, "ಕನ್ನಡದಲ್ಲಿ" ಇದಕ್ಕೆ ಪಕ್ಕಡಿ, ಪಾರ್ಶ್ವ, ಪಕ್ಕೆಲಬುಗಳೆಂದು ಹೇಳುತ್ತಾರೆ],

೬ **ಬೃಹತೀ** [ಸ್ತನ ಮೂಲಗಳ ಸರಳರೇಖೆಯಿಂದ ಸರಿಯಾಗಿ ಹಿಂಬದಿಯ ಎಡಬಲ ಪಾರ್ಶ್ವಗಳಲ್ಲಿ],

೭ **ಅಂಸಫಲಕ** [ಬೆನ್ನಿನ ಮೇಲ್ಗಡೆ ಪೃಷ್ಠವಂಶದ ಎರಡೂ ಕಡೆಗಳಲ್ಲಿ, "ಕನ್ನಡದಲ್ಲಿ" ಇದಕ್ಕೆ ಭುಜಾಸ್ಥಿ, ಭುಜ ಪ್ರದೇಶದಲ್ಲಿ ಕೆಳಗಡೆ ಇರುವ ಅಸ್ಥಿಫಲಕಗಳು, ಹೆಗಲಿನ ಎಲುಬಿನ ಹಲಿಗೆಗಳೆಂದು ಅನ್ನುತ್ತಾರೆ],

೮ **ಅಂಸ** [ಎರಡುರಟ್ಟೆಗಳ ಆದಿಯ ಅಡ್ಡೆಲಬುಗಳು, ಬಾಹುಗಳೆರಡು ಕುತ್ತಿಗೆ ಇವುಗಳು ಕೂಡಿದ ಸ್ಥಳಕ್ಕೆ ತ್ರಿಕವೆಂಬ ಹೆಸರು. ಇಲ್ಲಿ ಬದ್ಧವಾದ ಬಾಹು ಮೂಲಗಳಲ್ಲಿಯ ಅಡ್ಡೆಲುಬುಗಳು],

ಈ ಮೊದಲಾದ ಸ್ಥಾನಗಳಲ್ಲಿ, ಕಟೀಕ ತರುಣ ಮುಂತಾದ ಪೃಷ್ಠ ಮರ್ಮಗಳಿರುತ್ತವೆ.

## ಬಾಹುಮರ್ಮಗಳು (೨೨)

**ಬಾಹುಮರ್ಮಾಣಿತು, ಶಿಪ್ರತಲಹೃದಯಕೂರ್ಚಕೂರ್ಚ ಶಿರೋಮಣಿಬಂಧ ಇಂದ್ರಬಸ್ತಿಕೂರ್ಪರಾಣ್ಯುರ್ವೀಲೋಹಿತಾ ಕ್ಷಾಣಿಕಕ್ಷಧರಂಚೇತಿ॥ ಏತೇನೇತರೋಬಾಹುರ್ವ್ಯಾಖ್ಯಾತಃ॥**

(ಸುಶ್ರುತ॥ ಶಾರೀರ॥ ಅ ೬ ಸೂ ೬)

ಬಾಹು (ತೋಳು, ರಟ್ಟೆ) ಮರ್ಮಗಳು (೧೧) ಇರುತ್ತವೆ. **(೧) ಶಿಪ್ರ, (೨) ತಲಹೃದಯ, (೩) ಕೂರ್ಚ, (೪) ಕೂರ್ಚಶಿರ, (೫) ಮಣಿಬಂಧ, (೬) ಇಂದ್ರಬಸ್ತಿ, (೭) ಕೂರ್ಪರ, (೮) ಆಣೀ, (೯) ಉರ್ವೀ, (೧೦) ಲೋಹಿತಾಕ್ಷ, (೧೧) ಕಕ್ಷಧರ,** ಇವುಗಳು

ಬಾಹು ಮರ್ಮಗಳಾಗಿರುತ್ತವೆ. ಇದರಂತೆ ಎರಡೂ ಬಾಹುಗಳಲ್ಲಿ ಕೂಡಿ (೨೨) ಮರ್ಮಗಳಿರುತ್ತವೆ.

ಇಲ್ಲಿ ಬಾಹು ಮರ್ಮಗಳಲ್ಲಿ, ಸಕ್ಥಿ ಮರ್ಮಗಳಲ್ಲಿ ಹೇಳಿದಂತೇ ಸ್ಥಾನಗಳನ್ನು ಹೋಲಿಸಿಕೊಂಡು ತಿಳಿಯಬೇಕು:— **ಸಕ್ಥಿ ಮರ್ಮಗಳಲ್ಲಿ** (೧) **ಗುಲ್ಫ,** (೨) **ಜಾನು,** (೩) **ವಿಟಪಗಳು** ಇರುತ್ತವೆ. ಇವುಗಳ ಬದಲಾಗಿ ಬಾಹುಗಳಲ್ಲಿರುವ ಮರ್ಮಗಳ ಹೆಸರುಗಳು ಇಂತಿರುತ್ತವೆ **ಬಾಹು ಸ್ಥಾನಮರ್ಮಗಳಲ್ಲಿ** (೧) **ಮಣಿಬಂಧ,** (೨) **ಕೂರ್ಪರ,** (೩) **ಕಕ್ಷಧರ,** ಇವುಗಳು ಇರುತ್ತವೆಯೆಂದು ತಿಳಿಯಬೇಕು "ವಿಟಪ" ಮರ್ಮವು ತೊಡೆ ಅಂಡಕೋಶಗಳ ಮಧ್ಯದಲ್ಲಿರುವಂತೇ, ಇಲ್ಲಿ "**ಕಕ್ಷಧರ**" ಮರ್ಮವು ಎದೆ ಬಗಲುಗಳ ನಡುವೆ ಇರುತ್ತದೆಂದು ತಿಳಿಯಬೇಕು. ಈ ಮೊದಲಾದ ಸ್ಥಾನಗಳಲ್ಲಿ ಶಿಪ್ರ ಮುಂತಾದ ಬಾಹುಮರ್ಮಗಳಿರುತ್ತವೆ.

## ಜತ್ರೂರ್ಧ್ವಮರ್ಮಗಳು (೩೭)

**ಜತ್ರುಣಊರ್ಧ್ವಂ, ಚತಸ್ರೋಧಮನ್ಯೋಽಷ್ಟೌಮಾತೃಕಾ ದ್ವೇಕೃಕಾಟಿಕೇದ್ವೇವಿಧುರೇದ್ವೇಫಣೇ ದ್ವಾವಪಾಂಗೌದ್ವಾವಾವರ್ತೌ ದ್ವಾವುತ್ ಕ್ಷೇಪೌದ್ವೌಶಂಖಾವೇಕಾಸ್ಥಪನೀ ಪಂಚಸೀಮಂತಾಶ್ಚತ್ವಾರಿಶೃಂಗಾಟಕಾನ್ಯೇಕೋಽಧಿಪತಿರಿತಿ ||**

(ಸುಶ್ರುತ|| ಶಾರೀರ|| ಅ ೬ ಸೂ ೬)

ಬಾಹುಸಂಧಿಗಳ (ಜತ್ರು) ಮೇಲ್ಗಡೆಯಲ್ಲಿರುವ ಮರ್ಮಗಳು (೩೭) ಇರುತ್ತವೆ. **[೪] ಧಮನೀಗಳು, [೮] ಮಾತೃಕಾಗಳು, [೨] ಕೃಕಾಟಿಕೆ, [೨] ವಿಧುರೇ, [೨] ಫಣೇ, [೨] ಅಪಾಂಗ, [೨] ಆವರ್ತ [೨] ಉತ್ ಕ್ಷೇಪ, (೨) ಶಂಖ, (೧) ಸ್ಥಪನೀ, (೫) ಸೀಮಂತ, (೪) ಶೃಂಗಾಟಕ, (೧) ಅಧಿಪತಿ,** ಒಟ್ಟು ಜತ್ರೂರ್ಧ್ವಭಾಗಗಳಲ್ಲಿ (೩೭) ಮರ್ಮಗಳಿರುತ್ತವೆ.

೪ **ಧಮನಿಗಳು,** (ಕಂಠನಾಳದ ಎರಡೂ ಕಡೆ "ನೀಲ" ಮತ್ತು "ಮನ್ಯ" ಗಳೆಂಬ ಪ್ರತಿಯೊಂದು ಎರಡೆರಡರಂತೇ ಧಮನಿಗಳಿದ್ದು ಕತ್ತರಿಯಂತೇ ಹೋಗಿರುತ್ತವೆ),

೮ **ಮಾತೃಕಾ,** (ಕುತ್ತಿಗೆ ಎರಡೂ ಪಾರ್ಶ್ವಗಳಲ್ಲಿ ನಾಲ್ಕುನಾಲ್ಕರಂತೆ ಸಿರಗಳಿರುತ್ತವೆ),

೨ **ಕೃಕಾಟಿಕೆ,** (ತಲೆ ಮತ್ತು ಕುತ್ತಿಗೆಗಳ ಸಂಧಾನ ಸ್ಥಾನದಲ್ಲಿ),

೨ **ವಿಧುರೆ,** (ಕಿವಿಗಳ ಹಿಂದೆ ಕೆಳಗಡೇ ಭಾಗಗಳಲ್ಲಿ),

೨ **ಫಣೇ,** (ಮೂಗಿನ ರಂಧ್ರಗಳ ಆದಿಯ ಒಳಭಾಗಗಳಲ್ಲಿ),

೨ **ಅಪಾಂಗ,** (ಎರಡೂ ಹುಬ್ಬುಗಳ ತುದಿಯಲ್ಲಿ ಕೆಳಗೆ ಕಣ್ಣುಗಳ ಹೊರ ಭಾಗಗಳಲ್ಲಿ),

೨ **ಆವರ್ತ,** (ಹುಬ್ಬುಗಳ ಮೇಲ್ಭಾಗದಲ್ಲಿರುವ ಸ್ವಲ್ಪ ತಗ್ಗಾದ ಪ್ರದೇಶಗಳಲ್ಲಿ),

೨ **ಶಂಖ,** (ಹುಬ್ಬುಗಳ ಕೊನೇ ಭಾಗಗಳ ಮೇಲೆ ಕಿವಿ ಹಣೆಗಳ ಮಧ್ಯ ಭಾಗಗಳಲ್ಲಿ, ಇದಕ್ಕೆ ಮೆಲಕು ಎಂದು ಅನ್ನುತ್ತಾರೆ),

೨ **ಉತ್ ಕ್ಷೇಪ,** (ಶಂಖ ಮರ್ಮಗಳ ಮೇಲ್ಭಾಗ ಕೇಶಾಂತ್ಯ ಪ್ರದೇಶ ಗಳಲ್ಲಿ),

೧ **ಸ್ಥಪನೀ,** (ಎರಡೂ ಹುಬ್ಬುಗಳು ಕೂಡಿದ ಮಧ್ಯಭಾಗದಲ್ಲಿ),

೫ **ಸೀಮಂತ,** (ತಲೇ ಪರಟೆಗಳಲ್ಲಿ ಪರಸ್ಪರ ಎಲುಬುಗಳು ಕೂಡಿದ [೫] ಸಂಧಿಗಳು),

೪ **ಶೃಂಗಾಟಕ** (ಮೂಗು ಕಿವಿ ಕಣ್ಣು ನಾಲಗೆಗಳನ್ನು ಪೋಷಿಸುವ ಸಿರಗಳು ಒಟ್ಟುಗೂಡಿದ ಸ್ಥಳದಲ್ಲಿ, ಆವಾವ ಮೂಗು ಮೊದಲಾದ ಸಿರಗಳನ್ನು ಪ್ರತ್ಯೇಕ ಗ್ರಹಿಸಿದ್ದಾರೆ),

೧ **ಅಧಿಪತಿ** (ತಲೆಯ ಒಳಗಡೆ ಮೇಲ್ಭಾಗದಲ್ಲಿ ಸಿರಾ ಸಂಧಿಗಳು ಒಂದೆಡೆಯಾಗುವ ಸ್ಥಳದಲ್ಲಿ, "ವಿಶೇಷ" ಇದರ ಮೇಲ್ಭಗ ತಲೆಯಲ್ಲಿ ಕೂದಲ ಸುಳಿ ಇರುತ್ತದೆ "ಕನ್ನಡದಲ್ಲಿ" ನೆತ್ತಿಯೆಂದು ಅನ್ನುತ್ತಾರೆ),

ಈ ಮೊದಲಾದ ಸ್ಥಳಗಳಲ್ಲಿ ಧಮನೀ ಮುಂತಾದ ಜತ್ರೂರ್ಧ್ವ ಮರ್ಮಗಳಿರುತ್ತವೆ. **ಸಕ್ಥಿಮರ್ಮ** [೨೨], **ಹೊಟ್ಟೆ ಎದೆಗಳ ಮರ್ಮ** [೧೨], **ಬೆನ್ನಿನ ಮರ್ಮ** [೧೪], **ಬಾಹು ಮರ್ಮ** [೨೨], **ಜತ್ರೂರ್ಧ್ವ ಮರ್ಮ** [೩೭], ಈ ಮೊದಲಾದ ಪ್ರದೇಶಗಳಲ್ಲಿಯ ಒಟ್ಟು ಮರ್ಮಗಳು ಕೂಡಿ [೧೦೭] ಇರುತ್ತವೆ. ಇವು ಸ್ಥೂಲ ರೀತಿಯ ಮರ್ಮಗಳ ವಿಭಾಗ ಸ್ಥಳಗಳು. ಮುಂದೆ ಪ್ರತ್ಯೇಕ ಮರ್ಮಗಳ ಪ್ರಮಾಣಾವಧಿ ಮತ್ತು ಅಲ್ಲಿ ಸಂಭವಿಸುವ ಆಘಾತ ಪರಿಣಾಮಗಳನ್ನೂ ಹೇಳುತ್ತಾರೆ.

## ಮಾಂಸಮರ್ಮಗಳು (೧೧)

**ತತ್ರತಲಹೃದಯೇಂದ್ರ ಬಸ್ತಿಗುದ ಸ್ತನರೋಹಿತಾನಿ ಮಾಂಸ ಮರ್ಮಾಣಿ** ॥ (ಸುಶ್ರುತ॥ ಶಾರೀರ॥ ಅ ೬ ಸೂ ೭)

**೪ ತಲಹೃದಯ, ೪ ಇಂದ್ರಬಸ್ತಿ, ೧ ಗುದ, ೨ ಸ್ತನರೋಹಿತ,** ಒಟ್ಟು ಮಾಂಸ ಮರ್ಮಗಳು (೧೧) ಇರುತ್ತವೆ.

**ಸೂಚನೆ.**— ಎಲ್ಲ ಮರ್ಮಗಳ ಸ್ಥಳಗಳನ್ನು ಇದೇ ಹಿಂದೆ ವಿವರಿಸಿ ಹೇಳಿದ್ದರಿಂದ, ಈಗ ಪುನಃ ವಿವರಣೆಯನ್ನು ಮಾಡಿರುವದಿಲ್ಲ. ದೇಹದಲ್ಲಿರುವ (೧೦೭) ಮರ್ಮಗಳ ಸ್ಥಾನ ನಿರ್ದೇಶಗಳು ಕ್ರಮಶಃ ಮುಗಿದಿರುತ್ತವೆ. ಅಲ್ಲಿ ಹೇಳಿದ ಮರ್ಮಗಳನ್ನೇ ಮಾಂಸಾದಿ ವಿಭಾಗಗಳಿಂದಲೂ, ಸದ್ಯಃ ಪ್ರಾಣಹರಾದಿ ಭೇದಗಳಿಂದಲೂ ವಿವರಿಸುತ್ತಾರೆ. ಆದ್ದರಿಂದ ಮರ್ಮಾದಿಗಳ ಸ್ಥಾನ ವಿವರಣೆಯಲ್ಲಿ ಚನ್ನಾಗಿ ಪರಿಚಯವು ದೊರೆಯುತ್ತದೆ.

## ಸಿರಾಮರ್ಮಗಳು [೪೧]

**ನೀಲಧಮನೀ ಮಾತೃಕಾಶೃಂಗಾಟಕಾಪಾಂಗಸ್ಥಪನೀಫಣಸ್ತ**

ನಮೂಲಾಪಲಾಪಾಪಸ್ತಂಭ ಹೃದಯನಾಭಿಪಾರ್ಶ್ವಸಂಧಿಬೃ
ಹತೀಲೋಹಿತಾಕ್ಷೋರ್ವ್ಯಃ ಸಿರಾಮರ್ಮಾಣಿ ॥

(ಸುಶ್ರುತ॥ ಶಾರೀರ॥ ಅ ೬ ಸೂ ೭)

(೪) ನೀಲಧಮನೀ, (೮) ಮಾತೃಕಾ, (೪) ಶೃಂಗಾಟಕ, (೨) ಅಪಾಂಗ, (೧) ಸ್ಥಪನೀ (೨) ಫಣೇ, (೨) ಸ್ತನಮೂಲ, (೨) ಅಪಸ್ತಂಭ, (೨) ಅಪಲಾಪ, (೧) ಹೃದಯ, (೧) ನಾಭಿ, (೨) ಪಾರ್ಶ್ವಸಂಧಿ, (೨) ಬೃಹತೀ, (೪) ಲೋಹಿತಾಕ್ಷ, (೪) ಉರ್ವೀ, ಇವುಗಳು ಸಿರಾಮರ್ಮಗಳು ಒಟ್ಟು ಕೂಡಿ (೪೧) ಇರುತ್ತವೆ

## ಸ್ನಾಯುಮರ್ಮಗಳು [೨೭]

ಆಣೀವಿಟಪಕಕ್ಷಧರ ಕೂರ್ಚಕೂರ್ಚಶಿರೋಬಸ್ತಿಕ್ಷಿಪ್ರಾಂಸವಿ
ಧುರೋತ್‍ಕ್ಷೇಪಾಃ ಸ್ನಾಯುಮರ್ಮಾಣೀ॥ (ಸು॥ ಶಾ॥ ಸೂ೭)

(೪) ಆಣೀ, (೨) ವಿಟಪ, (೨) ಕಕ್ಷಧರ, (೪) ಕೂರ್ಚ, (೪) ಕೂರ್ಚಶಿರಃ, (೧) ಬಸ್ತಿ, (೪) ಕ್ಷಿಪ್ರ, (೨) ಅಂಸ, (೨) ವಿಧುರ, (೨) ಉತ್‍ಕ್ಷೇಪ, ಇವುಗಳು ಸ್ನಾಯುಮರ್ಮಗಳು ಒಟ್ಟು ಕೂಡಿ (೨೭) ಇರುತ್ತವೆ.

## ಅಸ್ಥಿಮರ್ಮಗಳು (೮)

ಕಟೀಕತರುಣನಿತಂಬಾಂಸಫಲಕಶಂಖಾಸ್ತ್ವಸ್ಥಿಮರ್ಮಾಣಿ॥

(ಸು॥ ಶಾ॥ ಸೂ೭)

(೧) ಕಟೀಕ, (೧) ತರುಣ, (೨) ನಿತಂಬ, (೨) ಅಂಸಫಲಕ, (೨) ಶಂಖ, ಇವುಗಳು (೮) ಅಸ್ಥಿಮರ್ಮಗಳು.

## ಸಂಧಿಮರ್ಮಗಳು [೨೦]

**ಜಾನುಕೂರ್ಪರಸೀಮಂತಾಧಿಪತಿಗುಲ್ಫಮಣಿಬಂಧಕುಕುಂದರಾವರ್ತಕೃಕಾಟಿಕಾಶ್ಚೇತಿಸಂಧಿಮರ್ಮಾಣಿ॥**

(ಸುಶ್ರುತ॥ ಶಾರೀರ॥ ಅ ೬ ಸೂ ೭)

(೨) ಜಾನು, (೨) ಕೂರ್ಪರ, (೫) ಸೀಮಂತ, (೧) ಅಧಿಪತಿ, (೨) ಗುಲ್ಫ, (೨) ಮಣಿಬಂಧ, (೨) ಕುಕುಂದರ, (೨) ಆವರ್ತ, (೨) ಕೃಕಾಟಿಕ, ಇವುಗಳು ಒಟ್ಟು (೨೦) ಸಂಧಿಮರ್ಮಗಳು ಇರುತ್ತವೆ.

## ಸದ್ಯಃ ಪ್ರಾಣಹರಾದಿಮರ್ಮ ವಿಭಾಗಗಳು

**ತಾನ್ಯೇತಾನಿಪಂಚವಿಕಲ್ಪಾನಿಭವಂತಿ; ತದ್ಯಥಾ:– ಸದ್ಯಃಪ್ರಾಣಹರಾಣಿ, ಕಾಲಾಂತರಪ್ರಾಣಹರಾಣಿ, ವಿಶಲ್ಯಘ್ನಾನಿ, ವೈಕಲ್ಯಕರಾಣಿ, ರುಜಾಕರಾಣಿಚೇತಿ,॥** (ಸು॥ ಶಾ॥ ಅ ೬ ಸೂ ೮)

ಮರ್ಮಗಳು ಪ್ರಾಣಹಾರಕವಾದವುಗಳಿದ್ದರೂ, ಅವುಗಳಲ್ಲಿರುವ ಪ್ರಾಣಹಾರಕ ರುಜಾಕಾರಕಾದಿ ಭೇದಗಳಿಂದ ವಿವರಿಸುತ್ತಾರೆ. ಮರ್ಮಗಳಲ್ಲಿ ಸದ್ಯಃ ಪ್ರಾಣಹಾರಾದಿ ವಿಭಾಗಗಳಿಂದ (೫) ಪ್ರಕಾರ ಮರ್ಮಗಳಿರುತ್ತವೆ.

(೧) ಸದ್ಯಃಪ್ರಾಣಹರ, (೨) ಕಾಲಾಂತರಪ್ರಾಣಹರ, (೩) ವಿಶಲ್ಯಘ್ನ, (೪) ವೈಕಲ್ಯಕರ, (೫) ರುಜಾಕರ ಈ ಮೊದಲಾದ ಭೇದಗಳಿರುತ್ತವೆ.

## ಮರ್ಮಾದಿಗಳಲ್ಲಿಪ್ರಾಣಹರಕಾರಣವು

**ಮರ್ಮಾಣಿ ಮಾಂಸ ಸಿರಸ್ನಾಯ್ವಸ್ಥಿಸಂಧಿ ಸನ್ನಿಪಾತಾಃತೇಷು ಸ್ವಭಾವತಏವ ವಿಶೇಷೇಣ ಪ್ರಾಣಾಸ್ತಿಷ್ಠಂತಿ; ತಸ್ಮಾತ್‌ಮರ್ಮ**

ಸ್ವಭಿಹತಾಸ್ತಾಂ ಸ್ತಾನ್ ಭಾವನಾಪದ್ಯಂತಿ ||
(ಸುಶ್ರುತ|| ಶಾರೀರ|| ಅ ೬ ಸೂ ೧೫)

ಮಾಂಸ ಸಿರ ಸ್ನಾಯು ಸಂಧಿ ಅಸ್ಥಿ ಇವುಗಳ ಕೂಡುವಿಕೆಗೆ ಮರ್ಮಗಳೆಂದು ಹೇಳುತ್ತಾರೆ ಸ್ವಾಭಾವಿಕವಾಗಿಯೇ ಇಂಥ ಕೂಡುವಿಕೆ ಸಂಧಿ ಮೊದಲಾದವುಗಳಲ್ಲಿ ಪ್ರಾಣಾಧಿಕ್ಯತೆ ಇರುತ್ತದೆ ಆದ್ದರಿಂದಲೇ ಮರ್ಮಾದಿಗಳಲ್ಲಿ ಆಘಾತವಾದರೆ ಹೆಚ್ಚು ಹಾನಿಕಾರಕವಾಗಿರುತ್ತದೆ. ಮಾಂಸಾದಿಗಳು ಎರಡರಿಂದ ಅದಕ್ಕೂ ಅಧಿಕವಾಗಿ ಅಥವಾ ಎಲ್ಲವುಗಳಿಂದಲೂ ಕೂಡಿದರೆ ಸಾಮಾನ್ಯ ಹಾನಿ, ಹೆಚ್ಚು, ಸದ್ಯಃ ಪ್ರಾಣಹರ ಮುಂತಾದವುಗಳು ಉಂಟಾಗುತ್ತವೆ

ತತ್ರ ಸದ್ಯಃ ಪ್ರಾಣಹರಾಣ್ಯಾಗ್ನೇಯಾನಿ, ಅಗ್ನಿ ಗುಣೇಷ್ವಾಶುಕ್ಷೀಣೇಷುಕ್ಷಪಯಂತಿ, ಕಾಲಂತರ ಪ್ರಾಣಹರಾಣಿಸೌಮ್ಯಾಗ್ನೇಯಾನಿ, ಅಗ್ನಿಗುಣೇಷ್ವಾಶುಕ್ಷಿಣೇಷು ಕ್ರಮೇಣಚ ಸೋಮಗುಣೇಷು ಕಾಲಾಂತರೇಣಕ್ಷಪಯಂತಿ; ವಿಶಲ್ಯ ಪ್ರಾಣಹರಾಣಿವಾಯವ್ಯಾನಿ ಶಲ್ಯ ಮುಖಾವರುದ್ಧೋ ಯಾವದಂತರ್ವಾಯುಸ್ತಿಷ್ಠತಿತಾವಜ್ಜೀವತಿ, ಉದ್ಧೃತಮಾತ್ರೇತುಶಲ್ಯೇ ಮರ್ಮಸ್ಥಾನಶ್ರಿತೋ ವಾಯುರ್ನಿಷ್ಕ್ರಾಮತಿ, ತಸ್ಮಾತ್ ಸಶಲ್ಯೋಜೀವತ್ಯುದ್ಧೃತಶಲ್ಯೋಮ್ರಿಯತೆ (ಪಾಕಾತ್ ಪತಿತ ಶಲ್ಯೋವಾಜೀವತಿ); ವೈಕಲ್ಯಕರಾಣಿಸೌಮ್ಯಾನಿ, ಸೋಮೋಹಿ ಸ್ಥಿರತ್ವಾಚ್ಛೈತ್ಯಾಚ್ಚ ಪ್ರಾಣಾವಲಂಬನಂಕರೋತಿ; ರುಜಾಕರಾಣ್ಯಗ್ನಿ ವಾಯು ಗುಣಭೂಯಿಷ್ಠಾನಿ, ವಿಶೇಷತಶ್ಚ ತೌರುಜಾಕರೌ; ಪಾಂಚಭೌತಿಕೀಂ ರುಜಾಮಾಹುರೇಕೇ ||

(ಸುಶ್ರುತ|| ಶಾರೀರ|| ಅ ೬ ಸೂ ೧೭)

(೧) "ಸದ್ಯಃ ಪ್ರಾಣಹರ" ಮರ್ಮಗಳು ಅಗ್ನಿ ಗುಣಾಧಿಕ್ಯವುಳ್ಳವುಗಳಿರುತ್ತವೆ. ಅಗ್ನಿ ಗುಣ ಕ್ಷೀಣವಾಗಲು ಕೂಡಲೇ ನಾಶಮಾಡುತ್ತವೆ ಅಗ್ನಿಯಲ್ಲಿ ತೀವ್ರಪ್ರಕೋಪಗುಣವಿರುವದರಿಂದತತ್ಕಾಲಪ್ರಾಣಹರಣವಾಗುತ್ತದೆ.

(೨) ಸೌಮ್ಯ ಅಗ್ನಿಯ ಗುಣಗಳೆರಡು ಕೂಡಿದ ಸಂಧಿಗಳು "**ಕಾಲಾಂತರ ಪ್ರಾಣಹರ**" ಮರ್ಮಗಳಾಗಿರುತ್ತವೆ ಅಗ್ನಿ ಗುಣ ಕ್ಷೀಣವಾದನಂತರ ಸೋಮಗುಣ ಕ್ಷೀಣವಾಗಿ ಕಾಲಾಂತರದಲ್ಲಿ ನಾಶಕಾರಕವಾಗುತ್ತವೆ

(೩) ವಾಯುವಿನ ಆಧಿಕ್ಯವುಳ್ಳ ಮರ್ಮಗಳು "**ವಿಶಲ್ಯ ಪ್ರಾಣಹರ**"ಗಳಾಗಿರುತ್ತವೆ ನಟ್ಟಿರುವ ಬಾಣಗಳನ್ನು ತೆಗೆದರೆ ಕೂಡಲೇ ನಾಶವಾಡುತ್ತವೆ ಬಾಣಗಳ ಮುಖದಿಂದ ತಡೆಯಲ್ಪಟ್ಟ ಪ್ರಾಣವು, ಬಾಣದಿಂದ ಅಡ್ಡಿಯಾಗಿ ಒಳಗೆ ತಡೆಯಲ್ಪಟ್ಟಿರುವ ವರೆಗೆ ನಿಲ್ಲುತ್ತದೆ ಬಾಣವನ್ನು ತೆಗೆದ ಕೂಡಲೇ ಪ್ರಾಣವು ಹಾರಿಹೋಗುತ್ತದೆ ಆದ್ದರಿಂದ ಬಾಣ ಅಲ್ಲಿಯೇ ಇದ್ದರೆ ಪ್ರಾಣವು ಇರುತ್ತದೆ ಬಾಣವನ್ನು ಕಿತ್ತು ತೆಗೆದಾಕ್ಷಣವೇ ಪ್ರಾಣವು ಹೋಗುತ್ತದೆ ಬಾಣ ನಟ್ಟ ಸ್ಥಳದಲ್ಲಿ ವ್ರಣಪಾಕವಾಗಿ ನಟ್ಟ ಬಾಣವು ತನ್ನಿಂದ ತಾನೇ ಬಿದ್ದರೆ ಬದುಕಲೂಬಹುದು. ಬಾಣಗಳನ್ನು ಕಿತ್ತು ತೆಗೆದ ಕೂಡಲೇ ಪ್ರಾಣ ಹೋಗುವವರಿಂದ "**ವಿಶಲ್ಯಘ್ನಾನಿ**, "**ವಿಶಲ್ಯಪ್ರಾಣಹರಾಣಿ**" ಮೊದಲಾದ ಹೆಸರಿನಿಂದಲೇ ವಿವರಿಸಿದ್ದಾರೆ.

(೪) ಸೌಮ್ಯಗುಣ ಆಧಿಕವುಳ್ಳ ಮರ್ಮವು "**ವೈಕಲ್ಯಕರವು**"(ಊನತೆಯನ್ನುಂಟು ಮಾಡುವಂಥಾದ್ದು) ಆಗಿರುತ್ತದೆ. ಸೌಮ್ಯಗುಣವು ಸ್ಥಿರವೂ ಶೈತ್ಯ ವಿಶಿಷ್ಟವೂ ಇರುವದರಿಂದ ಪ್ರಾಣವನ್ನು ಧಾರಣೇ ಮಾಡುತ್ತದೆ ಈ ಮರ್ಮಗಳಲ್ಲಿ ಆಘಾತವುಂಟಾದರೆ ಊನತ್ವ ಬರುತ್ತದೆ. ಆದ್ದರಿಂದ ಇದಕ್ಕೆ "**ವೈಕಲ್ಯಕರ**" ವೆಂದು ಹೇಳಿದ್ದಾರೆ

(೫) ಅಗ್ನಿ ವಾಯು ಗುಣ ಹೆಚ್ಚಿರುವ ಮರ್ಮಗಳು ನೋವನ್ನುಂಟು ಮಾಡತಕ್ಕವುಗಳಾಗಿರುತ್ತವೆ. ವಿಶೇಷವಾಗಿ ರುಜಾಕರ ಮರ್ಮಗಳಲ್ಲಿ ಆಘಾತವುಂಟಾದರೆ, ಅಧಿಕ ನೋವಾಗುತ್ತದೆ ಆದ್ದರಿಂದ "ರುಜಾಕರ"ವೆಂದು ಹೇಳಿದ್ದಾರೆ.

"ಮತಾಂತರದಲ್ಲಿ" ನೋವಾಗುವದು ಪಾಂಚಭೌತಿಕಸ್ಥಿತಿಯಾಗಿರುತ್ತದೆ ಅರ್ಥಾತ್ ಪಂಚಭೂತಾತ್ಮಕ ದೇಹ ವಿಭಾಗಗಳಲ್ಲಿ ನೋವುಂಟಾಗುವದರಿಂದ, ನೋವು ಪಂಚಭೂತಾತ್ಮಕ ಆಶ್ರಯ ಸ್ಥಾನಗಳಲ್ಲಾಗತಕ್ಕವುಗಳೆಂದು

ಕೆಲವರು ಅನ್ನುತ್ತಾರೆ. ನೋವನ್ನು ಸಹ ಆಶ್ರಯ ಹೆಸರಿನಿಂದ ಪಾಂಚಭೌತಿಕವೆಂದು ವಿವರಿಸಿದ್ದಾರೆ.

## ಮರ್ಮ ವಿಷಯದಲ್ಲಿ ಮತಾಂತರ

**ಕೇಚಿದಾಹುರ್ಮಾಂಸಾದೀನಾಂ ಪಂಚಾನಾಮಪಿ ಸಮಸ್ತಾನಾಂ ವಿವೃದ್ಧಾನಾಂ ಸಮವಾಯಾತ್ ಸದ್ಯ ಪ್ರಾಣಹರಾಣಿ, ಏಕಹೀನಾನಾಮಲ್ಪಾನಾಂ ವಾ ಕಾಲಾಂತರಪ್ರಾಣಹರಾಣಿ, ದ್ವಿಹೀನಾನಾಂ ವಿಶಲ್ಯಪ್ರಾಣಹರಣಾನಿ, ತ್ರಿಹೀನಾನಾಂ ವೈಕಲ್ಯಕರಾಣಿ, ಏಕಸ್ಮಿನ್ನೇವ ರುಜಾಕರಾಣೀತಿ,॥ ನೈವಂ ಯತೋಽಸ್ತಿ ಮರ್ಮಸ್ವಪ್ಯಭಿಹತೇಷು ಶೋಣಿತಾಗಮನಂ ಭವತಿ ॥**
(ಸುಶ್ರುತ॥ ಶಾರೀರ॥ ಅ ೬ ಸೂ ೧೭)

ಸದ್ಯಃ ಪ್ರಾಣಹರಾದಿ ಮರ್ಮ ವಿಷಯದಲ್ಲಿ ಮತಾಂತರಗಳು:— ಮಾಂಸ ಸಿರಾ ಸ್ನಾಯು ಅಸ್ಥಿ ಸಂಧಿಗಳು ಒಂದೆಡೆಯಲ್ಲಿ ಕೂಡುವದರಿಂದ, ಅಧಿಕತೆಯುಳ್ಳ ಮರ್ಮವಾಗುತ್ತವೆ. **ಮಾಂಸಾದಿಗಳು** [೫] ಅತ್ಯಂತವಾಗಿ ಒಂದು ಬಿಡದೆ ಯಾವ ಮರ್ಮಗಳಲ್ಲಿ ಪರಸ್ಪರ ಸಂಧಿತವಾಗುತ್ತವೆಯೋ, ಅವುಗಳು ಸದ್ಯಃ ಪ್ರಾಣಹರಣಮಾಡುವ ಮರ್ಮಗಳೆಂದು ಕೆಲವರು ಹೇಳುತ್ತಾರೆ [೨] ಮಾಂಸಾದಿಗಳಲ್ಲಿ ಒಂದು ಕಡಿಮೆಯಾಗಿ ಅಥವಾ ಅಲ್ಪಸ್ಥಾನಾಶ್ರಯ ಮರ್ಮಗಳಾಗಿದ್ದರೆ, ಕಾಲಾಂತರ ಪ್ರಾಣಹರಣಮಾಡುತ್ತವೆ. [೩] ಮಾಂಸಾದಿಗಳಲ್ಲಿ ಎರಡು ಕಡಿಮೆಯಾಗಿ ಸಂಬಂಧಹೊಂದಿದ ಮರ್ಮಗಳು ವಿಶಲ್ಯ ಪ್ರಾಣಹರಣ (ಬಾಣವನ್ನು ಕಿತ್ತು ತೆಗೆದ ಕೂಡಲೇ ಪ್ರಾಣಹರಣವಾಗುವದು) ವಾಗಿರುತ್ತದೆಂದು ಹೇಳುತ್ತಾರೆ. [೪] ಮಾಂಸಾದಿಗಳಲ್ಲಿ ಮೂರು ಕಡಿಮೆಯಾಗಿ ಸಂಯುಕ್ತವಾದವುಗಳು ವೈಕಲ್ಯಕರ (ಊನತೆಯುನ್ನುಂಟುಮಾಡತಕ್ಕವುಗಳು) ಆಗಿರುತ್ತವೆ. [೫] ಮಾಂಸಾದಿಗಳಲ್ಲಿಯು ಯಾವದಾದರೊಂದರಲ್ಲಿಯೇ ಮರ್ಮವಿದ್ದರೆ ಅದು ರುಜಾಕರಮರ್ಮವಾಗಿರುತ್ತದೆ ಹೀಗೆ ಮರ್ಮ ವಿಷಯದಲ್ಲಿ ಸದ್ಯಃ ಪ್ರಾಣಹರಾದಿಗಳನ್ನು ಕುರಿತು ಮತಂತಾರಾಭಿಪ್ರಾಯಗಳಿರುತ್ತವೆ. ಈ ಮತವು ಪ್ರಶಸ್ತವಾದದ್ದಲ್ಲವೆಂದು ನಿರಾಕರಿಸಿ,

ತ್ತಾರೆ. ಕೇವಲ ಒಂದು ಎರಡು ಇತ್ಯಾದಿಯಾಗಿ ಮಾಂಸಾದಿಗಳು ವಿಭಾಗಿ ಸಲು ಬರುವದಿಲ್ಲ. ಯಾಕಂದರೆ ಅಸ್ಥಿ ಮರ್ಮಗಳಲ್ಲಿ ಹೊಡತಬಿದ್ದರೂ ರಕ್ತ ಬರುತ್ತದೆ. ಆದ್ದರಿಂದ ಪ್ರತ್ಯೇಕಿಸಲು ಬರುವದಿಲ್ಲವಾದ ಕಾರಣ ಪ್ರತ್ಯೇಕಿಸಿ ವಿಭಾಗಶಃ ನಿರ್ದೇಶವು ಪ್ರಶಸ್ತವಾಗಿರುವದಿಲ್ಲ ಇದರಂತೇ ನಿಷೇಧಮಾಡಿದ್ದ ರಿಂದ ಪೂರ್ವೋಕ್ತವಾದ ಮಾಂಸಾದಿಗಳ ಪ್ರತ್ಯೇಕಸಾನ್ನಿಧ್ಯಗಳಿಂದ ಮರ್ಮ ಗಳಾಗಿರುತ್ತವೆಂಬ ಪ್ರತಿಪಾದನೆಯು ನಿರಾಸವಾದಂತಾಗುತ್ತದೆ ಸುಶ್ರುತಾದಿ ಆಚಾರ್ಯರ ಮತದಂತೆ ಎಲ್ಲವುಗಳ ಸಾನ್ನಿಧ್ಯವು ಹೆಚ್ಚಿನ ಮರ್ಮವೆಂಬು ವದು ಗ್ರಾಹ್ಯವಾಗಿರುತ್ತದೆ ಅನ್ಯ ಮತದಂತೆ ಪ್ರತ್ಯೇಕ ವಿಭಾಗ ಸಾಧ್ಯವಿಲ್ಲ ದ್ದರಿಂದ ಗ್ರಹಿಸಿರುವದಿಲ್ಲ ಯಾಕಂದರೆ ಪ್ರತ್ಯೇಕವೆಂದು ನಿಷ್ಕರ್ಷೆಯಾದಲ್ಲಿ ಅಸ್ಥಿ ಮರ್ಮಗಳಲ್ಲಿ ಆಘಾತವಾದರೆ ರಕ್ತ ಬರಬಾರದು ರಕ್ತ ಬರುವದರಿಂದ ಮಾಂಸಾದಿಗಳ ಸಾನ್ನಿಧ್ಯಅದೆಯೆಂದು ಸಿದ್ಧವಾಗುತ್ತದೆ ಹೀಗೆ ಮತ್ತೊಂದರ ಸಾನ್ನಿಧ್ಯವಿರುವದರಿಂದ ಪ್ರತ್ಯೇಕಿಸಲು ಬರುವಂತಿಲ್ಲವೆಂದು ನಿರ್ಣಯಿಸಿ, ಪ್ರತ್ಯೇಕತೆಯನ್ನು ಹೇಳುವ ಮತವನ್ನು ಗ್ರಹಿಸಿರುವದಿಲ್ಲ.

## ಸಿರಾದಿಗಳ ವ್ಯಾಪಕತ್ವ

**ಚತುರ್ವಿಧಾಯಾಸ್ತು ಸಿರಾಃ ಶರೀರೇ —**
**ಪ್ರಾಯೇಣತಾಮರ್ಮಸುಸನ್ನಿವಿಷ್ಟಾಃ ||**
**ಸ್ನಾಯ್ವಸ್ಥಿ ಮಾಂಸಾನಿತಥೈವಸಂಧೀನ್ —**
**ಸಂತರ್ಪ್ಯ ದೇಹಂ ಪ್ರತಿಪಾಲಯಂತಿ ||**

(ಸುಶ್ರುತ|| ಶಾರೀರ|| ಅ. ೬ ಶ್ಲೋ ೧೮)

ಮರ್ಮಗಳಲ್ಲಿ ಸಿರಾ ಸ್ನಾಯು ಮೊದಲಾದವುಗಳು ಕೂಡಿಕೊಂಡಿರು ತ್ತವೆನ್ನುವದನ್ನು ವಿಶದವಾಗಿ ವಿವರಿಸುತ್ತಾರೆ. ಶರೀರದಲ್ಲಿರುವ ನಾಲ್ಕು ವಿಧ ವಾದ [ವಾತ ಪಿತ್ತ ಕಫ ರಕ್ತ ವಾಹಿಗಳಾದ] ಸಿರಗಳು ಬಹುಶಃ ಮರ್ಮಗಳಲ್ಲಿ ಯುಕ್ತವಾದವುಗಳಾಗಿರುತ್ತವೆ. ಸಮಗ್ರ ದೇಹ ಸಂಚಾರಿ ಸಿರಗಳು ಸ್ನಾಯು ಅಸ್ಥಿ ಮಾಂಸ ಸಂಧಿಗಳನ್ನು ಪೋಷಿಸಿ ದೇಹವನ್ನು ರಕ್ಷಿಸುತ್ತವೆ. ಆದ್ದರಿಂ

ದಲೇ ಅಸ್ಥಿ ಸಂಧ್ಯಾದಿ ಮರ್ಮಗಳಲ್ಲಿ, ಹೊಡತ ಆಘಾತಾದಿಗಳಾದರೆ ರಕ್ತ ಬರುತ್ತದೆ.

ತತಃಕ್ಷತೇ ಮರ್ಮಣಿತಾಃ ಪ್ರವೃದ್ಧಃ —
ಸಮಂತತೋ ವಾಯುರಭಿಸ್ತೃಣೋತಿ ॥
ವಿವೃದ್ಧಮಾನಸ್ತು ಸಮಾತರಿಶ್ವಾ —
ರುಜಃಸುತೀವ್ರಾಃ ಪ್ರತನೋತಿಕಾಯೇ ॥೧೯॥
ರುಜಾಭಿಭೂತಂ ತುತತಃ ಶರೀರಂ —
ಪ್ರಲೀಯತೇನಶ್ಯತಿಚಾಸ್ಯಸಂಜ್ಞಾ ॥
ಅತೋಹಿಶಲ್ಯಂ ಪರಿಹರ್ತುಮಿಚ್ಛನ್
ಮರ್ಮಾಣಿಯತ್ನೇನ ಪರೀಕ್ಷ್ಯಕರ್ಷೇತ್ ॥
(ಸುಶ್ರುತ॥ ಶಾರೀರ॥ ಅ ೬ ಶ್ಲೋ. ೨೦)

ಸರ್ವದೇಹ ವ್ಯಾಪಿಯಾಗಿರುವದರಿಂದ ಸಿರಗಳು, ಮರ್ಮಗಳಲ್ಲಿ ಆಘಾತವುಂಟಾದರೆ ಪ್ರಕೋಪ ಹೊಂದಿದ ವಾಯುವಿನಿಂದ ಯುಕ್ತವಾಗುತ್ತವೆ. ನಂತರ ಸಿರಗಳ ಮುಖಾಂತರ ಪ್ರವೃದ್ಧ ವಾಯು ಸರ್ವಶರೀರವನ್ನೂ ವ್ಯಾಪಿಸುತ್ತದೆ. ಪ್ರಕೋಪ ಹೊಂದಿವೃದ್ಧಿಹೊಂದಿದ ವಾಯುವು, ಮರ್ಮಾಘಾತ ನೋವನ್ನು ತೀವ್ರವಾಗಿ ದೇಹದಲ್ಲಿ ಹರಡುವಂತೆ ಮಾಡುತ್ತದೆ ಅರ್ಥಾತ್ ಮರ್ಮದಲ್ಲಿ ಆಘಾತವಾದೊಡನೆ ವಾಯುವು ಪ್ರವೃದ್ಧವಾಗಿ ಸಿರಗಳ ಮುಖಾಂತರ ಸರ್ವದೇಹದಲ್ಲಿಯೂ ತೀವ್ರತರ ನೋವನ್ನುಂಟು ಮಾಡುತ್ತದೆ ವಸ್ತುತಃ ಸಂಧಿಮರ್ಮಾದಿಗಳಲ್ಲಿ ಸಮಗ್ರ ದೇಹ ವ್ಯಾಪಿಯಾಗಿರುವದರಿಂದ ಸಿರಗಳು ಇದ್ದೇಇರುತ್ತವೆ ಆಘಾತಾದಿಗಳಿಂದ ತೀವ್ರವೇದನೆಯನ್ನೂ ಹೊಂದುತ್ತವೆ. ಆದರೆ ಸಮಗ್ರ ದೇಹದಲ್ಲಿ ವೇದನೆಯು ವ್ಯಾಪಿಸಲು ವಾಯುವೇ ಕಾರಣವಾದ್ದರಿಂದ, ಸಿರಗಳಲ್ಲಿ ಯುಕ್ತವಾಗಿ ಸಂಚರಿಸುತ್ತದೆಂದು ಹೇಳಿದ್ದಾರೆ

ನೋವಿನಿಂದ ನಿರ್ವಿಣ್ಣವಾದ ದೇಹವು ನಾಶಹೊಂದುತ್ತದೆ. ಅಥವಾ ನೋವಾದ ಮರ್ಮಸ್ಥಳಗಳಲ್ಲಿಯ: ವೇದನೆಯಿಂದ ಸಂಜ್ಞಾ (ಚೇತನಾಧಾತು,

ಜೀವವು) ಬೇರ್ಪಟ್ಟಿದ್ದಾಗುತ್ತದೆ ಸಂಜ್ಞಾ (ಚೇತನೆ) ಭಿನ್ನವಾಗುವದೇ ಮರಣವು ಹೀಗೆ ಮರ್ಮಗಳಲ್ಲಿ ದೇಹದ ಉಳಿದ ಭಾಗಗಳಿಗಿಂತ ಹೆಚ್ಚು ಹಾನಿ ಮರಣಾದಿಗಳು ಸಂಭವಿಸುವದರಿಂದ, ಬಾಣಾದಿಗಳನ್ನು ಕಿತ್ತು ತೆಗೆ ಯುವವರು ಮರ್ಮಗಳನ್ನು ಪರೀಕ್ಷಿಸಿ ಕಾರ್ಯ ನಡೆಸಬೇಕು ಮರ್ಮಗಳಲ್ಲಿ ಆಘಾತವಾದರೆ ಮರಣಾದಿಗಳು ಸಂಭವಿಸುವದರಿಂದ, ಬಾಣಾದಿಗಳನ್ನು ಮರ್ಮಸ್ಥಾನಕ್ಕೆ ಪೆಟ್ಟಾಗದಂತೆ ಅಥವಾ ಮರ್ಮವನ್ನು ಬಿಟ್ಟು ಎರಡನೇ ಕಡೆಗೆ ಹೊರಬರುವಂತೆ ಆಹರಣಮಾಡಬೇಕೆಂದು ವಿವರಿಸಿದ್ದಾರೆ

## ಸದ್ಯಃ ಪ್ರಾಣಹರಾದಿ ಮರ್ಮಗಳು

**ತತ್ರ ಸದ್ಯಃಪ್ರಾಣಹರಾಣ್ಯೇಕೋನವಿಂಶತಿಃ, ಕಾಲಾಂತರ ಪ್ರಾಣಹರಾಣಿತ್ರಯಸ್ತ್ರಿಂಶತ್, ತ್ರೀಣಿ ವಿಶಲ್ಯಘ್ನಾನಿ, ಚತು ಶ್ಚತ್ವಾರಿಂಶದ್ವೈಕಲ್ಯಕರಾಣಿ, ಅಷ್ಟೌ ರುಜಾಕರಾಣೀತಿ ॥**

(ಸುಶ್ರುತ॥ ಶಾರೀರ॥ ಅ. ೬ ಸೂ ೮)

(೧) ಸದ್ಯಃ ಪ್ರಾಣಹರಮರ್ಮಗಳು (೧೯) ಇರುತ್ತವೆ. (೨) ಕಾಲಾಂ ತರದಲ್ಲಿ ಪ್ರಾಣಹರಣ ಮಾಡತಕ್ಕವುಗಳು (೩೩) ಇರುತ್ತವೆ (೩) ವಿಶ ಲ್ಯಘ್ನ (ನಟ್ಟಿರುವ ಬಾಣಾದಿಗಳನ್ನು ಕಿತ್ತ ಕೂಡಲೇ ಪ್ರಾಣ ಹೋಗು ವಂಥಾದ್ದು) ಈ ಮರ್ಮಗಳು (೩) ಇರುತ್ತವೆ (೪) ವೈಕಲ್ಯಕರ(ಊನತೆ ಯನ್ನುಂಟು ಮಾಡತಕ್ಕ) ಮರ್ಮಗಳು (೪೪) ಇರುತ್ತವೆ (೫) ರುಜಾಕರ (ನೋವನ್ನುಂಟು ಮಾಡುವಂಥ) ಮರ್ಮಗಳು (೮) ಇರುತ್ತವೆ. ಸದ್ಯಃ ಪ್ರಾಣಹರಾದಿ ಎಲ್ಲಾ ಮರ್ಮಗಳು ಕೂಡಿ ಒಟ್ಟು (೧೦೭) ಮರ್ಮಗಳಿರು ತ್ತವೆ ಹಿಂದೆ ಶಾಖಾದಿ ವಿಭಾಗಗಳಲ್ಲಿ ಹೇಳಿದ ಮರ್ಮಗಳನ್ನೇ, ಸದ್ಯಃ ಪ್ರಾಣಹರಾದಿ ಕಾರ್ಯ ವಿಶೇಷಗಳಿಂದ ವಿವರಿಸಿದ್ದಾರೆ

## ಸದ್ಯಃ ಪ್ರಾಣಹರ ಮರ್ಮ (೧೯)

**ಶೃಂಗಾಟಕಾನ್ಯಧಿಪತಿಃ ಶಂಖೌ ಕಂಠಸಿರಾಗುದಂ ॥**

ಹೃದಯಂ ಬಸ್ತಿನಾಭ್ಯೌಚಘ್ನಂತಿಸದ್ಯೋಹತಾನಿತು ॥

(ಸುಶ್ರುತ॥ ಶಾರೀರ॥ ಅ ೭ ಶ್ಲೋ ೯)

(೪) ಶೃಂಗಾಟಕಗಳು, (೧) ಅಧಿಪತಿ, (೨) ಶಂಖಮರ್ಮಗಳು, (೮) ಕುತ್ತಿಗೆಯಲ್ಲಿಯ ಸಿರಾ ಮರ್ಮಗಳು "ಮಾತೃಕಾ" ಎಂಬ ಹೆಸರು (೧) ಗುದ, (೧) ಹೃದಯ. (೧) ಬಸ್ತಿ, (೧) ನಾಭಿ ಇವೆಲ್ಲವುಗಳು ಕೂಡಿ ಒಟ್ಟು (೧೯) ಮರ್ಮಗಳಿರುತ್ತವೆ ಇವುಗಳಲ್ಲಿ ಹೊಡತ ಬಿದ್ದರೆ ಸದ್ಯದಲ್ಲಿಯೇ ಮರಣ ಸಂಭವಿಸುತ್ತದೆ ಸದ್ಯದಲ್ಲಿಯೆಂದರೆ (೭) ದಿವಸಗಳ ಒಳಗೆಂದು ತಿಳಿಯಬೇಕು.

## ಕಾಲಾಂತರ ಪ್ರಾಣಹರ ಮರ್ಮಗಳು (೩೩)

ವಕ್ಷೋಮರ್ಮಾಣಿ ಸೀಮಂತ ತಲಕ್ಷಿಪ್ರೇಂದಬಸ್ತಯಃ ॥

ಕಟೀಕತರುಣೇ ಸಂಧಿಪಾರ್ಶ್ವ ಜೌಬೃಹತೀಚಯಾ ॥೧೦॥

ನಿತಂಬಾವಿತಿ ಚೈತಾನಿಕಾಲಾಂತರಹರಾಣಿತು ॥

(ಸುಶ್ರುತ॥ ಶಾರೀರ॥ ಅ ೭ ಶ್ಲೋ ೧೧)

(೨) ಸ್ತನಮೂಲ, (೨) ಸ್ತನರೋಹಿತ, (೨) ಅಪಲಾಪ, (೨) (೨) ಅಪಸ್ತಂಭ, ಇವುಗಳು ವಕ್ಷೋಮರ್ಮಗಳು (೫) ಸೀಮಂತ, (೪) ತಲಹೃದಯ, (೪) ಕ್ಷಿಪ್ರ, (೪) ಇಂದ್ರಬಸ್ತಿ, (೧) ಕಟಿಕ, (೧) ತರುಣ, (೨) ಪಾರ್ಶ್ವಸಂಧಿ, (೨) ಬೃಹತೀ, (೨) ನಿತಂಬ, ಇವುಗಳೆಲ್ಲವುಗಳು ಕೂಡಿ ಒಟ್ಟು ಕಾಲಾಂತರ ಪ್ರಾಣಹರಮರ್ಮಗಳು (೩೩) ಇರುತ್ತವೆ.

## ವಿಶಲ್ಯಘ್ನಮರ್ಮಗಳು (೩)

ಉತ್ಕ್ಷೇಪೌಸ್ಥಪನೀಚೈವವಿಶಲ್ಯಘ್ನಾನಿನಿರ್ದಿಶೇತ್ ॥

(ಸು॥ ಶಾ॥ ೧೧)

[೨] ಉತ್ಕ್ಷೇಪ, [೧] ಸ್ಥಪನೀ, ಇವುಗಳು [೩] ಮರ್ಮಗಳು ವಿಶಲ್ಯಘ್ನ ಮರ್ಮಗಳಾಗಿರುತ್ತವೆ. ಇಲ್ಲಿ ನಟ್ಟಿರುವ ಬಾಣವನ್ನು ಕಿತ್ತ ಕೂಡಲೇ ಮರಣವುಂಟಾಗುತ್ತದೆ.

## ವೈಕಲ್ಯಕರ ಮರ್ಮಗಳು (೪೪)

**ಲೋಹಿತಾಕ್ಷಾಣಿಜಾನೂರ್ವೀ ಕೂರ್ಚ ವಿಟಿಪ ಕೂರ್ಪರಾಃ॥**
**ಕುಕುಂದರೇ ಕಕ್ಷಧರೇ ವಿಧುರೇ ಸಕೃಕಾಟಿಕೇ ॥೧೨॥**
**ಅಂಸಾಂಸಫಲಕಾಪಾಂಗಾನೀಲೇಮನ್ಯೇಫಣೌತಥಾ ॥**
**ವೈಕಲ್ಯಕರಣಾನ್ಯಾಹುರಾವರ್ತೌದ್ವೌತಥೈವಚ ॥**
[ಸುಶ್ರುತ॥ ಶಾರೀರ॥ ಅ ೬ ಶ್ಲೋ. ೧೩]

೪ ಲೋಹಿತಾಕ್ಷ, ೪ ಆಣೀ, ೨ ಜಾನು, ೪ ಉರ್ವೀ, ೪ ಕೂರ್ಚ, ೨ ವಿಟಪ, ೨ ಕೂರ್ಪರ, ೨ ಕುಕುಂದರ, ೨ ಕಕ್ಷಧರ, ೨ ವಿಧುರ, ೨ ಕೃಕಾಟಿಕಾ, ೨ ಅಂಸ, ೨ ಅಂಸಫಲಕ, ೨ ಅಪಾಂಗ, ೨ ನೀಲ, ೨ ಮನ್ಯ, ೨ ಫಣ, ೨ ಆವರ್ತ, ಇವುಗಳೆಲ್ಲವುಗಳು ಕೂಡಿ ಒಟ್ಟು (೪೪) ವೈಕಲ್ಯಕರಮರ್ಮಗಳಿರುತ್ತವೆ. ಇವುಗಳಲ್ಲಿ ಆಘಾತಗಳಾದರೆ ಊನತೆಯುಂಟಾಗುತ್ತದೆ.

## ರುಜಾಕರಮರ್ಮಗಳು (೮)

**ಗುಲ್ಫೌದ್ವೌಮಣಿಬಂಧೌದ್ವೌದ್ವೇದ್ವೇ ಕೂರ್ಚಶಿರಾಂಸಿಚ ॥**
**ರುಜಾಕರಾಣಿ ಜಾನಿಯಾದಷ್ಟವೇತಾನಿ ಬುದ್ಧಿಮಾನ್ ॥**
(ಸುಶ್ರುತ॥ ಶಾರೀರ॥ ಅ ೬ ಶ್ಲೋ ೧೪)

(೨) ಗುಲ್ಫ, (೨) ಮಣಿಬಂಧ, (೪) ಕೂರ್ಚಶಿರ, ಇವುಗಳು (೮) ಮರ್ಮಗಳು ರುಜಾಕರಗಳಾಗಿರುತ್ತವೆ ಇವುಗಳಲ್ಲಿ ಆಘಾತವಾದರೆ ತೀವ್ರವಾದ ನೋವುಂಟಾಗುತ್ತದೆ. ಸದ್ಯಃ ಪ್ರಾಣಹರಾದಿ ಎಲ್ಲ ಮರ್ಮಗಳು ಕೂಡಿ ಒಟ್ಟು (೧೦೭) ಮರ್ಮಗಳಿರುತ್ತವೆ.

## ಆಘಾತ ವಿಶೇಷಗಳು

**ಕ್ಷಿಪ್ರಾಣಿವಿದ್ಧಮಾತ್ರಾಣಿಘ್ನಂತಿ ಕಾಲಾಂತರೇಣಚ ||**

(ಸುಶ್ರುತ|| ಶಾರೀರ|| ೧೫)

ಸದ್ಯಃ ಪ್ರಾಣಹರ ಮರ್ಮಗಳ ಸಮೀಪದಲ್ಲಿ ಸಾಮಾನ್ಯ ಹೊಡತ ಬಿದ್ದರೆ, ಕಾಲಾಂತರದಲ್ಲಿ ಪ್ರಾಣಹರಣವಾಗುತ್ತದೆ ಬಹಳ ತೀವ್ರ ಹೊಡತ ಬಿದ್ದರೆ ಮರ್ಮಸ್ಥಾನಗಳಲ್ಲಿಯೇ ಆದರೆ, ತತ್‌ಕ್ಷಣ ಪ್ರಾಣಹರಣವು ಸದ್ಯೋಹತ ಮರ್ಮಗಳಲ್ಲಿ ಸಂಭವಿಸುತ್ತದೆ ಮರ್ಮಗಳ ಸಮೀಪದಲ್ಲಿ ಸಾಮಾನ್ಯ ಹೊಡತ ಬಿದ್ದರೆ ಸದ್ಯಃ ಪ್ರಾಣಹರ ಮರ್ಮಗಳಲ್ಲಿಯೇ ಆದರೂ ಕೂಡ, ತೀವ್ರವಲ್ಲದ್ದರಿಂದ ಕಾಲಾಂತರದಲ್ಲಿ ಪ್ರಾಣಹರಣವಾಗುತ್ತದೆ ಇದರಂತೇ ಕಾಲಾಂತರ ಪ್ರಾಣಹರ ಮರ್ಮಗಳಲ್ಲಿ ಆ ಸ್ಥಾನಗಳಲ್ಲಿಯೇ ತೀವ್ರ ಹೊಡತ ಬಿದ್ದರೆ ಸದ್ಯದಲ್ಲಿಯೇ ಪ್ರಾಣಹರಣವಾಗುತ್ತದೆ.

**ಸದ್ಯಃ ಪ್ರಾಣಹರಮಂತೇವಿದ್ಧಂ ಕಾಲಾಂತರೇಣಮಾರಯತಿ, ಕಾಲಾಂತರಪ್ರಾಣಹರಮಂತೇವಿದ್ಧಂ ವೈಕಲ್ಯಮಾಪಾದಯತಿ ವಿಶಲ್ಯಘ್ನಂ ವೈಕಲ್ಯಕರಂಚಭವತಿ, ವೈಕಲ್ಯಕರಂ ಕಾಲಾಂತರೇಣ ಕ್ಲೇಶಯತಿರುಜಾಂಚಕರೋತಿ, ರುಜಾಕರಮತೀವ್ರವೇದನಂ ಭವತಿ ||** (ಸುಶ್ರುತ|| ಶಾರೀರ|| ಅ ೬ ಸೂ ೨೨)

(೧) **ಸದ್ಯಃ ಪ್ರಾಣಹರ ಮರ್ಮಗಳ** ಸಮೀಪದಲ್ಲಿ ಸಾಮಾನ್ಯ ಹೊಡತ ಬಿದ್ದರೆ ಕಾಲಾಂತರದಲ್ಲಿ ಪ್ರಾಣಹರಣವಾಗುತ್ತದೆ. ಮರ್ಮಗಳಲ್ಲಿಯೇ ಆಘಾತವಾಗುವದಕ್ಕೆ "ಮಧ್ಯೇವಿದ್ಧ" ವೆಂದು ಹೇಳುತ್ತಾರೆ. ಮರ್ಮಗಳ ಸಮೀಪ ಸ್ಥಾನದಲ್ಲಿ ಹೊಡತ ಬಿದ್ದರೆ "ಅಂತೇವಿದ್ಧ" ಎಂದೆನ್ನುತ್ತಾರೆ. ತೀವ್ರವಾದ ಆಘಾತ ಹೊಡತಾದಿಗಳು ಮತ್ತು ಸಾಮಾನ್ಯವಾದ ಆಘಾತಾದಿಗಳು ಇವುಗಳಿಂದ ಸಹ ಪರಿಣಾಮದಲ್ಲಿ ಹೆಚ್ಚು ಕಡಿಮೆ ಆಗುತ್ತದೆ ಆದರೆ ಸದ್ಯಃ ಪ್ರಾಣಹರಮರ್ಮಗಳಲ್ಲಿ ಮಾತ್ರ ಪ್ರಾಣಹರಣವಾಗಿಯೇ ತೀರುತ್ತದೆ. ತೀವ್ರಾಘಾತದಿಂದ ಸದ್ಯಃಪ್ರಾಣಹರಣೆಯೂ ಸಮೀಪದಲ್ಲಿ ಸಾಮಾನ್ಯ

ಹೊಡತದಿಂದ ಕಾಲಾಂತರ ಪ್ರಾಣಹರಣೆಯೂ ಸಂಭವಿಸುತ್ತದೆ. ಆದ್ದರಿಂದ ಸದ್ಯಃಪ್ರಾಣಹರಗಳೆಂದು ಹೇಳಿರುವ ಮರ್ಮಗಳಲ್ಲಿ ಆಘಾತಗಳಿಂದ ಪ್ರಾಣಹರಣ ನಿಶ್ಚಯವಾಗಿ ಆಗುತ್ತದೆಂಬು ಸುಶ್ರುತಮತಾಭಿಪ್ರಾಯವಿರುತ್ತದೆ ಅರ್ಥಾತ್ ಪ್ರತ್ಯಕ್ಷ ಮರ್ಮಸ್ಥಾನಗಳ ಮಧ್ಯದಲ್ಲಿಯೇ ಅಲ್ಲದೆ ಸಮೀಪದಲ್ಲಿ, ಸಾಮಾನ್ಯತಃ ಅಪಘಾತವಾದರೆ ತಮ್ಮಕ್ಕಿಂತ ಕಡಿಮೇ ಹಾನಿಕರ ಮುಂದಿನ ಮರ್ಮದಂತೇ ಪರಿಣಾಮವಾಗುತ್ತದೆ. ಪ್ರತಿಯೊಂದು ಮರ್ಮಗಳಲ್ಲಿಯೂ ಇದರಂತೇ ತಿಳಿಯಬೇಕು. ಮತ್ತು ಮರ್ಮಸ್ಥಾನಗಳಲ್ಲಿಯೇ ಬಹು ತೀವ್ರ ಭಯಂಕರ ಆಘಾತವಾದರೆ ತನಗಿಂತ ಹೆಚ್ಚಿನದಾದ ಮರ್ಮಾಘಾತಗಳಂತೇ ಪರಿಣಾಮವಾಗುತ್ತದೆ. ಉದಾ:— ಕಾಲಾಂತರ ಪ್ರಾಣಹರ ಮರ್ಮಗಳಲ್ಲಿ ಬಹು ತೀವ್ರ ಆಘಾತವು ಮರ್ಮಮಧ್ಯದಲ್ಲಿಯೇ ಸಂಭವಿಸಿದರೆ ಸದ್ಯಃ ಪ್ರಾಣಹರಣೆಯಾಗುತ್ತದೆ

(೨) **ಕಾಲಾಂತರ ಪ್ರಾಣಹರಮರ್ಮಗಳ ಸಮೀಪದಲ್ಲಿ ಹೊಡತ** ಸಂಭವಿಸಿದರೆ ವೈಕಲ್ಯ (ಊನತ್ವ) ವನ್ನುಂಟು ಮಾಡುತ್ತದೆ. ಮರ್ಮಸ್ಥಾನದಲ್ಲಿಯೇ ತೀವ್ರ ಭಯಂಕರವಾದ ಹೊಡತ ಸಂಭವಿಸಿದರೆ, ಸದ್ಯಃ ಪ್ರಾಣಹರಣೆಯಾಗುತ್ತದೆ. ಇಲ್ಲಿ ಮುಂದಿನದೆಂದರೆ ವಿಶಲ್ಯಘ್ನ ಮರ್ಮವಾಗಿರುತ್ತದೆ. ಅದರ ಪರಿಣಾಮವನ್ನು ವೈಕಲ್ಯಕರವನ್ನೇಕೆ ಹೇಳಿದರೆಂಬ ಆಕ್ಷೇಪ ಬರುತ್ತದೆ. ಬಾಣಗಳನ್ನು ಕಿತ್ತೊಡನೆಯೇ ಪ್ರಾಣ ಹೋಗುವದರಿಂದ ಅದರಂತೇ "ವಿಶಲ್ಯಘ್ನ" ವೆಂದು ಸಂಜ್ಞೆಯನ್ನಿಟ್ಟಿದ್ದಾರೆ. ಆದ್ದರಿಂದ ವಿಶಲ್ಯಘ್ನ ಮರ್ಮಗಳ ಸ್ಥಿತಿ ಪ್ರತ್ಯೇಕವಿರುವದರಿಂದ, ಇನ್ನಾವ ಮರ್ಮಗಳಲ್ಲಿಯೂ ಆ ರೀತಿಯು ಸಂಭವಿಸುವದಿಲ್ಲ. ಆದಕ್ಕಾಗಿಯೇ ಲಕ್ಷಣ ಮಾಡಿ ಭಿನ್ನವಾಗಿ ಹೇಳಿದ್ದಾರೆ. ಹೀಗಿರುವದರಿಂದ ಇನ್ನಾವ ಮುಂದಿನ ಮರ್ಮಗಳಿಗೂ ಹಿಂದೆ ಹೇಳಿದವುಗಳಿಗೂ ಇವುಗಳ ಸಂಬಂಧವಿರುವದಿಲ್ಲ. ಆದರೆ ವಿಶಲ್ಯಘ್ನ ಮರ್ಮಗಳ ಸಮೀಪದಲ್ಲಿ ಆಘಾತ ಸಂಭವಿಸಿದರೆ ವಿಶಲ್ಯಘ್ನವಾಗದೇ, ವೈಕಲ್ಯಕರವಾಗುತ್ತದೆ.

(೩) **ವಿಶಲ್ಯಘ್ನ ಮರ್ಮಗಳ** ಅಂತೇ ವಿದ್ಧ (ಸಮೀಪದಲ್ಲಿ ಆಘಾತವಾದರೆ) ಪ್ರಸಂಗದಲ್ಲಿ ಊನತ್ವವುಂಟಾಗುತ್ತದೆ. ಮಧ್ಯದಲ್ಲಿ ತೀವ್ರ ಬಾಣ **ನಟ್ಟರಂತೂ ಬಾಣ ತೆಗೆದ ಕೂಡಲೇ ಮರಣವೆಂದು ಹೇಳಿಯೇ ಇರುತ್ತದೆ.**

(೪) **ವೈಕಲ್ಯಕರ ಮರ್ಮಗಳ** ಸಮೀಪದಲ್ಲಿ ಆಘಾತವಾದರೆ ಕಾಲಾಂತರದಲ್ಲಿ ಕಷ್ಟಪಡಿಸುತ್ತದೆ, ಮತ್ತೂ ನೋವನ್ನುಂಟು ಮಾಡುತ್ತದೆ ವೈಕಲ್ಯಕರ ಮರ್ಮ ಮಧ್ಯದಲ್ಲಿ ತೀವ್ರವಾದ ದೊಡ್ಡ ಹೊಡತ ಬಿದ್ದರೆ ಕಾಲಾಂತರ ಪ್ರಾಣಹರಣ ಮಾಡುತ್ತದೆ.

(೫) **ರುಜಾಕರ ಮರ್ಮಗಳ** ಸಮೀಪದಲ್ಲಿ ಆಘಾತವಾದರೆ ಅಷ್ಟು ತೀವ್ರ ವೇದನೆಯಾಗುವದಿಲ್ಲ ಮರ್ಮ ಮಧ್ಯದಲ್ಲಿ ತೀವ್ರ ಭಯಂಕರ ಹೊಡತ ಬಿದ್ದರೆ ಊನತ್ವವನ್ನುಂಟು ಮಾಡುತ್ತದೆ

ಹೀಗೆ ಮರ್ಮಗಳ ಮಧ್ಯದಲ್ಲಿ (ಸಾಕ್ಷಾತ್ ಮರ್ಮಸ್ಥಾನದಲ್ಲಿಯೇ) ತೀವ್ರ ಆಘಾತವಾದರೆ, ಮತ್ತು ಮರ್ಮಗಳ ಸಮೀಪದಲ್ಲಿ ಆಘಾತ ಸಾಮಾನ್ಯ ರೀತಿಯಿಂದ ಆಗಿದ್ದರ ಪರಿಣಾಮಗಳನ್ನು ವಿಸ್ತಾರವಾಗಿ ವಿವರಿಸಿದ್ದಾರೆ ಇದ ರಿಂದ ಮರ್ಮಸ್ಥಾನ ಮತ್ತು ಸಮೀಪ ಆಘಾತಗಳ ತೀವ್ರತೆ ಮತ್ತು ಸಾಮಾನ್ಯತೆ ಇವುಗಳನ್ನು ಲಕ್ಷಿಸಿ ಪರಿಣಾಮವನ್ನು ತಿಳಿಯುವಂತೇ ಹೇಳಿರುತ್ತಾರೆ ಸದ್ಯಃ ಪ್ರಾಣಹರಾದಿ ಮರ್ಮಗಳ ಅವಧಿಗಳನ್ನು ಹೇಳುತ್ತಾರೆ

**ತತ್ರ ಸದ್ಯಃ ಪ್ರಾಣಹರಾಣಿ ಸಪ್ತರಾತ್ರಾಭ್ಯಂತರಾತ್ ಮಾರ ಯಂತಿ, ಕಾಲಾಂತರ ಪ್ರಾಣಹರಣಾನಿ ಪಕ್ಷಾತ್ ಮಾಸಾದ್ವಾ, ತೇಷ್ವಪಿ ತು ಕ್ಷಿಪ್ರಾಣಿ ಕದಾಚಿದಾಶು ಮಾರಯಂತಿ, ವಿಶಲ್ಯಪ್ರಾ ಣಹರಾಣಿ ವೈಕಲ್ಯಕರಾಣಿ ಚ ಕದಾಚಿದತ್ಯಭಿಹತಾನಿ ಮಾ ರಯಂತಿ ||** ( ಸುಶ್ರುತ|| ಶಾರೀರ|| ಅ ೬ ಸೂ ೨೩ )

(೧) ಸದ್ಯಃ ಪ್ರಾಣಹರ ಮರ್ಮಗಳು (೭) ದಿನಗಳ ಒಳಗೆ ಕೊಲ್ಲು ತ್ತವೆ. ಸದ್ಯಃ ಪ್ರಾಣಹರ ಮರ್ಮಗಳಲ್ಲಿಯೇ ಆಘಾತವಾದರೆ ಏಳು ದಿನ ಗಳ ಅವಧಿಯಲ್ಲಿ ಸಾಯುತ್ತಾನೆ. ಸದ್ಯಃ ಪ್ರಾಣಹರವೆಂದರೆ ಆಗಿಂದಾಗ ಸಾಯುವ ಮರ್ಮವೆಂದು ಅರ್ಥವಾಗುತ್ತದೆ. ಅದನ್ನು ಬಿಟ್ಟು ಏಳು ದಿನ ಗಳ ಅಂತರ ಅವಧಿಯನ್ನು ಹೇಳಿದರೆ ಸದ್ಯಃಪ್ರಾಣಹರಣ ಹೇಗಾಗುತ್ತದೆಂದು ಆಕ್ಷೇಪ ಬರುತ್ತದೆ. ತೀವ್ರ ಹೊಡತವಿದ್ದರೆ ಅವಧಿಗಿಂತ ಪೂರ್ವದಲ್ಲಿಯೂ

ಮರಣ ಸಂಭವಿಸಬಹುದು ಆದ್ದರಿಂದ ಸಪ್ತರಾತ್ರಿಯೊಳಗೆ ಎಂದು ಹೇಳಿದ್ದಾರೆ ಇಲ್ಲಿ "**ಸದ್ಯಃ**" ಎನ್ನುವದರ ಅವಧಿಯು ಸಪ್ತರಾತ್ರಿಯ ಒಳಗೆ ಎಂದು ಮಾಡಿದ್ದಾರೆ.

(೨) ಕಾಲಾಂತರ ಪ್ರಾಣಹರಣ ಮರ್ಮಗಳು **ಪಕ್ಷ** (೧೫) ದಿನಗಳು, ಅಥವಾ **ಮಾಸ** (ತಿಂಗಳು), ಈ ಅವಧಿಗಳಲ್ಲಿ ನಾಶ ಮಾಡುತ್ತವೆ ತೀವ್ರ ಆಘಾತವಾದಲ್ಲಿ ಸದ್ಯಃ ಪ್ರಾಣಹರ ಮರ್ಮಗಳಅವಧಿಯಂತೆಯೇ ತಿಳಿದುಕೊಳ್ಳಬೇಕು. ಕಾಲಾಂತರ ಪ್ರಾಣಹರಣ ಮರ್ಮಗಲ್ಲಿಯೂ ಕೂಡ ಅತ್ಯಾಘಾತವಾದರೆ ಸದ್ಯಃ ಪ್ರಾಣಹರವಾಗುತ್ತದೆ

(೩) ವಿಶಲ್ಯ ಪ್ರಾಣಹರ ಮರ್ಮಗಳಲ್ಲಿ ತೀವ್ರ ಆಘಾತವಾದರೆ ಕೊಲ್ಲುತ್ತದೆ ಅರ್ಥಾತ್ ಇಲ್ಲಿ ಹೀಗೆ ಅಭಿಪ್ರಾಯವಿರುತ್ತದೆ ಬಾಣವನ್ನು ಕಿತ್ತಿದ ಕೂಡಲೇ ಪ್ರಾಣ ಹೋಗುವ ಮರ್ಮವೆಂದು ಹೇಳಿ, ಪುನಃ ತೀವ್ರಾಘಾತದಿಂದ ಪ್ರಾಣಹಾರಕವೆಂದರೆ ಬಾಣಗಳನ್ನು ತೆಗೆಯದೇ ಇದ್ದರೂ ಪ್ರಾಣಹರಣವಾಗುತ್ತದೆಂದು ತಿಳಿಯಬೇಕು.

(೪) ವೈಕಲ್ಯಕರಮರ್ಮಗಳಲ್ಲಿ ಅತ್ಯಾಘಾತವಾದರೆ ಮರಣ ಸಂಭವಿಸುತ್ತದೆ. ಪ್ರಾಣಹರಣೆಯು ಕಾಲಾಂತರ ಮರ್ಮದಲ್ಲಿ ಹೇಳಿದ ಪ್ರಕಾರ ಪಕ್ಷ ಅಥವಾ ಮಾಸದ ಒಳಗೆ ಸಂಭವಿಸುತ್ತದೆಯೆಂದು ತಿಳಿಯಬೇಕು

(೫) ರುಜಾಕರ ಮರ್ಮಗಳಲ್ಲಿ ಅತ್ಯಾಘಾತವುಂಟಾದರೆ ಊನತ್ವವನ್ನುಂಟು ಮಾಡುತ್ತವೆ. ಇವುಗಳ ವಿವರಣೆಯಿಂದ ಸದ್ಯಃ ಪ್ರಾಣಹರ ಕಾಲಾಂತರ ಪ್ರಾಣಹರ ಮರ್ಮಾಘಾತಗಳಲ್ಲಿಯ ಅವಧಿಗಳು, ವಿಶಲ್ಯಘ್ನ ವೈಕಲ್ಯಕರ ರುಜಾಕರ ಮೊದಲಾದ ಮರ್ಮಗಳಲ್ಲಿ ತೀವ್ರಾಘಾತದಿಂದಾಗುವ ಪರಿಣಾಮಗಳೂ, ಕ್ರಮಶಃ ಅಧಿಕ ಪ್ರಮಾಣವೆಂದು ಬೋಧವಾಗುತ್ತವೆ

## ಮರ್ಮಗಳ ಪರಿಮಿತಿಯು

ಯಾವಯಾವ ಮರ್ಮ ಪ್ರದೇಶಗಳಲ್ಲಿ ಎಷ್ಟು ಅಂಗುಲ ಸ್ಥಾನವು, ಮರ್ಮ ಗ್ರಹೀತವಾಗಿರುತ್ತವೆನ್ನುವದನ್ನು ಹೇಳುತ್ತಾರೆ. ಆ ಪ್ರಮಾಣೋಕ್ತ

ಸ್ಥಾನಗಳು ಶಸ್ತ್ರಕ್ರಿಯಾದಿಗಳಲ್ಲಿ ವರ್ಜ್ಯವಾಗಿರುತ್ತವೆ. ಮತ್ತು ಮರ್ಮ ಸ್ಥಾನಗಳಲ್ಲಿ ಆ ಪರಿಮಾಣ ಅವಧಿಯಲ್ಲಿ ಆಘಾತವಾದರೆ ಪ್ರಾಣಹರಣಾದಿಗಳನ್ನುಂಟು ಮಾಡುತ್ತವೆಂದು ತಿಳಿಯಬೇಕು.

**ಊರ್ವ್ಯಃ ಸಿರಾಂಸಿ ವಿಟಪೇಚಸಕಕ್ಷ ಪಾರ್ಶ್ವೇ ॥ ಏಕೈಕ ಮಂಗುಲಮಿತಂ ಸ್ತನ ಪೂರ್ವಮೂಲಂ ॥ ವಿಧ್ಯಂಗುಲ ದ್ವಯಮಿತಂ ಮಣಿಬಂಧಗುಲ್ಫಂ ॥ ತ್ರೀಣ್ಯೇವಜಾನುಸಪರಂ ಸಹ ಕೂರ್ಪರಾಭ್ಯಾಂ ॥ (ಸುಶ್ರುತ॥ ಶಾರೀರ॥ ಅ ೬ ಶ್ಲೋ ೨೮)**

## ಅಂಗುಲ ಪರಿಮಾಣಮರ್ಮಗಳು

(೪) **ಊರ್ವೀ** ಮರ್ಮಗಳು, (೪) **ಕೂರ್ಚಶಿರ,** (೨) **ವಿಟಪ,** (೨) **ಕಕ್ಷಧರ,** ಇವುಗಳಲ್ಲಿ ಪ್ರತಿಯೊಂದರಲ್ಲಿಯೂ ಮರ್ಮ ಪ್ರಮಾಣವು **"ಒಂದು ಅಂಗುಲ"** ಸ್ಥಳವೆಂದು ತಿಳಿಯಬೇಕು. ಊರ್ವೀ ಮೊದಲುಗೊಂಡು (೧೨) ಮರ್ಮಗಳು ಒಂದಂಗುಲ ಪರಿಮಾಣ ಅವಧಿಯುಳ್ಳವುಗಳೆಂದು ತಿಳಿಯಬೇಕು

## ಎರಡಂಗುಲಾವಧಿ ಮರ್ಮಗಳು

(೨) **ಸ್ತನಪೂರ್ವಮೂಲ** ( ಇಲ್ಲಿ ಸ್ತನ ಮೂಲ ಸಂಜ್ಞೆಯುಳ್ಳ ಮರ್ಮಗಳು), (೨) **ಮಣಿಬಂಧ,** (೨) **ಗುಲ್ಫ,** ಇವುಗಳಲ್ಲಿ ಪ್ರತಿಯೊಂದರಲ್ಲಿಯೂ ಮರ್ಮಸ್ಥಲ ಪ್ರಮಾಣವು **"ಎರಡಂಗುಲ"** ವೆಂದು ತಿಳಿಯಬೇಕು. ಸ್ತನಪೂರ್ವಮೂಲ ಮರ್ಮ ಮೊದಲುಗೊಂಡು (೬) ಮರ್ಮಗಳು ಎರಡಂಗುಲಾವಧಿ ಮರ್ಮಗಳಾಗಿರುತ್ತವೆ. **"ಸ್ತನಮೂಲದಲ್ಲಿ"** ಮರ್ಮ ಸಂಖ್ಯೆಯನ್ನು (೨) ಗ್ರಹಿಸಿದ್ದಾರೆ.

## ಮೂರಂಗುಲಾವಧಿ ಮರ್ಮಗಳು

(೨) **ಜಾನು,** (೨) **ಕೂರ್ಪರ** ಇವುಗಳಲ್ಲಿ ಪ್ರತಿಯೊಂದರಲ್ಲಿಯೂ ಮರ್ಮಸ್ಥಲ ಪ್ರಮಾಣವು **"ಮೂರಂಗುಲ"** ಪ್ರಮಾಣವಿರುತ್ತದೆ. ಜಾನು ಮೊದಲುಗೊಂಡು (೪)ಮರ್ಮಗಳು ಮೂರಂಗುಲಾವಧಿ ಮರ್ಮಗಳಾಗಿರುತ್ತವೆ.

ಹೃದ್ಬಸ್ತಿಕೂರ್ಚಗುದನಾಭಿ ವದಂತಿ ಮೂರ್ಧ್ನಿ ॥
ಚತ್ವಾರಿ ಪಂಚ ಚಗಲೇ ದಶಯಾನಿಚದ್ವೇ ॥
ತಾನಿಸ್ವಪಾಣಿತಲಕುಂಚಿತಸಂಮಿತಾನಿ ॥
ಶೇಷಾಣ್ಯವೇಹಿ ಪರಿವಿಸ್ತರತೋಽಂಗುಲಾರ್ಧಂ ॥
(ಸುಶ್ರುತ॥ ಶಾರೀರ॥ ಅ ೬ ಶ್ಲೋ ೨೯)

## ನಾಲ್ಕಂಗುಲ ಪ್ರಮಾಣ ಮರ್ಮಗಳು

(೧) ಹೃದಯ, (೧) ಬಸ್ತಿ, (೧) ಗುದ, (೧) ನಾಭಿ, (೪) ಕೂರ್ಚ, (೪) ಶೃಂಗಾಟಕ, (೫) ಸೀಮಂತ, (೮) ಮಾತೃಕಾ, (೨) ಮನ್ಯೇ, (೨) ನೀಲೇ, ಇವುಗಳಲ್ಲಿ ಪ್ರತಿಯೊಂದರಲ್ಲಿಯೂ ಮರ್ಮಸ್ಥಳ ಪ್ರಮಾಣವು "ನಾಲ್ಕಂಗುಲ" ಪ್ರಮಾಣವಾಗಿರುತ್ತದೆ ಹೃದಯ ಮೊದಲುಗೊಂಡು (೨೯) ಮರ್ಮಗಳು ನಾಲ್ಕಂಗುಲಾವಧಿ ಮರ್ಮಗಳಾಗಿರುತ್ತವೆ. 'ಪಾಣಿತಲಕುಂಚಿತ" ವೆಂದರೆ ಮುಷ್ಟಿಯಾಗಿರುತ್ತದೆ ಅದರ(ಮುಷ್ಟಿಯ) ಪ್ರಮಾಣವು ನಾಲ್ಕಂಗುಲವಾಗಿರುತ್ತದೆ.

(೧) ಒಂದಂಗುಲಾವಧಿ ಮರ್ಮಗಳು (೧೨) ಇರುತ್ತವೆ. (೨) ಎರಡಂಗುಲ ಪ್ರಮಾಣ (೬) ಮರ್ಮಗಳು. (೩) ಮೂರಂಗುಲ ಸಂಮಿತವಾದ (೪) ಮರ್ಮಗಳು. (೪) ನಾಲ್ಕಂಗುಲದಷ್ಟು ಸ್ಥಾನ ಪರಿಮಾಣವುಳ್ಳ ಮರ್ಮಗಳು (೨೯) ಇರುತ್ತವೆ. ಒಟ್ಟು ಒಂದಂಗುಲ ಮೊದಲುಗೊಂಡು ಸ್ಥಾನ ಪರಿಮಿತಿಯನ್ನು ಹೇಳಿದ ಮರ್ಮಗಳು (೫೧) ಇರುತ್ತವೆ.

## ಅರ್ಧಾಂಗುಲ ಪರಿಮಾಣ ಮರ್ಮಗಳು

ಇಲ್ಲಿ ಸ್ಥಾನ ಪ್ರಮಾಣಾವಧಿಯನ್ನು ಹೇಳಿದ ಮರ್ಮಗಳ ಹೊರತಾದ ಮರ್ಮಗಳು (೫೬) ಇರುತ್ತವೆ. ಅವುಗಳು "ಅರ್ಧಾಂಗುಲ" ಪ್ರಮಾಣ ಸ್ಥಾನಾವಧಿಯುಳ್ಳ ಮರ್ಮಗಳೆಂದು ತಿಳಿಯಬೇಕು ಹೀಗೆ ದೇಹದಲ್ಲಿರುವ (೧೦೭) ಮರ್ಮಗಳಿಗೂ ಸ್ಥಾನದ ಪರಿಮಾಣವನ್ನು ಅಂಗುಲಿ ಪರಿಮಿತಿಯಿಂದ ವಿವರಿಸಿದ್ದಾರೆ ಆಘಾತಾದಿಗಳು ಸಂಭವಿಸಿದಾಗ ಮರ್ಮದಲ್ಲಿಯೋ ಅಥವಾ

ಸಮೀಪದಲ್ಲಿಯೋ ಎನ್ನುವ ಜ್ಞಾನ ಇದರಿಂದುಂಟಾಗುತ್ತದೆ. ಮತ್ತು ಶಸ್ತ್ರ ಕರ್ಮಾದಿಗಳಲ್ಲಿಯೂ ಶಲ್ಯಾಪನಯನದಲ್ಲಿಯೂ ಮರ್ಮಸ್ಥಾನವನ್ನು ಬಿಟ್ಟು, ಕ್ರಿಯಾನೆರವೇರಿಸಲು ಅನುಕೂಲವಾಗುತ್ತದೆ

ತಂತ್ರಾಂತರ ಮತ ಅಂಗುಲಾದಿ ಪ್ರಮಾಣಗಳನ್ನು ಹೇಳಿ ಉಳಿದ (೫೬) ಮರ್ಮಗಳನ್ನು **"ಚತುರಂಗುಲ"** ಪ್ರಮಾಣ ಸ್ಥಾನವುಳ್ಳವುಗಳೆಂದು ಹೇಳುತ್ತಾರೆ.

**ಸುಶ್ರುತ ಮತ** ಈ ಮರ್ಮಗಳ ಸ್ಥಾನಪ್ರಮಾಣವು **"ಅರ್ಧಾಂಗುಲ"** ಇರುತ್ತದೆ. ಶಲ್ಯತಂತ್ರವಿರುವದರಿಂದ ಸುಶ್ರುತಾಭಿಪ್ರಾಯದಂತೆ ಟೀಕಾಕಾರರು, ಉಳಿದ ಮರ್ಮಗಳನ್ನು ಅರ್ಧಾಂಗುಲ ಪರಿಮಾಣವನ್ನೇ ಅನುಸರಿಸಿ, ಸುಶ್ರುತ ಮತದಂತೇ ವ್ಯಾಖ್ಯಾನ ಮಾಡಿದ್ದಾರೆ ಮತ್ತು ಆಯಾಯ ಮರ್ಮ ನಿರ್ದೇಶಗಳಲ್ಲಿ ಅರ್ಧಾಂಗುಲ ಪ್ರಮಾಣವನ್ನೇ ಸೂಚಿಸಿದ್ದಾರೆ

## ಮರ್ಮಸ್ಥಾನ ಪ್ರಮಾಣದ ಪ್ರಯೋಜನವು

**ಏತತ್ ಪ್ರಮಾಣಮಭಿವೀಕ್ಷ್ಯವದಂತಿತಜ್ಞಾಃ ||**
**ಶಸ್ತ್ರೇಣಕರ್ಮಕರಣಂ ಪರಿಹೃತ್ಯಕಾರ್ಯಂ ||**
**ಪಾರ್ಶ್ವಾಭಿಘಾತಿತಮಪೀಹನಿಹಂತಿಮರ್ಮ ||**
**ತಸ್ಮಾದ್ಧಿಮರ್ಮಸದನಂ ಪರಿವರ್ಜನೀಯಮ್ ||**
(ಸುಶ್ರುತ|| ಶಾರೀರ|| ಅ ೬ ಶ್ಲೋ ೩೦)

ಮರ್ಮಗಳಲ್ಲಿ ಹೇಳಿದ ಆಯಾಯ ಅಂಗುಲಿಮಿತ ಸ್ಥಾನಗಳನ್ನು ಚನ್ನಾಗಿ ತಿಳಿದುಕೊಂಡು, ಶಸ್ತ್ರಕರ್ಮ ವಿಧಾನವನ್ನು ಮರ್ಮಸ್ಥಾನಗಳನ್ನು ಬಿಟ್ಟು ಯೋಜಿಸಬೇಕು ಮರ್ಮವು ಪಕ್ಕದಲ್ಲಿ (ಸಮೀಪ) ಆಘಾತಹೊಂದಿದರೂ ಸಹ ನಾಶಮಾಡುತ್ತದೆ. ಅರ್ಥಾತ್ ಮರ್ಮಸ್ಥಾನ ಪರಿಮಿತ ಭಾಗದಲ್ಲಿ (ಸಮೀಪದಲ್ಲಿ), ಶಸ್ತ್ರಾದಿ ಅಪಘಾತಗಳಿಂದ, ಮರ್ಮಹತ ಪರಿಣಾಮವಾಗುತ್ತದೆಂಬಭಿಪ್ರಾಯವು. ಆದ್ದರಿಂದ ಪೂರ್ವೋಕ್ತಮರ್ಮಗಳ ಮಾಪನ ಪರಿಮಾಣಗಳನ್ನು ಚನ್ನಾಗಿ ತಿಳದು, ಮರ್ಮಸ್ಥಾನ ಸೀಮಾನಿರ್ಧಾರ ಮಾಡಿ

ಕೊಳ್ಳಬೇಕು. ಹೀಗೆ ಚನ್ನಾಗಿ ಮರ್ಮವಿಷಯ ಪರಿಚಯಮಾಡಿಕೊಳ್ಳುವ ದರಿಂದ, ಮರ್ಮಗಳಿಗೆ ಆಘಾತವಾಗದಂತೇ ಶಸ್ತ್ರಕರ್ಮಾದಿಗಳನ್ನು ಸಿರಾವ್ಯಧನ ಶಲ್ಯಾಪನಯನಗಳನ್ನೂ ಮರ್ಮಹತ ನಿರ್ಣಯವನ್ನೂ ಮಾಡಲಿಕ್ಕೆ ಸುಲಭವಾಗುವದು. ಹೀಗೆ "ತಜ್ಞ ವೈದ್ಯರು" ಮರ್ಮ ವಿಷಯದಲ್ಲಿ ವಿಶೇಷ ಜ್ಞಾನದಿಂದ ಕರ್ತವ್ಯ ಮಾಡಬೇಕೆಂದು ಹೇಳುತ್ತಾರೆ.

**ಛಿನ್ನೇಷು ಪಾಣಿಚರಣೇಷು ಸಿರಾನರಾಣಾಂ ||**
**ಸಂಕೋಚಮೇಯುರಸೃಗಲ್ಪಮತೋನಿರೇತಿ ||**
**ಪ್ರಾಪ್ಯಾಮಿತ ವ್ಯಸನಮುಗ್ರಮತೋಮನುಷ್ಯಾಃ ||**
**ಸಂಛಿನ್ನಶಾಖತರುವನ್ನಿಧನಂನಯಾಂತಿ ||**

(ಸುಶ್ರುತ|| ಶಾರೀರ|| ಅ ೬ ಶ್ಲೋ ೩೧)

ಕೈಕಾಲುಗಳನ್ನು ಕಡಿದರೆ ಮನುಷ್ಯನ ಸಿರಗಳು ಸಂಕೋಚ ಹೊಂದಿ ರಕ್ತವು ಸ್ವಲ್ಪ ಹೋಗುತ್ತದೆ. ಇಷ್ಟು ಕಠೋರ ಮತ್ತು ಅತಿಶಯವಾದ ನೋವನ್ನು ಹೊಂದಿಯೂ, ಟೊಂಗೆಗಳನ್ನು ಕತ್ತರಿಸಿದ ಮರದಂತೇ ನಾಶವನ್ನು ಹೊಂದುವದಿಲ್ಲ. ಅರ್ಥಾತ್ ದೇಹದ ಅಂಗವಾದ ಕೈಕಾಲುಗಳನ್ನು ಕತ್ತರಿಸಿದರೂ ಮನುಷ್ಯನು ಬದುಕುತ್ತಾನೆ. ಆದರೆ ಅವಯವಗಳ ಅಂಗ ಭೂತವಾದ ಮರ್ಮಗಳಲ್ಲಿ ಛೇದಭೇದ ಆಘಾತಾದಿಗಳು ಸಂಭವಿಸಿದರೆ, ಮನುಷ್ಯನು ಜೀವಿಸುವದಿಲ್ಲೆಂದು ವಿಶೇಷ ಮಹತ್ವ ತೋರಿಸಲು ಹೀಗೆ ವಿವರಿಸಿದ್ದಾರೆ.

**ಕ್ಷಿಪ್ರೇಷುತತ್ರ ಸತಲೇಷುಹತೇಷುರಕ್ತಂ ||**
**ಗಚ್ಛತ್ಯತೀವ ಪವನಶ್ಚರುಜಂಕರೋತಿ ||**
**ಏವಂ ವಿನಾಶಮುಪಯಾಂತಿ ಹಿತತ್ರವಿದ್ಧಾಃ ||**
**ವೃಕ್ಷಾ ಇವಾಯುಧನಿಪಾತನಕೃತ್ತಮೂಲಾಃ ||**

(ಸುಶ್ರುತ|| ಶಾರೀರ|| ಅ ೬ ಶ್ಲೋ ೩೨)

ಮನುಷ್ಯನು ಕ್ಷಿಪ್ರ ಮತ್ತು ತಲೆಹೃದಯ ಮರ್ಮಗಳಲ್ಲಿ ತೀವ್ರ ವಾದ ಛೇದನ ಭೇದನ ಆಘಾತಾದಿಗಳನ್ನು ಹೊಂದಿದರೆ, ಬಹಳ ರಕ್ತಸ್ರಾವ ವಾಗುತ್ತದೆ. ವಾಯುವು ಸಹ ಪ್ರಕೋಪ ಹೊಂದಿ ನೋವನ್ನುಂಟು ಮಾಡುತ್ತದೆ. ಹೀಗೆ ಮರ್ಮಗಳಲ್ಲಿಯ ಆಘಾತಗಳಿಂದ ಬಹಳ ರಕ್ತ ಹೋಗಿ ಮತ್ತು ವಾಯು ಪ್ರಕೋಪಹೊಂದಿ ಅತೀವ ವೇದನೆಯು ಉತ್ಪನ್ನ ವಾಗುವದರಿಂದಲೂ, ಆಯುಧಗಳ ನಿಪಾತನದಿಂದ ಬೇರನ್ನು ಕತ್ತರಿಸಿದ ವೃಕ್ಷಗಳಂತೆ ಮನುಷ್ಯರು ನಾಶವನ್ನು ಹೊಂದುತ್ತಾರೆ ಮರ್ಮಗಳಲ್ಲಿ ತೀವ್ರ ಹೊಡತ ಕಡತಗಳು (ವಿದ್ಧ) ವಾದರೆ ಮರಣವನ್ನು ಹೊಂದುತ್ತಾ ರಾದ್ದರಿಂದ, ಇಂಥ ಜರ್ಜರಿತ ಮರ್ಮಗಳನ್ನು ಕತ್ತರಿಸಿ ಬೇರ್ಪಡಿಸಿದರೆ ಬದುಕುತ್ತಾರೆ. ಅರ್ಥಾತ್ ಮರ್ಮಾಘಾತ ತೀವ್ರತೆಯಿಂದ ಸಾಯುವ ರನ್ನು ಬದುಕಿಸುವ ಉಪಾಯವೆಂದರೆ, ಮರ್ಮದ ಅವಧಿಯನಂತರ ಭಾಗ ದಲ್ಲಿ ಛೇದ ಮಾಡಿ ಮರ್ಮವನ್ನು ಬೇರ್ಪಡಿಸಬೇಕು ಹೀಗೆ ಮಾಡಿದರೆ ಮರ್ಮವೇ ಹೋಗಿ ಬಿಡುವದರಿಂದ, ಅದರಿಂದಾಗುವ ನಾಶವು ಸಂಭವಿಸುವ ದಿಲ್ಲೆಂದು ಸುಶ್ರುತಮತವಾಗಿರುತ್ತದೆ.

**ತಸ್ಮಾತ್ತಯೋರಭಿಹತಸ್ಯತು ಪಾಣಿಪಾದಂ ||**
**ಛೇತ್ತವ್ಯಯಾಶುಮಣಿ ಬಂಧನಗುಲ್ಫದೇಶೇ ||**
(ಸುಶ್ರುತ|| ಶಾರೀರ|| ಅ ೬ ಶ್ಲೋ ೩೩)

ಈ ಪೂರ್ವೋಕ್ತವಾಗಿ ವಿವರಿಸಿದಂತೇ ಕ್ಷಿಪ್ರ ಮತ್ತು ತಲಹೃದಯ ಗಳಲ್ಲಿ ತೀವ್ರಾಘಾತವಾದರೆ, ಅಂಗೈ ಮತ್ತು ಅಂಗಾಲುಗಳನ್ನು ಮಣಿಬಂಧ ಗುಲ್ಫ ಪ್ರದೇಶಗಳಲ್ಲಿ ಕೂಡಲೇ ಛೇದಿಸಬೇಕು ಇದರಿಂದ ಮರ್ಮವೇ ಬೇರ್ಪಟ್ಟು ಅದರಿಂದ ಸಂಭವಿಸುವ ನಾಶವು (ಮರಣವು) ಆಗುವದಿಲ್ಲ ಮರ್ಮಸ್ಥಳವನ್ನು ಕತ್ತರಿಸಿ ತೆಗೆದು ಬಿಡುವದರಿಂದ ಬದುಕುತ್ತಾನೆಂಬ ಅಭಿಪ್ರಾಯವು.

ಮರ್ಮಗಳ ಅಳತೆಯ ಪ್ರಯೋಜನವನ್ನು ನಿರೂಪಿಸಿ, ಮರ್ಮಸ್ಥಾನ ವಿಷಯ ನಿರ್ದೇಶವನ್ನು ಕುರಿತು ಹೇಳುತ್ತಾರೆ

**ಮರ್ಮಾಣಿಶಲ್ಯವಿಷಯಾರ್ಥಮುದಾಹರಂತಿ ||**
**ಯಸ್ಮಾಚ್ಚ ಮರ್ಮಸುಹತಾನ ಭವಂತಿ ಸದ್ಯಃ ||೩೩||**
**ಜೀವಂತಿತತ್ರಯದಿ ವೈದ್ಯ ಗುಣೇನಕೇಚಿತ್ ||**
**ತೇಪ್ರಾಪ್ನುವಂತಿ ವಿಕಲತ್ವಮಸಂಶಯಂಹಿ ||**

(ಸುಶ್ರುತ|| ಶಾರೀರ|| ಅ ೬ ಶ್ಲೋ ೩೪)

ಮರ್ಮವನ್ನು ಕುರಿತು ವಿವರಣೆಯಲ್ಲಿ ಹೀಗೆ ವಿವೇಚಿಸಿದ್ದಾರೆ:— ಮರ್ಮಗಳನ್ನು ತಿಳಿದುಕೊಳ್ಳುವದು ಶಲ್ಯ ವಿಷಯದಲ್ಲಿ (ಶಸ್ತ್ರ ಕ್ರಿಯಾದಿಗಳು, ಶಲ್ಯಾಹರಣ) ಅರ್ಥಕೆಲಸವಾದಂತೆಯೇ ಆಗಿರುತ್ತದೆ. ಇನ್ನೊಂದರ್ಥವೇನಂದರೆ, ಶಲ್ಯಾದಿಗಳಿಂದಲೇ ಬಹುಶಃ ಮರ್ಮಗಳಲ್ಲಿ ಆಘಾತವಾಗಿ ಮರಣ ಸಂಭವಿಸುವದರಿಂದ, ಶಲ್ಯವೊದಲಾದವುಗಳನ್ನು (ಶಸ್ತ್ರಾದಿಗಳನ್ನು) ಉದ್ದೇಶಿಸಿಯೇ ಮರ್ಮವೆಂಗು ಹೇಳಿದ್ದಾರೆ. ಆದ್ದರಿಂದ ಮರ್ಮಗಳು ಪ್ರಾಣಹಾರಕವಾಗಲಿಕ್ಕೆ ಶಲ್ಯಾದಿಗಳೇಅರ್ಥ ಕಾರಣವಾಗಿರುತ್ತವೆ "**ಶಲ್ಯಂ ನಾಮ ಸರ್ವ ಶರೀರಾಬಾಧಕರಂ ಶಲ್ಯಂ**"ಸಮಗ್ರ ದೇಹದಲ್ಲಿ ವೇದನೆಯನ್ನುಂಟು ಮಾಡುವದು ಶಲ್ಯವು ದೇಹದ ಮರ್ಮಾದಿಭಾಗಗಳಲ್ಲಿ ಉಂಟಾದ ವ್ರಣ ವೊದಲಾದವುಗಳೂ ಸಂಪೂರ್ಣ ದೇಹದಲ್ಲಿ ವೇದನೆಯನ್ನುಂಟು ಮಾಡುವದರಿಂದ ಶಲ್ಯವಾಗಿರುತ್ತವೆ ದೇಹದಲ್ಲಿ ಸಂಭವಿಸಿರುವದುಶಾರೀರ ಶಲ್ಯವೆಂದೂ, ಬಾಣ ಶಸ್ತ್ರಾದಿಗಳಿಂದುತ್ಪನ್ನವಾದದ್ದು ಆಗಂತುಕ ಶಲ್ಯವೆಂದೂ ತಿಳಿಯಬೇಕು. ಮರ್ಮಗಳಲ್ಲಿ ಆಹತವಾದವನು ಆಘಾತ ಸೌಮ್ಯತೆಯಿಂದ ಸದ್ಯದಲ್ಲಿ ಮರಣ ಹೊಂದದಿರಲಿಕ್ಕೆ ಕಾರಣವಾಗಿರುರುತ್ತದೆ. ಶಸ್ತ್ರಾಘಾತಗಳು ಸಮೀಪದಲ್ಲಿ ಅಥವಾ ಸಾಮಾನ್ಯವಾಗಿ ಹೊಡತ ಬಿದ್ದರೆ ಸದ್ಯದಲ್ಲಿ ಮರಣ ಹೊಂದುವದಿಲ್ಲವಾದ್ದರಿಂದ, ಮರ್ಮಗಳು ಶಲ್ಯವನ್ನೇ ಅನುಸರಿಸವದು. ಅದಕ್ಕಾಗಿಯೇ "**ಮರ್ಮಾಣಿ ಶಲ್ಯವಿಷಯಾರ್ಥಂ**" ಎಂದು ವಿವರಿಸಿದ್ದಾರೆ. ಇನ್ನು ಯೋಗ್ಯ ವೈದ್ಯನು ಚನ್ನಾಗಿ ಚಿಕಿತ್ಸೆಯನ್ನು ಮಾಡಿದರೆ ವೈದ್ಯನ ಚಿಕಿತ್ಸಾ ಗುಣದಿಂದ, ಕೆಲವರು ಗುಣ ಹೊಂದಿದರೂ ಊನತ್ವವುಳ್ಳವರಾಗುತ್ತಾರೆ. ಇದು ನಿಶ್ಚಯವಾದವಿಷಯವಾಗಿರುತ್ತದೆ.

## ವಿವರಣೆ

ಮರ್ಮಗಳು ಪ್ರಾಣಹಾರಕಗಳಾಗಿದ್ದರೂ ಮರ್ಮಗಳಲ್ಲಿ **ಹೊಡತ** ಬಿದ್ದವನು ಸದ್ಯಃ ಮರಣವನ್ನು ಯಾಕೆ ಹೊಂದುವದಿಲ್ಲವೆಂದರೆ, ಶಲ್ಯಾದಿಗಳ ಅಘಾತ ವಿಷಯುದಲ್ಲಿಯು ಅಲ್ಪತೆಯೇ (ಸೌಮ್ಯತೆಯೇ) ಕಾರಣವಾಗಿರುತ್ತದೆ. ಹೀಗೆ ಮರ್ಮಗಳು ಶಲ್ಯವನ್ನೇ ಅವಲಂಬಿಸಿ ಸದ್ಯೋ ಮರಣಾದಿಗಳನ್ನುಂಟು ಮಾಡುತ್ತವೆಯಾದ್ದರಿಂದ "**ಮರ್ಮಾಣಿ ಶಲ್ಯ ವಿಷಯಾರ್ಧಂ**" ಮರ್ಮಗಳು ಅರ್ಧದಷ್ಟು ಶಲ್ಯಾದಿಗಳನ್ನವಲಂಬಿಸಿಯೇ ಇರುತ್ತವೆಂದು ಹೇಳಿದ್ದಾರೆ

**ಸಂಭಿನ್ನ ಜರ್ಜರಿತಕೋಷ್ಠ ಶಿರಃ ಕಪಾಲಾ ॥**
**ಜೀವಂತಿ ಶಸ್ತ್ರನಿಹತೈಶ್ಚ ಶರೀರದೇಶೈಃ ॥**
**ಛಿನ್ನೈಶ್ಚ ಸಕ್ಥಿ ಭುಜಪಾದಕರೈರಶೇಷೈಃ ॥**
**ಯೇಷಾಂನ ಮರ್ಮಸುಕೃತಾವಿವಿಧಾ ಪ್ರಹಾರಾಃ ॥**

(ಸುಶ್ರುತ॥ ಶಾರೀರ॥ ಅ ೬ ಶ್ಲೋ ೩೪)

ದೇಹದ ಮರ್ಮವಲ್ಲದ ಪ್ರದೇಶಗಳಲ್ಲಿ ವಿವಿಧ ಅಘಾತಗಳಾದರೂ ಮರಣ ಸಂಭವಿಸುವದಿಲ್ಲೆಂದು ಹೇಳುತ್ತಾರೆ. ಚನ್ನಾಗಿ ಹೊಡತ ಬಿದ್ದು ಕೋಷ್ಠವು ಮತ್ತು ತಲೆಯ ಕಪೋಲಗಳು ಜರ್ಜರಿತವಾದರೂ ಸಹ, ಸಕ್ಥಿ ಭುಜ ಪಾದ ಕೈ ಮೊದಲಾದವುಗಳ ಸಂಪೂರ್ಣ ಛೇದವುಂಟಾದರೂ ಮರ್ಮರಹಿತ ಪ್ರದೇಶಗಳಲ್ಲಾದರೆ ಮನುಷ್ಯನು ನಾಶ ಹೊಂದುವದಿಲ್ಲ. ಮರ್ಮವಲ್ಲದ ದೇಹ ಪ್ರದೇಶಗಳಲ್ಲಿ ಬಹಳೇ ಆಘಾತ ಸಂಭವಿಸಿದರೂ ಬದುಕುತ್ತಾರೆಂಬ ಅಭಿಪ್ರಾಯವಾಗಿರುತ್ತದೆ.

**ಸೋಮಮಾರುತ ತೇಜಾಂಸಿರಜಃ ಸತ್ವ ತಮಾಂಸಿಚ ॥**
**ಮರ್ಮ ಸುಪ್ರಾಯಶಃ ಪುಂಸಾಂಭೂತಾತ್ಮಾ ಚಾವತಿಷ್ಠತೆ ॥**
**ಮರ್ಮ ಸ್ವಭಿಹತಾಸ್ತಸ್ಮಾತ್‌ನ ಜೀವಂತಿ ಶರೀರಿಣಃ ॥**

ಸುಶ್ರುತ॥ ಶಾರೀರ॥ ಅ ೬ ಶ್ಲೋ ೩೫)

ಸೋಮ (ಶ್ಲೇಷ್ಮ), ಮಾರುತ (ವಾಯು), ತೇಜಃ (ಪಿತ್ತ), ಇವುಗಳು ಮತ್ತು ಸತ್ವ ರಜಸ್ತಮೋ ಗುಣಗಳು ವಿಶೇಷವಾಗಿ ಮರ್ಮಗಳಲ್ಲಿರುತ್ತವೆ. ಇವುಗಳಂತೆ ಜೀವನು (ಭೂತಾತ್ಮನು) ಸಹ ಮರ್ಮಸ್ಥಾನಗಳಲ್ಲಿ ವಿಶೇಷವಾಗಿರುತ್ತಾನೆ. ಹೀಗಿರುವದರಿಂದ ಮರ್ಮಗಳಲ್ಲಿ ಆಘಾತ ಹೊಡತ ಬಿದ್ದರೆ, ಪ್ರಾಣಿಗಳು ಜೀವಿಸುವದಿಲ್ಲವು

## ಮರ್ಮಾಘಾತ ಲಕ್ಷಣ

**ಇಂದ್ರಿಯಾರ್ಥೇಷ್ವಸಂಪ್ರಾಪ್ತಿರ್ಮನೋ ಬುದ್ಧಿವಿಪರ್ಯಯಃ ||**
**ರುಜಶ್ಚ ವಿವಿಧಾಸ್ತೀವ್ರಾ ಭವಂತ್ಯಾಶುಹರೇಹತೇ ||**
**ಹತೇಕಾಲಾಂತರಘ್ನೇತು ಧೃವಂಧಾತುಕ್ಷಯೋ ನೃಣಾಂ ||**
**ತತೋಧಾತುಕ್ಷಯಾಜ್ಜಂತುರ್ವೇದನಾಭಿಶ್ಚ ನಶ್ಯತಿ ||**
**ಹತೇ ವೈಕಲ್ಯ ಜನನೇ ಕೇವಲಂ ವೈದ್ಯ ನೈಪುಣಾತ್ ||೩೮||**

ಸದ್ಯಃಪ್ರಾಣಹರ ಮರ್ಮಗಳಲ್ಲಿ ಹೊಡತ ಬಿದ್ದರೆ, ಇಂದ್ರಿಯವಿಷಯ ಗ್ರಹಣ ಮಾಡಲು ಸಮರ್ಥವಾಗದಿರುವದು, ಮನಸ್ಸು, ಮತ್ತು ಬುದ್ಧಿಗಳು ವಿಪರೀತವಾಗೋಣ, ಮೊದಲಾದವುಗಳು ಸಂಭವಿಸುತ್ತವೆ. ವಿವಿಧವಾದ ತೀವ್ರವಾದ ವೇದನೆಗಳುಂಟಾಗುತ್ತವೆ. ಇವುಗಳು ಸದ್ಯಃ ಪ್ರಾಣಹರ ಮರ್ಮಗಳಲ್ಲಿ ಆಘಾತವಾಗಿದ್ದರ ಲಕ್ಷಣವಾಗಿರುತ್ತವೆ. ಕಾಲಾಂತರ ಪ್ರಾಣಹರ ಮರ್ಮಗಳಲ್ಲಿ ಆಘಾತವಾದರೆ ನಿಶ್ಚಯವಾಗಿ ಧಾತು ಕ್ಷಯವಾಗುತ್ತದೆ. ಧಾತು ಕ್ಷಯದಿಂದಲೂ ವೇದನೆಯಿಂದಲೂ ಆಘಾತ ಹೊಂದಿದವನು ನಾಶವಾಗುತ್ತಾನೆ. ವೈಕಲ್ಯವನ್ನುಂಟುಮಾಡುವ ಮರ್ಮಗಳಲ್ಲಿ ಆಘಾತವಾದರೆ ಕೇವಲ ವೈದ್ಯನ ಚಿಕಿತ್ಸಾ ಜಾಣತನದಿಂದ ಗುಣವಾಗುವದಾದರೂ ವಿಕಲತೆ (ಊನತ್ವ) ಉಂಟಾಗುತ್ತದೆ.

**ಶರೀರಂ ಕ್ರಿಯಯಾಯುಕ್ತಂ ವಿಕಲತ್ವಮವಾಪ್ನುಯಾತ್ ||**
**ವಿಶಲ್ಯಘ್ನೇತು ವಿಜ್ಞೇಯಂ ಪೂರ್ವೋಕ್ತಂಯಚ್ಚಕಾರಣಂ ||**

(ಸುಶ್ರುತ|| ಶಾರೀರ|| ಅ ೬ ಶ್ಲೋ ೩೯)

**ರುಜಾಕರಾಣಿ ಮರ್ಮಾಣಿಕ್ಷತಾನಿ ವಿವಿಧಾರುಜಃ ॥**
**ಕುರ್ವಂತ್ಯಂತೇಚ ವೈಕಲ್ಯಂ ಕುವೈದ್ಯವಶಗೋಯದಿ ॥**

(ಸುಶ್ರುತ॥ ಶಾರೀರ॥ ಅ ೬ ಶ್ಲೋ ೪೦)

ಯೋಗ್ಯ ಕ್ರಿಯೆಯನ್ನು ಜಾಣ ವೈದ್ಯನು ನಿರ್ವಹಿಸಿದರೆ ಮರಣವಾಗದೇ ವಿಕಲತೆಯುಂಟಾಗುತ್ತದೆಂದು ಹಿಂದೆ ವಿವರಿಸಿದ್ದಾಗಿದೆ ಪೂರ್ವೋಕ್ತ ಕಾರಣದಿಂದ ಅಂದರೆ "ವಿಶಲ್ಯಘ್ನ ಪ್ರಾಣಹರ" ಮರ್ಮದ ಸಮೀಪದಲ್ಲಿ ಆಘಾತವಾದರೆ ವಿಕಲತೆಯುಂಟಾಗುತ್ತದೆಂದು ಹೇಳಿದ್ದಾರೆ. ರುಜಾಕರ ಮರ್ಮಗಳಲ್ಲಿ ಆಘಾತವಾದರೆ ವಿವಿಧವಾದ ತೀವ್ರ ನೋವುಂಟಾಗುತ್ತದೆ ಚನ್ನಾಗಿ ಅರಿಯದ ಅರ್ಧಮರ್ಧ ಕುವೈದ್ಯನು ಚಿಕಿತ್ಸೆಯನ್ನು ನಡೆಸಿದರೆ ರುಜಾಕರ ಮರ್ಮದಲ್ಲಿಯ ಆಘಾತವು ವಿಕಲತೆಯನ್ನುಂಟು ಮಾಡುತ್ತದೆ ಇದರಂತೇ ಮುಂದಿನವು ಸಹ ಕುವೈದ್ಯನ ಚಿಕಿತ್ಸೆಯಿಂದ ಹೆಚ್ಚೆಚ್ಚು ಆಘಾತವುಳ್ಳವುಗಳಂತೇ ಪರಿಣಾಮವನ್ನುಂಟು ಮಾಡುತ್ತವೆ

**ಛೇದಭೇದಾಭಿ ಘಾತೇಭ್ಯೋ ದಹನಾದ್ದಾರಣಾದಪಿ ॥**
**ಉಪಘಾತಂವಿಜಾನೀಯಾತ್ ಮರ್ಮಣಾಂತುಲ್ಯಲಕ್ಷಣಂ॥**

(ಸುಶ್ರುತ॥ ಶಾರೀರ॥ ಅ ೬ ಶ್ಲೋ ೪೧)

ಮರ್ಮಗಳ ಸಮೀಪ ಭಾಗಗಳಲ್ಲಿಯೂ ಸಹ **ಛೇದ** (ಕಡಿಯೋಣ, ಕತ್ತರಿಸುವದು), **ಭೇದ** (ಒಡೆಯುವದು ಅಥವಾ ಚುಚ್ಚುವದು), **ದಹನ** (ಸುಡುವದು ಅಥವಾ ಕ್ಷಾರಾಗ್ನಿ ಕರ್ಮಗಳು), **ದಾರಣ** (ಸೀಳುವದು), ಮೊದಲಾದವುಗಳಾದರೆ ಮರ್ಮಹತ ಲಕ್ಷಣದಂತೆಯೇ ಆಘಾತಲಕ್ಷಣವನ್ನು ತಿಳಿಯಬೇಕು ಅದು ಹೇಗಂದರೆ ಸಮೀಪಹತ ನಿಯಮಗಳನ್ನು ಹಿಂದೆ ವಿವರಿಸಿರುತ್ತದೆ. ಅದರಂತೇ ತಿಳಿಯಬೇಕೆಂಬಭಿಪ್ರಾಯವಾಗಿರುತ್ತದೆ. ಉಪಘಾತವೆಂದರೆ ಮರ್ಮ ಸಮೀಪದಲ್ಲಾದ ಆಘಾತಗಳೆಂದು ತಿಳಿಯಬೇಕು.

**ಮರ್ಮಾಭಿಘಾತಸ್ತು ನಕಶ್ಚಿದಸ್ತಿ ॥ ಯೋಽಲ್ಪಾತ್ಯಯೋ ವಾಽ ಪಿನಿರತ್ಯಯೋ ವಾ ॥ ಪ್ರಾಯೇಣ ಮರ್ಮಸ್ವಭಿತಾಡಿತಾಸ್ತು ॥ ವೈಕಲ್ಯಮೃಚ್ಛತ್ಯಥವಾಮ್ರಿಯಂತೇ ॥**
(ಸುಶ್ರುತ॥ ಶಾರೀರ॥ ಅ ೬ ಶ್ಲೋ ೪೨)

ಯಾವದೇ ಒಂದು ಮರ್ಮದಲ್ಲಿಯು ಆಘಾತವು "**ಸ್ವಲ್ಪ**" ವೇದನೆಯುಳ್ಳದ್ದು ಅಥವಾ "**ವೇದನಾ ರಹಿತವಾಗಿರುವದು**" ಇರುವದಿಲ್ಲವೆಂದು ವಿವರಿಸುತ್ತಾರೆ. ವಿಶೇಷವಾಗಿ ಮರ್ಮಗಳಲ್ಲಿ ಆಘಾತ ಹೊಂದಿದವರು ವಿಕಲತ್ವವನ್ನು (ಊನತೆ) ಹೊಂದುತ್ತಾರೆ ಇಲ್ಲವೇ ಮರಣವನ್ನು ಹೊಂದುತ್ತಾರೆ. ವಿಕಲತೆ ಮರಣಗಳು ಸಂಭವಿಸುವದರಿಂದ, ಮರ್ಮಾಘಾತವು ಅಲ್ಪ ದುಃಖ ಅಥವಾ ದುಃಖ ರಹಿತವಾದದ್ದು ಇರುವದಿಲ್ಲೆಂದು ಅಭಿಪ್ರಾಯವಾಗಿರುತ್ತದೆ. ಇದರಿಂದ ಮರ್ಮಾಘಾತವು ಮಹತ್ವವುಳ್ಳ ಚಿಕಿತ್ಸಾ ವಿಷಯವಾದ್ದರಿಂದ, ಚಿಕಿತ್ಸಕರಾದ ವೈದ್ಯರು ಬಹಳೇ ಯತ್ನಪರವಾಗಿರಬೇಕೆಂದು ಹೀಗೆ ಹೇಳಿದ್ದಾರೆ

**ಮರ್ಮಾಣ್ಯಧಿಷ್ಠಾಯ ಹಿಯೇ ವಿಕಾರಾಃ ॥**
**ಮೂರ್ಚ್ಛಂತಿಕಾಯೇ ವಿವಿಧಾ ನರಾಣಾಂ ॥**
**ಪ್ರಾಯೇಣತೇಕೃಚ್ಛ್ರತಮಾ ಭವಂತಿ ॥**
**ನರಸ್ಯಯತ್ನೈರಪಿ ಸಾಧ್ಯಮಾನಾಃ ॥**
(ಸುಶ್ರುತ॥ ಶಾರೀರ॥ ಅ ೬ ಶ್ಲೋ ೪೩)

ಮರ್ಮಗಳಲ್ಲಿಯ ಶಸ್ತ್ರಾದಿ ಆಘಾತಗಳು ಮತ್ತು ವ್ರಣವಿದ್ರಧಿ ವೊದಲಾದವುಗಳು, ಮರ್ಮಗಳನ್ನು ಆಶ್ರಯಿಸಿಕೊಂಡು ದೇಹದಲ್ಲಿ ವ್ಯಾಪಿಸಿ ತೀವ್ರ ಪರಿಣಾಮಗಳನ್ನುಂಟು ಮಾಡುತ್ತವೆ. ಆಘಾತಗಳನ್ನು ಎರಡು ವಿಧವಾಗಿ ವಿವರಣೆಯನ್ನು ಮಾಡಿದ್ದಾರೆ. (೧) ಶಸ್ತ್ರಾದಿಗಳಿಂದಾದ ಮರ್ಮಾಘಾತವು ಆಗಂತುವಾಗಿದ್ದು ಅಭಿಘಾತ ನಿಮಿತ್ತದಿಂದ ಆಗಿರುತ್ತದೆ. ಇದಕ್ಕೆ ಬಹಿರಾಘಾತಜನ್ಯವೆಂದೂ ಹೇಳುತ್ತಾರೆ. ಸಾಧನವಾದ ಶಸ್ತ್ರ ಬಾಣಾದಿಗಳು "**ಬಾಹ್ಯಶಲ್ಯ**" ವಾಗಿರುತ್ತವೆ (೨) ಶರೀರ ಮರ್ಮ ಪ್ರದೇಶಗಳ

ಲ್ಲುತ್ಪನ್ನವಾದ ವ್ರಣಾದಿಗಳು ಊನತ್ವ ಮರಣಗಳನ್ನುಂಟು ಮಾಡುತ್ತವೆ ಯಾದ್ದರಿಂದ "ಶರೀರ ಶಲ್ಯ" ವೆಂದು ಹೇಳಿದ್ದಾರೆ

ಈ ಎರಡೂ ವಿಧವಾದ ಶಲ್ಯಗಳು ಸಾಕ್ಷಾತ್ ಮರ್ಮಗಳಲ್ಲಿಯೇ ಅಥವಾ ಮರ್ಮ ಸಮೀಪ ಪ್ರದೇಶಗಳಲ್ಲಿ, ಸಂಭವಿಸಿ ದೇಹವನ್ನು ತೀವ್ರ ದುಃಖಕ್ಕೀಡು ಮಾಡುತ್ತವೆ ಇಲ್ಲಿ ಮರಣವನ್ನುಂಟು ಮಾಡುವದರಿಂದಲೇ ಮರ್ಮವೆಂದು ಹೇಳಿರುವದರಿಂದ, ಮರಣವನ್ನು ಅಥವಾ ತತ್ಸದೃಶವಾದ ಇಂದ್ರಿಯವಧಾದಿಗಳನ್ನು (ವಿಕಲತ್ವ) ಉಂಟು ಮಾಡುತ್ತವೆಂದು ತಿಳಿಯು ಬೇಕು. ಮರ್ಮವನ್ನು ಆಶ್ರಯಿಸಿರುವ ಆಘಾತಾದಿಗಳಿಂದುಂಟಾದ ವಿಕಾರ ಗಳು ಸಮಗ್ರ ದೇಹದಲ್ಲಿಯೂ ಪಸರಿಸಿ ಅತಿ ತೀವ್ರ ವೇದನೆಯನ್ನುಂಟು ಮಾಡುತ್ತವೆ. ಇದರಿಂದ ಮರ್ಮಾಘಾತವನ್ನು ಹೊಂದಿದವನು ವಿನಾಶ ವನ್ನು ಹೊಂದುತ್ತಾನೆ. ಬಹಳ ಪ್ರಯತ್ನಗಳಿಂದ ಚಿಕಿತ್ಸೆಯನ್ನುಮಾಡಿದರೂ ಸಹ ಮರ್ಮಾಘಾತಗಳು ಅತ್ಯಂತಕಷ್ಟ ಸಾಧ್ಯವಾದವುಗಳಾಗಿರುತ್ತವೆ. ಹೀಗಿರು ವದರಿಂದ ಮರ್ಮಗಳವಿಷಯದಲ್ಲಿ ಚನ್ನಾಗಿ ತಜ್ಞರಾದ ವೈದ್ಯರೇ ಪ್ರಯತ್ನ ಪೂರ್ವಕವಾಗಿ ಚಿಕಿತ್ಸೆಯನ್ನು ಮಾಡಬೇಕೆಂಬ ಅಭಿಪ್ರಾಯವಾಗಿರುತ್ತದೆ

## ಮರ್ಮಷಯದಲ್ಲಿ ವಿಶೇಷ

**ಮಾಂಸ, ಸಿರಾ, ಸ್ನಾಯು, ಅಸ್ಥಿ, ಸಂಧಿ,** ಮೊದಲಾದ ಮರ್ಮ ಗಳು ಪ್ರತಿಯೊಂದು ಮರ್ಮಗಳು ಎಷ್ಟೆಂಬುವದನ್ನು ವಿಭಾಗಶಃ ಸಂಖ್ಯಾ ನಿರ್ದೇಶಾತ್ಮಕವಾಗಿ ವಿವರಣೆಯು ಅಗತ್ಯವಿರುವದರಿಂದ, ಮರ್ಮಗಳ ಹೆಸ ರನ್ನು ಹೇಳಿದ ನಂತರ ಅವು ಎಷ್ಟಿರುತ್ತವೆಂದು ತಿಳಿಸಲು ಸಂಖ್ಯಾ ನಿರ್ದೇಶ ಮಾಡಲಾಗುತ್ತದೆ. ಇದರಿಂದ ಅಭ್ಯಾಸಿಗಳಿಗೆ ಸುಗಮವಾಗಿ ಬೋಧ ವಾಗುತ್ತದೆ.

## ಮಾಂಸ ಮರ್ಮಗಳು (೧೧)

**ಚತ್ವಾರಿ ತಲಹೃದಯಾನಿ (೪), ಚತ್ವಾರಿ ಇಂದ್ರ ಬಸ್ತೀನಿ (೪), ಗುದಮೇಕಂ (೧), ದ್ವೇಸ್ತನರೋಹಿತೇ (೨),** ಒಟ್ಟು ಮಾಂಸ ಮರ್ಮಗಳು (೧೧) ಇರುತ್ತವೆ

## ಸಿರಾಮರ್ಮಗಳು (೪೧)

ಚತಸ್ರೋಧಮನ್ಯಃ (ದ್ವೇನೀಲೇದ್ವೇಮನ್ಯೇ) (೪), ಅಷ್ಟೌ ಮಾತೃಕಾಃ(೮), ಚತ್ವಾರಿ ಶೃಂಗಾಟಕಾನಿ (೪), ದ್ವೇಅಪಾಂಗೇ(೨), ಏಕಾಸ್ಥಪನೀ (೧), ದ್ವೇಫಣೇ (೨), ದ್ವೇಸ್ತನಮೂಲೇ (೨), ದ್ವೌ ಅಪಸ್ತಂಭೌ (೨), ದ್ವೌ ಅಪಲಾಪೌ (೨), ಏಕಂ ಹೃದಯಂ (೧), ಏಕಾನಾಭಿಃ (೧), ದ್ವೌಪಾರ್ಶ್ವಸಂಧೀ (೨), ದ್ವೇಬೃಹತ್ಯೌ (೨), ಚತ್ವಾರಿ ಲೋಹಿತಾಕ್ಷಾಣಿ (೪), ಚತಸ್ರ ಉರ್ವ್ಯಃ (೪), ಒಟ್ಟು ಸಿರಾ ಮರ್ಮಗಳು (೪೧) ಇರುತ್ತವೆ

## ಸ್ನಾಯು ಮರ್ಮಗಳು (೨೭)

ಚತಸ್ರಆಣ್ಯಃ [೪], ದ್ವೌವಿಟಪೌ [೨], ದ್ವೌಕಕ್ಷಧರೌ [೨], ಚತ್ವಾರಃ ಕೂರ್ಚಾಃ [೪], ಚತ್ವಾರಿ ಕೂರ್ಚ ಶಿರಾಂಸಿ[೪], ಏಕೋ ಬಸ್ತಿಃ [೧], ಚತ್ವಾರಿಕ್ಷಿಪ್ರಾಣಿ [೪], ದ್ವೌಆಂಸೌ [೨], ದ್ವೇವಿಧುರೇ [೨], ದ್ವೌಉತ್ಕ್ಷೇಪೌ [೨], ಒಟ್ಟು ಸ್ನಾಯು ಮರ್ಮಗಳು [೨೭] ಇರುತ್ತವೆ

## ಅಸ್ಥಿ ಮರ್ಮಗಳು (೮)

ದ್ವೇಕಟೀಕತರುಣೇ (೨), ದ್ವೌನಿತಂಬೌ (೨), ದ್ವೇಅಂಸ ಫಲಕೇ (೨), ದ್ವೌಶಂಖೌ(೨), ಒಟ್ಟು ಅಸ್ಥಿಮರ್ಮಗಳು (೮) ಇರುತ್ತವೆ

## ಸಂಧಿ ಮರ್ಮಗಳು (೨೦)

ದ್ವೇಜಾನುನೀ (೨), ದ್ವೌಕೂರ್ಪರೌ (೨), ಪಂಚಸೀಮಂತಾಃ (೫), ಏಕೋ ಅಧಿಪತಿಃ (೧), ದ್ವೌಗುಲ್ಫೌ (೨), ದ್ವೌಮಣಿಬಂಧೌ (೨), ದ್ವೇಕುಕುಂದರೇ (೨), ದ್ವೌಆವರ್ತೌ (೨), ದ್ವೇಕೃಕಾಟಿಕೇ (೨), ಒಟ್ಟು ಸಂಧಿ ಮರ್ಮಗಳು (೨೦) ಇರುತ್ತವೆ. ಮಾಂಸಾದಿ ಎಲ್ಲ ಮರ್ಮಗಳು ಕೂಡಿ ದೇಹದಲ್ಲಿ ಒಟ್ಟು ಮರ್ಮಗಳು (೧೦೭) ಇರುತ್ತವೆ

ಇವೇ ಮರ್ಮಗಳನ್ನು ದೇಹದಲ್ಲಿಯಸಕ್ಥಿ ಮೊದಲಾದವುಗಳಿಂದಲೂ, ಮಾಂಸ ಮರ್ಮಾದಿ ವಿಭಾಗಗಳಿಂದಲೂ, ಸದ್ಯಃ ಪ್ರಾಣಹರ ವಿಭಾಗಗಳಿಂದಲೂ, ಪ್ರತ್ಯೇಕವಾಗಿ ವಿವರಿಸಿದ್ದಾರೆ. ಒಂದು ವಿಭಾಗದಲ್ಲಿ ಚನ್ನಾಗಿ ಅಭ್ಯಾಸ ಮಾಡಿದರೆ ಉಳಿದವುಗಳು ಸುಲಭವಾಗಿ ತಿಳಿಯುತ್ತವೆ.

# ಮರ್ಮಗಳವಿಸ್ತಾರವರ್ಣನೆಯು

## (೧) ಸಕ್ಥಿ ಮರ್ಮಗಳು

**ತತ್ರಪಾದಸ್ಯಾಂಗುಷ್ಠಾಂಗುಲ್ಯೋರ್ಮಧ್ಯೇಕ್ಷಿಪ್ರಂನಾಮಮರ್ಮ ತತ್ರವಿದ್ಧಸ್ಯಾಕ್ಷೇಪಕೇಣ ಮರಣಂ ||**

(ಸುಶ್ರುತ|| ಶಾರೀರ|| ಅ ೬ ಸೂ ೨೪)

### ಕ್ಷಿಪ್ರಮರ್ಮಗಳು

**ಸ್ಥಾನ.**— ಪಾದಾಂಗುಷ್ಠ ಅದರ ಹತ್ತಿರುವಬೆರಳು ಇವುಗಳ ಮಧ್ಯದಲ್ಲಿ "ಕ್ಷಿಪ್ರ" ವೆಂಬ ಹೆಸರಿನ ಮರ್ಮವಿರುತ್ತದೆ. ಇದು ಸ್ನಾಯು ಮರ್ಮ, ಅರ್ಧಾಂಗುಲ ಪ್ರಮಾಣ, ಕಾಲಾಂತರ ಪ್ರಾಣಹರವಾಗಿರುತ್ತದೆ. ಇಲ್ಲಿ ಆಘಾತವುಂಟಾದರೆ ಆಕ್ಷೇಪಕವೆಂಬ ತೀವ್ರವಾದ ವಾಯು ಪ್ರಕೋಪ ವ್ಯಾಧಿಯಿಂದ ಮನುಷ್ಯನು ಮರಣ ಹೊಂದುತ್ತಾನೆ

### ತಲಹೃದಯ

**ಮಧ್ಯಮಾಂಗುಲೀ ಮನುಪೂರ್ವೇಣ ಮಧ್ಯೇಪಾದತಲಸ್ಯತಲ ಹೃದಯ್ಯಂನಾಮ, ತತ್ರ ರುಜಾಭಿರ್ಮರಣಂ ||**

(ಸುಶ್ರುತ|| ಶಾರೀರ|| ಅ ೬ ಸೂತ್ರ ೨೪)

**ಸ್ಥಾನ:**— ಪಾದದ ನಡುವಿನ ಬೆರಳ ಕೆಳಗೆ ಸರಳ ರೇಖೆಯಿಂದ ಅಂಗಾಲಿನ ಮಧ್ಯದಲ್ಲಿ "ತಲಹೃದಯ" ವೆಂಬ ಮರ್ಮವಿರುತ್ತದೆ ಇದು

ಮಾಂಸಮರ್ಮ, ಅರ್ಧಾಂಗುಲ ಪ್ರಮಾಣ, ಕಾಲಾಂತರ ಪ್ರಾಣಹರವಾಗಿರುತ್ತದೆ. ಇಲ್ಲಿ ಆಘಾತವುಂಟಾದರೆ ತೀವ್ರ ವೇದನೆಗಳಿಂದ ಮರಣ ಸಂಭವಿಸುತ್ತದೆ

## ಕೂರ್ಚಮರ್ಮ

**ಕ್ಷಿಪ್ರಸ್ಯೋಪರಿಷ್ಟಾದುಭಯತಃ ಕೂರ್ಚೋನಾಮ, ತತ್ರ ಪಾದಸ್ಯ ಭ್ರಮಣವೇಪನೇ ಭವತಃ ॥**
(ಸುಶ್ರುತ॥ ಶಾರೀರ॥ ಅ ೬ ಸೂ ೨೪)

**ಸ್ಥಾನ.**- ಕ್ಷಿಪ್ರಮರ್ಮದ ಮೇಲ್ಗಡೆ ಎಡಬಲಗಳಲ್ಲಿ ಅಥವಾ ಮೇಲಿನ ಮತ್ತು ಕೆಳ ಅಂಗಾಲಿನ ಪ್ರದೇಶಗಳಲ್ಲಿ, "**ಕೂರ್ಚ**" ವೆಂಬ ಹೆಸರಿನ ಮರ್ಮವಿರುತ್ತದೆ ಇದು ಸ್ನಾಯು ಮರ್ಮ, ನಾಲ್ಕಂಗುಲ ಪ್ರಮಾಣ, ವೈಕಲ್ಯಕರ ಮರ್ಮವಾಗಿರುತ್ತದೆ. ಇಲ್ಲಿ ಆಘಾತ ಸಂಭವದಿಂದ ಪಾದ ಸೊಟ್ಟಾಗುವದು ಅಥವಾ ನಡುಗುವಿಕೆಯುಂಟಾಗುವದು.

## ಕೂರ್ಚಶಿರಃ

**ಗುಲ್ಫಸಂಧೇರಧಃ ಉಭಯತಃ ಕೂರ್ಚಶಿರಃ, ತತ್ರರುಜಾ ಶೋಫೌ ॥** (ಸುಶ್ರುತ॥ ಶಾರೀರ॥ ಅ ೬ ಸೂ ೨೪)

**ಸ್ಥಾನ.**— ಪಾದ ಸಂಧಿ ಗಂಟುಗಳ ಕೆಳಗೆ ಎಡಬಲ ಭಾಗಗಳಲ್ಲಿ, "**ಕೂರ್ಚಶಿರಃ**" ಎಂಬ ಹೆಸರಿನ ಮರ್ಮವಿರುತ್ತದೆ. ಇದು ಸ್ನಾಯುಮರ್ಮ, ಒಂದಂಗುಲ ಪ್ರಮಾಣ, ವೈಕಲ್ಯಕರ ಮರ್ಮವಾಗಿರುತ್ತದೆ. ಇಲ್ಲಿ ಆಘಾತವಾಗುವದರಿಂದ ತೀವ್ರ ವೇದನೆ ಮತ್ತು ಬಾಯುವಿಕೆಗಳುಂಟಾಗುತ್ತವೆ.

## ಗುಲ್ಫ ಮರ್ಮ

**ಪಾದಜಂಘಯೋಃ ಸಂಧಾನೇ ಗುಲ್ಫಃ, ತತ್ರರುಜಃ ಸ್ತಬ್ಧ ಪಾದತಾ ಖಂಜತಾವಾ ॥** (ಸುಶ್ರುತ॥ ಶಾರೀರ॥ ಅ ೬ ಸೂ ೨೪)

**ಸ್ಥಾನ:**— ಪಾದ ಮತ್ತು ಮೊಣಕಾಲುಗಳು ಕೂಡಿದ ಸಂಧಿ ಭಾಗ ಗಳಲ್ಲಿ "**ಗುಲ್ಫ**" ಎಂಬ ಮರ್ಮವಿರುತ್ತದೆ. ಇದು ಸಂಧಿ ಮರ್ಮ, ಎರಡಂಗುಲ ಪ್ರಮಾಣ, ವೈಕಲ್ಯಕರ ಮರ್ಮವಾಗಿರುತ್ತದೆ. ಇಲ್ಲಿ ಹೊಡತ ಬೀಳುವದರಿಂದ ತೀವ್ರ ವೇದನೆ ಪಾದಸ್ತಬ್ಧವಾಗೋಣ ಅಥವಾ ನೊಟ್ಟ ಕುಂಟ ಊನತೆಯುಳ್ಳದ್ದಾಗುತ್ತದೆ.

## ಇಂದ್ರ ಬಸ್ತಿ

**ಪಾರ್ಷ್ಣಿಂ ಪ್ರತಿಜಂಘಾಮಧ್ಯೇ ಇಂದ್ರಬಸ್ತಿಃ, ತತ್ರಶೋಣಿತ ಕ್ಷಯೇಣ ಮರಣಂ ॥** (ಸುಶ್ರುತ॥ ಶಾರೀರ॥ ಅ ೬ ಸೂ ೨೪)

**ಸ್ಥಾನ:**— ಹಿಮ್ಮಡದಿಂದ (ಪಾರ್ಷ್ಣಿ) ಮೇಲೆ ಮೊಣಕಾಲ ಮಧ್ಯದಲ್ಲಿ, ಪಾರ್ಷ್ಣಿಯಿಂದ ನಂತರ (೧೩) ಅಂಗುಲದಲ್ಲಿ ಇರುತ್ತದೆಂದು ಕೆಲವರ ಮತವಿರುತ್ತದೆ. "**ಇಂದ್ರಬಸ್ತಿ**" ಯೆಂಬ ಹೆಸರಿನ ಮರ್ಮವಾಗಿರುತ್ತದೆ ಇದು ಮಾಂಸಮರ್ಮ, ಅರ್ಧಾಂಗುಲ ಪ್ರಮಾಣ, ಕಾಲಾಂತರ ಪ್ರಾಣಹರ ಮರ್ಮವಾಗಿರುತ್ತದೆ. ಇಲ್ಲಿ ಕಡತ ಆಘಾತಾದಿಗಳು ಸಂಭವಿಸಿದರೆ ರಕ್ತ ಕ್ಷಯದಿಂದ ಮರಣ ಸಂಭವಿಸುತ್ತದೆ.

## ಜಾನುಮರ್ಮ

**ಜಂಘೋರ್ವೋಃ ಸಂಧಾನೇಜಾನು, ತತ್ರಖಂಜತಾ ॥**
(ಸುಶ್ರುತ॥ ಶಾರೀರ॥ ಅ ೬ ಸೂ ೨೪)

**ಸ್ಥಾನ:**— ಮೊಣಕಾಲು ತೊಡೆಗಳು ಕೂಡಿದ ಸಂಧಿ ಪ್ರದೇಶಗಳಲ್ಲಿ ಮೊಣಕಾಲ ಮೇಲಿನ ಸಂಧಿಯಲ್ಲಿ, "**ಜಾನು**" ಎಂಬ ಹೆಸರಿನ ಮರ್ಮವಿರುತ್ತದೆ. ಇದು ಸಂಧಿ ಮರ್ಮ, ಮೂರಂಗುಲ ಪ್ರಮಾಣ, ವೈಕಲ್ಯಕರ ಮರ್ಮವಾಗಿರುತ್ತದೆ ಇಲ್ಲಿ ಆಘಾತ ಕಡತ ಸಂಭವಿಸಿದರೆ ಕಾಲುಕುಂಟಾಗುತ್ತದೆ.

## ಆಣೀ ಮರ್ಮ

**ಜಾನುನ ಊರ್ಧ್ವಮುಭಯತಸ್ತ್ರ್ಯಂಗುಲಮಾಣೀ, ತತ್ರ**

**ಶೋಫಾಭಿವೃದ್ಧಿಃ ಸ್ತಬ್ಧಸಕ್ಥಿತಾಚ ||**
(ಸುಶ್ರುತ|| ಶಾರೀರ|| ಅ ೬ ಸೂ ೨೪)

**ಸ್ಥಾನ:—** ಜಾನು ಮರ್ಮದ ಮೇಲ್ಗಡೇ ಮೂರಂಗುಲ ಪ್ರದೇಶಗಳ ಎಡಬಲ ಪಾರ್ಶ್ವಗಳಲ್ಲಿ, ಮತಾಂತರ ಜಾನುವಿನ ಮೇಲ್ಗಡೇ ಮೂರಂಗುಲ ಪ್ರದೇಶ ಎದುರಿನ ಮತ್ತು ಹಿಂದಿನ ಭಾಗಗಳಲ್ಲಿ, "ಆಣೀ" ಎಂಬ ಹೆಸರಿನ ಮರ್ಮವಿರುತ್ತದೆ ಇದು ಸ್ನಾಯು ಮರ್ಮ, ಅರ್ಧಾಂಗುಲ ಪ್ರಮಾಣ, ವೈಕಲ್ಯಕರ ಮರ್ಮವಾಗಿರುತ್ತದೆ. ಈ ಪ್ರದೇಶಗಳಲ್ಲಿ ಆಘಾತವಾದರೆ ಬಾವಿನ ಅಭಿವೃದ್ಧಿಯೂ ಸಕ್ಥಿಸ್ತಬ್ಧತೆಯೂ ಉಂಟಾಗುತ್ತದೆ

## ಉರ್ವೀಮರ್ಮ

**ಊರುಮಧ್ಯೇ ಉರ್ವೀ, ತತ್ರಶೋಣಿತಕ್ಷಯಾತ್ ಸಕ್ಥಿ ಶೋಷಃ ||** (ಸುಶ್ರುತ|| ಶಾರೀರ|| ಅ ೬ ಸೂ ೨೪)

**ಸ್ಥಾನ:—** ತೊಡೆಯ ಮಧ್ಯ ಪ್ರದೇಶದಲ್ಲಿ, "**ಉರ್ವೀ**" ಎಂಬ ಹೆಸರಿನ ಮರ್ಮವಿರುತ್ತದೆ ಇದು ಸಿರಾ ಮರ್ಮ, ಒಂದಂಗುಲ ಪ್ರಮಾಣ, ವೈಕಲ್ಯಕರ ಮರ್ಮವಾಗಿರುತ್ತದೆ.

## ಲೋಹಿತಾಕ್ಷ

**ಉರ್ವ್ಯಾ ಊರ್ಧ್ವಮಧೋ ವಂಕ್ಷಣಸಂಧೇಃ ಊರುಮೂಲೇ ಲೋಹಿತಾಕ್ಷಂ, ತತ್ರಲೋಹಿತಕ್ಷಯೇಣಮರಣಂ ಪಕ್ಷಾಘಾತೋವಾ ||** (ಸುಶ್ರುತ|| ಶಾರೀರ|| ಅ ೬ ಸೂ ೨೪)

**ಸ್ಥಾನ:—** ಉರ್ವೀ ಮರ್ಮದ ಮೇಲ್ಗಡೇ ತೊಡೆ ಅಸ್ಥಿ ಸಂಧಿಗಳ ಕೆಳಭಾಗಗಳಲ್ಲಿ, "**ಲೋಹಿತಾಕ್ಷ**" ವೆಂಬ ಮರ್ಮವಿರುತ್ತದೆ ಇದು ಸಿರಾ ಮರ್ಮ, ಅರ್ಧಾಂಗುಲ ಪ್ರಮಾಣ, ವೈಕಲ್ಯಕರ ಮರ್ಮವಾಗಿರುತ್ತದೆ. ಇಲ್ಲಿ ಆಘಾತವುಂಟಾದರೆ ರಕ್ತ ಕ್ಷಯದಿಂದ ಮರಣ ಸಂಭವಿಸುತ್ತದೆ ಪಕ್ಷಾಘಾತ (ಒಂದು ಪಾರ್ಶ್ವ ನಿಶ್ಚೇಷ್ಟಿತವಾಗೋಣ), ಸಂಭವಿಸುತ್ತದೆ.

## ವಿಟಪಮರ್ಮ

ವಂಕ್ಷಣವೃಷಣಯೋರಂತರೇ ವಿಟಪಂ, ತತ್ರಷಾಂಢ್ಯಮಲ್ಪ ಶುಕ್ರತಾವಾಭವತಿ, ಏವಮೇತಾನ್ಯೇಕಾದಶ ಸಕ್ಥಿ ಮರ್ಮಾಣಿ ವ್ಯಾಖ್ಯಾತಾನಿ ॥ ಏತೇನೇತರ ಸಕ್ಥಿ ಬಾಹೂಚ ವ್ಯಾಖ್ಯಾತೌ॥ (ಸುಶ್ರುತ॥ ಶಾರೀರ॥ ಅ ೬ ಸೂ ೨೪)

ಸ್ಥಾನ.— ತೊಡೆಗಳ ಅಸ್ಥಿ ಸಂಧಿಗಳಿಂದ ಎರಡೂ ಕಡೆ ಅಂಡದವರೆಗಿನ ಪ್ರದೇಶಗಳಲ್ಲಿ, "ವಿಟಪ" ವೆಂಬ ಮರ್ಮವಿರುತ್ತದೆ. ಇದು ಸ್ನಾಯು ಮರ್ಮ, ಒಂದಂಗುಲ ಪ್ರಮಾಣ, ವೈಕಲ್ಯಕರ ಮರ್ಮವಾಗಿರುತ್ತದೆ ಇಲ್ಲಿ ಆಘಾತದಿಂದ ಷಂಡತ್ವ ಅಥವಾ ಸ್ವಲ್ಪಶುಕ್ರೋತ್ಪಾದನೆಯಾಗುತ್ತದೆ ಹೀಗೆ (೧೧) ಸಕ್ಥಿ ಮರ್ಮಗಳನ್ನು ವಿವರಿಸಿದ್ದಾರೆ. ಇವರಂತೇ ಮತ್ತೊಂದು ಕಾಲು ಬಾಹುಗಳಲ್ಲಿಯು ಮರ್ಮಗಳನ್ನು ತಿಳಿಯಬೇಕು. ಒಟ್ಟು ಕೈಕಾಲ ಶಾಖಾಪ್ರದೇಶಗಳಲ್ಲಿ ಕೂಡಿ (೪೪) ಮರ್ಮಗಳಿರುತ್ತವೆ.

### ಸಕ್ಥಿ ಬಾಹು ಮರ್ಮಗಳಲ್ಲಿ ವಿಶೇಷ

ವಿಶೇಷತಸ್ತು ಯಾನಿ ಸಕ್ಥ್ನಗುಲ್ಫ ಜಾನು ವಿಟಪಾನಿ, ತಾನಿ ಬಾಹೌ ಮಣಿಬಂಧಕೂರ್ಪರ ಕಕ್ಷಧರಾಣಿ; ಯಥಾವಂಕ್ಷಣ ವೃಷಣಯೋರಂತರೇ ವಿಟಪಮೇವಂ ವಕ್ಷಃ ಕಕ್ಷಯೋರ್ಮಧ್ಯೇಕಕ್ಷಧರಂ ॥ (ಸುಶ್ರುತ॥ ಶಾರೀರ॥ ಅ ೬ ಸೂ ೨೪)

ವಿಶೇಷವಾಗಿ ಕಾಲಿನಲ್ಲಿಸಕ್ಥಿ, ಜಾನು, ವಿಟಪ, ಮರ್ಮಗಳಿರುತ್ತವೆ ಅವೇ ಬಾಹುವಿನಲ್ಲಿ ಮಣಿಬಂಧ, ಕೂರ್ಪರ, ಕಕ್ಷಧರ, ಮರ್ಮಗಳಾಗಿರುತ್ತವೆ ಕಾಲಿನಲ್ಲಿ ವಂಕ್ಷಣ ವೃಷಣಗಳ ಮಧ್ಯದಲ್ಲಿ "ವಿಟಪ" ವಿರುತ್ತದೆಯೋ, ಅದರಂತೇ ಬಾಹುವಿನಲ್ಲಿ ಎದೆಬಗಲುಗಳಮಧ್ಯದಲ್ಲಿ "ಕಕ್ಷಧರ" ಮರ್ಮವಿರುತ್ತದೆ.

### ಬಾಹು ಮರ್ಮಾಘಾತಪರಿಣಾಮವು

ತಸ್ಮಿನ್ ವಿದ್ಧೇತ ಏವೋಪದ್ರವಾಃ; ವಿಶೇಷತಸ್ತು ಮಣಿಬಂಧೇ

**ಕುಂಠತಾ, ಕೂರ್ಪರಾಖ್ಯೇ ಕುಣಿಃ, ಕಕ್ಷಾಧರೇ ಪಕ್ಷಾಘಾತಃ॥ ಏವಮೇತಾನಿ ಚತುಶ್ಚತ್ವಾರಿಂಶತ್ ಚ್ಛಾಖಾಸು ಮರ್ಮಾಣಿ ವ್ಯಾಖ್ಯಾತಾನಿ ॥ (ಸುಶ್ರುತ॥ ಶಾರೀರ॥ ಅ ೬ ಸೂ ೨೪)**

ಬಾಹುಮರ್ಮಗಳಲ್ಲಿ ಆಘಾತ ಸಂಭವಿಸಿದರೆ **ಸಕ್ಥಿಮರ್ಮದಂತೆಯೇ** ಪರಿಣಾಮವಾಗುತ್ತವೆ. ಆದರೆ ಬಾಹು ಮರ್ಮಗಳಲ್ಲಿ ಸಂಭವಿಸುವ ಆಘಾತ ಪರಿಣಾಮ ವಿಶೇಷಗಳನ್ನು ಹೇಳುತ್ತಾರೆ. **ಮಣಿ ಬಂಧದಲ್ಲಿ** ಆಘಾತದಿಂದ ಕೈ ನಿಷ್ಕರ್ಮಣ್ಯವಾಗುತ್ತದೆ **"ಕುಂಠತಾನಾಮ ಕರಸ್ಯಾಕರ್ಮಣ್ಯತ್ವಂ" ಕೂರ್ಪರದಲ್ಲಿ** ಆಘಾತದಿಂದ ಬಾಹುಮಧ್ಯಪ್ರದೇಶವು ಕೃಶವಾಗುತ್ತದೆ. **"ಕುಣಿರ್ನಾಮ ಸಂಕುಚಿತ ಬಾಹುಮಧ್ಯಃ" ಕಕ್ಷಾಧರದಲ್ಲಿ** ಆಘಾತ ದಿಂದ ಪಕ್ಷಾಘಾತ (ಪಾರ್ಶ್ವವಧೇ, ಅರ್ಧಾಂಗವಾಯು) ಸಂಭವಿಸುತ್ತದೆ ಹೀಗೆ ಬಾಹುಮರ್ಮಗಳಲ್ಲಿಯು ಆಘಾತ ಪರಿಣಾಮ ವಿಶೇಷಗಳನ್ನು ವಿವ ರಣೇ ಮಾಡಿರುತ್ತಾರೆ. ಶಾಖಾಗಳಲ್ಲಿ (೪೪) ಮರ್ಮಗಳನ್ನು ಅವಾವ ಸ್ಥಾನ, ಸ್ವರೂಪ, ಸ್ಥಿತಿ, ಪ್ರಮಾಣ, ಆಘಾತಾದಿ ಪರಿಣಾಮ ಸಹಿತವಾಗಿ ವಿಶದವಾಗಿ ನಿರ್ದೇಶಿಸಿದ್ದಾರೆ.

# (೨) ಉದರ ಮತ್ತು ವಕ್ಷೋಮರ್ಮಗಳು

## ಗುದಮರ್ಮ

**ತತ್ರವಾತವರ್ಚೋನಿರಸನಂ ಸ್ಥೂಲಾಂತ್ರ ಪ್ರತಿಬದ್ಧಂ ಗುದಂ ನಾಮಮರ್ಮ, ತತ್ರಸದ್ಯೋಮರಣಂ ॥**

**ಸುಶ್ರುತ॥ ಶಾರೀರ॥ ಅ ೬ ಸೂ ೨೫)**

**ಸ್ಥಾನ:**—ವಾಯು ಮತ್ತು ಮಲವನ್ನು ಹೊರಗೆಹಾಕುವ ಸ್ಥೂಲಾಂತ್ರ ದಲ್ಲಿ ಅಂಟಿಕೊಂಡಿರುವ **"ಗುದ"** ವೆಂಬ ಮರ್ಮವಿರುತ್ತದೆ. ಇದು ಮಾಂಸ ಮರ್ಮ, ನಾಲ್ಕಂಗುಲ ಪ್ರಮಾಣ, ಸದ್ಯಃ ಪ್ರಾಣಹರವಾಗಿರುತ್ತದೆ.

## ಬಸ್ತಿಮರ್ಮ

**ಅಲ್ಪಮಾಂಸ ಶೋಣಿತೋಽಭ್ಯಂತರತಃ ಕಟ್ಯಾಂ ಮೂತ್ರಾಶಯೋ ಬಸ್ತಿಃ, ತತ್ರಾಪಿಸದ್ಯೋ ಮರಣ ಮಶ್ಮರೀ ವ್ರಣಾದೃತೇ, ತತ್ರಾಪ್ಯುಭಯತೋ ಭಿನ್ನೇ ನಜೀವತಿ, ಏಕತೋ ಭಿನ್ನೇ ಮೂತ್ರಸ್ರಾವೀವ್ರಣೋ ಭವತಿ, ಸತುಯತ್ನೇನೋ ಪಕ್ರಾಂತೋರೋಹತಿ ॥** (ಸುಶ್ರುತ॥ ಶಾರೀರ॥ ಅ ೬ ಸೂ ೨೫)

ಸ್ಥಾನ:— ಕಟಿ ಪ್ರದೇಶದ ಒಳಭಾಗದಲ್ಲಿ ಸ್ವಲ್ಪ ಮಾಂಸ ರಕ್ತವುಳ್ಳ ಆಶಯವಾಗಿರುತ್ತದೆ. ಇದು ಮೂತ್ರಾಶಯವು "ಬಸ್ತಿ" ಎಂಬ ಹೆಸರಿನ ಮರ್ಮವಾಗಿರುತ್ತದೆ. ಇದು ಸ್ನಾಯು ಮರ್ಮ, ಚತುರಂಗುಲ ಪ್ರಮಾಣ, ಸದ್ಯಃ ಪ್ರಾಣಹರವಾಗಿರುತ್ತದೆ.

## ವಿಶೇಷ

ಅಶ್ಮರೀವ್ರಣದ ಹೊರತಾದ ಆಘಾತದಲ್ಲಿ ಸದ್ಯೋಮರಣ ಸಂಭವಿಸುತ್ತದೆ. ಬಸ್ತಿಯಲ್ಲಿ ಅಶ್ಮರೀವ್ರಣದಿಂದ ಎರಡೂ ಕಡೆ ರಂಧ್ರವಾಗಿ ಮೂತ್ರ ಸ್ರವಿಸುತ್ತಿದ್ದರೆ ಜೀವಿಸುವದಿಲ್ಲ. ಒಂದು ಕಡೆ ಭೇದವಾದರೆ ಮೂತ್ರವನ್ನು ಸ್ರವಿಸುವ ವ್ರಣವು ಉಂಟಾಗುತ್ತದೆ. ಅದು ಪ್ರಯತ್ನಪೂರ್ವಕವಾಗಿ ಚಿಕಿತ್ಸೆಯನ್ನು ಮಾಡಿದರೆ ಗುಣವಾಗುತ್ತದೆ.

## ನಾಭಿಮರ್ಮ

**ಪಕ್ವಾಮಾಶಯಯೋರ್ಮಧ್ಯೇ ಸಿರಾ ಪ್ರಭವಾ ನಾಭಿಃ, ತತ್ರಾಪಿಸದ್ಯೋಮರಣಂ ॥** (ಸು॥ ಶಾ॥ ಅ ೬ ಸೂ ೨೫)

ಸ್ಥಾನ:— ಪಕ್ವಾಶಯ ಆಮಾಶಯಗಳ ಮಧ್ಯದಲ್ಲಿ ಸಿರಾಗಳ ಮೂಲ ಉತ್ಪತ್ತಿಗೆ ಕಾರಣವಾದದ್ದು "ನಾಭಿ" ಎಂಬ ಮರ್ಮ (ಹೊಕ್ಕಳು) ಆಗಿರುತ್ತದೆ. ಇದು ಸಿರಾಮರ್ಮ, ನಾಲ್ಕಂಗುಲ ಪ್ರಮಾಣ, ಇಲ್ಲಿ ಆಘಾತ ಸಂಭವಿಸಿದರೆ ಸದ್ಯೋಮರಣವಾಗುತ್ತದೆ.

## ಹೃದಯ ಮರ್ಮ

**ಸ್ತನಯೋರ್ಮಧ್ಯಮಧಿಷ್ಠಾಯೋರಸ್ಯಾಮಶಯ ದ್ವಾರಂ ಸತ್ವರಜಸ್ತಮಸಾಮಧಿಷ್ಠಾನಂ ಹೃದಯಂ, ತತ್ರಾಪಿಸದ್ಯ ಏವ ಮರಣಂ ॥** (ಸುಶ್ರುತ॥ ಶಾರೀರ॥ ಅ ೬ ಸೂ ೨೫)

**ಸ್ಥಾನ:—** ಎದೆಯಲ್ಲಿ ಸ್ತನಗಳ ಮಧ್ಯಪ್ರದೇಶದಲ್ಲಿ ಆಮಾಶಯದ್ವಾರ ಸಮೀಪದಲ್ಲಿ, "**ಹೃದಯ**" ವೆಂಬ ಮರ್ಮವಿರುತ್ತದೆ. ಸತ್ವರಜಸ್ತಮೋ ಗುಣಗಳಿಗೆ ಆಶ್ರಯ ಸ್ಥಾನವಾಗಿರುತ್ತದೆ. ಇದು ಸಿರಾಮರ್ಮ, ನಾಲ್ಕಂಗುಲ ಪ್ರಮಾಣ, ಇಲ್ಲಿ ಆಘಾತವಾದರೆ ಸದ್ಯೋ ಮರಣ ಸಂಭವಿಸುತ್ತದೆ.

## ಸ್ತನಮೂಲಮರ್ಮ

**ಸ್ತನಯೋರಧಸ್ತಾದ್ ದ್ವ್ಯಂಗುಲಮುಭಯತಃ ಸ್ತನಮೂಲೇ ತತ್ರಕಫಪೂರ್ಣಕೋಷ್ಠತಯಾ (ಕಾಸಶ್ವಾಸಾಭ್ಯಾಂ) ಮ್ರಿಯತೇ ॥** (ಸುಶ್ರುತ॥ ಶಾರೀರ॥ ಅ ೬ ಸೂ ೨೫)

**ಸ್ಥಾನ:—** ಎರಡೂ ಸ್ತನಗಳ ಕೆಳಗೆ ಎರಡಂಗುಲ ಪ್ರದೇಶಗಳಲ್ಲಿ "**ಸ್ತನಮೂಲ**" ವೆಂಬ ಮರ್ಮವಿರುತ್ತವೆ. ಇವು ಸಿರಾಮರ್ಮ, ಎರಡಂಗುಲ ಪ್ರಮಾಣ, ಕಾಲಾಂತರ ಪ್ರಾಣಹರ ಮರ್ಮವಾಗಿರುತ್ತವೆ. ಇಲ್ಲಿ ಆಘಾತ ಸಂಭವಿಸಿದರೆ ಕಫದಿಂದ ತುಂಬಿದ ಕೋಷ್ಠ ಪ್ರದೇಶವಿರುವದರಿಂದ, ಕೆಮ್ಮು ಉಬ್ಬಸಗಳುತ್ಪನ್ನವಾಗಿ ಸಾಯುತ್ತಾನೆ.

## ಸ್ತನರೋಹಿತ

**ಸ್ತನಚೂಚುಕಯೋರೂರ್ಧ್ವಂದ್ವ್ಯಂಗುಲಮುಭಯತಃ ಸ್ತನ ರೋಹಿತೌ, ತತ್ರಲೋಹಿತ ಪೂರ್ಣ ಕೋಷ್ಠತಯಾಕಾಸಶ್ವಾಭ್ಯಾಂಚಮ್ರಿಯತೆ ॥** (ಸುಶ್ರುತ॥ ಶಾರೀರ॥ ಅ ೬ ಸೂ ೨೫)

ಸ್ಥಾನ:— ಎಡಬಲ ಸ್ತನಗಳ ಮೇಲ್ಭಾಗದಲ್ಲಿ ಎರಡಂಗುಲ ಪ್ರದೇಶ ಗಳಲ್ಲಿ, "**ಸ್ತನರೋಹಿತ**" ವೆಂಬ ಮರ್ಮವಿರುತ್ತವೆ. ಇವು ಮಾಂಸಮರ್ಮ, ಅರ್ಧಾಂಗುಲ ಪ್ರಮಾಣ, ಕಾಲಾಂತರ ಪ್ರಾಣಹಾರಕ ಮರ್ಮವಾಗಿರು ತ್ತವೆ ಇಲ್ಲಿ ಆಘಾತ ಸಂಭವಿಸಿದರೆ ರಕ್ತದಿಂದ ತುಂಬಿದ ಕೋಷ್ಠ ಪ್ರದೇಶ ವಿರುವದರಿಂದ, ಕಾಸಶ್ವಾಸಗಳಿಂದ ಮರಣಹೊಂದುತ್ತಾನೆ ವೃದ್ಧವಾಗ್ಭಟ ಮತದಂತೆ ಸದ್ಯೋಮರಣಕಾರಕ ಮರ್ಮವೆಂದು ಹೇಳುತ್ತಾರೆ

## ಅಪಲಾಪಮರ್ಮ

**ಅಂಸಕೂಟಯೋರಧಸ್ತಾತ್ ಪಾರ್ಶ್ವೋಪರಿಭಾಗಯೋರಪ ಲಾಪೌನಾಮ, ತತ್ರರಕ್ತೇನಪೂಯಭಾವಂಗತೇನಮರಣಂ ||**

(ಸು|| ಶಾ|| ಅ ೬ ಸೂ ೨೫)

ಸ್ಥಾನ:— ಎಡಬಲ ರಟ್ಟೆ ಸಂಧಿಗಳ ಕೆಳಗೆ ಪಾರ್ಶ್ವಗಳ ಮೇಲ್ಭಾಗ ಗಳಲ್ಲಿ, ಬಗಲುಗಳ ಆದಿಯ ಪಾರ್ಶ್ವ ಭಾಗಗಳಲ್ಲಿ, "**ಅಪಲಾಪ**" ವೆಂಬ ಮರ್ಮಗಳಿರುತ್ತವೆ. ಇವು ಸಿರಾಮರ್ಮ, ಅರ್ಧಾಂಗುಲ ಪ್ರಮಾಣ, ಕಾಲಾಂತರ ಪ್ರಾಣಹರ ಮರ್ಮವಾಗಿರುತ್ತವೆ. ಇಲ್ಲಿ ಆಘಾತ ಸಂಭವಿಸಿ ದರೆ ರಕ್ತವು ಕೀವಿನ (ರಸಿಗೆ) ಸ್ವರೂಪ ಹೊಂದುತ್ತದೆ. ಆದ್ದರಿಂದ ರಕ್ತವು ಪೂಯಭಾವ ಹೊಂದಲು ಮರಣವು ಸಂಭವಿಸುತ್ತದೆ.

## ಅಪಸ್ತಂಭಮರ್ಮ

**ಉಭಯತ್ರೋರಸೋನಾಡ್ಯೌ ವಾತವಹೇಽಪಸ್ತಂಭೌನಾಮ, ತತ್ರವಾತಪೂರ್ಣಕೋಷ್ಠತಯಾಕಾಸಶ್ವಾಸಾಭ್ಯಾಂಚಮರಣಂ|| ಏವಮೇತಾನ್ಯುದರೋರಸೋರ್ದ್ವಾದಶ ಮರ್ಮಾಣಿವ್ಯಾಖ್ಯಾ ತಾನಿ ||** (ಸುಶ್ರುತ|| ಶಾರೀರ|| ಅ ೬ ಸೂ ೨೫)

**ಸ್ಥಾನ:—** ಎದೆಯ ಎಡಬಲ ಭಾಗಗಳಲ್ಲಿರುವ ವಾತವಹಾನಾಡಿಗಳು, **ಮತಾಂತರ** ಎದೆಯ ಎರಡೂ ಪಾರ್ಶ್ವ (ಪಕ್ಕೆ)ಗಳಲ್ಲಿಯ ವಾತವಹಾನಾಡಿಗಳು, ಇವುಗಳಿಗೆ "**ಅಪಸ್ತಂಭ**" ಮರ್ಮವೆಂದೆನ್ನುತ್ತಾರೆ. ಇವು ಸಿರಾ ಮರ್ಮ, ಅರ್ಧಾಂಗುಲ ಪ್ರಮಾಣ, ಕಾಲಾಂತರ ಪ್ರಾಣಹರವಾಗಿರುತ್ತವೆ. ಇಲ್ಲಿ ಆಘಾತ ಸಂಭವಿಸಿದರೆ ವಾತಪೂರ್ಣ ಕೋಷ್ಠವಿರುವದರಿಂದ, ಶ್ವಾಸ ಕಾಸಗಳಿಂದ ಮರಣ ಪ್ರಾಪ್ತವಾಗುತ್ತದೆ. ಹೀಗೆ ಹೊಟ್ಟೆ ಎದೆ (ಉದರೋರಸೋಃ) ಭಾಗಗಳಲ್ಲಿಯ (೧೨) ಮರ್ಮಗಳು ವಿಸ್ತಾರವಾಗಿ ವಿವರಿಸಲ್ಪಟ್ಟಿರುತ್ತವೆ.

# (೩) ಪೃಷ್ಠಮರ್ಮಗಳು

## ಕಟೀಕತರುಣ ಮರ್ಮಗಳು

**ತತ್ರಪೃಷ್ಠವಂಶಮುಭಯತಃ ಪ್ರತಿಶ್ರೋಣಿಕಾಂಡಮಸ್ಥಿನೀಕಟೀಕತರುಣೇ, ತತ್ರಶೋಣಿತಕ್ಷಯಾತ್ಪಾಂಡುರ್ವಿವರ್ಣೋಹೀನರೂಪಶ್ಚಮ್ರಿಯತೆ॥** (ಸುಶ್ರುತ॥ ಶಾರೀರ॥ ಅ ೬ ಸೂ ೨೬)

**ಸ್ಥಾನ.—** ಪೃಷ್ಠವಂಶದ ಎರಡೂ ಕಡೆ ಕಟಿಅಸ್ಥಿ ಸಂಧಿಗಳಲ್ಲಿ. **ಮತಾಂತರ** ಕಟಿಯ ಮೇಲ್ಭಾಗದಲ್ಲಿ ಎಡಬಲ ತ್ರಿಕಾಸ್ಥಿಗಳಲ್ಲಿ "**ಕಟೀಕ ಮತ್ತು ತರುಣ**" ಎಂಬ ಹೆಸರಿನ ಮರ್ಮಗಳಿರುತ್ತವೆ. ಇವು ಅಸ್ಥಿಮರ್ಮ, ಅರ್ಧಾಂಗುಲಪ್ರಮಾಣ, ಕಾಲಾಂತರ ಪ್ರಾಣಹಾರಕ ಮರ್ಮಗಳಾಗಿರುತ್ತವೆ ಇಲ್ಲಿ ಆಘಾತವಾದರೆ ರಕ್ತಕ್ಷೀಣತೆಯಿಂದ ಬೆಳ್ಳಗಾಗಿ ಅಥವಾ ವರ್ಣಹೀನತೆ ಇಲ್ಲವೇ ವಿಕಾರವರ್ಣವುಂಟಾಗಿ ಮರಣಹೊಂದುತ್ತಾನೆ.

## ಕುಕುಂದರ ಮರ್ಮ

**ಪಾರ್ಶ್ವಯೋರ್ಜಘನ ಬಹಿರ್ಭಾಗೇ ಪೃಷ್ಠವಂಶಮುಭಯತಃ ಕುಕುಂದರೇ, ತತ್ರಸ್ಪರ್ಶಾಜ್ಞಾನಮಧಃ ಕಾಯೇಚೇಷ್ಟೋಪಘಾತಶ್ಚ ॥** (ಸು॥ ಶಾ॥ ಅ. ೬ ಸೂ. ೨೬)

ಸ್ಥಾನ:— ಪೃಷ್ಠ ವಂಶದ ಎರಡೂ ಕಡೆ ಪಾರ್ಶ್ವಗಳಲ್ಲಿ ಜಘನ ಬಹಿರ್ಭಾಗದಲ್ಲಿ, "ಮತಾಂತರ" ಟೊಂಕದ ಎಡಬಲಗಳಲ್ಲಿ ಹಿಂದಿನ ಮೇಲ್ಭಾಗದಲ್ಲಿ, "ಕುಕುಂದರ"ವೆಂಬ ಮರ್ಮವಿರುತ್ತವೆ. ಇವು ಸಂಧಿ ಮರ್ಮ, ಅರ್ಧಾಂಗುಲ ಪ್ರಮಾಣ, ವೈಕಲ್ಯಕರ ಮರ್ಮವಾಗಿರುತ್ತವೆ. ಇಲ್ಲಿ ಆಘಾತವಾದರೆ ಸ್ಪರ್ಶಜ್ಞಾನ ಇಲ್ಲದಂತೇ ಆಗುತ್ತದೆ ಮತ್ತು ಕೆಳಭಾಗ ಶರೀರವು ಕ್ರಿಯಾಶೂನ್ಯ (ಚೇಷ್ಟೋಪಘಾತ) ವಾದದ್ದಾಗುತ್ತದೆ

## ನಿತಂಬ ಮರ್ಮ

ಶ್ರೋಣಿಕಾಂಡಯೋರುಪರ್ಯಾಶಯಾಚ್ಛಾದನೌಪಾರ್ಶ್ವಾಂ
ತರಪ್ರತಿಬದ್ಧೌನಿತಂಬೌ, ತತ್ರಾಧಃ ಕಾಯಶೋಷೋದೌರ್ಬ
ಲ್ಯಾಚ್ಚ ಮರಣಂ ॥

(ಸುಶ್ರುತ॥ ಶಾರೀರ॥ ಅ ೬ ಸೂ. ೨೬)

ಸ್ಥಾನ:—ಕಟಿಸಂಧಾನ ತ್ರಿಕಾಸ್ಥಿಗಳ ಮೇಲ್ಭಾಗದಲ್ಲಿ ಮಲಾಶಯಕ್ಕೆ ಆಚ್ಛಾದಕವಾಗಿ ಎಡಬಲ ಪಾರ್ಶ್ವಗಳಲ್ಲಿ ಪ್ರತಿಬದ್ಧವಾದ ಅಸ್ಥಿಫಲಕ ಭಾಗಗಳಲ್ಲಿ, "ನಿತಂಬ"ವೆಂಬ ಹೆಸರಿನ ಮರ್ಮವಿರುತ್ತವೆ. ಇವು ಅಸ್ಥಿ ಮರ್ಮ, ಅರ್ಧಾಂಗುಲ ಪ್ರಮಾಣ, ಕಾಲಾಂತರ ಪ್ರಾಣಹರ ಮರ್ಮಗಳಾಗಿರುತ್ತವೆ. ಇಲ್ಲಿ ಆಘಾತ ಸಂಭವಿಸಿದರೆ ಕೆಳಭಾಗ ಶರೀರವು ಕೃಶವಾಗೋಣ (ಶೋಷ) ದುರ್ಬಲತೆಗಳಿಂದ ಮರಣ ಸಂಭವಿಸುತ್ತದೆ

## ಪಾರ್ಶ್ವಸಂಧಿಮರ್ಮ

ಅಧಃ ಪಾರ್ಶ್ವಾಂತರ ಪ್ರತಿಬದ್ಧೌ ಜಘನ ಪಾರ್ಶ್ವ ಮಧ್ಯಯೋ
ಸ್ತಿರ್ಯಗೂರ್ಧ್ವಂಚ ಜಘನಾತ್ ಪಾರ್ಶ್ವಸಂಧೀ, ತತ್ರಲೋಹಿತ
ಪೂರ್ಣ ಕೋಷ್ಠತಯಾಮ್ರಿಯತೆ ॥

(ಸು॥ ಶಾ॥ ಅ. ೬ ಸೂ ೨೬)

ಸ್ಥಾನ:— ಎಡಬಲ ಪಾರ್ಶ್ವಗಳಲ್ಲಿ ಅಸ್ಥಿಫಲಕವುಳ್ಳ ಸಂಧಿಗಳು, "ಕನ್ನಡದಲ್ಲಿ" ಇದಕ್ಕೆ ಪಕ್ಕಡಿ, ಪಾರ್ಶ್ವ, ಪಕ್ಕೆಲಬುಗಳೆಂದು ಹೇಳುತ್ತಾರೆ. ಇಲ್ಲಿ "ಪಾರ್ಶ್ವಸಂಧಿ" ಎಂಬ ಹೆಸರಿನ ಮರ್ಮವಿರುತ್ತವೆ ಇವು ಸಿರಾಮರ್ಮ, ಅರ್ಧಾಂಗುಲ ಪ್ರಮಾಣ, ಕಾಲಾಂತರ ಪ್ರಾಣಹರ ಮರ್ಮವಾಗಿರುತ್ತವೆ. ಇಲ್ಲಿ ಆಘಾತಬಿದ್ದರೆ ರಕ್ತಪೂರ್ಣ ಕೋಷ್ಠವಿರುವದರಿಂದ ಮರಣ ಸಂಭವಿಸುತ್ತದೆ

## ಬೃಹತೀಮರ್ಮ

**ಸ್ತನಮೂಲಾದೃಜೂಭಯತಃ ಪೃಷ್ಠವಂಶಸ್ಯಬೃಹತೀ, ತತ್ರ ಶೋಣಿತಾತಿಪ್ರವೃತ್ತಿನಿಮಿತ್ತೈರುಪದ್ರವೈರ್ಮ್ರಿಯತೆ ||**

(ಸುಶ್ರುತ|| ಶಾರೀರ|| ಅ. ೬ ಸೂ. ೨೬)

ಸ್ಥಾನ: — ಸ್ತನಮೂಲಗಳ ಸರಳ ರೇಖೆಯಿಂದ ಸರಿಯಾಗಿ ಹಿಂಬದಿಯ ಎಡಬಲ ಪಾರ್ಶ್ವಗಳಲ್ಲಿ, "ಬೃಹತೀ" ಎಂಬ ಹೆಸರಿನ ಮರ್ಮವಿರುತ್ತವೆ. ಇವು ಸಿರಾಮರ್ಮ, ಅರ್ಧಾಂಗುಲ ಪ್ರಮಾಣ, ಕಾಲಾಂತರ ಪ್ರಾಣಹರ ಮರ್ಮವಾಗಿರುತ್ತವೆ. ಇಲ್ಲಿ ಆಘಾತ ಸಂಭವಿಸಿದರೆ ರಕ್ತ ಒಹಳ ಹೋಗುವದರಿಂದ ಸಂಭವಿಸುವ ಉಪದ್ರವಗಳಿಂದ ಮರಣವಾಗುತ್ತದೆ

## ಅಂಸಫಲಕ

**ಪೃಷ್ಠೋಪರಿ ಪೃಷ್ಠವಂಶಮುಭಯತಸ್ತ್ರಿಕಸಂಬದ್ಧೇ ಅಂಸಫಲಕೇ, ತತ್ರಬಾಹ್ವೋಃ ಸ್ವಾಪಶೋಷೌ ||**

(ಸುಶ್ರುತ|| ಶಾರೀರ|| ಅ. ೬ ಸೂ. ೨೬)

ಸ್ಥಾನ:— ಬೆನ್ನಿನ ಮೇಲ್ಗಡೆ ಪೃಷ್ಠವಂಶದ ಎರಡೂ ಕಡೆಗಳಲ್ಲಿ, "ಕನ್ನಡದಲ್ಲಿ" ಹೆಗಲೆಲುಬುಗಳು, ಭುಜ ಪ್ರದೇಶಗಳಲ್ಲಿ ಕೆಳಗಡೆ ಇರುವ ಅಸ್ಥಿಫಲಕಗಳು, ಈ ಭಾಗಗಳಲ್ಲಿ "ಅಂಸಫಲಕ"ವೆಂಬ ಹೆಸರಿನ ಮರ್ಮವಿರುತ್ತವೆ. ಇವು ಅಸ್ಥಿ ಮರ್ಮ, ಅರ್ಧಾಂಗುಲ ಪ್ರಮಾಣ, ವೈಕಲ್ಯಕರ ಮರ್ಮವಾಗಿ

ರುತ್ತವೆ. ಇಲ್ಲಿ ಆಘಾತ ಸಂಭವಿಸಿದರೆ ಬಾಹುಗಳ ಕ್ಷೀಣತೆ (ಶೋಷ) ನಿಶ್ಚೇಷ್ಟತೆ (ಸ್ವಾಪ) ಇವುಗಳುಂಟಾಗುತ್ತವೆ

### ಅಂಸಮರ್ಮ

**ಬಾಹುಮೂರ್ಧಗ್ರೀವಾಮಧ್ಯೇಂಸಪೀಠಸ್ಕಂಧ ಬಂಧನಾವಂಸೌ, ತತ್ರಸ್ತಬ್ಧಬಾಹುತಾ ಏವಮೇತಾನಿ ಚತುರ್ದಶ ಪೃಷ್ಠ ಮರ್ಮಾಣಿ ವ್ಯಾಖ್ಯಾತಾನಿ॥**
(ಸುಶ್ರುತ॥ ಶಾರೀರ॥ ಅ. ೬ ಸೂ. ೨೬)

**ಸ್ಥಾನ:**— ಎರಡು ರಟ್ಟೆಗಳ ಆದಿಯ ಅಡ್ಡೆಲಬುಗಳು, ಬಾಹು ಮೂಲಗಳಲ್ಲಿಯ ಅಡ್ಡೆಲುಬುಗಳು, ಈ ಸ್ಥಾನಗಳಲ್ಲಿ "**ಅಂಸ**"ವೆಂಬ ಮರ್ಮವಿರುತ್ತವೆ ಇವು ಸ್ನಾಯುಮರ್ಮ, ಅರ್ಧಾಂಗುಲ ಪ್ರಮಾಣ, ವೈಕಲ್ಯಕರ ವ ರ್ಮವಾಗಿರುತ್ತವೆ. ಇಲ್ಲಿ ಆಘಾತ ಸಂಭವಿಸಿದರೆ ಬಾಹುಸ್ತಬ್ಧತಾ (ನಿಶ್ಚೇಷ್ಟತೆ) ಉಂಟಾಗುತ್ತದೆ. ಹೀಗೆ (೧೪) ಪೃಷ್ಠಮರ್ಮಗಳು ವಿವರಿಸಲ್ಪಟ್ಟಿರುತ್ತವೆ.

## (೪) ಜತ್ರೂರ್ಧ್ವಮರ್ಮಗಳು

### ಧಮನೀಮರ್ಮ

**ತತ್ರಕಂಠನಾಡೀಮುಭಯತಶ್ಚತಸ್ರೋಧಮನ್ಯೋದ್ವೇನೀಲೇದ್ವೇಚಮನ್ಯವ್ಯತ್ಯಾಸೇನ, ತತ್ರಮೂಕತಾಸ್ವರವೈಕೃತಮರಸಗ್ರಾಹಿತಾಚ ॥** (ಸುಶ್ರುತ॥ ಶಾರೀರ॥ ಅ ೬ ಸೂ ೨೭)

**ಸ್ಥಾನ:**— ಕಂಠನಾಳದ ಎರಡೂ ಕಡೆ "ನೀಲ" ಮತ್ತು "ಮನ್ಯ" ಗಳೆಂಬ ಪ್ರತಿಯೊಂದು ಎರಡೆರಡರಂತೆ [೪] ಧಮನಿಗಳಿದ್ದು, ಕತ್ತರಿಯ ಹಾಗೆ ಎಡದಿಂದ ಬಲಕ್ಕೆ ಬಲದಿಂದ ಎಡಕ್ಕೆ ವ್ಯತ್ಯಾಸವಾಗಿ ಹೋಗಿರುತ್ತವೆ. ಇವುಗಳು "**ಧಮನೀ**" ಎಂಬ ಹೆಸರಿನ ಮರ್ಮಗಳಾಗಿರುತ್ತವೆ.

ಇವು ಸಿರಾ ಮರ್ಮ, ನಾಲ್ಕಂಗುಲ ಪ್ರಮಾಣ, ವೈಕಲ್ಯಕರ ಮರ್ಮಗಳಾಗಿರುತ್ತವೆ. ಇಲ್ಲಿ ಆಘಾತ ಸಂಭವಿಸಿದರೆ ಮೂಕತೆ ಸ್ವರವಿಕೃತಿ ಮತ್ತು ರಸಾಜ್ಞಾನ ಅಥವಾ ರಸಗ್ರಹಣ ಶೂನ್ಯತೆಗಳೂ ಉಂಟಾಗುತ್ತವೆ.

## ಮಾತೃಕಾಮರ್ಮ

**ಗ್ರೀವಾಯಾಮುಭಯತಶ್ಚತಸ್ರಶ್ಚತಸ್ರಃ ಸಿರಾಮಾತೃಕಾಃ, ತತ್ರಸದ್ಯೋಮರಣಂ ॥** (ಸು॥ ಶಾ॥ ಅ ೬ ಸೂ ೨೭)

ಸ್ಥಾನ:— ಕುತ್ತಿಗೆಯ ಎರಡೂ ಪಾರ್ಶ್ವಗಳಲ್ಲಿ ಪ್ರತಿಯೊಂದರಲ್ಲಿ ನಾಲ್ಕರಂತೇ (೮) ಸಿರಗಳಿರುತ್ತವೆ. ಇವುಗಳಿಗೆ "ಮಾತೃಕಾ" ಎಂದು ಹೇಳುತ್ತಾರೆ. ಇವು ಸಿರಾಮರ್ಮ, ನಾಲ್ಕಂಗುಲ ಪ್ರಮಾಣ, ಸದ್ಯೋಮರಣವನ್ನುಂಟು ಮಾಡುವ ಮರ್ಮಗಳಾಗಿರುತ್ತವೆ.

## ಕೃಕಾಟಿಕಾಮರ್ಮ

**ಶಿರೋಗ್ರೀವಯೋಃ ಸಂಧಾನೇಕೃಕಾಟಿಕೇ, ತತ್ರಚಲಮೂರ್ಧತಾ ॥** (ಸು॥ ಶಾ॥ ಅ ೬ ಸೂ ೨೭)

**ಸ್ಥಾನ:—** ತಲೆ ಮತ್ತು ಕುತ್ತಿಗೆಗಳ ಸಂಧಾನ ಭಾಗದಲ್ಲಿ "ಕೃಕಾಟಿಕಾ" ಎಂಬ ಮರ್ಮವಿರುತ್ತವೆ. ಇವು ಸಂಧಿಮರ್ಮ, ಅರ್ಧಾಂಗುಲ ಪ್ರಮಾಣ, ವೈಕಲ್ಯಕರಮರ್ಮವಾಗಿರುತ್ತವೆ. ಇಲ್ಲಿ ಆಘಾತ ಸಂಭವಿಸಿದರೆ ತಲೆ ನಡಗೋಣ (ಚಲಮೂರ್ಧತಾ) ಉಂಟಾಗುತ್ತದೆ.

## ವಿಧುರಮರ್ಮ

**ಕರ್ಣಪೃಷ್ಠತೋಽಧಃ ಸಂಶ್ರಿತೇವಿಧುರೇ, ತತ್ರಬಾಧಿರ್ಯಂ ॥**

(ಸು॥ ಶಾ॥ ಅ ೬ ಸೂ ೨೭)

ಸ್ಥಾನ:— ಕಿವಿಗಳ ಹಿಂದೆ ಕೆಳಗಡೇ ಭಾಗಗಳಲ್ಲಿ "ವಿಧುರ" ವೆಂಬ ಮರ್ಮವಿರುತ್ತವೆ. ಇವು ಸ್ನಾಯುಮರ್ಮ, ಅರ್ಧಾಂಗುಲ ಪ್ರಮಾಣ, ವೈಕಲ್ಯಕರಮರ್ಮವಾಗಿರುತ್ತವೆ. ಇಲ್ಲಿ ಆಘಾತವಾದರೆ ಕಿವಿಗಳುಕಿವುಡಾಗುತ್ತವೆ

## ಫಣೇ

**ಘ್ರಾಣಮಾರ್ಗಮುಭಯತಃ ಸ್ರೋತೋಮಾರ್ಗಪ್ರತಿಬದ್ಧೇಽಭ್ಯಂತರತಃ ಫಣೇ, ತತ್ರಗಂಧಾಜ್ಞಾನಂ ||**
(ಸುಶ್ರುತ|| ಶಾರೀರ|| ಅ ೬ ಸೂ ೨೭)

ಸ್ಥಾನ:— ಮೂಗಿನ ರಂಧ್ರಗಳ ಆದಿಯ ಒಳಭಾಗಗಳಲ್ಲಿ, "ಫಣೇ" ಎಂಬ ಮರ್ಮಗಳಿರುತ್ತವೆ. ಇವು ಸಿರಾಮರ್ಮ, ಅರ್ಧಾಂಗುಲ ಪ್ರಮಾಣ. ವೈಕಲ್ಯಕರಮರ್ಮವಾಗಿರುತ್ತವೆ. ಇಲ್ಲಿ ಆಘಾತ ಸಂಭವಿಸಿದರೆ ಗಂಧ ಗ್ರಹಣ ಮತ್ತು ಜ್ಞಾನವಾಗುವದಿಲ್ಲ.

## ಅಪಾಂಗಮರ್ಮ

**ಭ್ರೂಪುಚ್ಛಾಂತಯೋರಧೋಽಕ್ಷ್ಣೋರ್ಬಾಹ್ಯತೋಽಪಾಂಗೌ, ತತ್ರಾಂಧ್ಯಂ ದೃಷ್ಟ್ಯುಪಘಾತೋವಾ ||**
(ಸುಶ್ರುತ|| ಶಾರೀರ|| ಅ ೬ ಸೂ)

ಸ್ಥಾನ:— ಎರಡೂ ಹುಬ್ಬುಗಳ ತುದಿಯಲ್ಲಿ ಕೆಳಗೆ ಕಣ್ಣುಗಳ ಹೊರ ಭಾಗಗಳಲ್ಲಿ "ಅಪಾಂಗ" ವೆಂಬ ಮರ್ಮವಿರುತ್ತವೆ. ಇವು ಸಿರಾಮರ್ಮ, ಅರ್ಧಾಂಗುಲ ಪ್ರಮಾಣ, ವೈಕಲ್ಯಕರಮರ್ಮವಾಗಿರುತ್ತವೆ. ಇಲ್ಲಿ ಆಘಾತ ಸಂಭವಿಸಿದರೆ ಕಣ್ಣು ಕುರುಡಾಗುತ್ತವೆ. ಅಥವಾ ದೃಷ್ಟಿಗೆ ಆಘಾತ ವಾಗುತ್ತದೆ.

## ಆವರ್ತಮರ್ಮ

**ಭ್ರುವೋರುಪರಿನಿಮ್ನಯೋರಾವರ್ತೌನಾಮ, ತತ್ರಾಪ್ಯಾಂಧ್ಯಂ ದೃಷ್ಟ್ಯುಪಘಾತೋವಾ ||** (ಸು|| ಶಾ|| ಅ ೬ ಸೂ. ೨೭)

ಸ್ಥಾನ.— ಹುಬ್ಬುಗಳ ಮೇಲ್ಭಾಗಗಳಲ್ಲಿರುವ ಸ್ವಲ್ಪ ತಗ್ಗಾದ ಪ್ರದೇಶ ಗಳಲ್ಲಿ, "ಆವರ್ತ"ವೆಂಬ ಹೆಸರಿನ ಮರ್ಮವಿರುತ್ತವೆ ಇವು ಸಂಧಿ ಮರ್ಮ, ಅರ್ಧಾಂಗುಲ ಪ್ರಮಾಣ, ವೈಕಲ್ಯಕರ ಮರ್ಮವಾಗಿರುತ್ತವೆ ಇಲ್ಲಿ ಆಘಾತ ವಾದರೆ ಕಣ್ಣು ಕುರುಡಾಗುತ್ತವೆ ಅಥವಾ ದೃಷ್ಟಿಗೆ ಆಘಾತವಾಗುತ್ತದೆ.

## ಶಂಖಮರ್ಮ

**ಭ್ರುವೋರಂತಯೋರುಪರಿ ಕರ್ಣಲಲಾಟಯೋರ್ಮಧ್ಯೇಶಂಖೌ, ತತ್ರಸದ್ಯೋ ಮರಣಂ ॥** (ಸುಶ್ರುತ॥ ಶಾರೀರ॥ ಅ. ೬ ಸೂ. ೨೭)

ಸ್ಥಾನ:— ಹುಬ್ಬುಗಳ ಕೊನೇ ಭಾಗಗಳ ಮೇಲೆ ಕಿವಿ ಹಣೆಗಳ ಮಧ್ಯ ಭಾಗಗಳಲ್ಲಿ, ಇದಕ್ಕೆ ಮೆಲಕು ಅನ್ನುತ್ತಾರೆ. ಈ ಪ್ರದೇಶಗಳಲ್ಲಿ "ಶಂಖ"ವೆಂಬ ಹೆಸರಿನ ಮರ್ಮವಿರುತ್ತವೆ ಇವು ಅಸ್ಥಿ ಮರ್ಮ, ಅರ್ಧಾಂಗುಲ ಪ್ರಮಾಣ, ಇಲ್ಲಿ ಆಘಾತ ಹೊಡೆತಗಳಿಂದ ಸದ್ಯೋ ಮರಣ ಸಂಭವಿಸುತ್ತದೆ.

## ಉತ್‌ಕ್ಷೇಪ ಮರ್ಮ

**ಶಂಖಯೋರುಪರಿಕೇಶಾಂತ ಉತ್‌ಕ್ಷೇಪೌ, ತತ್ರಸಶಲ್ಯೋಜೀ ವೇತ್ ಪಾಕಾತ್ ಪತಿತಶಲ್ಯೋವಾನೋದ್ಧೃತಶಲ್ಯಃ॥**

(ಸುಶ್ರುತ॥ ಶಾರೀರ॥ ಅ ೬ ಸೂ. ೨೭)

ಸ್ಥಾನ.— ಶಂಖ ಮರ್ಮಗಳ ಮೇಲ್ಭಾಗ ಕೇಶಾಂತ್ಯ ಪ್ರದೇಶಗಳಲ್ಲಿ, "ಉತ್‌ಕ್ಷೇಪ"ವೆಂಬ ಹೆಸರಿನ ಮರ್ಮವಿರುತ್ತವೆ. ಇವು ಸ್ನಾಯು ಮರ್ಮ, ಅರ್ಧಾಂಗುಲ ಪ್ರಮಾಣ, ವಿಶಲ್ಯಪ್ರಾಣಹರ ಮರ್ಮವಾಗಿರುತ್ತವೆ. ಇಲ್ಲಿ ನಟ್ಟಿರುವ ಬಾಣಗಳನ್ನು ಕಿತ್ತೊಡನೆಯೇ ಮರಣ ಸಂಭವಿಸುತ್ತದೆ. ಯಾಕಂದರೆ ಬಾಣಾದಿಗಳ ಮುಖದಿಂದ ತಡೆದು ಅಡ್ಡಿಯಾಗಿ ಪ್ರಾಣವು ನಿಂತಿರುತ್ತದೆ, ಆದ್ದರಿಂದ ಬಾಣವನ್ನು ಕಿತ್ತೊಡನೆಯೇ ಪ್ರಾಣವುಹಾರಿಹೋಗುತ್ತದೆ. ಹೀಗಿರುವದರಿಂದ ಈ ಮರ್ಮಗಳಿಗೆ "ವಿಶಲ್ಯಘ್ನ"ವೆಂದು ಹೇಳಿದ್ದಾರೆ. ಬಾಣವು ನಟ್ಟಿರುವ ಸ್ಥಳದಲ್ಲಿಯೇ ಇರುವವರೆಗೆ ಜೀವವಿರುತ್ತದೆ. ವ್ರಣಪಾಕ

ದಿಂದ ಕೀವಾಗಿ ರಸಿಗೆಯು ಸಂಗಡ ಬಾಣವು ತನ್ನಿಂದ ತಾನೇ ಹೊರಬಿದ್ದರೆ ಬದುಕುತ್ತಾನೆ ಬಾಣವನ್ನು ಕಿತ್ತರೆಬದುಕುವದಿಲ್ಲ. ಪ್ರಾಣವು ಹಾರಿಹೋಗುತ್ತದೆ. ಬಾಣ ಶಸ್ತ್ರಾದಿಗಳ ಆಘಾತವನ್ನು (ಚುಚ್ಚುವಿಕೆಯನ್ನು) ಕುರಿತು ವಿಶಲ್ಯಘ್ನ ಮರ್ಮವನ್ನು ಹೇಳಿದ್ದಾರೆ. ಇನ್ನು ಬಾಣಾದಿಗಳು ನಟ್ಟದೆ (ಪ್ರವೇಶಿಸದೆ) ಹೊಡೆತ ಬಡೆತಸಂಭವಿಸಿದರೆ, ವಿಶಲ್ಯಘ್ನ ಮರ್ಮಗಳು ವೈಕಲ್ಯಕರವಾಗುತ್ತವೆ.

## ಸ್ಥಪನೀಮರ್ಮ

**ಭ್ರುವೋರ್ಮಧ್ಯೇಸ್ಥಪನೀ, ತತ್ರೋತ್ ಕ್ಷೇಪವತ್ ॥**

(ಸುಶ್ರುತ॥ ಶಾರೀರ॥ ಅ ೬ ಸೂ ೨೭)

**ಸ್ಥಾನ:**—ಎರಡೂಹುಬ್ಬುಗಳು ಕೂಡಿದ ಮಧ್ಯಭಾಗದಲ್ಲಿ, "ಸ್ಥಪನೀ" ಎಂಬ ಮರ್ಮವಿರುತ್ತದೆ. ಇದು ಸಿರಾಮರ್ಮ, ಅರ್ಧಾಂಗುಲಪ್ರಮಾಣ, ವಿಶಲ್ಯ ಪ್ರಾಣಹರ ಮರ್ಮವಾಗಿರುತ್ತದೆ. ಇಲ್ಲಿ ಬಾಣಾದಿಗಳು ನಟ್ಟರೆ ಅಥವಾ ಆಘಾತ ಸಂಭವಿಸಿದರೆ ಉತ್ ಕ್ಷೇಪ ಮರ್ಮದಂತೆಯೇ ಪರಿಣಾಮವಾಗುತ್ತದೆಯೆಂದು ತಿಳಿಯಬೇಕು.

## ಸೀಮಂತ ಮರ್ಮ

**ಪಂಚಸಂಧಯಃ ಸಿರಸಿವಿಭಕ್ತಾಃ ಸೀಮಂತಾನಾಮ, ತತ್ರೋನ್ಮಾದಭಯಚಿತ್ತನಾಶೈರ್ಮರಣಂ॥**

(ಸುಶ್ರುತ॥ ಶಾರೀರ॥ ಅ ೬ ಸೂ ೨೭)

**ಸ್ಥಾನ:**— ತಲೇಪರಟೆಗಳಲ್ಲಿ ಪರಸ್ಪರ ಎಲಬುಗಳು ಕೂಡಿದ (೫) ಸಂಧಿಗಳು ಇರುತ್ತವೆ. ಇವುಗಳಿಗೆ "ಸೀಮಂತ" ಮರ್ಮವೆಂದು ಹೇಳುತ್ತಾರೆ. ಇವು ಸಂಧಿಮರ್ಮ, ನಾಲ್ಕಂಗುಲ ಪ್ರಮಾಣ, ಕಾಲಾಂತರಪ್ರಾಣ ಹಾರಕ ಮರ್ಮವಾಗಿರುತ್ತವೆ ಇಲ್ಲಿ ಆಘಾತವಾದರೆ ಹುಚ್ಚು ಹಿಡಿಯೋಣ

(ಉನ್ಮಾದ), ಭಯ, ಮನೋವಿನಾಶ ಮೊದಲಾದವುಗಳಿಂದ ಮರಣ ಹೊಂದುತ್ತಾನೆ

## ಶೃಂಗಾಟಕಮರ್ಮ

**ಘ್ರಾಣಶ್ರೋತ್ರಾಕ್ಷಿಜಿಹ್ವಾಸಂತರ್ಪಣೀನಾಂ ಸಿರಾಣಾಂಮಧ್ಯೇ ಸಿರಾಸನ್ನಿಪಾತಃ ಶೃಂಗಾಟಕಾನಿ, ತಾನಿಚತ್ವಾರಿ ಮರ್ಮಾಣಿ, ತತ್ರಾಪಿಸದ್ಯೋ ಮರಣಂ ॥** (ಸು॥ ಶಾ॥ ಅ ೬ ಸೂ ೨೭)

**ಸ್ಥಾನ:—** ಮೂಗು, ಕಿವಿ, ಕಣ್ಣು, ನಾಲಿಗೆಗನ್ನು ಪೋಷಿಸುವ ಸಿರಗಳು ಒಟ್ಟುಗೂಡಿದ ಸ್ಥಳದಲ್ಲಿ, "ಶೃಂಗಾಟಕ" ಮರ್ಮವೆಂದು ಹೇಳುತ್ತಾರೆ **ಘ್ರಾಣಶ್ರೋತ್ರಾಕ್ಷಿ ಜಿಹ್ವಾ**ಗಳಲ್ಲಿ ಪ್ರತ್ಯೇಕ ಒಂದೊಂದರಂತೆ ಒಟ್ಟು (೪) ಮರ್ಮಗಳಿರುತ್ತವೆ. ಇವು ಸಿರಾಮರ್ಮ, ನಾಲ್ಕಂಗುಲ ಪ್ರಮಾಣ, ಸದ್ಯಃ ಪ್ರಾಣಹರ ಮರ್ಮವಾಗಿರುತ್ತವೆ

## ಅಧಿಪತಿಮರ್ಮ

**ಮಸ್ತಕಾಭ್ಯಂತರೋಪರಿಷ್ಟಾತ್ ಸಿರಾಸಂಧಿಸನ್ನಿಪಾತೋರೋಮಾವರ್ತೋಽಧಿಪತಿಃ, ತತ್ರಾಪಿ ಸದ್ಯ ಏವ ॥ ಏವಮೇತಾನಿ ಸಪ್ತತ್ರಿಂಶದೂರ್ಧ್ವಜತ್ರುಗತಾನಿ ಮರ್ಮಾಣಿ ವ್ಯಾಖ್ಯಾತಾನಿ॥**

(ಸುಶ್ರುತ॥ ಶಾರೀರ॥ ಅ ೬ ಸೂ ೨೭)

**ಸ್ಥಾನ:—** ತಲೆಯ ಒಳಗಡೆ ಮೇಲ್ಭಾಗದಲ್ಲಿ ಸಿರಾಸಂಧಿಗಳುಒಂದೆಡೆಯಾಗುವ ಸ್ಥಳದಲ್ಲಿ, **ವಿಶೇಷ:—** ಇದರ ಮೇಲ್ಭಾಗ ತಲೆಯಲ್ಲಿ ಕೂದಲ ಸುಳಿಇರುತ್ತದೆ **ಕನ್ನಡ**ದಲ್ಲಿ ನೆತ್ತಿಯೆಂದು ಅನ್ನುತ್ತಾರೆ. ಈ ಪೂರ್ವೋಕ್ತ ಸ್ಥಾನದಲ್ಲಿ "**ಅಧಿಪತಿ**" ಯೆಂಬ ಹೆಸರಿನ ಮರ್ಮವಿರುತ್ತದೆ ಇದು ಸಂಧಿ ಮರ್ಮ, ಅರ್ಧಾಂಗುಲ ಪ್ರಮಾಣ, ಸದ್ಯೋ ಮರಣ ಮರ್ಮವಾಗಿರುತ್ತದೆ. ಹೀಗೆ ಜತ್ರೂರ್ಧ್ವವಾದ (೩೭) ಮರ್ಮಗಳು ವಿವರಿಸಲ್ಪಟ್ಟಿರುತ್ತವೆ.

**ಶಾಖಾಮರ್ಮ (೪೪), ಉದರೋರಸೋಃ (೧೨), ಪೃಷ್ಠ ಮರ್ಮ (೧೪), ಜತ್ರೂರ್ಧ್ವಮರ್ಮ (೩೭), ಈ ಪ್ರದೇಶಗಳಲ್ಲಿರುವ** ಮರ್ಮಗಳು ಒಟ್ಟು ಕೂಡಿ (೧೦೭) ಮರ್ಮಗಳಿರುತ್ತವೆ

# (೫೯) ಸಿರಾ ವಿವರಣೆಯು

ದೇಹದ ತುಂಬ ಸಿರಾಗಳು ಜಾಳಿಗೆಯಂತೆ ಪಸರಿಸಿರುತ್ತವೆ ಸಿರಾಗಳು ನಾಭಿಯಿಂದ ಹೊರಟು ಸಮಗ್ರ ದೇಹದಲ್ಲಿಯೂ ವ್ಯಾಪಿಸಿಕೊಂಡಿರುತ್ತವೆ. ಶರೀರದಲ್ಲಿ ವಾತ ಪಿತ್ತ ಕಫ ಮತ್ತು ರಕ್ತಗಳನ್ನು ಎಲ್ಲ ಭಾಗಗಳಿಗೆ ಸಿರಾಗಳು ಒಯ್ದು ಮುಟ್ಟಿಸುತ್ತವೆ. ಅರ್ಥಾತ್ ವಾತಾದಿಗಳು ಸಿರಾಮಾರ್ಗವಾಗಿ ದೇಹದ ಪ್ರತಿಯೊಂದು ಭಾಗಗಳಲ್ಲಿ ಸಂಚರಿಸುತ್ತವೆಂಬಭಿಪ್ರಾಯವು ಶಸ್ತ್ರಕ್ರಿಯಾ ಆಘಾತಾದಿಗಳಲ್ಲಿ ಮತ್ತು ರಕ್ತ ಮೋಕ್ಷಣ ಕ್ರಮದಲ್ಲಿ ಸಿರಾಜ್ಞಾನವು ಅವಶ್ಯವಾದದ್ದಾಗಿರುತ್ತದೆ ಆದ್ದರಿಂದ ಸಿರಾ ವಿಷಯಕ ವಿವರಣೆಯನ್ನು ಮಾಡುತ್ತಾರೆ ಎಲ್ಲ ಭಾಗಗಳಲ್ಲಿ ಕೂಡಿ ದೇಹದಲ್ಲಿ (೭೦೦) ಸಿರಾಗಳು ಇರುತ್ತವೆ ಹೇಗೆ ಕಾಲುವೆಗಳು ನೀರನ್ನು ಒಯ್ಯುವದರಿಂದ ಹೊಲವನ್ನು ಬೆಳಸುತ್ತವೆಯೋ, ಸಣ್ಣ ಕಾಲುವೆ (ಹರಿ) ಮೊದಲಾದವುಗಳಿಂದ ಉಪವನವು ಪೋಷಣೆಯನ್ನು ಹೊಂದುತ್ತದೆಯೋ, ಹಾಗೆಯೇ ಸಿರಾಗಳು ದೇಹವನ್ನು ಪೋಷಿಸಿ ಬೆಳೆಸುತ್ತವೆ. ಶರೀರದಲ್ಲಿ ದೊಡ್ಡ ಸಿರಗಳಿಂದಾರಂಭಿಸಿ ಗಿಡದ ಎಲೆಗಳಲ್ಲಿರುವ ಸೂಕ್ಷ್ಮನರಗಳು ಅಥವಾ ಕೂದಲಿನ ಪ್ರಮಾಣದ ವರೆಗೆ; ಪರಮ ಸೂಕ್ಷ್ಮವಾದ ಸಿರಗಳಿರುತ್ತವೆ.

**ಸಪ್ತ ಸಿರಾಶತಾನಿ ಭವಂತಿ, ಯಾಭಿರಿದಂ ಶರೀರಮಾರಾಮ ಇವಜಲಹಾರಿಣೀಭಿಃ ಕೇದಾರ ಇವ ಕುಲ್ಯಾಭಿರುಪಸ್ನಿಹ್ಯತೇಽ ನುಗೃಹ್ಯತೇ ಚಾಕುಂಚನ ಪ್ರಸಾರಣಾದಿಭಿರ್ವಿಶೇಷೈದ್ರುಮಃ, ಪತ್ರಸೇವನ್ನೀನಾಮಿತಾಸಾಂಪ್ರತಾನಾಃ, ತಾಸಾಂನಾಭಿರ್ಮೂಲಂ, ತತಶ್ಚ ಪ್ರಸರತ್ಯೂರ್ಧ್ವಮಧಸ್ತಿರ್ಯಕ್ ಚ ॥**

(ಸುಶ್ರುತ॥ ಶಾರೀರ॥ ಅ ೭ ಸೂ ೩ )

ದೇಹದಲ್ಲಿ ಸಿರಾಗಳು (೭೦೦) ಇರುತ್ತವೆ ಯಾವದರಿಂದ ಶರೀರವು ನೀರಿನ ಸಣ್ಣ ಹರಿಗಳಿಂದ ಉದ್ಯಾನದಂತೆ ಅಥವಾ ಕಾಲುವೆಗಳಿಂದ ಹೊಲ ದಂತೆ, ಪೋಷಣೆಯನ್ನು ಹೊಂದುತ್ತದೆಯೋ ಅವುಗಳಿಗೆ "ಸಿರಾ" ಎಂದು ಹೇಳುತ್ತಾರೆ. ಸಿರಗಳು ಆಕುಂಚನ ಪ್ರಸಾರಣಾದಿ ಕ್ರಿಯೆಗಳಿಂದ, ಶರೀರ ದಲ್ಲಿ ರಕ್ತಾದಿಗಳನ್ನು ಎಲ್ಲ ಕಡೆಗೆ ಪಸರಿಸುವಂತೆ ಮಾಡುತ್ತವೆ. ಸಿರಗಳ ಮುಖಾಂತರ ದೇಹದಲ್ಲಿ ಸಂಚರಿಸುವ ರಕ್ತಾದಿಗಳಿಂದ, ದೇಹವು ಅಭಿವೃದ್ಧಿ ಹೊಂದಿ ಪೋಷಿತವಾಗುತ್ತದೆ. ಮರದ ಎಲೆಗಳಲ್ಲಿರುವ ಸಿರಗಳ ಜಾಳಿಗೆ ಯಷ್ಟು ಸೂಕ್ಷ್ಮವಾಗಿಯೂ, ವ್ಯಾಪಕವಾಗಿಯೂ, ದೇಹವನ್ನು ಸಿರಗಳು ವ್ಯಾಪಿಸಿಕೊಂಡಿರುತ್ತವೆ ಸಿರಗಳ ಮೂಲವು ನಾಭಿಯಾಗಿರುತ್ತದೆ. ನಾಭಿ ಯಿಂದಲೇ ಸಿರಗಳು ಹೊರಟು ಸಮಗ್ರದೇಹವನ್ನು ಪಸರಿಸಿಕೊಂಡಿರುತ್ತವೆ. ದೇಹದ ಮೇಲ್ಭಾಗ ಕೆಳಗೆ ಎಡಎಲ ಪಾರ್ಶ್ವಗಳಲ್ಲಿ ಸಮಗ್ರ ವ್ಯಾಪಿಸಿರುವ ಸಿರಗಳು, ನಾಭಿಯಿಂದಲೇಹೊರಟಿರುತ್ತವೆ ಆದ್ದರಿಂದ ಸಿರಗಳಿಗೆ ನಾಭಿಯೇ ಮೂಲವೆಂದು ಹೇಳುತ್ತಾರೆ

**ಯಾವತ್ಯಸ್ತು ಸಿರಾಃಕಾಯೇಸಂಭವಂತಿಶರೀರಿಣಾಂ ॥**

**ನಾಭ್ಯಾಂ ಸರ್ವಾನಿಬದ್ಧಾಸ್ತಾಃ ಪ್ರತನ್ವಂತಿಸಮಂತತಃ ॥೪॥**

**ನಾಭಿಸ್ಥಾಃ ಪ್ರಾಣಿನಾಂ ಪ್ರಾಣಾಃ ಪ್ರಾಣಾನ್ನಾಭಿರ್ವ್ಯಪಾಶ್ರಿತಾ**

**ಸಿರಾಭಿರಾವೃತಾನಾಭಿಶ್ಚಕ್ರನಾಭಿರಿವಾರಕೈಃ ॥**

ಮನುಷ್ಯನ ದೇಹದಲ್ಲಿ ಎಷ್ಟು ಸಿರಗಳಿರುತ್ತವೆಯೋ ಅವು ನಾಭಿಯಲ್ಲಿ ನಿಬದ್ಧವಾಗಿ ಎಲ್ಲ ಕಡೆಗೆ ಸುತ್ತಲೂ ಪಸರಿಸುತ್ತವೆ. ಪ್ರಾಣಿಗಳ ಪ್ರಾಣವು ನಾಭಿಯನ್ನಾಶ್ರಯಿಸಿಕೊಂಡಿರುತ್ತವೆ. ಪ್ರಾಣಗಳನ್ನು ನಾಭಿಯು ಆಶ್ರಯಿಸಿ ಇರುತ್ತದೆ. ಪ್ರಾಣವು ಹೃದಯದಲ್ಲಿರುತ್ತದೆಂದು ಹೇಳಿದ್ದಾರೆ. ಪುನಃ ಈಗ ನಾಭಿಯಲ್ಲೆಂದು ಪ್ರತಿಪಾದಿಸುತ್ತಾರೆ. ಇದರಿಂದ ಸ್ಥಾನ ವಿಷಯದಲ್ಲಿ ಹೀಗೇಕೆಂದು ಆಕ್ಷೇಪಬರುತ್ತದೆ. ಹೃದಯಾದಿಗಳಲ್ಲಿ ಪ್ರಾಣಸ್ಥಾನವಾದ್ದರಿಂದ ಹೇಗೆ ಮಹತ್ವವಿರುವದೋ, ಅದರಂತೆ ನಾಭಿಯಲ್ಲಿರುವ ಸಿರಗಳನ್ನಾಶ್ರಯಿಸಿ ಪ್ರಾಣವು ಸಂಚರಿಸುವದರಿಂದ ಪ್ರಾಣಾಧಾರಕ ಸ್ಥಾನಗಳಷ್ಟೇಮುಖ್ಯವೆಂದು

ಅಭಿಪ್ರಾಯವಾಗಿರುತ್ತದೆ, ಇಲ್ಲಿ ಶಿರಾ ವಿಷಯ ಪ್ರತಿಪಾದನೆ ಇರುವದ ರಿಂದ ನಾಭಿ ಸ್ಥಾನಗಳಲ್ಲಿಯು ಶಿರಗಳನ್ನಾಶ್ರಯಿಸಿ ಪ್ರಾಣವಿರುತ್ತದೆಂದು ತಿಳಿಯಬೇಕು. ಶಿರಗಳು ಪ್ರಾಣಗಳಿಗೆ ಆಶ್ರಯವಾಗಿ ಧಾರಣೆಯನ್ನು ಮಾಡುವದರಿಂದ ಶಿರಗಳ ಮಹತ್ವವನ್ನು ಸೂಚಿಸಲು ಹೀಗೆ ಹೇಳಿದ್ದಾರೆ. ರಥಚಕ್ರದ ನಾಭಿಯು ಸುತ್ತಲಿನ ಭಾಗಗಳಿಂದ (ಹಲ್ಲುಗಳಿಂದ) ಆವೃತ ವಾಗಿದೆಯೋ, ಅದರಂತೆ ಶಿರಗಳಿಂದ ನಾಭಿಯು ಸುತ್ತಲೂ ವ್ಯಾಪಿಸಲ್ಪಟ್ಟಿ ರುತ್ತದೆ.

## ಶಿರಾವಿಭಾಗ ವರ್ಣನೆ

**ತಾಸಾಂ ಮೂಲ ಶಿರಾಶ್ಚತ್ವಾರಿಂಶತ್; ತಾಸಾಂ ವಾತವಾಹಿ ನ್ಯೋದಶ, ಪಿತ್ತವಾಹಿನ್ಯೋದಶ, ಕಫವಾಹಿನ್ಯೋದಶ, ದಶ ರಕ್ತವಾಹಿನ್ಯಃ ॥ ತಾಸಾಂತುವಾತವಾಹಿನೀನಾಂ ವಾತಸ್ಥಾನ ಗತಾನಾಂ ಪಂಚ ಸಪ್ತತಿಶತಂಭವತಿ, ತಾವತ್ಯ ಏವಪಿತ್ತವಾ ಹಿನ್ಯಃ ಪಿತ್ತ ಸ್ಥಾನೇ, ಕಫವಾಹಿನ್ಯಶ್ಚ ಕಫಸ್ಥಾನೇ, ರಕ್ತವಾಹಿ ನ್ಯಶ್ಚ ಯಕೃತ್ ಪ್ಲೀಹ್ನೋಃ॥ ಏವಮೇತಾನಿ ಸಪ್ತಶಿರಾಶತಾನಿ॥**

(ಸುಶ್ರುತ॥ ಶಾರೀರ॥ ಅ ೭ ಸೂ ೭)

ನಾಭಿಯಿಂದ ಶಿರಗಳು ಹೊರಟಿರುತ್ತವೆಂದು ಹಿಂದೆ ಹೇಳಿರುತ್ತದೆ ದೇಹದಲ್ಲಿ ಬಹು ವಿಸ್ತಾರವಾಗಿ ಎಲ್ಲ ಕಡೆಯಲ್ಲಿ ಜಾಳಿಗೆಯಂತೆ ಪಸರಿಸಿರುವ ಶಿರಗಳಲ್ಲಿ, ಮುಖ್ಯ ಮೂಲ ಶಿರಗಳೆಂದರೆ (೪೦) ಇರುತ್ತವೆ. (೧) ವಾತ ವಾಹಿನೀಶಿರಗಳು, (೨) ಪಿತ್ತವಾಹಿನೀಶಿರಗಳು, (೩) ಕಫವಾಹಿನೀ ಶಿರಗಳು, (೪) ರಕ್ತ ವಾಹಿನೀ ಶಿರಗಳು, ಇವು ಪ್ರತಿಯೊಂದು ಶಿರಗಳು ಹತ್ತರಂತೇ ಒಟ್ಟು (೪೦) ಶಿರಗಳಾಗುತ್ತವೆ

ವಾತವಾಹಿನೀ ಶಿರಗಳು ವಾತ ಸ್ಥಾನಗಳಲ್ಲಿ ಹೋದ ನಂತರ ವಿಸ್ತಾರವಾಗಿ (೧೭೫) ಆಗುತ್ತವೆ. ಇದರಂತೇ ಪಿತ್ತ ಕಫ ರಕ್ತ ಸ್ಥಾನ ಗಳಲ್ಲಿ, ಆಯಾಯ ಶಿರಗಳು ಹೋದ ನಂತರ ವಿಸ್ತಾರವಾಗಿ ಪ್ರತಿಯೊಂದೂ

(೧೭೫) ಸಂಖ್ಯೆಯುಳ್ಳವುಗಳಾಗುತ್ತವೆ ವಾತ ಪಿತ್ತ ಕಫ ರಕ್ತ ವಾಹಿನೀ ಸಿರಗಳ ವಿಸ್ತಾರವಾಗಿ ಪಸರಿಸಿದ ಅಂಕೆಗಳನ್ನೂ ಕೂಡಿಸಿದರೆ (೭೦೦) ಪ್ರತ್ಯೇಕ ಸಿರಗಳಾಗುತ್ತವೆ ವಾತವಾಹಿನ್ಯಾದಿ ಪ್ರತಿಯೊಂದು ಸಿರಗಳು ಮೂಲದಲ್ಲಿ (೧೦) ಇದ್ದು, ನಂತರ ತಮ್ಮ ಸ್ಥಾನಗಳಲ್ಲಿ ವಿಸ್ತಾರವಾಗಿ ವ್ಯಾಪಿಸಿದ್ದರಿಂದ (೧೭೫) ಆಗುತ್ತವೆಂದು ತಿಳಿಯಬೇಕು ಹೀಗೆ ವಿಸ್ತಾರವಾಗಿ ವ್ಯಾಪಿಸಿರುವ ಎಲ್ಲ ಸಿರಗಳ ಸಂಖ್ಯೆಗಳನ್ನು ಕೂಡಿಸಲು ಪೂರ್ವೋಕ್ತ ದೇಹದಲ್ಲಿಯು ಸಿರಗಳಾಗುತ್ತವೆ.

೧ **ವಾತವಾಹಿ ಸಿರಗಳ ಸ್ಥಾನ** ಪಕ್ವಾಶಯ ಗುದ ಭಾಗಗಳಲ್ಲಿ ಮತ್ತು ನಾಭಿ, ಹೃದಯ, ಕಂಠ, ಶಿರ, ಪ್ರದೇಶಗಳಲ್ಲಿ, ಸಮಗ್ರ ಶರೀರದಲ್ಲಿ, ಇವು (೫) ವಾಯುವಿನ ಸ್ಥಾನಗಳಾಗಿರುತ್ತವೆ ಮೊದಲು ಹೇಳಿರುವ ಸ್ಥಾನಗಳು ಮುಖ್ಯವಾಗಿ ವಾಯುವಿನ ಸ್ಥಾನವೆಂದು ಹೇಳಲ್ಪಟ್ಟಿರುತ್ತವೆ ವಾತವಾಹಿ ಸಿರಗಳು ತಮ್ಮ ಸ್ಥಾನಗಳಲ್ಲಿ ವಿಸ್ತಾರವಾಗಿ ಪಸರಿಸುತ್ತವೆ ಇದರಂತೆ ಮುಂದಿನ ಎಲ್ಲವುಗಳೂ ತಮ್ಮಸ್ಥಾನಗಳಲ್ಲಿ ಪಸರಿಸುತ್ತವೆಂದು ತಿಳಿಯಬೇಕು.

೨ **ಪಿತ್ತವಾಹಿ ಸಿರಗಳ ಸ್ಥಾನ** ಪಕ್ವಾಶಯ ಆಮಾಶಯಗಳ ಮಧ್ಯಭಾಗದಲ್ಲಿ ಪಿತ್ತದ ಮುಖ್ಯ ಸ್ಥಾನವಿರುತ್ತದೆ. ಯಕೃತ್ ಪ್ಲೀಹಗಳಲ್ಲಿ, ಹೃದಯ, ದೃಷ್ಟಿ, ತ್ವಚಾ, ಇವುಗಳು ಪಿತ್ತಕ್ಕೆ ಆಶ್ರಯ ಸ್ಥಾನವಾಗಿರುತ್ತವೆ. ರಕ್ತಕ್ಕೆ ಯಕೃತ್ ಪ್ಲೀಹಗಳು ಆಶ್ರಯವೆಂದೂ, ಪಿತ್ತಕ್ಕೂ ಅವುಗಳೇ ಆಶ್ರಯವೆಂಬುದಾಗಿಯೂ, ಸುಶ್ರುತದಲ್ಲಿ ಹೇಳಲ್ಪಟ್ಟಿರುತ್ತವೆ. ರಕ್ತವಾಹಿ ಸಿರಗಳು ಅಲ್ಲಿ ಪಸರಿಸಿ ಅಲ್ಲಿಯೇ ರಕ್ತವಾಗಿ ಪರಿಣಮಿಸುವದರಿಂದ ಹೀಗೆ ಹೇಳಿದ್ದಾರೆಂದು ಹಿಂದೆ ವಿವರಿಸಿರುತ್ತದೆ ಆದ್ದರಿಂದ ಪಿತ್ತವಾಹಿ ಸಿರಗಳ ಸ್ಥಾನವೆಂದು ಹೇಳಲು ಅಡ್ಡಿಯಿಲ್ಲ. ಸುಶ್ರುತದಲ್ಲಿ ರಕ್ತವಾಹಿ ಸಿರಗಳಿಗೆ ಯಕೃತ್ ಪ್ಲೀಹ ಮೂಲವೆಂದು ಹೇಳುವದು ತಪ್ಪೆಂದು ತಿಳಿಯಬಾರದು. ರಸವು ಅಲ್ಲಿಯೇ ರಕ್ತವಾಗುವದರಿಂದ ಹೀಗೆ ಹೇಳಿದ್ದಾರೆ.

೩ **ಕಫವಾಹಿ ಸಿರಗಳ ಸ್ಥಾನ** ಆಮಾಶಯ ಎದೆಗಳಲ್ಲಿ, ಶಿರಸ್ಸು, ಕಂಠ, ಜಿಹ್ವಾಮೂಲ, ಸಂಧಿಗಳು, ಇವುಗಳಲ್ಲಿ ಕಫಕ್ಕೆ ಆಶ್ರಯ ಸ್ಥಾನಗಳಿರುತ್ತವೆ. ಕಫವಾಹಿ ಸಿರಗಳು ಇವುಗಳಲ್ಲಿ ವಿಶೇಷ ವ್ಯಾಪಿಸಿರುತ್ತವೆ.

(೪) **ರಕ್ತವಾಹಿ ಸಿರಗಳ ಸ್ಥಾನ** ಯಕೃತ್ ಪ್ಲೀಹಗಳಲ್ಲಿ ಮತ್ತು ರಕ್ತಾಶಯಗಳಲ್ಲಿ ಮುಖ್ಯ ಸ್ಥಾನವಾಗಿರುತ್ತವೆ. ಸಮಗ್ರ ದೇಹದಲ್ಲಿ ಕೂದಲಿನ ಎಳೆಗಳ ಪ್ರಮಾಣ ಪರ್ಯಂತ ರಕ್ತವಾಹಿ ಸಿರಗಳು ವ್ಯಾಪಿಸಿರುತ್ತವೆ ಕೂದಲುಗಳಷ್ಟು ಸೂಕ್ಷ್ಮವಾದ ರಕ್ತವಾಹೀ ಸಿರಗಳಿರುತ್ತವೆಂಬಭಿಪ್ರಾಯವು. ವಾತ ಪಿತ್ತ ಕಫ ರಕ್ತಗಳನ್ನು ಒಯ್ಯುವ ಸಿರಗಳು ಸ್ವ ಸ್ಥಾನ ವಿಶೇಷಗಳಲ್ಲಿ ವಿಸ್ತಾರವಾಗಿ ದೇಹದಲ್ಲಿ (೭೦೦) ಸಿರಗಳಾಗಿರುತ್ತವೆ.

## ಸಕ್ಥಿಗತ ಸಿರಗಳು

**ತತ್ರವಾತವಾಹಿನ್ಯಃ ಸಿರಾ ಏಕಸ್ಮಿನ್ ಸಕ್ಥ್ನಿ ಪಂಚವಿಂಶತಿಃ;**
**ಏತೇನೇತರ ಸಕ್ಥಿಬಾಹೂಚ ವ್ಯಾಖ್ಯಾತೌ ||**
**(ಸುಶ್ರುತ|| ಶಾರೀರ|| ಅ ೭ ಸೂ ೭)**

ವಾತವಾಹಿನೀ ಸಿರಗಳು ಒಂದು ಕಾಲಿನಲ್ಲಿ (೨೫) ಇರುತ್ತವೆ. ಇದರಂತೆ ಎರಡೂ ಕಾಲು ಕೈಗಳಲ್ಲಿ ಕೂಡಿ (೧೦೦) ಸಿರಗಳಾಗುತ್ತವೆ. ಕೇವಲ ವಾತವಾಹೀ ಸಿರಗಳ ಶಾಖಾಪ್ರದೇಶಗಳಲ್ಲಿಯ ಸಂಖ್ಯೆಯಾಗಿರುತ್ತದೆ. ವಾತ ಪಿತ್ತ ಕಫ ರಕ್ತವಾಹೀ ಸಿರಗಳೆಲ್ಲವೂ ಕೂಡಿ ಶಾಖಾದಲ್ಲಿ (೪೦೦) ಇರುತ್ತವೆ.

## ಕೋಷ್ಠದಲ್ಲಿಯ ಸಿರಗಳು

**ವಿಶೇಷತಸ್ತು ಕೋಷ್ಠೇಚತುಸ್ತ್ರಿಂಶತ್; ತಾಸಾಂಗುದಮೇಢ್ರಾಶ್ರಿತಾಃ ಶ್ರೋಣ್ಯಾಮಷ್ಟೌ, ದ್ವೇ ದ್ವೇ ಪಾರ್ಶ್ವಯೋಃ, ಷಟ್ ಪೃಷ್ಠೇ, ತಾವತ್ಯ ಏವೋದರೇ, ದಶವಕ್ಷಸಿ ||**
**(ಸು|| ಶಾ|| ಅ ೭ ಸೂ ೭)**

ಕೋಷ್ಠಪ್ರದೇಶದಲ್ಲಿಯ (೩೪) ಸಿರಗಳ ವಿವರಣೆಯು. **ಗುದ, ಮೇಢ್ರ** (ಶಿಶ್ನ), **ಶ್ರೋಣಿ** (ಟೊಂಕ), ಇವುಗಳಲ್ಲಿ ಒಟ್ಟು (೮) ಸಿರಗಳಿರುತ್ತವೆ. **ಪಾರ್ಶ್ವ** (ಎಡಬಲ ಪಕ್ಕಗಳು), ಇವುಗಳಲ್ಲಿ ಎರಡೆರಡರಂತೆ ಒಟ್ಟು (೪) ಸಿರಗಳು. **ಪೃಷ್ಠ** (ಬೆನ್ನು) ಭಾಗಗಳಲ್ಲಿ (೬) ಸಿರಗಳಿರುತ್ತವೆ.

**ಉದರ** (ಹೊಟ್ಟೆ) ಪ್ರದೇಶದಲ್ಲಿ (೬) ಸಿರಗಳು **ವಕ್ಷಸ್ಸು** (ಎದೆ) ಸ್ಥಾನ ದಲ್ಲಿ ಸಿರಗಳು (೧೦) ಇರುತ್ತವೆ.

**ಗುದಾದಿಭಾಗ (೮), ಪಾರ್ಶ್ವ (೪), ಪೃಷ್ಠ (೬), ಉದರ(೬), ವಕ್ಷಸ್ಸು (೧೦),** ಮೊದಲಾದ ಭಾಗಗಳಲ್ಲಿರುವ ಒಟ್ಟು ಸಿರಗಳು (೩೪) ಇರುತ್ತವೆ ಇದು ಕೇವಲ ವಾತವಾಹೀ ಸಿರಗಳ ಸಂಖ್ಯೆಯಾಗಿರುತ್ತದೆ. ವಾತ ಪಿತ್ತ ಕಫ ರಕ್ತವಾಹೀ ಸಿರಗಳೆಲ್ಲ ಕೂಡಿ ಒಟ್ಟು ಕೋಷ್ಠ ಭಾಗದಲ್ಲಿ (೧೩೬) ಸಿರಗಳು ಇರುತ್ತವೆ.

## ಜತ್ರೂರ್ಧ್ವ ಸಿರಗಳು

**ಏಕಚತ್ವಾರಿಂಶತ್ ಜತ್ರುಣಿಊರ್ಧ್ವಂ; ತಾಸಾಂಚತುರ್ದಶ ಗ್ರೀವಾಯಾಂ, ಕರ್ಣಯೋಶ್ಚತಸ್ರಃ, ನವಜಿಹ್ವಾಯಾಂ, ಷಣ್ ನಾಸಿಕಾಯಾಂ, ಅಷ್ಟೌನೇತ್ರಯೋಃ ॥ ಏವಮೇತತ್ ಪಂಚ ಸಪ್ತತಿಶತಂ ವಾತವಾಹೀನಾಂ ಸಿರಾಣಾಂ ವ್ಯಾಖ್ಯಾತಂ ಭವತಿ ಏಷಏವ ವಿಭಾಗಃ ಶೇಷಾಣಾಮಪಿ ॥**

ಜತ್ರೂರ್ಧ್ವ ಭಾಗಗಳಲ್ಲಿ (೪೧) ಸಿರಾಗಳಿರುತ್ತವೆ. ಗ್ರೀವಾ(ಕುತ್ತಿಗೆ) ಸ್ಥಾನದಲ್ಲಿ (೧೪) ಸಿರಗಳಿರುತ್ತವೆ. **ಕರ್ಣ** (ಕಿವಿ) ಪ್ರದೇಶಗಳಲ್ಲಿ (೪) ಸಿರಗಳಿರುತ್ತವೆ. **ಜಿಹ್ವಾ** (ನಾಲಿಗೆ) ಭಾಗದಲ್ಲಿ (೯) ಸಿರಗಳು. **ನಾಸಿಕಾ** (ಮೂಗು) ಈ ಸ್ಥಾನದಲ್ಲಿ (೬) ಸಿರಗಳಿರುತ್ತವೆ. **ನೇತ್ರ** (ಕಣ್ಣುಗಳು) ಈ ಸ್ಥಾನಗಳಲ್ಲಿ (೮) ಸಿರಗಳಿರುತ್ತವೆ.

**ಗ್ರೀವಾ (೧೪), ಕರ್ಣ (೪), ಜಿಹ್ವಾ (೯), ನಾಸಿಕಾ (೬), ನೇತ್ರ (೮),** ಈ ಮೊದಲಾದ ಭಾಗಗಳಲ್ಲಿ ಕೂಡಿ ಒಟ್ಟು (೪೧) ವಾತವಾಹಿ ಸಿರಗಳು ಜತ್ರೂರ್ಧ್ವದಲ್ಲಿರುತ್ತವೆ. ಇವುಗಳಷ್ಟೇ ಉಳಿದ ಪ್ರತಿಯೊಂದರ ಸಂಖ್ಯೆಯೂ ಇರುತ್ತದೆ. ಆದರೆ ಪಿತ್ತವಹಾದಿ ಸಿರಗಳು **ಕಣ್ಣುಗಳಲ್ಲಿ (೧೦), ಕಿವಿಗಳಲ್ಲಿ** (೨), ಇರುತ್ತವೆ. ಒಟ್ಟು ಕೇವಲ ವಾತವಾಹಿ ಸಿರ

ಗಳಷ್ಟೇ ಕೂಡಿ ದೇಹದಲ್ಲಿ (೧೭೫) ಇರುತ್ತವೆ. ಉಳಿದ ಪಿತ್ತವಾಹಿನ್ಯಾದಿ ಸಿರಗಳಾದರೂ ಇದರಷ್ಟೇ ಇರುತ್ತವೆ. ಜತ್ರೂರ್ಧ್ವ ಕೆಲ ಪ್ರದೇಶಗಳಲ್ಲಿ ಹೆಚ್ಚು ಕಡಿಮೆ ಇರುತ್ತವೆ. ಅವುಗಳನ್ನು ಕ್ರಮಶಃ ವಿವರಿಸುತ್ತಾರೆ ವಾತಾದಿ ಎಲ್ಲ ಸಿರಗಳು ಕೂಡಿ ಜತ್ರೂರ್ಧ್ವ ಭಾಗಗಳಲ್ಲಿ (೧೬೪) ಇರುತ್ತವೆ.

## ವಿಶೇಷ

**ವಿಶೇಷತಸ್ತು ಪಿತ್ತವಾಹಿನ್ಯೋ ನೇತ್ರಯೋರ್ದಶ, ಕರ್ಣಯೋ ರ್ದ್ವೇ; ಏವಂ ರಕ್ತವಹಾಃ ಕಫವಹಾಶ್ಚ॥ ಏವಮೇತಾನಿ ಸಪ್ತ ಸಿರಾಶತಾನಿ ಸವಿಭಾಗಾನಿವ್ಯಾಖ್ಯಾತಾನಿ ॥**

(ಸುಶ್ರುತ॥ ಶಾರೀರ॥ ಅ ೭ ಸೂ ೭)

ಪಿತ್ತ ಕಫರಕ್ತವಹಾಸಿರಗಳು ನೇತ್ರ ಕರ್ಣಗಳಲ್ಲಿ ಭಿನ್ನವಾಗಿರುತ್ತವೆ ವಿಶೇಷವಾಗಿ ಪಿತ್ತವಾಹಿ ಸಿರಗಳು ಕಣ್ಣುಗಳಲ್ಲಿ (೧೦) ಇರುತ್ತವೆ. ಕಿವಿಗಳಲ್ಲಿ (೨) ಸಿರಗಳಿರುತ್ತವೆ. ಇದರಂತೇ ಕಫರಕ್ತವಹಾ ಸಿರಗಳೂ ಇರುತ್ತವೆಂದು ತಿಳಿಯಬೇಕು. ದೇಹದಲ್ಲಿ ಎಲ್ಲ ಭಾಗಗಳಲ್ಲಿಯೂ ವಾತವಾಹಿಸಿರಗಳಂತೆಯೇ ಉಳಿದವುಗಳಿರುತ್ತವೆ. ಆದರೆ ಜತ್ರೂರ್ಧ್ವದಲ್ಲಿ ಕಣ್ಣು ಕಿವಿ ಭಾಗಗಳಲ್ಲಿ ಪಿತ್ತ ಕಫರಕ್ತವಹಾಸಿರಗಳು ಭಿನ್ನವಿರುವದರಿಂದ ವಿವರಿಸಿದ್ದಾರೆ. ಹೀಗೆ ದೇಹದಲ್ಲಿ (೭೦೦) ಸಿರಗಳನ್ನು ಆವಾವ ವಿಭಾಗಗಳಲ್ಲಿ ಪ್ರತ್ಯೇಕವಾಗಿ ವಿವರಿಸಿದ್ದಾರೆ.

### (೧) ವಾತವಹಾಸಿರಗಳ ಕಾರ್ಯವು

**ಕ್ರಿಯಾಣಾಮಪ್ರತೀಘಾತಮಮೋಹಂಬುದ್ಧಿಕರ್ಮಣಾಂ ॥**
**ಕರೋತ್ಯನ್ಯಾನ್ ಗುಣಾಂಶ್ಚಾಪಿ·ಸ್ವಾಃ ಸಿರಾಃ ಪವನಶ್ಚರನ್ ॥**
**ಯದಾತುಕುಪಿತೋವಾಯುಃ ಸ್ವಾಸಿರಾಃ ಪ್ರತಿಪದ್ಯತೆ ॥**
**ತದಾಸ್ಯವಿವಿಧಾರೋಗಾಜಾಯಂತೇ ವಾತಸಂಭವಾಃ ॥**

(ಸುಶ್ರುತ॥ ಶಾರೀರ॥ ಅ ೭ ಶ್ಲೋ ೯)

ವಾಯುವು ತನ್ನ ಸ್ಥಾನಗಳಲ್ಲಿರುವ ಸಿರಗಳಲ್ಲಿ ಸಂಚರಿಸತಕ್ಕದ್ದಾಗಿ ಸಮಸ್ಥಿತಿಯಲ್ಲಿದ್ದು, ದೇಹದಲ್ಲಿ ಯಾವ ಕ್ರಿಯೆಗಳೂ ತಡೆಯಾಗದಂತೇ ಅಥವಾ ದೇಹವು ಸರಿಯಾಗಿರುವದರಿಂದ ಯಾವ ಕೆಲಸಗಳಲ್ಲಿಯೂ ಅಡ್ಡಿಯಾಗದಂತೆಯೂ, ಬುದ್ಧಿ ಕಾರ್ಯಾದಿಗಳಲ್ಲಿ ಕೂಡ ಸಮರ್ಥವಾದ ಭ್ರಮರಹಿತ ನಿಶ್ಚಯಾತ್ಮಕ ಬುದ್ಧಿಯನ್ನುಂಟು ಮಾಡುತ್ತದೆ. ದೇಹನಿರ್ವಹಣೆಯನ್ನುಸಮಂಜಸವಾಗಿಯೂ ಮತ್ತು ಬುದ್ಧಿಯನ್ನು ಸಹಯೋಗ್ಯ ಸ್ಥಿತಿಯಲ್ಲಿರುವಂತೆಯೂ, ಸಮವಾಗಿರುವ ವಾಯುವು ನಿರ್ವಹಿಸುತ್ತದೆ. ಇನ್ನೂ ಅನೇಕ ಗುಣಗಳನ್ನುಂಟು ಮಾಡುವಂಥದುಸಹ ಆಗಿರುತ್ತದೆ ವಾಯುವು ಪ್ರಕೋಪ ಹೊಂದಿ ತನ್ನ ಸ್ಥಾನದ ಸಿರಗಳಲ್ಲಿ ಸಂಚರಿಸುತ್ತ, ವಿವಿಧವಾದ ವಾತದಿಂದುತ್ಪನ್ನವಾಗುವ ರೋಗಗಳನ್ನುಂಟು ಮಾಡುತ್ತದೆ.

## (೨) ಪಿತ್ತವಹಸಿರಗಳ ಕಾರ್ಯವು

ಭ್ರಾಜಿಷ್ಣುತಾಮನ್ನರುಚಿಮಗ್ನಿದೀಪ್ತಿಮರೋಗತಾಮ್ ॥
ಸಂಸರ್ಪತ್ ಸ್ವಾಃ ಸಿರಾಃ ಪಿತ್ತಂಕುರ್ಯಾಚ್ಚಾನ್ಯಾನ್ ಗುಣಾನಪಿ॥
ಯದಾಪ್ರಕುಪಿತಂ ಪಿತ್ತಂ ಸೇವತೇಸ್ವವಹಾಃ ಸಿರಾಃ॥
ತದಾಸ್ಯವಿವಿಧಾರೋಗಾಜಾಯಂತೇ ಪಿತ್ತಸಂಭವಾಃ॥

(ಸುಶ್ರುತ॥ ಶಾರೀರ॥ ಅ ೭ ಶ್ಲೋ ೧೧)

ಪಿತ್ತವು ತನ್ನ ಸ್ಥಾನದಲ್ಲಿಯ ಸಿರಗಳಲ್ಲಿ ಸಂಚರಿಸತಕ್ಕದ್ದಾಗಿ ಸಮಸ್ಥಿತಿಯಲ್ಲಿದ್ದು, ದೇಹದಲ್ಲಿ ಕಾಂತಿಯನ್ನೂ ಅನ್ನ ರುಚಿಯನ್ನೂ (ಅನ್ನಾಪೇಕ್ಷೆ), ಜಠರಾಗ್ನಿ ಪ್ರದೀಪವಾಗುವಂತೆಯೂ ಮಾಡುತ್ತದೆ. ರೋಗ ರಹಿತ ನಿರೋಗ ಸ್ಥಿತಿಯನ್ನುಂಟು ಮಾಡುತ್ತದೆ. ಸಮಸ್ಥಿತಿಯಲ್ಲಿ ಸ್ವಸಿರಗಳಲ್ಲಿ ಸಂಚರಿಸುವ ಪಿತ್ತವು ಇನ್ನೂ ಅನೇಕ ಗುಣಗಳನ್ನುಂಟು ಮಾಡುತ್ತದೆ. ಪಿತ್ತವು ಪ್ರಕೋಪ ಹೊಂದಿ ತನ್ನ ಸ್ಥಾನದಲ್ಲಿ ಸಂಚರಿಸುತ್ತ ದೇಹದಲ್ಲಿ ನಾನಾತರವಾದ ಪಿತ್ತಜ ರೋಗಗಳನ್ನುಂಟು ಮಾಡುತ್ತದೆ

## (೩) ಕಫವಾಹಿಸಿರಗಳ ಕಾರ್ಯವು

ಸ್ನೇಹಮಂಗೇಷುಸಂಧಿನಾಂ ಸ್ಥೈರ್ಯಂ ಬಲಮುದೀರ್ಣತಾಂ॥
ಕರೋತ್ಯನ್ಯಾನ್ ಗುಣಾಂಶ್ಚಾಪಿಬಲಾಸಃ ಸ್ವಾಃ ಸಿರಾಶ್ಚರನ್॥
ಯದಾತುಕುಪಿತಃ ಶ್ಲೇಷ್ಮಾಸ್ವಾಃ ಸಿರಾಃ ಪ್ರತಿಪದ್ಯತೇ॥
ತದಾಸ್ಯವಿವಿಧಾರೋಗಾಜಾಯಂತೇ ಶ್ಲೇಷ್ಮಸಂಭವಾಃ॥
(ಸುಶ್ರುತ॥ ಶಾರೀರ॥ ಅ ೭ ಶ್ಲೋ ೧೩)

ಕಫವು ಸಮಸ್ಥಿತಿಯಲ್ಲಿದ್ದು ತನ್ನ ಸ್ಥಾನಗಳಲ್ಲಿರುವ ಸಿರಗಳಲ್ಲಿ ಸಂಚರಿಸುತ್ತಾ, ಅವಯವಗಳಲ್ಲಿ ಸ್ನಿಗ್ಧತೆಯನ್ನೂ ಸಂಧಿಗಳಲ್ಲಿ ಸ್ಥೈರ್ಯವನ್ನೂ ಬಲದ ಹೆಚ್ಚುವಿಕೆಯನ್ನೂ ಉಂಟುಮಾಡುತ್ತದೆ ಸಮಸ್ಥಿತಿಯಲ್ಲಿ ಸ್ವಸ್ಥಾನ ಸಿರಗಳಲ್ಲಿ ಸಂಚರಿಸುವ ಕಫವು ಇನ್ನೂ ಅನೇಕ ವಿಶೇಷ ಗುಣಗಳನ್ನುಂಟು ಮಾಡುತ್ತದೆ. ಪ್ರಕೋಪವನ್ನು ಹೊಂದಿದ ಕಫವು ಸಿರಗಳ ಮುಖಾಂತರ ದೇಹದಲ್ಲಿ ಸಂಚರಿಸುತ್ತ ವಿವಿಧವಾದ ಶ್ಲೇಷ್ಮಜ ರೋಗಗಳನ್ನುಂಟು ಮಾಡುತ್ತದೆ.

## (೪) ರಕ್ತವಾಹಿಸಿರಗಳ ಕಾರ್ಯವು

ಧಾತೂನಾಂ ಪೂರಣಂ ವರ್ಣಂ ಸ್ಪರ್ಶಜ್ಞಾನಮಸಂಶಯಮ್॥
ಸ್ವಾಃ ಸಿರಾಃ ಸಂಚರದ್ರಕ್ತಂಕುರ್ಯಾಚ್ಚಾನ್ಯಾನ್ ಗುಣಾನಪಿ॥
ಯದಾತುಕುಪಿತಂ ರಕ್ತಂ ಸೇವತೇಸ್ವವಹಾಃ ಸಿರಾಃ॥
ತದಾಸ್ಯವಿವಿಧಾರೋಗಾಜಾಯಂತೇ ರಕ್ತಸಂಭವಾಃ॥
(ಸುಶ್ರುತ॥ ಶಾರೀರ॥ ಅ ೭ ಶ್ಲೋ ೧೫)

ರಕ್ತವು ಸಮಸ್ಥಿತಿಯಲ್ಲಿದ್ದು ತನ್ನ ಸ್ಥಾನಗಳಲ್ಲಿರುವ ಸಿರಗಳಲ್ಲಿ ಸಂಚರಿಸುತ್ತಾ, ಶರೀರ ಧಾತುಗಳ ಹೆಚ್ಚುವಿಕೆಯನ್ನೂವರ್ಣಕಾಂತಿಗಳನ್ನೂ ಸ್ಪರ್ಶಜ್ಞಾನವನ್ನೂ ಮಾಡುತ್ತದೆ. ಯೋಗ್ಯ ಸ್ಥಿತಿಯಲ್ಲಿರುವ ರಕ್ತವು ಇನ್ನೂ ಅನೇಕ ಗುಣಗಳನ್ನುಂಟುಮಾಡುತ್ತದೆ ಪ್ರಕೋಪಹೊಂದಿದ ರಕ್ತವು ಸ್ವಸಿರಗಳಲ್ಲಿ ಸಂಚರಿಸಿ ವಿವಿಧವಾದ ರಕ್ತಜ ರೋಗಗಳನ್ನುತ್ಪನ್ನಮಾಡುತ್ತದೆ.

## ಸರ್ವ ವಹಾ ಸಿರಗಳು

**ನಹಿವಾತಂ ಸಿರಾಃ ಕಾಶ್ಚಿನ್ನಪಿತ್ತಂ ಕೇವಲಂ ತಥಾ ॥**
**ಶ್ಲೇಷ್ಮಾಣಂ ವಾ ವಹಂತ್ಯೇತಾಅತಃ ಸರ್ವವಹಾಃ ಸ್ಮೃತಾಃ ॥**

(ಸುಶ್ರುತ॥ ಶಾರೀರ॥ ಅ. ೭ ಶ್ಲೋ೹ ೧೬)

ಸಿರಗಳು ಕೇವಲ ವಾತವನ್ನೇ ವಹನವಮಾಡುವದಿಲ್ಲ. ಇದರಂತೇ ಕೇವಲ ಪಿತ್ತ ಕಫ ರಕ್ತಗಳನ್ನೇ ಪ್ರತ್ಯೇಕ ವಹಸುವ ಸಿರಗಳಿರುವದಿಲ್ಲ ಆದ್ದರಿಂದ ಸಿರಗಳು ಸರ್ವ ವಹಾ ಎಂದು ಹೇಳಲ್ಪಡುತ್ತವೆ ಅರ್ಥಾತ್ ಸಮಗ್ರ ದೇಹದಲ್ಲಿ ಪ್ರತಿಯೊಂದು ಭಾಗಗಳಲ್ಲಿ ಎಲ್ಲಿಯೂ ಬಿಡದೇ ವಾತ ಪಿತ್ತ ಕಫ ರಕ್ತಗಳು ವ್ಯಾಪಿಸಿಕೊಂಡಿರುವದರಿಂದ, ಸಿರಾ ಮಾರ್ಗವಾಗಿಯೇ ದೇಹದಲ್ಲಿ ಸಂಚರಿಸಬೇಕಾಗಿರುತ್ತದೆಯಾದ್ದರಿಂದ ಸಿರಗಳಲ್ಲಿಯೇ ಎಲ್ಲವುಗಳೂ ಚಲಿಸುತ್ತವೆ ಹೀಗೆ ವಾತಾದಿಗಳೆಲ್ಲವೂ ಸಿರಾ ಮಾರ್ಗವಾಗಿಯೇ ಸಂಚಾರ ಮಾಡುವದರಿಂದ ಸಿರಗಳು "ಸರ್ವವಹಾ" ಎಲ್ಲವುಗಳನ್ನು ಒಯ್ಯುವಂಥವು ಗಳೆಂದು ಹೇಳಿದ್ದಾರೆ. ಇಲ್ಲಿ ಸಮಗ್ರ ದೇಹದಲ್ಲಿ ಪ್ರತಿಯೊಂದರ ವ್ಯಾಪಕತ್ವ ದಿಂದ ಹೀಗೆ ವಿವರಿಸಿದ್ದಾರೆ. ವಿಭಾಗಶಃ ವಾತಾದಿ ಸ್ಥಾನಗಳಲ್ಲಿ ಆವಾವ ಸಿರಗಳ ವಿಶೇಷ ಸ್ಥಿತಿಗಳನ್ನು ಹೇಳಿರುವದು, ಆಶ್ರಯ ಸ್ಥಾನ ಸ್ಥಿತಿಗಳನ್ನು ಬೋಧಿಸಲು ವಿವರಿಸಿದ್ದಾರೆ ಇದರಿಂದ ವಿರೋಧ ಸಂಭವಿಸುವದಿಲ್ಲ. ಯಾಕೆಂದರೆ ಸಮಗ್ರ ದೇಹದಲ್ಲಿ ವಾತಾದಿಗಳು ವ್ಯಾಪಕವಾಗಿರುವದರಿಂದ "ಸರ್ವವಹಾ" ಎಂದೂ, ಆಶ್ರಯ ಸ್ಥಾನ ಮತ್ತು ಸ್ಥಿತಿ ವಿಭಾಗಗಳಿಂದ "ವಾತವಹಾ" ಮೊದಲಾದ ಭೇದಗಳು ಸಮಂಜಸವಾಗಿರುತ್ತವೆ. ಪೂರ್ವದಲ್ಲಿ ವಾತವಹಾದಿ ಸಿರಗಳೆಂದು ಭೇದಮಾಡಿದ್ದಕ್ಕೆ ಇದು ವಿರೋಧವಾಗಿರುವದಿಲ್ಲ ವೆಂದು ತಿಳಿಯಬೇಕು. ಇದು ದೇಹದಲ್ಲಿ ವಾತಾದಿ ದೋಷಗಳು ಸಮ ಸ್ಥಿತಿಯಲ್ಲಿದ್ದಾಗಿನ "ಸರ್ವವಹಾ" ಸಿರಗಳ ವಿವರಣೆಯೆಂದು ತಿಳಿಯಬೇಕು. ಇದರಿಂದ. ರೋಗೋತ್ಪತ್ತಿಯಾಗದೇ ಆರೋಗ್ಯವಿರುತ್ತದೆ ದೋಷಗಳು ಪ್ರಕೋಪಹೊಂದಿ ಸಮಗ್ರದೇಹದ ಸರ್ವ ಸಿರಗಳಲ್ಲಿಯೂ ಸಂಚರಿಸುತ್ತವೆ. ಪ್ರಕೋಪಹೊಂದಿ ಸಂಚರಿಸುವ ದೋಷಮಾರ್ಗವಾದ ಸಿರಗಳಿಗೂ, "ಸರ್ವ

ವಹಾಃ" ಎಂದು ಹೇಳಿದ್ದಾರೆ. ಪ್ರಕೋಪಹೊಂದಿದಾಗ ರೋಗೋತ್ಪತ್ತಿಯೂ ಗುತ್ತದೆ, ಇಲ್ಲವೇ ಆರೋಗ್ಯವಿರುವದಿಲ್ಲ ಇಲ್ಲವೇ ಸಮ ಸ್ಥಿತಿ ಪ್ರಕೋಪ ಹೊಂದಿದ ದೋಷವಹನಮಾಡುವ, ಎರಡೂ ವಿಧ ಸಿರಗಳಿಗೂ "ಸರ್ವ ವಹಾಃ ಎಂದು ಹೇಳುತ್ತಾರೆ ಇವುಗಳಲ್ಲಿಯ ಪರಿಣಾಮಗಳಿಂದಲೇ ಹಿಂದೆ ವಿವರಿಸಿದಂತೆ ಭೇದಗಳನ್ನು ತಿಳಿಯಬೇಕು.

**ಪ್ರದುಷ್ಟಾನಾಂಹಿ ದೋಷಾಣಾಂ ಮೂರ್ಛಿತಾನಾಂ ಪ್ರಧಾವತಾಂ ||**
**ಧ್ರುವಮುನ್ಮಾರ್ಗಗಮನಮತಃ ಸರ್ವವಹಾಃ ಸ್ಮೃತಾಃ ||**

(ಸುಶ್ರುತ|| ಶಾರೀರ|| ಅ ೭ ಶ್ಲೋ ೧೭)

ದೋಷಗಳು ಪ್ರಕೋಪಹೊಂದಿ ಪರಸ್ಪರ ಮಿಲಿತವಾಗಿ ಎಲ್ಲ ಕಡೆಗೂ ಸಂಚರಿಸುತ್ತವೆ. ಇಂಥ ಪ್ರಕುಪಿತ ದೋಷಮಾರ್ಗವಾದ ಸಿರಗಳು "ಸರ್ವ ವಹಾ" ಎಂದು ಹೇಳಲ್ಪಡುತ್ತವೆ ಅಥವಾ ಕೆಲವು ಸ್ಥಾನ ಆಶ್ರಯಗಳಲ್ಲಿ ವಿಶೇಷ ಸ್ಥಿತಿಯುಳ್ಳ ವಾತಾದಿಗಳು, ಎಲ್ಲ ಕಡೆಗಳಲ್ಲಿಯೂ ಅತಿಕ್ರಮಿಸಿ ಚಲಿಸುವದರಿಂದಲೂ ಹೀಗೆ ಹೇಳಿದ್ದಾರೆ.

## ವಾತವಹಾದಿ ಸಿರಾಗಳ ವರ್ಣವು

**ತತ್ರಾರುಣಾ ವಾತವಹಾಃ ಪೂರ್ಯಂತೇ ವಾಯುನಾ ಸಿರಾಃ||**
**ಪಿತ್ತಾದುಷ್ಣಾಶ್ಚನೀಲಾಶ್ಚ, ಶೀತಾಗೌರ್ಯಃ ಸ್ಥಿರಾಃ ಕಫಾತ್||**
**ಅಸೃಗ್ವಹಾಸ್ತು ರೋಹಿಣ್ಯಃ ಸಿರಾನಾತ್ಯುಷ್ಣಶೀತಲಾಃ ||**

(ಸುಶ್ರುತ|| ಶಾರೀರ|| ಅ. ೭ ಶ್ಲೋ. ೧೮)

೧ ವಾಯುವಿನಿಂದ ತುಂಬಲ್ಪಡುತ್ತಿರುವ ವಾತವಹಾ ಸಿರಗಳು, ನಸುಗೆಂಪು [ಅರುಣ] ವರ್ಣವುಳ್ಳವುಗಳಾಗಿರುತ್ತವೆ. ಅರ್ಥಾತ್ ವಾತವಹಾ ಸಿರಗಳ ಬಣ್ಣವು ಅರುಣ [ಸ್ವಲ್ಪ ಕೆಂಪುಳ್ಳದ್ದು] ಇರುತ್ತದೆ.

೨ ಪಿತ್ತವಾಹೀ ಸಿರಗಳು ನೀಲವರ್ಣವುಳ್ಳವುಗಳೂ ಬಿಸಿಯುಳ್ಳವುಗಳೂ ಇರುತ್ತವೆ

೩ ಕಫವಹಾ ಸಿರಗಳು ಶ್ವೇತವರ್ಣಯುಕ್ತವೂ ಶೀತವುಳ್ಳವೂ ಜಡ [ಮಂದ, ಸಾವಕಾಶ ಚಲನ] ವಾದವೂ ಇರುತ್ತವೆ,

೪ ರಕ್ತವಾಹೀ ಸಿರಗಳು ಸಮಶೀತೋಷ್ಣವುಳ್ಳವು "ರೋಹಿಣೀ" ಎಂಬ ಹೆಸರುಳ್ಳವೂ ಇರುತ್ತವೆ

## ಅವ್ಯಧ್ಯ ಸಿರಗಳು

ದೇಹದಲ್ಲಿ ಯಾವ ಸಿರಗಳನ್ನು ವ್ಯಧನ ಮಾಡುವದರಿಂದ ದೋಷ ಪ್ರಕೋಪವಾಗುವದೋ ಮತ್ತು ಸಿರಾ ಮರ್ಮ ಮೊದಲಾದವುಗಳಲ್ಲಿ ತೀವ್ರ ಹಾನಿ ಸಂಭವಿಸುತ್ತದೆಯೋ ಅಂಥವುಗಳು ವ್ಯಧನ ಮಾಡದಿರುವ ಸಿರಗಳು (ಅವ್ಯಧ್ಯ) ಆಗಿರುತ್ತವೆ ಇವುಗಳಲ್ಲಿ ಶಸ್ತ್ರ ಕರ್ಮಗಳನ್ನು ಸಹ ಮಾಡ ಕೂಡದಾದ್ದರಿಂದ, "ಅಶಸ್ತ್ರಕೃತ್ಯಾಃ" ಎಂದು ಹೇಳಿದ್ದಾರೆ. ಅವ್ಯಧ್ಯ (ಅಶಸ್ತ್ರಕೃತ್ಯ) ಸಿರಗಳಲ್ಲಿ ವ್ಯಧನ ಶಸ್ತ್ರಕರ್ಮಗಳನ್ನು ಮಾಡಿದರೆ ಅದರಿಂದ, ವೈಕಲ್ಯ (ಊನತೆ) ಮರಣಗಳು ಸಹ ಉಂಟಾಗುತ್ತವೆ.

**ಅತಊರ್ಧ್ವಂ ಪ್ರವಕ್ಷ್ಯಾಮಿ ನವಿಧ್ಯೇದ್ಯಾಃಸಿರಾಭಿಷಕ್ ॥**
**ವೈಕಲ್ಯಂಮರಣಂ ಚಾಪಿವ್ಯಧಾತ್ತಾಸಾಂ ಧ್ರುವಂಭವೇತ್ ॥**

(ಸುಶ್ರುತ॥ ಶಾರೀರ॥ ಅ ೭ ಶ್ಲೋ ೧೯)

ವೈದ್ಯನು ಯಾವಸಿರಗಳನ್ನು ವ್ಯಧನಮಾಡಬಾರದೆಂಬುವದನ್ನು ಹೇಳು ತ್ತೇನೆ. ಇಂಥ ಅವ್ಯಧ್ಯ ಸಿರಗಳ ವ್ಯಧನದಿಂದ ವೈಕಲ್ಯ ಅಥವಾ ಮರಣವು ಸಹ ನಿಶ್ಚಯವಾಗಿ ಸಂಭವಿಸುತ್ತವೆ. ಆದ್ದರಿಂದ ಅವ್ಯಧ್ಯಸಿರಗಳಲ್ಲಿ ವ್ಯಧನ ಶಸ್ತ್ರಕರ್ಮ ಮೊದಲಾದವುಗಳನ್ನು ಮಾಡಬಾರದು

**ಸಿರಾಶತಾನಿಚತ್ವಾರಿವಿದ್ಯಾಚ್ಛಾಖಾಸುಬುಧ್ಧಿಮಾನ್ ॥**
**ಷಟ್ ತ್ರಿಂಶಚ್ಛ ಶತಂಕೋಷ್ಠೇಚತುಃ ಷಷ್ಠಂಚಮೂರ್ಧನಿ॥**

(ಸುಶ್ರುತ॥ ಶಾರೀರ॥ ಅ ೭ ಶ್ಲೋ ೨೦)

(೧) **ಶಾಖಾ ಪ್ರದೇಶಗಳಲ್ಲಿ** (೪೦೦) ಸಿರಗಳಿರುತ್ತವೆ. (೨) **ಕೋಷ್ಠದಲ್ಲಿ** (೧೩೬) ಸಿರಗಳಿರುತ್ತವೆ. (೩) **ಮೂರ್ಧಾಪ್ರದೇಶಗಳಲ್ಲಿ** (೧೬೪) ಸಿರಗಳಿರುತ್ತವೆ. ಸಿರಾವ್ಯಧನ ಶಸ್ತ್ರಕರ್ಮಗಳನ್ನು ಮಾಡುವ ಬುದ್ಧಿವಂತನಾದ ವೈದ್ಯನು ಇವುಗಳನ್ನು ತಿಳಿದಿರಲೇಬೇಕಾಗುತ್ತದೆ.

**ವಿಭಾಗಶಃ ಅವ್ಯಧ್ಯಸಿರಗಳು**

**ಶಾಖಾಸುಷೋಡಶಸಿರಾಃ ಕೋಷ್ಠೇದ್ವಾತ್ರಿಂಶದೇವತು ॥**
**ಪಂಚಾಶಜ್ಜತ್ರುಣಶ್ಚೋರ್ಧ್ವಮವ್ಯಧ್ಯಾಃ ಪರಿಕೀರ್ತಿತಾಃ ॥**

(ಸುಶ್ರುತ॥ ಶಾರೀರ॥ ಅ ೭ ಶ್ಲೋ ೨೧)

ಅವ್ಯಧ್ಯ ಸಿರಗಳ ವಿವರಣೆಯು:— (೧) **ಶಾಖಾಪ್ರದೇಶಗಳಲ್ಲಿ** (೧೬) ಸಿರಗಳು. (೨) **ಕೋಷ್ಠ ಭಾಗಗಳಲ್ಲಿ** (೩೨) ಸಿರಗಳಿರುತ್ತವೆ. (೩) **ಜತ್ರೂರ್ಧ್ವದಲ್ಲಿ** (೫೦) ಸಿರಗಳು ಇರುತ್ತವೆ. ಇವು ಪ್ರತಿಯೊಂದು ಭಾಗಗಳಲ್ಲಿರುವ ಅವ್ಯಧ್ಯಸಿರಗಳಾಗಿರುತ್ತವೆ. ಒಟ್ಟು ಕೂಡಿ ದೇಹದಲ್ಲಿ (೯೮) ಅವ್ಯಧ್ಯಸಿರಗಳಿರುತ್ತವೆಂದು ತಿಳಿಯಬೇಕು.

**ಸಿರಾಶತಾನಾಂ ಸಪ್ತಾನಾಂ ಶರೀರೇಷುಶರೀರಿಣಾಂ ॥**
**ಅಶಸ್ತ್ರಕೃತ್ಯಾನವತಿಸ್ತಥಾಷ್ಟೌಚವಿನಿರ್ದಿಶೇತ್ ॥**

(ಸುಶ್ರುತ॥ ಶಾರೀರ ಅ ೭ ಶ್ಲೋ ೨೨)

ಮನುಷ್ಯರ ದೇಹದಲ್ಲಿ (೭೦೦) ಸಿರಗಳು ಇರುತ್ತವೆ. ಅವುಗಳಲ್ಲಿ (೯೮) ಅವ್ಯಧ್ಯ (ಅಶಸ್ತ್ರಕೃತ್ಯ) ಸಿರಗಳಿರುತ್ತವೆ.

## ಶಾಖಾಗತ ಅವ್ಯಧ್ಯ ಸಿರಗಳು

**ತತ್ರಸಿರಾಶತಮೇಕಸ್ಮಿನ್ ಸಕ್ಥ್ನಿ ಭವತಿ; ತಾಸಾಂಜಾಲಧರಾ ತ್ವೇಕಾ, ತಿಸ್ರಶ್ಚಾಂಭ್ಯಂತರಾಃ:- ತತ್ರಉರ್ವೀಸಂಜ್ಞೇದ್ವೇ, ಲೋಹಿತಾಕ್ಷಸಂಜ್ಞಾಚೈಕಾ, ತಾಸ್ತ್ವವ್ಯಧ್ಯಾಃ; ಏತೇನೇತರ ಸಕ್ಥಿಬಾಹೂಚವ್ಯಾಖ್ಯಾತೌ ॥ ಏವಮಶಸ್ತ್ರಕೃತ್ಯಾಃ ಷೋಡಶ ಶಾಖಾಸು ॥** (ಸುಶ್ರುತ॥ ಶಾರೀರ॥ ಅ ೭ ಸೂ ೨೨)

ಒಂದು ಕಾಲಿನಲ್ಲಿ (೧೦೦) ಸಿರಗಳಿರುತ್ತವೆ ಅವುಗಳಲ್ಲಿ ಅವ್ಯಧ್ಯ ಸಿರಗಳು ಇಂತಿರುತ್ತವೆ. ಜಾಲಧರಾ (ಮಾಂಸಸಿರಾ ಸ್ನಾಯು ಅಸ್ಥಿಗಳ ಜಾಲವನ್ನು ಧಾರಣೇ ಮಾಡುವಂಥಾದ್ದು) (೧), ಒಳಭಾಗದಲ್ಲಿ (೩) ಸಿರಗಳಿರುತ್ತವೆ ಅವುಗಳಲ್ಲಿ:- ಉರ್ವೀಸಂಜ್ಞೇ (ಉರ್ವೀ ಎಂಬ ಹೆಸರುಳ್ಳ ಮರ್ಮಸ್ಥಾನ ಸಿರಗಳು) (೨), ಲೋಹಿತಾಕ್ಷ (ಲೋಹಿತಾಕ್ಷಮರ್ಮ ಸ್ಥಾನದಲ್ಲಿ ಸಿರಾ) (೧), ಹೀಗೆ ಆಯಾಯ ಸ್ಥಾನಗಳಲ್ಲಿ ಕೂಡಿ ಒಳಭಾಗದಲ್ಲಿ (೩) ಸಿರಗಳಿರುತ್ತವೆ ಒಳಭಾಗದಲ್ಲಿರುವ ಇವುಗಳು (೩), ಜಾಲಧರಾ (೧), ಒಟ್ಟು ಒಂದು ಕಾಲಿನಲ್ಲಿ (೪) ಅವ್ಯಧ್ಯಸಿರಗಳಿರುತ್ತವೆ

ಇದರಂತೆ ಎರಡೂ ಕಾಲು ಕೈಗಳಲ್ಲಿ ಕೂಡಿ ಶಾಖಾ ಪ್ರದೇಶಗಳಲ್ಲಿ (೧೬) ಅವ್ಯಧ್ಯಸಿರಗಳಿರುತ್ತವೆ ಅವ್ಯಧ್ಯಸಿರ ಗಳಿಗೆ"ಅಶಸ್ತ್ರಕೃತ್ಯಾ"ಎಂತಲೂ ಹೇಳುತ್ತಾರೆ

## ಶ್ರೋಣಿ (ಕಟಿ) ಯಲ್ಲಿಯ ಅವ್ಯಧ್ಯ ಸಿರಗಳು

**ದ್ವಾತ್ರಿಂಶತ್ ಶ್ರೋಣ್ಯಾಂ, ತಾಸಾಮಷ್ಟಾವಶಸ್ತ್ರಕೃತ್ಯಾಃ,- ದ್ವೇದ್ವೇವಿಟಪಯೋಃ ಕಟೀಕ ತರುಣಯೋಶ್ಚ ॥**
(ಸುಶ್ರುತ॥ ಶಾರೀರ॥ ಅ ೭ ಸೂ ೨೨)

ಕಟಿಪ್ರದೇಶದಲ್ಲಿ (೩೨) ಸಿರಗಳಿರುತ್ತವೆ. ಅವುಗಳಲ್ಲಿ (೮) ಅವ್ಯಧ್ಯಸಿರ ಗಳಾಗಿರುತ್ತವೆ. **ವಿಟಪೆ** (ವಿಟಪ ಸಂಜ್ಞೆಯುಳ್ಳ ಎರಡು ಮರ್ಮಗಳು) ಇವು

ಗಳಲ್ಲಿಪ್ರತಿಯೊಂದರಲ್ಲಿ ಎರಡರಂತೇ (೪) ಸಿರಗಳು. ಕಟೀಕತರುಣ (ಇವು ಎರಡು ಮರ್ಮಗಳು) ಪ್ರತಿಯೊಂದರಲ್ಲಿ ಎರಡರಂತೇ ಇವುಗಳಲ್ಲಿ (೪) ಸಿರಗಳು ಅವ್ಯಧ್ಯವಾಗಿರುತ್ತವೆ ಒಟ್ಟು ಶ್ರೋಣಿ ಪ್ರದೇಶಗಳಲ್ಲಿ (೮) ಅಶಸ್ತ್ರಕೃತ್ಯ ಸಿರಗಳಿರುತ್ತವೆ.

## ಪಾರ್ಶ್ವಗತ ಅವ್ಯಧ್ಯಗಳು

**ಅಷ್ಟಾವಷ್ಟಾವೇಕೈಕಸ್ಮಿನ್ ಪಾರ್ಶ್ವೇ, ತಾಸಾಮೇಕೈಕಾಮೂರ್ಧ್ವಗಾಂಪರಿಹರೇತ್ ಪಾರ್ಶ್ವಸಂಧಿಗತೇಚದ್ವೇ ॥**
[ಸು॥ ಶಾ॥ ಅ ೭ ಸೂ ೨೨]

ಎಡಬಲ ಪಕ್ಕ (ಪಾರ್ಶ್ವ) ಗಳಲ್ಲಿ ಎಂಟೆಂಟರಂತೆ ಒಟ್ಟು (೧೬) ಸಿರಗಳಿರುತ್ತವೆ. ಇವುಗಳಲ್ಲಿ ಮೇಲ್ಗಡೆಗೆ ಹೋದ ಪ್ರತಿಯೊಂದು ಪಾರ್ಶ್ವದಲ್ಲಿ ಒಂದೊಂದರಂತೆ ಒಟ್ಟು (೨) ಸಿರಗಳು ಅವ್ಯಧ್ಯವಾಗಿರುತ್ತವೆ. ಈ ಸಿರಗಳು **"ಪಾರ್ಶ್ವಸಂಧಿ"** ಮರ್ಮಗಳಲ್ಲಿ ಹೋಗಿರುವದರಿಂದ ಆ ಸಂಜ್ಞೆಯುಳ್ಳವುಗಳಾಗಿರುತ್ತವೆ. ಹೀಗೆ ಪಾರ್ಶ್ವ ಭಾಗಗಳಲ್ಲಿ (೨) ಸಿರಗಳು ಅವ್ಯಧ್ಯವಾಗಿರುತ್ತವೆ.

## ಪೃಷ್ಠದಲ್ಲಿಯ ಅವ್ಯಧ್ಯಸಿರಗಳು

**ಚತಸ್ರೋವಿಂಶತಿಶ್ಚ ಪೃಷ್ಠೇ ಪೃಷ್ಠವಂಶಮುಭಯತಃ, ತಾಸಾಮೂರ್ಧ್ವಗಾಮಿನ್ಯೌ ದ್ವೇದ್ವೇ ಪರಿಹರೇತ್ ಬೃಹತೀ ಸಿರೇ ॥**
[ಸು॥ ಶಾ॥ ಅ ೭ ಸೂ ೨೨]

ಪೃಷ್ಠ (ಬೆನ್ನು) ಪ್ರದೇಶಗಳಲ್ಲಿ ಬೆನ್ನು ಹುರಿಯ ಎರಡೂ ಕಡೆಗಳಲ್ಲಿ ಕೂಡಿ (೨೪) ಸಿರಗಳಿರುತ್ತವೆ. ಮೇಲ್ಗಡೆಗೆ ಹೋದ ಎರಡೂ ಪಾರ್ಶ್ವಗಳಲ್ಲಿ ಬೃಹತೀಸಿರೇ ( ಇವೆರಡು ಮರ್ಮಗಳು ) ಇವುಗಳಲ್ಲಿ ಪ್ರತಿಯೊಂದರಲ್ಲಿ ಎರಡರಂತೆ (೪) ಅವ್ಯಧ್ಯ ಸಿರಗಳಿರುತ್ತವೆ. ಇವುಗಳು ದೊಡ್ಡದಾದ ಸಿರಗಳಿರುವದರಿಂದಲೂ ''ಬೃಹತೀಸಿರೇ" ಎಂದು ಹೇಳಿದ್ದಾರೆ.

## ಹೊಟ್ಟೇ ಪ್ರದೇಶದಲ್ಲಿ ಅವ್ಯಧ್ಯಗಳು

ತಾವತ್ಯ ಏವೋದರೇ (೨೪), ತಾಸಾಂ ಮೇಢ್ರೋಪರಿರೋಮ
ರಾಜೀಮುಭಯತೋ ದ್ವೇದ್ವೇ ಪರಿಹರೇತ್ ॥

(ಸುಶ್ರುತ॥ ಶಾರೀರ॥ ಅ ೭ ಸೂ ೨೨)

ಉದರ (ಹೊಟ್ಟೆ) ಪ್ರದೇಶಗಳಲ್ಲಿ (೨೪) ಸಿರಗಳಿರುತ್ತವೆ ಅವುಗಳಲ್ಲಿ ಶಿಶ್ನದ (ಲಿಂಗ) ಮೇಲ್ಗಡೆ ರೋಮರಾಜಿಯ (ಕೂದಲಿನ ಗೆರೆ) ಎರಡೂ ಕಡೆಗಳಲ್ಲಿ ಎರಡೆರಡರಂತೆ (೪) ಸಿರಗಳು ಅವ್ಯಧ್ಯವಾಗಿರುತ್ತವೆ

## ಎದೆಯ ಸ್ಥಾನದಲ್ಲಿ ಅವ್ಯಧ್ಯ ಸಿರಗಳು

ಚತ್ವಾರಿಂಶದ್ವಕ್ಷಸಿ, ತಾಸಾಂಚತುರ್ದಶ ಅಶಸ್ತ್ರಕೃತ್ಯಾಃ :—
ಹೃದಯೇ ದ್ವೇ, ದ್ವೇದ್ವೇಸ್ತನಮೂಲೇ, ಸ್ತನರೋಹಿತಾಪ
ಲಾಪಸ್ತಂಭೇಷೂಭಯತೋಽಷ್ಟೌ ॥ ಏವಂದ್ವಾತ್ರಿಂಶದಶಸ್ತ್ರ
ಕೃತ್ಯಾಃ, ಪೃಷ್ಠೋದರೋರಃಸು ಭವಂತಿ ॥

(ಸುಶ್ರುತ॥ ಶಾರೀರ॥ ಅ ೭ ಸೂ ೨೨)

ಎದೆ ಭಾಗಗಳಲ್ಲಿ (ವಕ್ಷಸಿ) ವ್ಯಾಪಿಸಿರುವ ಸಿರಗಳು (೪೦) ಇರುತ್ತವೆ ಅವುಗಳಲ್ಲಿ (೧೪)ಸಿರಗಳು ಅವ್ಯಧ್ಯವಾಗಿರುತ್ತವೆ. ಕೆಳಗೆ ಅವುಗಳ ವಿವರಣೆ:- ಹೃದಯದಲ್ಲಿ (೨), ಸ್ತನಮೂಲಗಳಲ್ಲಿ ಎರಡೂ ಕಡೆ ಒಟ್ಟು (೪), ಸ್ತನರೋಹಿತ (ಎರಡೂ ಕಡೆ ಎರಡೆರಡರಂತೆ) ಮರ್ಮಗಳಲ್ಲಿ ಒಟ್ಟು (೪) ಸಿರಗಳು. ಅಪಲಾಪ, ಅಪಸ್ತಂಭ ಇವುಗಳಲ್ಲಿ ಪ್ರತಿಯೊಂದರ ಎರಡೂ ಪಕ್ಕಗಳಲ್ಲಿ ಒಂದೊಂದರಂತೆ, ಎರಡೂ ಮರ್ಮಗಳಲ್ಲಿಯ ಸಿರಗಳು (೪) ಇರುತ್ತವೆ. ಒಟ್ಟು ಎದೆಯಲ್ಲಿ (೧೪) ಅವ್ಯಧ್ಯ ಸಿರಗಳಿರುತ್ತವೆ.

ಶ್ರೋಣಿ (೮), ಪಾರ್ಶ್ವ (೨), ಪೃಷ್ಠ (೪), ಉದರ (೪), ವಕ್ಷಸಿ (೧೪), ಈ ಮೊದಲಾದ ಸ್ಥಾನಗಳಲ್ಲಿ ಕೂಡಿ (೩೨) ಸಿರಗಳು

ಅವ್ಯಧ್ಯ (ಅಶಸ್ತ್ರಕೃತ್ಯ) ವಾಗಿರುತ್ತವೆ. ಇವುಗಳು "ಪೃಷ್ಠೋದರ ಉರಃ ಸ್ಥಾನ" ಸಿರಗಳಾಗಿರುತ್ತವೆ

## ಜತ್ರೂರ್ಧ್ವ ಅವ್ಯಧ್ಯಸಿರಗಳು

**ಚತುಃ ಷಷ್ಠಂ ಸಿರಾಶತಂಜತ್ರುಣಊರ್ಧ್ವಂಭವತಿ; ತತ್ರಷಟ್ ಪಂಚಾಶತ್ ಶಿರೋಧರಾಯಾಂ, ತಾಸಾಮಷ್ಟೌಚತಸ್ರಶ್ಚಮ ರ್ಮಸಂಜ್ಞಾಃ ಪರಿಹರೇತ್, ದ್ವೇಕೃಕಾಟಿಕಯೋಃ, ದ್ವೇವಿಧು ರಯೋಃ, ಏವಂಗ್ರೀವಾಯಾಂ ಶೋಡಶಅವ್ಯಧ್ಯಾಃ ||**

(ಸುಶ್ರುತ|| ಶಾರೀರ|| ಅ ೭ ಸೂ ೨೨)

ಜತ್ರೂರ್ಧ್ವ ಪ್ರದೇಶಗಳಲ್ಲಿ (೧೬೪) ಸಿರಗಳಿರುತ್ತವೆ. ಅವುಗಳಲ್ಲಿ ಕುತ್ತಿಗೆಯ ಪ್ರದೇಶದಲ್ಲಿ (೫೬) ಸಿರಗಳಿರುತ್ತವೆ. ಅವುಗಳಲ್ಲಿ (೧೬) ಅವ್ಯಧ್ಯ ಸಿರಗಳು ಇರುತ್ತವೆ. (೮) **ಮಾತೃಕಾಃ** (ಮರ್ಮಗಳು), (೪) **ನೀಲ, ಮನ್ಯ** (ಮರ್ಮಗಳು), (೨) **ಕೃಕಾಟಿಕೇ** (ಮರ್ಮಸ್ಥಾನ), (೨)**ವಿಧುರೇ** (ಮರ್ಮಸ್ಥಾನ) ಈ ಮೊದಲಾದ ಸ್ಥಾನಗಳಲ್ಲಿರುವ ಮರ್ಮಗಳು ಅವ್ಯಧ್ಯ ವಾಗಿರುತ್ತವೆ. "**ಕುತ್ತಿಗೆಯಲ್ಲಿ**" ಒಟ್ಟು ಸಿರಗಳು (೧೬) ಅವ್ಯಧ್ಯವಾಗಿ ರುತ್ತವೆ.

## ಹನುಸ್ಥಾನದ ಅವ್ಯಧ್ಯಸಿರಗಳು

**ಹನ್ವೋರುಭಯತೋಽಷ್ಟಾವಷ್ಟೌ, ತಾಸಾಂತುಸಂಧಿಧಮನ್ಯೌ ದ್ವೇದ್ವೇ ಪರಿಹರೇತ್ ||** (ಸುಶ್ರುತ|| ಶಾರೀರ|| ೨೨)

ಹನು (ಕಪೋಲಗಳ ಕೆಳಭಾಗಗಳು) ಈ ಪ್ರದೇಶಗಳಲ್ಲಿ ಎರಡೂ ಕಡೆ ಗಳಲ್ಲಿ ಎಂಟೆಂಟರಂತೇ (೧೬) ಸಿರಗಳಿರುತ್ತವೆ ಅವುಗಳಲ್ಲಿ **ಹನುಸಂಧಿ** (ಮರ್ಮಗಳು) ಈ ಸ್ಥಾನಗಳಲ್ಲಿ ಎರಡೂ ಕಡೆ ಎರಡೆರಡರಂತೇ (೪) ಧಮನೀ ಗಳು ಅಶಸ್ತ್ರಕೃತ್ಯಗಳಾಗಿರುತ್ತವೆ.

## ನಾಲಿಗೇಸ್ಥಾನದಲ್ಲಿ ಅವ್ಯಧ್ಯ ಸಿರಗಳು

**ಷಟ್ ತ್ರಿಂಶತ್ ಜಿಹ್ವಾಯಾಂ, ತಾಸಾಮಧಃಷೋಡಶ, ಅಶಸ್ತ್ರ ಕೃತ್ಯಾಃರಸವಹೇದ್ವೇ, ವಾಗ್ವಹೇಚದ್ವೇ ॥ (ಸು॥ ಶಾ॥ ೨೨)**

ನಾಲಿಗೇ ಪ್ರದೇಶಗಳಲ್ಲಿ (೩೬) ಸಿರಗಳಿರುತ್ತವೆ ಅವುಗಳಲ್ಲಿ ನಾಲಿಗೆಯ ಕೆಳಭಾಗದಲ್ಲಿ (೧೬) ಸಿರಗಳು ಇರುತ್ತವೆ ರಸವಹೇ (ರಸವನ್ನು ಒಯ್ಯುವಂಥವುಗಳು) ಸಿರಗಳು (೨) ಇರುತ್ತವೆ ವಾಗ್ವಹೇ (ಶಬ್ದ ಉಂಟು ಮಾಡುವ) ಸಿರಗಳು (೨) ಇರುತ್ತವೆ ಒಟ್ಟು ಜಿಹ್ವಾ ಕೆಳಭಾಗದಲ್ಲಿ (೪) ಸಿರಗಳು ಅ್ಯವಧ್ಯವಾಗಿರುತ್ತವೆ.

## ನಾಸಿಕಾಸ್ಥಾನದಲ್ಲಿ ಅವ್ಯಧ್ಯಸಿರಗಳು

**ದ್ವಿದ್ವಾರ್ದಶನಾಸಾಯಾಂ, ತಾಸಾಮೌಪನಾಸಿಕ್ಯಶ್ಚತಸ್ರಃ ಪರಿಹರೇತ್, ತಾಸಾಮೇವಚತಾಲುನ್ಯೇಕಾಂಮೃದಾವುದ್ದೇಶೇ (ಘೋಣಾಸಮೀಪೇ) ॥ [ಸು॥ ಶಾ ೨೨]**

ನಾಸಿಕಾ ಸ್ಥಾನಗಳಲ್ಲಿ (೨೪) ಸಿರಗಳು ಇರುತ್ತವೆ ಅವುಗಳಲ್ಲಿ ಮೂಗಿಗೆ ಹೊಂದಿಕೊಂಡಿರುವ (ಔಪನಾಸಿಕ್ಯಃ) ಅಥವಾ ಸಮೀಪದಲ್ಲಿಯು (೪) ಸಿರಗಳು ಅವ್ಯಧ್ಯವಾಗಿರುತ್ತವೆ. ಇದರಂತೇ ತಾಲುವಿನ (ಅಂಗಳದ) ಮೃದು ಪ್ರದೇಶದಲ್ಲಿ, ಅಥವಾ ನಾಸಿಕಾ ಸಮೀಪದಲ್ಲಿ (೧) ಸಿರವು ಅಶಸ್ತ್ರ ಕೃತ್ಯವಾಗಿರುತ್ತದೆ ಒಟ್ಟು ನಾಸಾ ಸ್ಥಾನದಲ್ಲಿ (೫) ಅಶಸ್ತ್ರಕೃತ್ಯ ಸಿರಗಳು ಇರುತ್ತವೆ.

## ನೇತ್ರಗಳಲ್ಲಿ ಅವ್ಯಧ್ಯ ಸಿರಗಳು

**ಅಷ್ಟತ್ರಿಂಶದುಭಯ ನೇತ್ರಯೋಃ, ತಾಸಾಮೇಕೈಕಾಮಪಾಂಗಯೋಃ ಪರಿಹರೇತ್ ॥ (ಸುಶ್ರುತ॥ ಶಾರೀರ॥ ೨೨)**

ಎರಡೂ ಕಣ್ಣುಗಳಲ್ಲಿ ಕೂಡಿ (೩೮) ಸಿರಗಳಿರುತ್ತವೆ. ಅವುಗಳಲ್ಲಿ **ಅಪಾಂಗ** (ಎರಡು ಮರ್ಮಗಳು) ಇವುಗಳಲ್ಲಿ ಪ್ರತಿಯೊಂದರಲ್ಲಿಯೂ ಒಂದೊಂದರಂತೆ (೨) ಸಿರಗಳು ಅವ್ಯಧ್ಯವಾಗಿರುತ್ತವೆ

## ಕಿವಿಗಳಲ್ಲಿಯು ಅವ್ಯಧ್ಯ ಸಿರಗಳು

**ಕರ್ಣಯೋರ್ದಶ, ತಾಸಾಂ ಶಬ್ದವಾಹಿನೀಮೇಕೈಕಾಂ ಪರಿಹರೇತ್** ॥ (ಸುಶ್ರುತ॥ ಶಾರೀರ॥ ಅ ೭ ಸೂ. ೨೨)

ಎರಡೂ ಕಿವಿಗಳಲ್ಲಿ ಕೂಡಿ (೧೦) ಸಿರಗಳಿರುತ್ತವೆ. ಅವುಗಳಲ್ಲಿ ಪ್ರತಿಯೊಂದು ಕಿವಿಯಲ್ಲಿ ಒಂದೊಂದರಂತೇ ಶಬ್ದವಾಹಿನೀ ಸಿರಗಳು (೨) ಅವ್ಯಧ್ಯವಾಗಿರುತ್ತವೆ.

## ಹಣೇ ಸ್ಥಾನದಲ್ಲಿ ಅವ್ಯಧ್ಯ ಸಿರಗಳು

**ನಾಸಾ ನೇತ್ರಗತಾಸ್ತು ಲಲಾಟೇ ಷಷ್ಟಿಃ, ತಾಸಾಂ ಕೇಶಾಂತಾನುಗತಾಃ ಚ ತಸ್ರಃ, ಆವರ್ತಯೋರೇಕೈಕಾ, ಸ್ಥಪನ್ಯಾಂ ಚೈಕಾಪರಿಹರ್ತವ್ಯಾ** ॥ (ಸುಶ್ರುತ॥ ಶಾರೀರ॥ ಅ ೭ ಸೂ ೨೨)

ಮೂಗು ಮತ್ತು ಕಣ್ಣುಗಳ ಸ್ಥಾನವನ್ನು ಕುರಿತು ಬಂದ ಸಿರಗಳು ಹಣೆಯಲ್ಲಿ (ಲಲಾಟ) ಒಟ್ಟುಕೂಡಿ (೬೦) ಇರುತ್ತವೆ. ಅವುಗಳಲ್ಲಿ ಕೇಶಾಂತದ ವರೆಗೆ ಬಂದಿರುವ (೪) ಸಿರಗಳು "ಆವರ್ತ" (ಎರಡು ಮರ್ಮ ಸ್ಥಳಗಳು) ಇವುಗಳಲ್ಲಿ ಪ್ರತಿಯೊಂದರಲ್ಲಿ ಒಂದೊಂದರಂತೆ (೨) ಸಿರಗಳು "ಸ್ಥಪನೀ" (ಮರ್ಮವು) ಸ್ಥಾನದಲ್ಲಿ (೧) ಸಿರವು ಒಟ್ಟು ಲಲಾಟ (ಹಣೆ) ಪ್ರದೇಶಗಳಲ್ಲಿ (ಅವ್ಯಧ್ಯ) ೭ ಸಿರಗಳು ಇರುತ್ತವೆ.

## ಶಂಖ ಮರ್ಮಗಳಲ್ಲಿ ಅವ್ಯಧ್ಯ ಸಿರಗಳು

**ಶಂಖಯೋರ್ದಶ, ತಾಸಾಂ ಶಂಖಸಂಧಿಗತಾಮೇಕೇಕಾಂ ಪರಿಹರೇತ್** ॥ (ಸುಶ್ರುತ॥ ಶಾರೀರ॥ ಅ. ೭ ಸೂ. ೨೨)

ಶಂಖವೆಂಬ ಎರಡೂ ಮರ್ಮಗಳಲ್ಲಿ (೧೦) ಸಿರಗಳಿರುತ್ತವೆ. ಅವುಗಳಲ್ಲಿ "ಶಂಖಸಂಧಿಗಳಲ್ಲಿ" ಬಂದಿರುವ ಪ್ರತಿಯೊಂದರಲ್ಲಿಯೂ ಒಂದೊಂದರಂತೆ (೨) ಸಿರಗಳು ಅವ್ಯಧ್ಯವಾಗಿರುತ್ತವೆ.

## ತಲೆಯಲ್ಲಿಯ ಅವ್ಯಧ್ಯ ಸಿರಗಳು

**ದ್ವಾದಶಮೂರ್ಧ್ನಿ, ತಾಸಾಮುತ್‌ಕ್ಷೇಪಯೋರ್ದ್ವೇ ಪರಿಹರೇತ್, ಸೀಮಂತೇಷ್ವೇಕೈಕಾಂ ಏಕಾಮಧಿಪತಾವಿತಿ ॥ ಏವಮಶಸ್ತ್ರಕೃತ್ಯಾಃ ಪಂಚಾಶತ್ ಜತ್ರುಣ ಊರ್ಧ್ವಮಿತಿ ॥**

**(ಸುಶ್ರುತ॥ ಶಾರೀರ॥ ಅ ೭ ಸೂ. ೨೨)**

ತಲೆಯ ಪ್ರದೇಶಗಳಲ್ಲಿ (೧೨) ಸಿರಗಳಿರುತ್ತವೆ ಅವುಗಳಲ್ಲಿ "ಉತ್‌ಕ್ಷೇಪ" (ಎರಡು ಮರ್ಮಗಳು) ಇವುಗಳಲ್ಲಿ ಪ್ರತಿಯೊಂದರಲ್ಲಿ ಒಂದೊಂದರಂತೆ (೨) ಸಿರಗಳು ಅವ್ಯಧ್ಯವಾಗಿರುತ್ತವೆ "ಸೀಮಂತ" (ಮರ್ಮಗಳು ೫) ಇವುಗಳಲ್ಲಿ ಪ್ರತಿಯೊಂದರಲ್ಲಿ ಒಂದೊಂದರಂತೆ (೫) ಸಿರಗಳು. "ಅಧಿಪತಿ" (ಮರ್ಮವು) ಇದರಲ್ಲಿ (೧) ಸಿರವು. ಒಟ್ಟು ತಲೆಯ ಪ್ರದೇಶಗಳಲ್ಲಿ (೮) ಸಿರಗಳು ಅಶಸ್ತ್ರಕೃತ್ಯಗಳಾಗಿರುತ್ತವೆ. ಒಟ್ಟು ಎಲ್ಲಾ ವಿಭಾಗಗಳಲ್ಲಿ ಕೂಡಿ ಜತ್ರೂರ್ಧ್ವದಲ್ಲಿ (೫೦) ಅವ್ಯಧ್ಯ ಸಿರಗಳಿರುತ್ತವೆ.

**ಶಿರೋಧರಾ (೧೬), ಹನು (೪), ಜಿಹ್ವಾ (೪), ನಾಸಿಕಾ (೫), ನೇತ್ರ (೨), ಕರ್ಣ (೨), ಲಲಾಟ (೭), ಶಂಖ (೨), ಮೂರ್ಧ (೮),** ಈ ಮೊದಲಾದ ಸ್ಥಾನಗಳಲ್ಲಿ ಒಟ್ಟು ಕೂಡಿ ಜತ್ರೂರ್ಧ್ವದಲ್ಲಿ (೫೦) ಸಿರಗಳು ಅವ್ಯಧ್ಯವಾಗಿರುತ್ತವೆ. ಅವ್ಯಧ್ಯ ಸಿರಗಳನ್ನು ಬಿಟ್ಟು ವ್ಯಧನರಕ್ತಮೋಕ್ಷಣಾದಿ ಕ್ರಿಯೆಗಳನ್ನೂ ಶಸ್ತ್ರಕರ್ಮವನ್ನೂ ಮಾಡಬೇಕು.

## ಸಿರಗಳ ಉಗಮಸ್ಥಾನವು

**ವ್ಯಾಪ್ನುವಂತ್ಯಭಿತೋದೇಹಂ ನಾಭಿತಃ ಪ್ರಸೃತಾಃ ಸಿರಾಃ ॥**

**ಪ್ರತಾನಾಃ ಪದ್ಮಿನೀಕಂದಾದ್ಬಿಸಾದೀನಾಂ ಯಥಾಜಲಂ ॥**
(ಸುಶ್ರುತ॥ ಶಾರೀರ॥ ಅ ೭ ಶ್ಲೋ ೨೩)

ಕಮಲಗಡ್ಡೆಯಿಂದ ಹೊರಟ ಸಿರಗಳು (ದೇಟು, ಬೇರು ಮೊದಲಾದವು) ನೀರನ್ನು ವ್ಯಾಪಿಸುತ್ತವೆಯೋ, ಅದರಂತೇ ನಾಭಿಯಿಂದ ಹೊರಟ ಸಿರಗಳು ಎಲ್ಲ ಕಡೆಗೂ ದೇಹದಲ್ಲಿ ವ್ಯಾಪಿಸುತ್ತವೆ ಅರ್ಥಾತ್ ದೇಹದಲ್ಲಿಯ ವಾತಪಿತ್ತ ಕಫ ರಕ್ತವಾಹೀ ಸಿರಗಳಿಗೆ ನಾಭಿಯೇ ಮೂಲವಾಗಿರುತ್ತದೆಂಬರ್ಥವು. ನಾಭಿಯಿಂದ ಹೊರಟು ಮುಂದೆ ವಿಸ್ತಾರವಾಗುತ್ತಾಗುತ್ತ ಸಮಗ್ರ ದೇಹವನ್ನೂ ವ್ಯಾಪಿಸುತ್ತವೆ. ಕೂದಲಿನಷ್ಟುಸಹ ಸೂಕ್ಷ್ಮವಾಗಿ ಆಯಾವ ಭಾಗಗಳಲ್ಲಿ ವಾತಾದಿಗಳಿಗೆ ಸಂಚಾರ ಮಾರ್ಗವಾಗಿರುತ್ತವೆ.

### ಅವ್ಯಧ್ಯಸಿರಗಳ ವ್ಯಧನದಿಂದಾಗುವ ಹಾನಿಯು

**ಸ್ಪಂದಿನ್ಯೋಜಾಲಧಾರಿಣ್ಯೋಯಾಶ್ಚ ಮರ್ಮಸಮಾಶ್ರಿತಾಃ॥
ಅವ್ಯಧ್ಯಾಸ್ತಾವಿಜಾನೀಯಾತ್ ಸ್ನಾಯುಸಂಧಿಗತಾಶ್ಚ ಯಾಃ॥
ವೈಕಲ್ಯಂ ಮರಣಂಚಾಪಿ ವ್ಯಧಾದಾಸಾಂಧೃವಂಭವೇತ್॥**
(ಸುಶ್ರುತ॥ ಶಾರೀರ॥ ಅ ೭ ಶ್ಲೋ ೨೫)

ವಿಶೇಷವಾಗಿ ಸ್ಪಂದನೇ ಹೊಂದತಕ್ಕವುಗಳಾದ, ಜಾಲಧಾರಕವಾಗಿರುವ ಮರ್ಮಗಳನ್ನು ಆಶ್ರಯಿಸಿರುವ, ಸ್ನಾಯು ಮತ್ತು ಸಂಧಿಗಳಲ್ಲಿರುವ, ಸಿರಗಳು ಅವ್ಯಧ್ಯ (ಅಶಸ್ತ್ರಕೃತ್ಯ) ಗಳೆಂದು ತಿಳಿಯಬೇಕು. ಅವ್ಯಧ್ಯ ಸಿರಗಳಲ್ಲಿ ಶಸ್ತ್ರ ಕರ್ಮವನ್ನೂ ವ್ಯಧನಾದಿಗಳನ್ನೂ ಮಾಡಬಾರದು. ಒಂದು ವೇಳೆ ಮಾಡಿದರೆ ವೈಕಲ್ಯ (ಊನತ್ವ) ಅಥವಾ ಮರಣವು ಸಹ ನಿಶ್ಚಯವಾಗಿ ಸಂಭವಿಸುತ್ತದೆ.

## (೬೦) ಧಮನೀ ವಿವರಣೆಯು

ಸಿರಾ ವಿವರಣೆಯ ನಂತರದಲ್ಲಿ ಸಿರಾ ಧಮನೀ ಸ್ರೋತಸ್ಸುಗಳು ಸದೃಶವಾಗಿರುವದರಿಂದ, ವಿಭಾಗಶಃ ತಿಳಿಯಲು ಸುಲಭವಾಗಲು ಧಮನೀ

ವಿವರಣೆಯು" ಅವಶ್ಯವಾದದ್ದಿರತ್ತದೆ. 'ಚರಕದಲ್ಲಿ" ಸ್ರೋತೋವಿಮಾನಾ ಧ್ಯಾಯದಲ್ಲಿ ಸಿರಾ ಧಮನೀ ಸ್ರೋತಸ್ಸುಗಳನ್ನು ವಿಭಾಗಮಾಡದೇ "ಸ್ರೋತ ಸ್ಸೊಂದರಲ್ಲಿಯೇ" ಅಂತರ್ಭಾವಮಾಡಿ ಹೇಳಿದ್ದಾರೆ ಅವುಗಳ ಸ್ಥಾನ ಕ್ರಿಯಾದಿಗಳನ್ನು ಮಾತ್ರ ವಿಭಾಗಿಸಿ ಹೇಳಿದ್ದಾರೆ. "ಸುಶ್ರುತದಲ್ಲಿ" ಸ್ಥಾನ ಕ್ರಿಯಾ ಆಕೃತಿ ಮೊದಲಾದವುಗಳಿಂದ ವಿಭಾಗಿಸಿ ಸಿರಾ ಧಮನೀ ಸ್ರೋತ ಸ್ಸುಗಳನ್ನು ಭಿನ್ನವಾಗಿ ಹೇಳಿದ್ದಾರೆ ಧಮನೀ ಶಬ್ದ ನಿರೂಪಣೆಯು:— **ಧ್ಮಾನಾದನಿಲಪೂರಣಾತ್ ಧಮನ್ಯಃ** ಧಮನಿಯ ಒಳಗಡೇ ಪೊಳ್ಳು ಭಾಗ ದಲ್ಲಿ ವಿಶೇಷವಾಗಿ ವಾಯು ಸಂಚಾರ ಮಾಡುವದರಿಂದ, ರಸ ಪ್ರಾಣಗಳನ್ನು ಶರೀರದಲ್ಲಿ ಸಮಗ್ರವಾಗಿ ಸಂಚರಿಸುವಂತೇ ಮಾಡುತ್ತದೆ ಈ ಕಾರಣದಿಂದ ಧಮನೀಗಳು ವಾಯುಪೂರಿತವಾಗುವದರಿಂದ. "**ಧಮನೀ**" ಎಂದು ಹೇಳಿ ದ್ದಾರೆ ದೇಹದಲ್ಲಿ (೨೪) ಧಮನಿಗಳಿರುತ್ತವೆ

> **ಚತುರ್ವಿಂಶತಿರ್ಧಮನ್ಯೋನಾಭಿಪ್ರಭವಾಅಭಿಹಿತಾಃ ॥ ತತ್ರ ಕೇಚಿದಾಹುಃ:— ಸಿರಾ ಧಮನೀ ಸ್ರೋತಸಾಮವಿಭಾಗಃ, ಸಿರಾ ವಿಕಾರಾಏವಹಿ ಧಮನ್ಯಃ ಸ್ರೋತಾಂಸಿ ಚೇತಿ॥ ತತ್ತುನ ಸಮ್ಯಕ್, ಅನ್ಯಾಏವಹಿ ಧಮನ್ಯಃ ಸ್ರೋತಾಂಸಿಚ ಸಿರಾಭ್ಯಃ; ಕಸ್ಮಾತ್ ? ವ್ಯಂಜನಾನ್ಯತ್ವಾತ್, ಮೂಲಸನ್ನಿಯಮಾತ್, ಕರ್ಮ ವೈಶೇಷ್ಯಾತ್, ಆಗಮಾಚ್ಚ; ಕೇವಲಂತು ಪರಸ್ಪರ ಸನ್ನಿಕರ್ಷಾತ್ ಸದೃಶಾಗಮಕರ್ಮತ್ವಾತ್ ಸೌಕ್ಷ್ಮ್ಯಾಚ್ಚವಿಭಕ್ತ ಕರ್ಮಣಾಮಪ್ಯವಿಭಾಗಇವಕರ್ಮಸು ಭವತಿ ॥**

(ಸುಶ್ರುತ॥ ಶಾರೀರ॥ ಅ ೯ ಸೂ ೩)

**ದೇಹದಲ್ಲಿ ನಾಭಿಯಿಂದುತ್ಪನ್ನವಾದ** (ಹೊರಟ) **ಧಮನಿಗಳು** (೨೪) **ಇರುತ್ತವೆಂದು ಹೇಳಲ್ಪಟ್ಟಿರುತ್ತವೆ** ಕೆಲವರು ಸಿರಾ ಧಮನಿ **ಸ್ರೋತಸ್ಸು ಗಳು** ಬೇರೆ ಬೇರೆ ಅಲ್ಲವೆಂದು ಹೇಳುತ್ತಾರೆ ಅರ್ಥಾತ್ ಸಿರಾದಿಗಳಲ್ಲಿ ಭೇದವಿರುವದಿಲ್ಲವೆಂಬುವದೇ ಅವರ ಅಭಿಪ್ರಾಯವಾಗಿರುತ್ತದೆ ಆದರೆ ಈ ಮತವು **ಸುಶ್ರುತರಿಗೆ** ಸಂಮತವಾದದ್ದೂ ಸಮಂಜಸವಾದದ್ದೂ ಆಗಿರುವ

ದಿಲ್ಲ. ಯಾಕಂದರೆ ವಾತವಹಾದಿ ಸಿರಗಳ ವರ್ಣವು ಭಿನ್ನವಾಗಿರುವದರಿಂದಲೂ, ಲಕ್ಷಣ ಭೇದವಿರುವದರಿಂದಲೂ ಬೇರೆ ಬೇರೆಯಾಗಿಯೇ ಇರುತ್ತವೆ. **ಮೂಲಸಿರಾಶ್ಚತ್ವಾರಿಂಶತ್** ಎಂದು ಮೂಲ ಸಿರಗಳ ನಿಯಮನ ಮಾಡಿರುವದರಿಂದಲೂ **ಸಿರಗಳು** ವಾತ ಪಿತ್ತಾದಿಗಳನ್ನೂ, **ಧಮನಿಗಳು** ಶಬ್ದ ರೂಪಾದಿಗಳನ್ನೂ, **ಸ್ರೋತಸ್ಸುಗಳು** ಅನ್ನ ನೀರುಗಳನ್ನೂ, ವಹನೆ ಮಾಡುವದರಿಂದ ಕರ್ಮ ಭಿನ್ನತೆಯಿಂದಲೂ, ಭೇದವು ಸ್ಪಷ್ಟವಾದದ್ದೇ ಇರುತ್ತದೆ. ಆಗವುವೆಂದರೆ ಆಯುರ್ವೇದವು ಇಲ್ಲಿ **ಸಿರಾಧಮನ್ಯೋಯೋಗವಹಾನಿ ಸ್ರೋತಾಂಸಿ** ಎಂದು ಹೇಳಿರುವದರಿಂದಲೂ ಸಿರಾದಿಗಳು ಭಿನ್ನವಾಗಿರುತ್ತವೆಂದು ಸಹೇತುಕ ನಿರ್ದೇಶ ಮಾಡಿದ್ದಾರೆ. ಸಿರಾ ಧಮನೀ **ಸ್ರೋತಸ್ಸುಗಳು** ಕೇವಲ ಪರಸ್ಪರವಾಗಿ ಹೊಂದಿಕೊಂಡಿರುವದರಿಂದಲೂ ಸದೃಶಾಗವು ಕರ್ಮಗಳಿಂದಲೂ ಅತಿ ಸೂಕ್ಷ್ಮವಾಗಿರುವದರಿಂದಲೂ ಭಿನ್ನ ಕರ್ಮ ಸ್ವರೂಪ ವರ್ಣ ಸ್ಥಾನಾದಿಗಳಿದ್ದರೂ ಸಹ, ಭಿನ್ನವಿಲ್ಲದಂತೇ ತೋರುತ್ತವೆ. ಅರ್ಥಾತ್ ದೇಹದ ಕರ್ಮಗಳಲ್ಲಿ ಸಿರಾ ಧಮನ್ಯಾದಿಗಳು ಅತ್ಯಂತ ಸಂಬಂಧಿತವಾಗಿರುವದರಿಂದ ಭೇದವಿಲ್ಲದಂತೆಯೇ ಅನಿಸುತ್ತವೆ ಉಡಾ:- ಹುಲ್ಲಿನ ಹಗ್ಗಕ್ಕೆ ಬೆಂಕಿಹತ್ತಿಕೊಂಡರೆ ಹಗ್ಗದ ವಿಭಾಗವಾದ ಪ್ರತಿಯೊಂದುಹುಲ್ಲಿನಲ್ಲಿ ಬೆಂಕಿಯು ಪ್ರತ್ಯೇಕವಾಗಿದ್ದರೂ, ಒಂದೇ ಎಂದು ತೋರುತ್ತದೆ. ಯಾಕಂದರೆ ಎಲ್ಲ ಹುಲ್ಲುಗಳ ಅತ್ಯಂತ ಸಂಬಂಧವೇ ಇದಕ್ಕೆ ಕಾರಣವಾಗಿರುತ್ತದೆ. ಇದರಂತೆ ದೇಹದಲ್ಲಿಯ ಸಿರಾಧಮನೀ ಸ್ರೋತಸ್ಸುಗಳು ಭಿನ್ನವಾಗಿದ್ದರೂ, ಒಂದೇ ಎಂದು ಅನಿಸುತ್ತವೆ.

## ಧಮನೀ ಪ್ರಸರಣ

**ತಾಸಾಂತುಖಲುನಾಭಿಪ್ರಭವಾಣಾಂಧಮನೀನಾಮೂರ್ಧ್ವಗಾ ದಶ, ದಶಚಾಧೋಗಾಮಿನ್ಯಃ, ಚತಸ್ರಸ್ತಿರ್ಯಗ್ಗಾಃ ॥**

(ಸುಶ್ರುತ॥ ಶಾರೀರ॥ ಅ ೯ ಸೂ ೪)

**ನಾಭಿಯಿಂದ ಹೊರಟಿರುವ** ಧಮನಿಗಳಲ್ಲಿ **ಊರ್ಧ್ವಗಾಮೀ** (೧೦) ಧಮನಿಗಳಿರುತ್ತವೆ. **ಅಧೋಗಾಮೀ** (೧೦) ಧಮನಿಗಳು. **ಅಡ್ಡವಾಗಿ**

ಎಡಬಲಗಳಲ್ಲಿ ಸಂಚರಿಸುವ (೪) ಧಮನೀಗಳಿರುತ್ತವೆ. ಒಟ್ಟು ಎಲ್ಲ ಭಾಗಗಳಲ್ಲಿಯು ಧಮನಿಗಳು (೨೪) ಇರುತ್ತವೆ. **ಊರ್ಧ್ವಗಾ** (೧೦), **ಅಧೋಗಾ** (೧೦), **ತಿರ್ಯಗ್ಗಾ** (೪), ಎಲ್ಲಾ ಪ್ರದೇಶಗಳಲ್ಲಿ ಕೂಡಿ ಒಟ್ಟು (೨೪) ಧಮನಿಗಳು ಇರುತ್ತವೆ.

## ಊರ್ಧ್ವಗಧಮನೀ ವಿವರಣೆ

**ಊರ್ಧ್ವಗಾಃ ಶಬ್ದಸ್ಪರ್ಶರೂಪರಸಗಂಧಪ್ರಶ್ವಾಸೋಚ್ಛ್ವಾಸ ಜೃಂಭಿತಕ್ಷುದ್ ಹಸಿತಕಥಿತರುದಿತಾದೀನ್ ವಿಶೇಷಾನಭಿವಹಂತ್ಯಃ ಶರೀರಂ ಧಾರಯಂತಿ ||** (ಸು|| ಶಾ|| ಅ ೯ ಸೂ ೫)

**ಊರ್ಧ್ವಗಧಮನಿಗಳು** ಶಬ್ದ ಸ್ಪರ್ಶ ರೂಪ ರಸಗಂಧಗಳನ್ನು ಒಯ್ಯುವಂಥವೂ, ಪ್ರಶ್ವಾಸ ಉಚ್ಛ್ವಾಸ ಜೃಂಭಿತಹಸಿತಭಾಷಿತರುದಿತ ಮೊದಲಾದವುಗಳನ್ನು ವಹಿಸುವಂಥವೂ ಆಗಿರುತ್ತವೆ ಈ ಮೊದಲಾದ ಕರ್ಮಕಾರಿಗಳಾಗಿ ಶರೀರಧಾರಣೆಯನ್ನು ಮಾಡುತ್ತವೆ. **ಪ್ರಶ್ವಾಸೋಽಂತಃ ಪ್ರವಿಶಶ್ವಾಯುಃ** ಒಳಗೆ ಪ್ರವೇಶ ಮಾಡುತ್ತಿರುವ ವಾಯುವಿಗೆ **ಪ್ರಶ್ವಾಸ** ವೆಂಬ ಹೆಸರು **"ಉಚ್ಛ್ವಾಸ ಊರ್ಧ್ವಮುತ್ತಿಷ್ಠದ್ವಾಯುಃ"** ಮೇಲೆ ಸಂಚರಿಸುವ ಅಥವಾ ಬಹಿಸ್ಸಂಚಾರವುಳ್ಳವಾಯುವಿಗೆ **ಉಚ್ಛ್ವಾಸವೆಂಬ** ಹೆಸರು. **"ಜೃಂಭಾದಯೋಘೋಷಭಾಷಯೋರ್ವಿಶೇಷಃ"** ಜೃಂಭಾ ಮೊದಲಾದವು ಘೋಷಭಾಷೆಗಳಲ್ಲಿಯ ಪ್ರಭೇದಗಳಾಗಿರುತ್ತವೆ. **ರುದಿತವೆಂದರೆ** ಕಣ್ಣೀರನ್ನು ಹರಿಸುವ ಕಾರ್ಯವಾಗಿರುತ್ತದೆ. ಈ ಮೊದಲಾದವುಗಳನ್ನು ಊರ್ಧ್ವ ಪ್ರದೇಶಗಾಮಿಯಾದ ಧಮನಿಗಳು ಕಾರ್ಯರೂಪದಿಂದ ವಹಿಸುತ್ತವೆ ಊರ್ಧ್ವಗವಾದ ಧಮನಿಗಳು ಆವಾವ ಕರ್ಮಗಳಿಂದ ದೇಹವನ್ನು ಧಾರಣೆ ಮಾಡುತ್ತವೆ.

**ತಾಸ್ತು ಹೃದಯಮುಪಪನ್ನಾಸ್ತ್ರಿಧಾಜಾಯಂತೇ, ತಾಸ್ತ್ರಿಂಶತ್ || ತಾಸಾಂತುವಾತಪಿತ್ತಕಫಶೋಣಿತರಸಾನ್ ದ್ವೇ ದ್ವೇವಹತಸ್ತಾದಶ, ಶಬ್ದರೂಪರಸಗಂಧಾನಷ್ಟಾಭಿರ್ಗೃಣ್ಹೀತೇ, ದ್ವಾಭ್ಯಾಂ**

**ಭಾಷತೇ, ದ್ವಾಭ್ಯಾಂಘೋಷಂ ಕರೋತಿ, ದ್ವಾಭ್ಯಾಂಸ್ವಪಿತಿ, ದ್ವಾಭ್ಯಾಂಪ್ರತಿಬುಧ್ಯತೆ, ದ್ವೇಚಾಶ್ರುವಾಹಿನ್ಯೌ, ದ್ವೇಸ್ತನ್ಯಂ ಸ್ತ್ರಿಯಾವಹತಃ ಸ್ತನಸಂಶ್ರಿತೆ, ತೇಏವಶುಕ್ರಂ ನರಸ್ಯಸ್ತನಾಭ್ಯಾಮಭಿವಹತಃ, ತಾಸ್ತ್ವೇತಾಸ್ತ್ರಿಂಶತ್ ಸವಿಭಾಗಾವ್ಯಾಖ್ಯಾತಾಃ ॥ (ಸು॥ ಶಾ॥ ಅ ೯ ಸೂ ೫)**

ಊರ್ಧ್ವಗಾಮೀ ಧಮನಿಗಳು ಹೃದಯ ಸ್ಥಾನಕ್ಕೆ ಹೋದನಂತರ ಮೂರು ವಿಭಾಗವಾಗುತ್ತವೆ. ಮೇಲ್ಗಡೆಗೆ ಹೋದ (೧೦) ಧಮನೀಗಳು ಮೂರು ವಿಭಾಗವಾಗಲು (೩೦) ಆಗುತ್ತವೆ ಇವುಗಳ ಸ್ಥಾನ ಕಾರ್ಯಾದಿಗಳನ್ನು ವಿವರಿಸುತ್ತಾರೆ.

ಅವುಗಳಲ್ಲಿ:— **ವಾತಪಿತ್ತ ಕಫರಕ್ತ ರಸಗಳನ್ನು** ಒಯ್ಯುವ ಧಮನೀಗಳು ಪ್ರತಿಯೊಂದೂ ಎರಡೆರಡಂತೇ (೧೦) ಇರುತ್ತವೆ **ಶಬ್ದರೂಪ ರಸಗಂಧಗಳನ್ನು** ಗ್ರಹಣಮಾಡುವ ಧಮನಿಗಳು (೮) ಇರುತ್ತವೆ **ಮಾತಾಡುವ ಕೆಲಸ ಮಾಡುವ** ಧಮನಿಗಳು (೨) ಇರುತ್ತವೆ. **ಅವ್ಯಕ್ತ ಶಬ್ದವನ್ನುಂಟು ಮಾಡುವ** ಧಮನಿಗಳು (೨) ಇರುತ್ತವೆ. **ನಿದ್ರೆಯನ್ನುಂಟು ಮಾಡುವ** ಧಮನಿಗಳು (೨), **ಎಚ್ಚರವನ್ನುಂಟುಮಾಡುವ** ಧಮನಿಗಳು (೨) ಇರುತ್ತವೆ **ಕಣ್ಣೀರನ್ನು ಪ್ರವಹಿಸುವ** ಧಮನೀಗಳು (೨) ಇರುತ್ತವೆ. **ಸ್ತನ್ಯವಾಹೀ** ಧಮನಿಗಳು ಸ್ತ್ರೀಯರ ಸ್ತನಗಳನ್ನಾಶ್ರಯಿಸಿ ಇರುವಂಥವುಗಳು (೨) ಇರುತ್ತವೆ. ಅವೇ ಧಮನಿಗಳು (೨) ಪುರುಷರಿಗೆ ಸ್ತನ ಪ್ರದೇಶಗಳಿಂದ **ಶುಕ್ರವನ್ನು ವಹಿಸುವಂಥವು** ಆಗಿರುತ್ತವೆ ಹೀಗೆ ಊರ್ಧ್ವ ಭಾಗಗತವಾದ (೩೦) ಧಮನಿಗಳು ವಿಭಾಗಶಃ ವಿಸ್ತಾರವಾಗಿ ವಿವರಿಸಲ್ಪಟ್ಟಿರುತ್ತವೆ.

**ವಾತ ಪಿತ್ತ ಕಫ ಶೋಣಿತ ರಸವಾಹೀ(೧೦), ಶಬ್ದ ರೂಪರಸ ಗಂಧಗ್ರಾಹೀ (೮), ಭಾಷಣಕಾರೀ (೨), ಅವ್ಯಕ್ತ ಶಬ್ದ (ಘೋಷ) ಕಾರೀ (೨), ಸ್ವಪ್ನಕಾರೀ (೨), ಪ್ರಬೋಧಕಾರೀ (೨), ಅಶ್ರುವಾಹೀ (೨), ಸ್ತನ್ಯವಾಹೀ ಅವೇ ಪುರುಷಶುಕ್ರವಾಹೀ (೨),** ಇವೆಲ್ಲ ಒಟ್ಟು

ಧಮನಿಗಳು ಕೂಡಿ [೩೦] ಇರುತ್ತವೆ ದೇಹದ ಊರ್ಧ್ವ ಭಾಗಗಳಲ್ಲಿರುವ ಧಮನಿಗಳು ಇಂತಿರುತ್ತವೆ ಧಮನಿಗಳು ಹೊರಗಿನ ಶಬ್ದಾದಿಗಳನ್ನು ಗ್ರಹಣ ಮಾಡವದು ಮತ್ತು ಭಾಷಣಾದಿ ಶಬ್ದಗಳನ್ನುಂಟು ಮಾಡುವದು, ಹೀಗೆ ಗ್ರಹಣೋತ್ಪಾದನಗಳೆರಡನ್ನೂ ಮಾಡುತ್ತವೆಂದು ತಿಳಿಯಬೇಕು

**ಏತಾಭಿರೂರ್ಧ್ವಂನಾಭೇರುದರಪಾರ್ಶ್ವಪೃಷ್ಠೋರಃಸ್ಕಂಧ ಗ್ರೀವಾಬಾಹವೋಧಾರ್ಯಂತೇಯಾಪ್ಯಂತೇಚ ||**

(ಸುಶ್ರುತ|| ಶಾರೀರ|| ಅ ೯ ಸೂ ೫)

ಇವುಗಳಿಂದ ನಾಭಿಯ ಮೇಲ್ಗಡೇ ಭಾಗಗಳಲ್ಲಿರುವ, **"ಉದರ"** (ಹೊಟ್ಟೆ), **"ಪಾರ್ಶ್ವ"** (ಪಕ್ಕ), **"ಪೃಷ್ಠ"** (ಬೆನ್ನು), **"ಉರಃ"** (ಎದೆ), **"ಸ್ಕಂಧ"** (ಭುಜ), **"ಗ್ರೀವಾ"** (ಕುತ್ತಿಗೆ), **"ಬಾಹು"** (ರಟ್ಟೆ, ತೋಳು), ಇವುಗಳು ಧಾರಣೇ ಮಾಡಲ್ಪಟ್ಟವುಗಳಾಗಿ ರಕ್ಷಿಸಲ್ಪಡುತ್ತವೆ.

**ಊರ್ಧ್ವಂಗಮಾಸ್ತುಕುರ್ವಂತಿಕರ್ಮಾಣ್ಯೇತಾನಿಸರ್ವಶಃ ||**

ನಾಭಿಯಿಂದ ಮೇಲ್ಗಡೆಗೆ ಪಸರಿಸಿದ "ಧಮನಿಗಳು" ಈ ಪೂರ್ವೋಕ್ತ ಕರ್ಮಗಳನ್ನು ಮಾಡುತ್ತವೆ. ಧಮನಿಗಳಿಂದ ರೂಪಾದಿಗ್ರಹಣವಾಗುವ ಕಾಲದಲ್ಲಿ, ರಜೋಗುಣಯೋಗದಿಂದ ಆತ್ಮ ಪ್ರಯತ್ನಪ್ರಬೋಧಿತ ಮನೋಯುಕ್ತವಾಗಿ ಕಾರ್ಯ ಮಾಡುತ್ತವೆ. ಅರ್ಥಾತ್ ಮನೋಯುಕ್ತವಾಗಿ ಧಮನಿಗಳು ವಿಷಯ ಸ್ವೀಕಾರ ಅಥವಾ ಶಬ್ದಾದಿ ಕರ್ಮಗಳನ್ನು ವಹಿಸುತ್ತವೆಂದಭಿಪ್ರಾಯವಾಗಿರುತ್ತದೆ ಮನಸ್ಸು ಅಣುರೂಪವುಳ್ಳದ್ದಾಗಿಯೂ ಒಂದೇ ಇರುತ್ತಿರುವದಾಗಿಯೂ ಇರುವದರಿಂದ, ಒಂದೇ ಸಮಯದಲ್ಲಿ ಸರ್ವ ಧಮನಿಗಳು ತಮ್ಮ ವಿಷಯಗಳನ್ನು ಗ್ರಹಿಸಲಾರವು. ಅರ್ಥಾತ್ ವಿಷಯ ಗ್ರಹಣ ಮತ್ತು ಶಬ್ದಘೋಷಾದಿಕರ್ಮಗಳಲ್ಲಿ, ಮನೋಯೋಗ ಅವಶ್ಯವಾದ್ದರಿಂದಲೂ ಸರ್ವದರಲ್ಲಿ ಒಂದೇಆದ ಮನಸ್ಸಿನ ಏಕಕಾಲ ಪ್ರವೃತ್ತಿ ಅಸಂಭವವಾದ್ದರಿಂದಲೂ ಮನೋಯುಕ್ತವಾದ ಒಂದೇ ವಿಷಯ ಗ್ರಹಣ ಅಥವಾ

ಕರ್ಮಗಳನ್ನು ಮಾಡುತ್ತವೆ. ಎಲ್ಲಾ ಧಮನಿಗಳು ಒಮ್ಮೆಲೇ ಕರ್ತವ್ಯಕಾರಿ ಗಳಾಗುವದಿಲ್ಲೆಂಬುವದೇ ಇದರ ಅಭಿಪ್ರಾಯವಾಗಿರುತ್ತದೆ.

## ಅಧೋಗಾಮೀ ಧಮನಿಗಳು

**ಅಧೋಗಮಾಸ್ತು ವಕ್ಷ್ಯಾಮಿ ಕರ್ಮ ಚಾಸಾಂ ಯಥಾಯಥಂ ॥ ಅಧೋಗಮಾಸ್ತು ವಾತಮೂತ್ರಪುರೀಷಶುಕ್ರಾರ್ತವಾದೀನ್ಯ ಧೋವಹಂತಿ॥ ತಾಸ್ತು ಪಿತ್ತಾಶಯಮಭಿಪ್ರಪನ್ನಾಸ್ತತ್ರಸ್ಥಮೇ ವಾನ್ನಪಾನರಸಂ ವಿಪಕ್ವಮೌಷ್ಣ್ಯಾದ್ವಿವೇಚಯಂತ್ಯೋಽಭಿವ ಹಂತ್ಯಃ ಶರೀರಂ ತರ್ಪಯಂತಿ, ಅರ್ಪಯಂತಿ ಚೋರ್ಧ್ವಗಾ ನಾಂ ತಿರ್ಯಗ್ಗಾಣಾಂಚ, ರಸಸ್ಥಾನಂ ಚಾಭಿಪೂರಯಂತಿ, ಮೂ ತ್ರಪುರೀಷಸ್ವೇದಾಂಶ್ಚ ವಿವೇಚಯಂತಿ ॥**

(ಸುಶ್ರುತ॥ ಶಾರೀರ॥ ಅ ೯ ಸೂ ೭)

ಸುಶ್ರುತಾದಿ ಶಿಷ್ಯರಿಗೆ ಧನ್ವಂತರಿಯ ಉಪದೇಶವು ಇಂತಿರುತ್ತದೆ:— ಅಧೋಗಾಮಿಯಾದ ಧಮನಿಗಳು ಹೇಗೆ ದೇಹದಲ್ಲಿ ಪಸರಿಸುತ್ತವೆ ಎಂಬುವ ದನ್ನೂ ಅವುಗಳ ಕರ್ಮವನ್ನೂ ಹೇಳುತ್ತಾರೆ

"ಅಧೋಗಾಮೀ ಧಮನಿಗಳು" ವಾತ (ವಾಯು), **ಮೂತ್ರ** (ಆಹಾರ ಮತ್ತು ದ್ರವಗಳಲ್ಲಿಯ ಮಲಿನ ಜಲ ಭಾಗ), **ಪುರೀಷ** (ಆಹಾರದ ಕಿಟ್ಟ ಭಾಗ), **ಶುಕ್ರ** (ಪುರುಷನ ಸಪ್ತಮ ಧಾತು ಪ್ರಜೋತ್ಪಾ ದಕ), **ಆರ್ತವ** (ರತಿಕಾಲಸ್ರಾವಿ ಮತ್ತು ಮಾಸಿಕ ರಜಸ್ಸು), ಇವುಗಳನ್ನು ಅಧೋಭಾಗದಲ್ಲಿ ಸಂಚಾರಮಾಡಿಸುತ್ತವೆ. ಪಿತ್ತಾಶಯ ಸ್ಥಾನದಲ್ಲಿ ಹೋದ ಧಮನಿಗಳು ಉಷ್ಣತೆಯಿಂದ ವಿಪಕ್ವವಾದ ಅಲ್ಲಿರುವ ಅನ್ನಪಾನ ರಸಗಳನ್ನು ವಿಭಾಗಿಸುತ್ತವೆ **ವಿವೇಚಯಂತಿ** ಅಂದರೆ ಚನ್ನಾಗಿ ಅನ್ನಪಾನ ರಸಗಳು ಪಕ್ವವಾದ ಮೇಲೆ, ಅಗ್ನಿಯಿಂದ ಬೇರ್ಪಡಿಸಿ ಗ್ರಹಿಸುತ್ತವೆಂಬಭಿಪ್ರಾಯವು. ಹೀಗೆ ಅನ್ನ ರಸವನ್ನು ಗ್ರಹಿಸಿ ಅದನ್ನು ಧಮನೀ ಮುಖಾಂತರವಾಗಿ ಸಂಚ ರಿಸುತ್ತಾ ಶರೀರವನ್ನು ತೃಪ್ತಿಪಡಿಸುತ್ತವೆ **"ಊರ್ಧ್ವಗಾಮಿ"** ಮತ್ತು

'ತಿರ್ಯಗ್ಗಾಮಿ ಧಮನಿಗಳಲ್ಲಿ" ರಸವು ಹೋಗುವಂತೆ ಮಾಡುತ್ತವೆ ಊರ್ಧ್ವಗ ಧಮನಿಗಳ ಮುಖಾಂತರವಾಗಿ ರಸ ಸ್ಥಾನದಲ್ಲಿ ರಸವು ಹೋಗಿ ತುಂಬುವಂತೆ ಮಾಡುತ್ತವೆ ಇಲ್ಲಿ ರಸ ಸ್ಥಾನವು "ಹೃದಯ"ವಾಗಿರುತ್ತದೆ. ಅಧೋಗಾಮೀ ಧಮನಿಗಳು ಹೃದಯ ಪ್ರದೇಶದಲ್ಲಿ ಸಂಚಾರಮಾಡುವದಿಲ್ಲವಾದ್ದರಿಂದ, ರಸವನ್ನ ರಸಸ್ಥಾನವಾದಹೃದಯದಲ್ಲಿ ಹೇಗೆತುಂಬಿಸುತ್ತವೆಂಬ ಆಕ್ಷೇಪ ಒರುತ್ತದೆ. ಅಧೋಗಾಮೀ ಧಮನಿಗಳಿಂದ ರಸವನ್ನು ಗ್ರಹಿಸಿ, ಊರ್ಧ್ವಗಾಮೀ ಧಮನಿಗಳು ರಸ ಸ್ಥಾನದಲ್ಲಿ ಆದನ್ನು ಒಯ್ದು ತುಂಬಿಸುತ್ತವೆಂದು ತಿಳಿಯುಬೇಕು. ಮೂತ್ರ ಮಲ ಬೆವರು ಇವುಗಳನ್ನು ಬೇರ್ಪಡಿಸುತ್ತವೆ. ಇವು ಪಿತ್ತ ಸ್ಥಾನಗತ ಧಮನಿಗಳ ಕಾರ್ಯವಾಗಿರುತ್ತವೆ

**ಆಮ ಪಕ್ವಾಶಯಾಂತರೇಚ ತ್ರಿಧಾಜಾಯಂತೇತಾಸ್ತ್ರಿಂಶತ್;**
**ತಾಸಾಂತು ವಾತ ಪಿತ್ತ ಕಫ ಶೋಣಿತರಸಾನ್‌ದ್ವೇದ್ವೇವಹತ**
**ಸ್ತಾದಶ, ದ್ವೇ ಅನ್ನವಾಹಿನ್ಯಾವಂತ್ರಾಶ್ರಿತೇ, ತೋಯವ**
**ಹೇದ್ವೇ, ಮೂತ್ರಬಸ್ತಿಮಭಿಪ್ರಪನ್ನೇ ಮೂತ್ರ ವಹೇದ್ವೇ,**
**ಶುಕ್ರವಹೇದ್ವೇ ಶುಕ್ರಪ್ರಾದುರ್ಭಾವಾಯದ್ವೇ, ವಿಸರ್ಗಾಯ,**
**ತೇಏವರಕ್ತಮಭಿವಹತೋವಿಸೃಜತಶ್ಚ ನಾರೀಣಾಮಾರ್ತವ**
**ಸಂಜ್ಞಂ, ದ್ವೇವರ್ಚೋನಿರಸನ್ಯೌ ಸ್ಥೂಲಾಂತ್ರ ಪ್ರತಿಬದ್ಧೇ,**
**ಅಷ್ಟಾವನ್ಯಾಸ್ತಿರ್ಯಗ್ಗಾಮಿನೀನಾಂ ಧಮನೀನಾಂ ಸ್ವೇದಮ**
**ರ್ಪಯಂತಿ; ತಾಸ್ತ್ವೇತಾಸ್ತ್ರಿಂಶತ್ ಸವಿಭಾಗಾ ವ್ಯಾಖ್ಯಾತಾಃ॥**

(ಸು.ಶ್ರುತ॥ ಶಾರೀರ॥ ಅ. ೯ ಸೂ ೭)

"ಅಧೋಗಾಮೀ ಧಮನಿಗಳು" ಆಮ ಮತ್ತು ಪಕ್ವಾಶಯಗಳ ಮಧ್ಯ ಪ್ರದೇಶದಲ್ಲಿ, ಮೂರು ವಿಭಾಗವುಳ್ಳವುಗಳಾಗುತ್ತವೆ. ಅಧೋ ಭಾಗದಲ್ಲಿ (೧೦) ಧಮನಿಗಳು, ಮೂರು ವಿಭಾಗವಾಗಿ ಅಂದರೆ (೩೦) ಇರುತ್ತವೆಂದು ತಿಳಿಯುಬೇಕು. ಮೇಲೆ ಆಮಾಶಯಸ್ಥಾನಗಳಲ್ಲಿ ಅಧೋಗಾಮೀ ಧಮನಿಗಳು ಹೋಗುವದಿಲ್ಲವಾದ್ದರಿಂದಲೂ ನಾಭಿಯಿಂದಾರಂಭಿಸಿ ಸ್ತನಪರ್ಯಂತವಾದ ಭಾಗಕ್ಕೆ ಆಮಾಶಯವೆಂದು ಹೇಳುವದರಿಂದಲೂ, ಆಮ ಪಕ್ವಾಶಯಾಂತರ

ವೆಂದರೆ ನಾಭಿಯ ಮೇಲ್ಗಡೆಯಿಂದಾರಂಭಿಸಿ ಪಕ್ವಾಶಯದ ವರೆಗಿನ ಪ್ರದೇಶ ಗಳೆಂದು ತಿಳಿಯಬೇಕು. ಯಾಕಂದರೆ ಪಿತ್ತ ಸ್ಥಾನಗತ ಧಮನಿಗಳ ಕಾರ್ಯ ಗಳನ್ನು ಹಿಂದೆ ವಿವರಿಸಿರುವದರಿಂದ, ಈಗ ಹೇಳುತ್ತಿರುವದು ಪಿತ್ತ ಸ್ಥಾನಗಳ ಕೆಳಗೆ ಪಕ್ವಾಶಯದ ವರೆಗಿನ ಪ್ರದೇಶಗಳೆಂದು ತಿಳಿಯಬೇಕು. ಅಧೋ ಭಾಗಗತ ಧಮನಿಗಳು (೧೦), ಆಮಾಶಯ ಮತ್ತು ಪಕ್ವಾಶಯಗಳ ಮಧ್ಯ ಸ್ಥಾನಗಳಲ್ಲಿ ಬಂದೊಡನೆ ಮೂರು ವಿಭಾಗವಾಗಿ (೩೦) ಆಗುತ್ತವೆ ಇವುಗಳ ಸ್ಥಾನ ಕಾರ್ಯಗಳನ್ನು ವಿವರಿಸುತ್ತಾರೆ

ಅವುಗಳಲ್ಲಿ:— "ವಾತ ಪಿತ್ತ ಕಫ ರಕ್ತ ರಸಗಳನ್ನು" ಒಯ್ಯುವ ಧಮನಿಗಳು ಪ್ರತಿಯೊಂದು ಎರಡೆರಡರಂತೆ (೧೦) ಇರುತ್ತವೆ ಕರುಳನ್ನು ಆಶ್ರಯಿಸಿರುವ **ಅನ್ನವಾಹೀ ಧಮನಿಗಳು** (೨) ಇರುತ್ತವೆ **ಜಲವಾಹೀ ಧಮನಿಗಳು** (೨) ಇರುತ್ತವೆ. ಬಸ್ತಿ ಸ್ಥಾನದಲ್ಲಿ ಬಂದು ಕೂಡಿಕೊಂಡಿರುವ **ಮೂತ್ರವಾಹೀ ಧಮನಿಗಳು** (೨) ಇರುತ್ತವೆ. ಶುಕ್ರಪ್ರಾದುರ್ಭಾವಕ್ಕಾಗಿ **ಶುಕ್ರವಾಹೀ ಧಮನಿಗಳು** (೨) ಇರುತ್ತವೆ **ಶುಕ್ರ ವಿಸರ್ಜನೆಗಾಗಿ** (೨) ಧಮನಿಗಳಿರುತ್ತವೆ. [ಈ ಶುಕ್ರವಿಸರ್ಜನೇಮಾಡುವ ಧಮನಿಗಳೇ ಸ್ತ್ರೀಯರ ಆರ್ತವ ಸಂಜ್ಞೆಯುಳ್ಳ ರಕ್ತವನ್ನು ಒಯ್ಯುವಂಥವು [ಪ್ರಾದುರ್ಭಾವ] ಮತ್ತು ವಿಸರ್ಜನೇ ಮಾಡುವವೂ ಆಗಿರುತ್ತವೆ] **ಸ್ಥೂಲಾಂತ್ರಬದ್ಧವಾದ** (೨) ಧಮನಿಗಳು ಮಲವನ್ನು ಹೊರಗೆಹಾಕುತ್ತವೆ. ತಿರ್ಯಗ್ಗಾಮೀ ಧಮನಿ ಗಳಿಗೆ **ಸ್ವೇದವನ್ನು ಒಯ್ದುವುಟ್ಟಿಸುವ** ಧಮನಿಗಳು (೮) ಇರುತ್ತವೆ ಹೀಗೆ ಅಧೋಭಾಗಗತವಾದ (೩೦) ಧಮನಿಗಳು ವಿಭಾಗಶಃ ವಿವರಿಸಲ್ಪಟ್ಟಿ ರುತ್ತವೆ

**ವಾತಾದಿವಾಹೀ ಧಮನಿಗಳು [೧೦], ಅನ್ನವಾಹೀ [೨], ತೋಯವಾಹೀ [೨], ಮೂತ್ರವಹೇ [೨], ಶುಕ್ರವಹೇ [೨], ಶುಕ್ರ ವಿಸರ್ಜಿನೀ [೨],** (ಸ್ತ್ರೀಯರಿಗೆ ಆರ್ತವಪ್ರಾದುರ್ಭಾವ ಮತ್ತುಗವಿಸರ್ಜನೆ ಗಾಗಿ ಈ ಧಮನಿಗಳಿರುತ್ತವೆ.) **ವರ್ಚೋನಿರಸನ ಧಮನೀ [೨], ಸ್ವೇದ ವಾಹೀ ಧಮನಿಗಳು (೮),** ಈ ಮೊದಲಾದ ಕಾರ್ಯಕಾರಿಯಾದ **ಅಧೋಭಾಗಗತ** ಧಮನೀಗಳು ಒಟ್ಟು ಕೂಡಿ [೩೦] ಇರುತ್ತವೆ.

ಏತಾಭಿರಧೋನಾಭೇಃ ಪಕ್ವಾಶಯಃ ಕಟೀಮೂತ್ರ ಪುರೀಷಗು
ದಬಸ್ತಿಮೇಢ್ರಸಕ್ಥೀನಿಧಾರ್ಯಂತೇಯಾಪ್ಯಂತೇಚ ||
ಅಧೋಗಮಾಸ್ತು ಕುರ್ವಂತಿಕರ್ಮಾಣ್ಯೇತಾನಿಸರ್ವಶಃ ||
(ಸುಶ್ರುತ|| ಶಾರೀರ|| ಅ ೯ ಸೂ ೭)

**ಅಧೋಗಾಮಿಯಾದ** ಧಮನಿಗಳಿಂದ ನಾಭಿಯ ಕೆಳ ಪ್ರದೇಶದಲ್ಲಿ ರುವ **ಪಕ್ವಾಶಯ** [ಮಲಾಶಯ], **ಕಟಿ** [ಟೊಂಕ], **ಮೂತ್ರ** ಮತ್ತು **ಮಲಗಳು** ಒಯ್ಯಲ್ಪಡುತ್ತವೆ. **ಗುದ, ಬಸ್ತಿ, ಮೇಢ್ರ** [ಶಿಶ್ನ], **ಸಕ್ಥಿ** [ಕಾಲು]," ಇವುಗಳು ಧಾರಣೆ ಮಾಡಲ್ಪಡುತ್ತವೆ ಮತ್ತು ರಕ್ಷಿಸಿಪೋಷಿತ ವಾಗುತ್ತವೆ. ಅಧೋಭಾಗಗಾಮಿಯಾದ ಧಮನಿಗಳು ಈ ಮೊದಲಾದ ಕಾರ್ಯವನ್ನು ಮಾಡುತ್ತವೆ

## ತಿರ್ಯಗ್ಗತ ಧಮನಿಗಳು

ತಿರ್ಯಗ್ಗಾಃ ಸಂಪ್ರವಕ್ಷ್ಯಾಮಿಕರ್ಮಚಾಸಾಂಯಥಾಯಥಮ್ ||
(ಸು|| ಶಾ|| ಅ ೯ ಶ್ಲೋ ೮)

ತಿರ್ಯಗ್ಗಾಣಾಂತು ಚತಸೃಣಾಂಧಮನೀನಾಮೇಕೈಕಾಶತಧಾ
ಸಹಸ್ರಧಾಚೋತ್ತರೋತ್ತರಂ ವಿಭಜ್ಯಂತೆ, ತಾಸ್ತ್ವಸಂಖ್ಯೇ
ಯಾಃ, ತಾಭಿರಿದಂಶರೀರಂಗವಾಕ್ಷಿತಂ ವಿಬದ್ಧಮಾತತಂಚ ||
[ಸುಶ್ರುತ|| ಶಾರೀರ|| ಅ ೯ ಸೂ ೯]

ದೇಹದ ಎಡಬಲ ಪಾರ್ಶ್ವಗಳಲ್ಲಿ ಅಡ್ಡವಾಗಿ [ತಿರ್ಯಕ್] ಪಸರಿಸಿದ, ಧಮನಿಗಳ ಕಾರ್ಯವನ್ನು ಹೇಳುತ್ತಾರೆ. ತಿರ್ಯಗ್ಗಾಮಿಯಾದ [೪] ಧಮನಿಗಳು ಒಂದೊಂದು ನೂರಾರು ಅಥವಾ ಸಾವಿರಾರು ವಿಭಾಗವಾಗಿ ಉತ್ತರೋತ್ತರ ಹೆಚ್ಚಾಗಿ ವಿಭಾಗ ಹೊಂದುತ್ತವೆ. ಅವುಗಳು ಅಸಂಖ್ಯವಾದ ವುಗಳಾಗಿರುತ್ತವೆ. ಹೀಗೆ ಅಸಂಖ್ಯಾತವಾಗಿ ಪಸರಿಸಿದ ಧಮನಿಗಳಿಂದ ಶರೀರವು, ಜಾಳಿಗೆ ನೇಯ್ದಂತೇ ಕಾಣುತ್ತದೆ. ಮತ್ತು ಸುತ್ತಲೂ ದೇಹಕ್ಕೆ ಧಮನೀಗಳು ಜಾಳಿಗೆಗಳನ್ನು ಸುತ್ತಿದಂತೇ, ವ್ಯಾಪಿಸಿಕೊಂಡಿರುತ್ತವೆ

**ತಾಸಾಂಮುಖಾನಿರೋಮಕೂಪಪ್ರತಿಬದ್ಧಾನಿ, ಯೈಃ ಸ್ವೇದ ಮಭಿವಹಂತಿರಸಂಚಾಭಿತರ್ಪಯಂತ್ಯಂತರ್ಬಹಿಶ್ಚ, ತೈರೇವ ಚಾಭ್ಯಂಗಪರಿಷೇಕಾವಗಾಹಾಲೇಪನವೀರ್ಯಾಣ್ಯಂತಃ ಶರೀ ರಮಭಿಪ್ರತಿಪದ್ಯಂತೇತ್ವಚಿವಿಪಕ್ವಾನಿ, ತೈರೇವಚಸ್ಪರ್ಶಸುಖ ಮಸುಖಂವಾಗೃಹ್ಣೀತೇ, ತಾಸ್ತ್ವೇತಾಶ್ಚತಸ್ರೋಧಮನ್ಯಃ ಸ ರ್ವಾಂಗಗತಾಃ ಸವಿಭಾಗಾವ್ಯಾಖ್ಯಾತಾಃ ॥**

[ಸುಶ್ರುತ॥ ಶಾರೀರ॥ ಅ ೯ ಸೂ ೯]

ಧಮನಿಗಳ ಸೂಕ್ಷ್ಮವಾದ ಅಸಂಖ್ಯಾತ ವಿಭಾಗಗಳು ರೋಮ ಕೂಪ ಗಳಲ್ಲಿ ಅಂಟಿಕೊಂಡಿರುತ್ತವೆ. ಧಮನೀ ಮುಖಗಳು ರೋಮರಂಧ್ರ ಪ್ರತಿ ಬದ್ಧವಾಗಿರುತ್ತವೆಂಬಭಿಪ್ರಾಯವು ಕೂದಲಿನೋಪಾದಿಯಲ್ಲಿ ಅತಿಸೂಕ್ಷ್ಮ ವಾಗಿ ಪಸರಿಸಿದ ರೋಮರಂಧ್ರ ಮುಖವುಳ್ಳ ಧಮನಿಗಳು, ದೇಹದಲ್ಲಿಯ ಬೆವರನ್ನು ಒಯ್ದು ಹೊರಗೆ ಹಾಕುತ್ತವೆ ಮತ್ತು ಪೋಷಕವಾದ **ರಸ ವನ್ನು** ಸಮಗ್ರ ಶರೀರದಲ್ಲಿಯೂ ಒಯ್ಯುವಂಥವುಗಳಾಗಿ, ದೇಹದ ಒಳ ಭಾಗವನ್ನೂ ಬಾಹ್ಯವಾದ ಚರ್ಮ ಪ್ರದೇಶಗಳನ್ನೂ ಪೋಷಿಸುತ್ತವೆ ಈ ಧಮನಿಗಳಿಂದಲೇ ಅಭ್ಯಂಗ ಮೊದಲಾದವುಗಳ ಸತ್ವವು, ಬಹಿರ್ಭೂತರೋಮ ರಂಧ್ರ ನಿಬದ್ಧವಾದ ಮುಖಗಳಿಂದ ಶರೀರದ ಒಳಭಾಗಗಳಲ್ಲಿ ಒಯ್ಯಲ್ಪಡು ತ್ತವೆ. **ಅಭ್ಯಂಗ** (ತೈಲಾದಿಗಳನ್ನು ಹಚ್ಚಿಕೊಂಡು ಮಾಡುವ ಸ್ನಾನ), **ಪರಿ ಷೇಕ** (ಔಷಧ ದ್ರವ್ಯಗಳ ಕಷಾಯವನ್ನು ಧಾರಾಕಾರವಾಗಿ ಸುರುವುತ್ತಿ ರೋಣ), **ಅವಗಾಹ** [ತೈಲಾದಿಗಳಿಂದ ಯುಕ್ತವಾದ ಜಲದ್ರೋಣಿಯಲ್ಲಿ ಕುಳಿತಿರುವದು], **ಆಲೇಪನ** [ಔಷಧರಾಡಿ ಅಥವಾ ತೈಲಾದಿಗಳನ್ನುಹಚ್ಚು ವದು], ಇವುಗಳ ಸತ್ವವು ಚರ್ಮಗತ ಅಗ್ನಿಯಿಂದ ಪಕ್ವವಾದ ನಂತರ, ಧಮನಿಗಳು ದೇಹದ ಒಳಭಾಗಕ್ಕೆ ಒಯ್ದು ಮುಟ್ಟಿಸುತ್ತವೆ. ಬಹಿರ್ಭಾಗದ ಚರ್ಮಗಳಲ್ಲಿ ವ್ಯಾಪಿಸಿದ ಸೂಕ್ಷ್ಮ ಧಮನಿಗಳಿಂದಲೇ ಸ್ಪರ್ಶಜ್ಞಾನ ಮತ್ತು ಸುಖಸ್ಪರ್ಶ ದುಃಖಸ್ಪರ್ಶಗಳ ಬೋಧವಾಗುತ್ತದೆ. ಹೀಗೆ ತಿರ್ಯಗ್ಗತವಾದ [೪] ಧಮನಿಗಳು ಅಸಂಖ್ಯಾತವಾಗಿ ಸರ್ವಾಂಗಗಳಲ್ಲಿಯೂ ವ್ಯಾಪಿಸಿರುವ ವಿಭಾಗಗಳನ್ನೂ ಅವುಗಳ ಕಾರ್ಯಗಳನ್ನೂ ಸಹಿತವಾಗಿ ವಿವರಿಸರುತ್ತದೆ.

ಊರ್ಧ್ವಗಾ ಧಮನಿಗಳು [೧೦] ಇರುತ್ತವೆ. ಅವು ವಿಭಾಗಹೊಂದಿದ [೩೦] ಧಮನಿಗಳನ್ನು ಸ್ಥಾನ ಕಾರ್ಯಾದಿಗಳನ್ನು ಸಹಿತವಾಗಿ ನಿರ್ದೇಶಿಸಿ ದ್ದಾರೆ

ಇದರಂತೆ [೧೦] ಅಧೋಗಾಮಿ ಧಮನಿಗಳು [೩೦] ಆಗಿರುತ್ತವೆ.

ತಿರ್ಯಗ್ಗತ ಧಮನಿಗಳು ೪ ಇರುತ್ತವೆ ಇವುಗಳ ವಿಭಾಗಗಳು ಅಸಂಖ್ಯವಾದವುಗಳು.

ಒಟ್ಟು ಧಮನಿಗಳು ಮುಖ್ಯವಾಗಿ [೨೪] ಇರುತ್ತವೆ ವಿಭಾಗಶಃ [೬೪] ಅಥವಾ ತಿರ್ಯಗ್ಗತವಾದವುಗಳು ಬಹಳೇ ಇರುವದರಿಂದ ಅಸಂಖ್ಯಾತ ವೆಂದೂ ಹೇಳಿದ್ದಾರೆ.

**ಯಥಾಸ್ವಭಾವತಃಖಾನಿ ಮೃಣಾಲೇಷುಬಿಸೇಷುಚ ||**
**ಧಮನೀನಾಂತಥಾಖಾನಿರಸೋಯೈರುಪಚೀಯತೇ ||**

[ಸು|| ಶಾ|| ಅ ೯ ಶ್ಲೋ ೧೦]

ಹೇಗೆ ಮೃಣಾಲ [ಕಮಲಮೂಲ], ಬಿಸ [ಕಮಲದ ದೇಟು], ಇವುಗಳಲ್ಲಿ ಸ್ವಾಭಾವಿಕವಾಗಿ ರಂಧ್ರಗಳಿರುತ್ತವೆಯೋ, ಅದರಂತೇ ಧಮನಿ ಗಳಲ್ಲಿಯೂ ರಂಧ್ರಗಳಿರುತ್ತವೆ. ಧಮನಿಗಳ ರಂಧ್ರಮುಖಾಂತರವಾಗಿಯೇ ರಸವು ದೇಹದಲ್ಲಿ ಪಸರಸಲ್ಪಡುತ್ತದೆ. ಮೃಣಾಲ, ಬಿಸಗಳು ಕಮಲದ ದೇಟೆಂದು ಕಾವ್ಯಾದಿಗಳಲ್ಲಿ ವಿವರಿಸಲ್ಪಟ್ಟಿರುತ್ತವೆ. ಅಮರದಲ್ಲಿ ಕಮಲಾದಿ ಗಳ ಮೂಲದ ಹೆಸರಾಗಿರುತ್ತವೆ ಇಲ್ಲಿ ಇವೆರಡನ್ನೂ ಗ್ರಹಣ ಮಾಡಿರುವ ದರಿಂದ ಸಂದರ್ಭಾನುರೋಧವಾಗಿ **ಕಮಲಮೂಲ** ಮತ್ತು **ಕಮಲ ದೇಟು** ಎಂದು ವಿಶದೀಕರಿಸಲಾಗಿದೆ.

## ಧಮನೀ ಮಹತ್ವವು

**ಪಂಚಾಭಿಭೂತಾಸ್ತ್ವಥ ಪಂಚಕೃತ್ವಃ ||**

**ಪಂಚೇಂದ್ರಿಯಂ ಪಂಚಸುಭಾವಯಂತಿ ॥**
**ಪಂಚೇಂದ್ರಿಯಂ ಪಂಚಸುಭಾವಯಿತ್ವಾ ॥**
**ಪಂಚತ್ವಮಾಯಾಂತಿ ವಿನಾಶಕಾಲೇ ॥**

(ಸುಶ್ರುತ॥ ಶಾರೀರ॥ ಅ. ೯ ಶ್ಲೋ. ೧೧)

ಈ ಶ್ಲೋಕವು ಧಮನೀ ವಿಷಯದಲ್ಲಿ ಬಹಳೇ ಮಹತ್ವವಿರುವದರಿಂದಲೂ. ಜೀವನ ಕ್ರಿಯಾ ವಿಶೇಷ ಮತ್ತು ಜ್ಞಾನಾದಿಗಳು ಧಮನಿಯನ್ನನುಸರಿಸಿಯೇ ದೇಹದಲ್ಲಿ ನಡೆಯುವದರಿಂದಲೂ, ಸುಗಮತೆಗಾಗಿ ಮೂಲ ಶ್ಲೋಕ ಶಬ್ದಗಳನ್ನೇ ಇಟ್ಟು ವ್ಯಾಖ್ಯಾಮಾಡಲ್ಪಡುತ್ತದೆ ಬೇರೆ ಬೇರೆ ಆಚಾರ್ಯರು ಮತ್ತು ಭಿನ್ನ ಭಿನ್ನ ರೀತಿಯಿಂದ ಇನ್ನೂ ಅನೇಕರು ಅರ್ಥ ಮಾಡುತ್ತಾರೆ. ಒಟ್ಟು ಸಾಮಾನ್ಯತಃ ಎಂಟು ಅರ್ಥಗಳಾಗುತ್ತವೆ. ಇಲ್ಲಿ ಮುಖ್ಯವಾದ ಒಂದೇ ಅರ್ಥವು ವಿವರಿಸಲ್ಪಡುತ್ತದೆ. ವಿಶೇಷ ಅವಲೋಕನೇ ಬೇಕಾದವರು ಸುಶ್ರುತವನ್ನು ನೋಡಿರಿ "**ಪಂಚಾಭಿಭೂತಾಃ**" ಧಮನಿಗಳು ಪಂಚಭೂತಗಳಿಂದ ಉತ್ಪನ್ನವಾದಂಥವುಗಳು, ಅಥವಾ **ಶಬ್ದ ಸ್ಪರ್ಶ ರೂಪ ರಸ ಗಂಧಗಳಿಂದ** ವ್ಯಾಪ್ತವಾದವುಗಳು, ಇಲ್ಲವೇ ಆಕಾಶವಾಯು ಅಗ್ನಿ ಜಲ ಭೂಮಿ ಇವುಗಳಿಂದ ವ್ಯಾಪಿಸಲ್ಪಟ್ಟವುಗಳು "**ಪಂಚೇಂದ್ರಿಯಂ**" ಐದು ಇಂದ್ರಿಯಗಳಿಂದ ವಿಷಯ ಸ್ವೀಕಾರ ಮಾಡುವ **ಕರ್ಮ ಪುರುಷನನ್ನು** "**ಪಂಚಸು**" ಶ್ರೋತ್ರಾದಿ ಪಂಚ ಇಂದ್ರಿಯ ಸ್ಥಾನಗಳಲ್ಲಿ, "**ಪಂಚಕೃತ್ವಃ**" ಐದು ಸರತಿ, "**ಭಾವಯಂತಿ**" ಯೋಜಿಸುತ್ತವೆ "**ಪಂಚೇಂದ್ರಿಯಂ**" ಶ್ರೋತ್ರಾದೀಂದ್ರಿಯ ಪಂಚಕವನ್ನು, ಅರ್ಥಾತ್ **ಶ್ರೋತ್ರ ಚಕ್ಷು ಜಿಹ್ವಾ ಘ್ರಾಣಸ್ಪರ್ಶೇಂದ್ರಿಯಗಳಲ್ಲಿಯ ಸೂಕ್ಷ್ಮವಾದ ಇಂದ್ರಿಯಸ್ವರೂಪಗಳನ್ನು** "**ಪಂಚಸು**" ಆಕಾಶಾದಿಪಂಚಮಹಾಭೂತಗಳಲ್ಲಿ, "**ಭಾವಯಿತ್ವಾ**" ಸಂಯೋಗವನ್ನು ಮಾಡಿ "**ವಿನಾಶಕಾಲೇ**" ಮರಣಸಮಯದಲ್ಲಿ, "**ಪಂಚತ್ವಂ**" ವಿನಾಶವನ್ನು ಅಥವಾ ಪಂಚಭೂತಗಳ ಪೃಥಕ್ ಪೃಥಕ್ ಸ್ಥಿತಿಯನ್ನು, "**ಆಯಾಂತಿ**" ಹೊಂದುತ್ತವೆ.

## ಅಭಿಪ್ರಾಯವು

ಪಂಚಭೂತಗಳಿಂದುತ್ಪನ್ನವಾಗಿರುವ ಅಥವಾ ಶಬ್ದ ಸ್ಪರ್ಶ ರೂಪ ರಸ ಗಂಧಗಳಿಂದ ವ್ಯಾಪ್ತವಾದ, ಇಲ್ಲವೇ ಆಕಾಶ ವಾಯು ಅಗ್ನಿ ಜಲ ಭೂಮಿಗಳಿಂದ ವ್ಯಾಪಿಸಲ್ಪಟ್ಟ ಧಮನೀಗಳು, ಪಂಚೇಂದ್ರಿಯಗಳಿಂದವಿಷಯ ಸ್ವೀಕಾರ ಮಾಡುವ ಕರ್ಮ ಪುರುಷನನ್ನು [ಇನ್ನುಕೆಲವರು ಪಂಚೇಂದ್ರಿಯ ಗ್ರಹಣದಿಂದ ಕರ್ಮೇಂದ್ರಿಯಗಳನ್ನೂ ಗ್ರಹಿಸುತ್ತಾರೆ], ಶ್ರೋತ್ರಾದಿ ಪಂಚೇಂದ್ರಿಯಗಳಲ್ಲಿ, ಐದುಸಲ, ಯೋಜಿಸುತ್ತವೆ. ಅರ್ಥಾತ್ ರೂಪಾದಿ ವಿಷಯಗಳ ಗ್ರಹಣಮಾಡಬೇಕಿದ್ದರೆ ಚಕ್ಷುರಾದಿಗಳಲ್ಲಿ ಆತ್ಮನ ಅಧಿಷ್ಠಾನವಿರಬೇಕಾಗುತ್ತದೆಂಬಭಿಪ್ರಾಯವಾಗಿರುತ್ತದೆ. ಶ್ರೋತ್ರಾದೀಂದ್ರಿಯಗಳ ಸೂಕ್ಷ್ಮವಾದ ಸ್ವರೂಪವನ್ನು, ಆಕಾಶಾದಿ ಪಂಚಭೂತಗಳಲ್ಲಿ ಸಂಯೋಗಮಾಡಿ, ವಿನಾಶ ಕಾಲದಲ್ಲಿ, ವಿನಾಶವನ್ನು ಅಥವಾ ಪಂಚಭೂತಗಳ ಪೃಥಕ್ ಪೃಥಕ್ ಸ್ಥಿತಿಯನ್ನು ಹೊಂದುತ್ತವೆ. ಇಲ್ಲಿ ಜ್ಞಾನೇಂದ್ರಿಯ ಕರ್ಮೇಂದ್ರಿಯ ಪಂಚಕಗಳನ್ನು ವಿವರಿಸಿ ಮನಸ್ಸನ್ನು ಹೇಳದೇ ಇರುವದರಿಂದ ನಾಶ ಕಾಲದಲ್ಲಿ ಮನಸ್ಸು ಇಂದ್ರಿಯವಾಗಿದ್ದರೂ ನಾಶವಾಗುವದಿಲ್ಲೆಂದು ಸೂಚಿಸಲು ಹೀಗೆ ಹೇಳಿದ್ದಾರೆ. ಆದ್ದರಿಂದ ವಿಷಯ ಸ್ವೀಕಾರದಲ್ಲಿ ಇಂದ್ರಿಯಾಧಿಷ್ಠಿತವಾಗಿ ಮನಸ್ಸಿರುತ್ತದೆಂದು ತಿಳಿಯಬೇಕು. ನಾಶಕಾಲದಲ್ಲಿ ಸಂಸ್ಕಾರ ಗೃಹೀತೃತ್ವ ಧರ್ಮಮನೋವಿಹಿತವಿರುವದರಿಂದ ಮನೋನಾಶವಿಲ್ಲದ್ದರಿಂದ ಗ್ರಹಿಸಿಲ್ಲವೆಂದಭಿಪ್ರಾಯವು. ಇದರಿಂದ ಸ್ಥೂಲಭೂತ ಇಂದ್ರಿಯಗಳಿಗಿಂತ ಭಿನ್ನವಾದ್ದರಿಂದ ಅತೀಂದ್ರಿಯವೆಂದೂ, ಸರ್ವೇಂದ್ರಿಯಾಧಿಷ್ಠಾನದಿಂದ ಅಣು ಸ್ವರೂಪವುಳ್ಳದ್ದೆಂದೂ, ಸಂಸ್ಕಾರ ಗೃಹೀತೃತ್ವದಿಂದ ಅಲೌಕಿಕವೆಂದೂ ಸುಖ ದುಃಖಾದಿಗಳನ್ನು ಸ್ಥೂಲಭೂತೇಂದ್ರಿಯಗಳಿಗೆ ಅಗ್ರಾಹ್ಯವಾಗಿರುವಂಥವುಗಳನ್ನು ಗ್ರಹಿಸುವದರಿಂದ, ಸ್ಥೂಲಭೂತೇಂದ್ರಿಯಗಳಿಗಿಂತಲೂ ಸ್ವತಂತ್ರವೆಂದೂ ಮನಸ್ಸನ್ನು ವಿವರಿಸಿದಂತಾಗುತ್ತದೆ.

# (೬೧) ಸ್ರೋತೋ ವಿವರಣೆಯು

**ದೇಹದಲ್ಲಿ** ಅಂತರ್ಮುಖವಾದ **ಸ್ರೋತಸ್ಸುಗಳು** [೨೨] ಇರುತ್ತವೆಂದು ಹೇಳಿದ್ದಾರೆ ಪ್ರಾಣೋದಕಾದಿಗಳು ಸ್ರೋತೋ ಮುಖಗಳಿಂದ ದೇಹದಲ್ಲಿ ಸಂಚಾರ ಮಾಡುತ್ತವೆ "ಚರಕದಲ್ಲಿ" ಸಿರಾಧಮನೀ ಸ್ರೋತಸ್ಸುಗಳನ್ನು ವಿಭಾಗ ಮಾಡದೇ, ಸ್ರೋತೋವಿಮಾನಾಧ್ಯಾಯದಲ್ಲಿ ಹೇಳಿದ್ದಾರೆ ಇಲ್ಲಿ ಶಲ್ಯತಂತ್ರವಾದ **ಸುಶ್ರುತದಲ್ಲಿ** ಸ್ರೋತೋವಿದ್ಧ ವಿಕಾರ ವಿಶೇಷಗಳನ್ನು ವಿವರಿಸಲು ವಿವರಣೆಯನ್ನು ಮಾಡುತ್ತಾರೆ

**ಅತಊರ್ಧ್ವಂಸ್ರೋತಸಾಂಮೂಲವಿದ್ಧಲಕ್ಷಣಮುಪದೇಕ್ಷ್ಯಾಮಃ ॥ ತಾನಿತುಪ್ರಾಣಾನ್ನೋದಕರಸರಕ್ತಮಾಂಸಮೇದೋಮೂತ್ರಪುರೀಷಶುಕ್ರಾರ್ತವವಹಾನಿ, ಯೇಷ್ವಧಿಕಾರಃ ಏಕೇಷಾಂಬಹೂನಿ; ಏತೇಷಾಂವಿಶೇಷಾಬಹವಃ ॥**

[ಸುಶ್ರುತ॥ ಶಾರೀರ॥ ಅ ೯ ಸೂ ೧೨]

ಸ್ರೋತಸ್ಸುಗಳ ಮೂಲದಲ್ಲಿ ವಿದ್ಧ [ಬಾಣಶಸ್ತ್ರಾದಿಗಳಆಘಾತ] ಸಂಭವಿಸಿದರೆ, ಸಾಧ್ಯಾಸಾಧ್ಯ ಲಕ್ಷಣವನ್ನು ಹೇಳುತ್ತಾರೆ "**ಸ್ರೋತಸ್ಸುಗಳು**" ಪ್ರಾಣ ಅನ್ನಜಲ ರಸರಕ್ತಮಾಂಸ ಮೇದಸ್ಸು ಮೂತ್ರಮಲ ಶುಕ್ರ ಆರ್ತವಗಳನ್ನು, ದೇಹದಲ್ಲಿ ವಹನಮಾಡುತ್ತವೆ. ದೇಹದಲ್ಲಿ ಸ್ರೋತಸ್ಸುಗಳು ಅಸಂಖ್ಯಾತ ಬಹುಸೂಕ್ಷ್ಮವಾಗಿ ಪಸರಿಸಿರುವದರಿಂದ, ಸಂಪೂರ್ಣ ದೇಹಚಾರಿಯಾದ ಸರ್ವಸ್ರೋತಸ್ಸುಗಳಲ್ಲಿಯು ವಿದ್ಧಲಕ್ಷಣವು; ಜ್ಞಾನವಾಗಲಿಕ್ಕೆ ಮೂಲವಿದ್ಧ ಲಕ್ಷಣವನ್ನು ಹೇಳುತ್ತಾರೆ ಅರ್ಥಾತ್ ಯಾವ ಸ್ಥಾನದಲ್ಲಿ ವಿದ್ಧವಾಗಿದ್ದರ ಲಕ್ಷಣದಿಂದ ಸಾಧ್ಯಾಸಾಧ್ಯ ಸ್ಥಿತಿಯು ಬೋಧವಾಗುತ್ತದೆಯೋ, ಅಂಥವುಗಳನ್ನು ಹೇಳುತ್ತಾರೆ. ಅವುಗಳನ್ನಾಶ್ರಯಿಸಿಯೇ ವಿವರಣೆ ಇರುವದರಿಂದ "ಯೇಷ್ವಧಿಕಾರಃ" ಎಂದು ಹೇಳಿದ್ದಾರೆ. "**ಶಲ್ಯಶಾಸ್ತ್ರದಲ್ಲಿ**" ಮಾತ್ರವೇ ಮೂಲ ವಿದ್ಧ ಲಕ್ಷಣದಿಂದ ಸಾಧ್ಯಾಸಾಧ್ಯ ಸ್ಥಿತಿಯು ಜ್ಞಾನವಾಗುವದರಿಂದಲೂ, ಕಾಯ ಚಿಕಿತ್ಸಾ ಕಾರ್ಯದಲ್ಲಿ

ವೇದನಾ ವಿಶೇಷ ಲಕ್ಷಣವು ಸ್ರೋತಸ್ಸು ವ್ಯಾಪಕವಾದ್ದರಿಂದ ಸರ್ವ ದೇಹ ದಲ್ಲಿಯೂ ವ್ಯಾಪಿಸಿರುತ್ತದೆ ಆದ್ದರಿಂದ ವಿಭಾಗಿಸಿ ಹೇಳಲು ಬರುವಂತಿಲ್ಲ. "ಶಲ್ಯತಂತ್ರದಲ್ಲಿ" ಸ್ರೋತಸ್ಸುಗಳಲ್ಲಿ ಆವಾವ ನಿಯತ ಸ್ಥಾನ [ಪ್ರದೇಶ] ವಿದ್ಧವಾಗಿರುವದರಿಂದಲೂ ವೇದನಾ ವಿಶೇಷ ನಿರ್ಧಾರ ಲಕ್ಷಣಗಳಿಂದಲೂ ಸಾಧ್ಯಾಸಾಧ್ಯ ಸ್ಥಿತಿಗಳನ್ನು ಹೇಳಬೇಕು. ಕಾಯಚಿಕಿತ್ಸಾದಲ್ಲಿ ಸ್ರೋತೋ ದುಷ್ಟಿ ಲಕ್ಷಣವನ್ನು ಗ್ರಹಿಸಬೇಕು ಸಮಗ್ರ ದೇಹವನ್ನು ವ್ಯಾಪಿಸಿದ ಸ್ರೋತಸ್ಸುಗಳಲ್ಲಿ ಅತಿ ಸೂಕ್ಷ್ಮವಾದ ವೇದನಾ ವಿಶೇಷಗಳಿಂದ ಸಾಧ್ಯಾ ಸಾಧ್ಯ ಸ್ಥಿತಿಯ ಜ್ಞಾನವಾಗುವದಿಲ್ಲವಾದ್ದರಿಂದ, ಕಾಯ ಚಿಕಿತ್ಸೆಯಲ್ಲಿ ಸ್ರೋತಸ್ಸುಗಳ ಸ್ಥಾನಾಶ್ರಯ ವೇದನಾದಿಗಳ ವಿವರಣೆಗಳನ್ನು ಮಾಡಿರುವ ದಿಲ್ಲ "ಯೇಷ್ವಧಿಕಾರಃ" ಎಂದು ಹೇಳಿರುವದರಿಂದ ಶಲ್ಯ ತಂತ್ರಾದಿಗಳ ಲ್ಲಿಯೇ ಮೂಲ ವಿದ್ಧ ನಿರ್ದಿಷ್ಟವಾದ ಸ್ರೋತಸ್ಸುಗಳಲ್ಲಿ ಮಾತ್ರ ಸಾಧ್ಯಾ ಸಾಧ್ಯ ನಿರ್ಣಯವಿರುತ್ತದೆಂದೂ, ಅನ್ಯತ್ರ ಇರುವದಿಲ್ಲೆಂದೂ ತಿಳಿಯಬೇಕು. ಕಾಯ ಚಿಕಿತ್ಸಾದಿಗಳಲ್ಲಿ ವಿಭಾಗಿಸಲು ಬರುವದಿಲ್ಲೆಂಬುವದೇ ಮುಖ್ಯಾಭಿ ಪ್ರಾಯವಾಗಿರುತ್ತದೆ ಒಂದೊಂದು ಸ್ರೋತಸ್ಸುಗಳು ಸ್ಥಾನವೇದನಾದಿ ಗಳಿಂದ ವಿದ್ಧ ಲಕ್ಷಣವು ಬಹು ವಿಧವಾಗಿರುತ್ತವೆ. "ಏಕೇಷಾಂಬಹೂನಿ" ಕೆಲವರ ಮತಗಳು ಭಿನ್ನವಿರುವದರಿಂದ ಬಹುಪ್ರಕಾರವಾಗಿ ಎಂದು ವಿವರಿಸಿ ದ್ದಾರೆ. ಹೀಗೆ ಒಂದೊಂದುಸ್ರೋತಸ್ಸುಗಳಲ್ಲಿ ವಿದ್ಧವಾದ ಲಕ್ಷಣಗಳು ಅನೇಕ ವಿರುವದರಿಂದ ಎಲ್ಲಸ್ರೋತಸ್ಸುಗಳ ವಿವರಣೆಯು ಬಹಳವಾದದ್ದಾಗಿರುತ್ತದೆ

## [೧] ಪ್ರಾಣವಾಹಿ ಸ್ರೋತಸ್ಸುಗಳು

**ತತ್ರಪ್ರಾಣವಹೇದ್ವೇ, ತಯೋರ್ಮೂಲಂ ಹೃದಯಂ ರಸವಾ ಹಿನ್ಯಶ್ಚ ಧಮನ್ಯಃ, ತತ್ರವಿದ್ಧಸ್ಯಾಕ್ರೋಶನವಿನಮನಮೋಹನ ಭ್ರಮಣವೇಪನಾನಿ ಮರಣಂವಾ ಭವತಿ ||**

**ಪ್ರಾಣವಾಹೀ ಸ್ರೋತಸ್ಸುಗಳು** [೨] ಇರುತ್ತವೆ. ಅವುಗಳ ಮತ್ತು ರಸವಾಹಿನೀ ಧಮನೀಗಳ ಮೂಲವು ಹೃದಯವಾಗಿರುತ್ತದೆ. ಹೃದಯ ಸ್ಥಾನಗಳಲ್ಲಿಯ ಸ್ರೋತಸ್ಸು ಮತ್ತು ಧಮನೀಗಳಲ್ಲಿ ಆಘಾತ [ವಿದ್ಧ]ವಾದರೆ

**ಆಕ್ರೋಶನ** [ಅಳುವಿಕೆ], **ವಿನಮನ** [ವಿಶೇಷವಾಗಿ ಬಗ್ಗೋಣ], **ಮೋಹನ** [ಅಜ್ಞಾನವುಂಟಾಗೋಣ], **ಭ್ರಮಣ** [ತಲೆ ತಿರುಗೋಣ, ಹುಚ್ಚು], **ವೇಪನ** [ನಡಗುವಿಕೆ], **ಮರಣ**, ಮೊದಲಾದವುಗಳುಂಟಾಗುತ್ತವೆ

## [೨] ಅನ್ನವಾಹಿ ಸ್ರೋತಸ್ಸುಗಳು

**ಅನ್ನವಹೇದ್ವೇ, ತಯೋರ್ಮೂಲಮಾಮಾಶಯೋಽನ್ನವಾಹಿ**
**ನ್ಯಶ್ಚ ಧಮನ್ಯಃ, ತತ್ರವಿದ್ಧಸ್ಯಾಧ್ಮಾನಂ ಶೂಲೋಽನ್ನದ್ವೇಷಃ**
**ಛರ್ದಿಃ ಪಿಪಾಸಾಽಽಂಧ್ಯಂ ಮರಣಂಚ ॥**

(ಸುಶ್ರುತ॥ ಶಾರೀರ॥ ಅ. ೯ ಸೂ ೧೨)

" ಅನ್ನವಾಹೀ ಸ್ರೋತಸ್ಸುಗಳು " (೨) ಇರುತ್ತವೆ ಅವುಗಳ ಮೂಲವು ಆಮಾಶಯು ಮತ್ತು ಅನ್ನವಾಹೀ ಧಮನಿಗಳಾಗಿರುತ್ತವೆ. ಇಲ್ಲಿ ಆಘಾತ (ವಿದ್ಧ) ವಾದರೆ, "ಆಧ್ಮಾನ" (ಹೊಟ್ಟೆಯುಬ್ಬೋಣ), "ಶೂಲೆ" "ಅನ್ನ ದ್ವೇಷ, ಛರ್ದಿ(ವಾಂತಿ), ಪಿಪಾಸಾ(ನೀರಡಿಕೆ), ಆಂಧ್ಯಂ (ದೃಷ್ಟ್ಯುಪಘಾತ), ಮರಣಗಳು" ಉಂಟಾಗುತ್ತವೆ.

## [೩] ಉದಕವಾಹಿ ಸ್ರೋತಸ್ಸುಗಳು

**ಉದಕವಹೇದ್ವೇ, ತಯೋರ್ಮೂಲಂತಾಲುಕ್ಲೋಮಚ,**
**ತತ್ರವಿದ್ಧಸ್ಯ ಪಿಪಾಸಾ ಸದ್ಯೋಮರಣಂಚ ॥**

(ಸುಶ್ರುತ॥ ಶಾರೀರ॥ ಅ ೯ ಸೂ ೧೨)

**ಉದಕವಾಹೀ ಸ್ರೋತಸ್ಸುಗಳು** (೨) ಇರುತ್ತವೆ ಅವುಗಳ ಮೂಲವು ತಾಲು ಮತ್ತು ಕ್ಲೋಮಗಳಾಗುತ್ತವೆ. ಅಲ್ಲಿ ವಿದ್ಧವಾದರೆ **ಪಿಪಾಸಾ** (ನೀರಡಿಕೆ), ಸದ್ಯೋಮರಣಗಳುಂಟಾಗುತ್ತವೆ.

## [೪] ರಸವಾಹಿ ಸ್ರೋತಸ್ಸುಗಳು

**ರಸವಹೇದ್ವೇ, ತಯೋರ್ಮೂಲಂ ಹೃದಯಂ ರಸವಾಹಿನ್ಯಶ್ಚ ಧಮನ್ಯಃ, ತತ್ರವಿದ್ಧಸ್ಯಶೋಷಃಪ್ರಾಣವಹವಿದ್ಧವಚ್ಚಮರಣಂ ತಲ್ಲಿಂಗಾನಿಚ ॥** (ಸು॥ ಶಾ॥ ಅ ೯ ಸೂ ೧೨)

ರಸವಾಹಿ ಸ್ರೋತಸ್ಸುಗಳು (೨) ಇರುತ್ತವೆ. ಅವುಗಳ ಮೂಲವು ಹೃದಯ ಮತ್ತು ರಸವಾಹೀ ಧಮನಿಗಳಾಗಿರುತ್ತವೆ ಇಲ್ಲಿ ವಿದ್ಧವಾದರೆ ಶೋಷ (ಕ್ಷಯ, ಅಥವಾ ಕ್ಷೀಣತೆ), ಉಂಟಾಗುತ್ತದೆ ಪ್ರಾಣವಾಹಿ ಸ್ರೋತಸ್ಸುಗಳಲ್ಲಿ ವಿದ್ಧವಾದಂತೇ ಮರಣ ಲಕ್ಷಣಗಳು ಸಂಭವಿಸುತ್ತವೆ

## [೫] ರಕ್ತವಾಹೀ ಸ್ರೋತಸ್ಸುಗಳು

**ರಕ್ತವಹೇದ್ವೇ, ತಯೋರ್ಮೂಲಂ ಯಕೃತ್‌ಪ್ಲೀಹಾನೌರಕ್ತ ವಾಹಿನ್ಯಶ್ಚಧಮನ್ಯಃ, ತತ್ರವಿದ್ಧಸ್ಯಶ್ಯಾವಾಂಗತಾಜ್ವರೋದಾಹಃ ಪಾಂಡುತಾಶೋಣಿತಾಗಮನಂ ರಕ್ತನೇತ್ರತಾಚ ॥**

(ಸುಶ್ರುತ॥ ಶಾರೀರ॥ ಅ. ೯ ಸೂ ೧೨)

ರಕ್ತವಾಹಿಸ್ರೋತಸ್ಸುಗಳು (೨) ಇರುತ್ತವೆ. ಅವುಗಳ ಮೂಲವು ಯಕೃತ್ ಮತ್ತು ಪ್ಲೀಹ ರಕ್ತವಾಹೀ ಧಮನೀಗಳಾಗಿರುತ್ತವೆ. ಶ್ಯಾವಾಂಗತಾ(ಅಂಗಗಳು ಬೂದೀ ವರ್ಣವಾಗೋಣ), ಜ್ವರ, ದಾಹ, ಪಾಂಡುತಾ ರಕ್ತ ಹೊರಬೀಳೋಣ, ಕಣ್ಣು ಕೆಂಪಾಗುವಿಕೆ, ಇವುಗಳುಂಟಾಗುತ್ತವೆ.

## [೬] ಮಾಂಸವಾಹೀ ಸ್ರೋತಸ್ಸುಗಳು

**ಮಾಂಸವಹೇದ್ವೇ, ತಯೋರ್ಮೂಲಂ ಸ್ನಾಯುತ್ವಚಂ ರಕ್ತ ವಹಾಶ್ಚಧಮನ್ಯಃ, ತತ್ರವಿದ್ಧಸ್ಯಶ್ವಯಥುರ್ಮಾಂಸಶೋಷಃ ಸಿರಾಗ್ರಂಥಯೋ ಮರಣಂಚ ॥** (ಸು॥ ಶಾ॥ ಅ ೯ ಸೂ ೧೨)

**ಮಾಂಸವಾಹೀ ಸ್ರೋತಸ್ಸುಗಳು** (೨) ಇರುತ್ತವೆ ಅವುಗಳ ಮೂಲವು ಸ್ನಾಯು ಮತ್ತು ತ್ವಚೆ ರಕ್ತವಾಹೀ ಧಮನಿಗಳಾಗಿರುತ್ತವೆ ಇಲ್ಲಿ ವಿದ್ಧವಾದರೆ **ಶ್ವಯಥು** (ಬಾವು), **ಮಾಂಸಶೋಷ** (ಮಾಂಸಕ್ಷೀಣತೆ ಮತ್ತು ಒಣಗೋಣ), ಸಿರಾಗ್ರಂಥಿ (ಸಿರಗಳಲ್ಲಿಯ ಗಂಟು), ಮರಣ ಗಳುಂಟಾಗುತ್ತವೆ

## [೭] ಮೇದೋವಹ ಸ್ರೋತಸ್ಸುಗಳು

**ಮೇದೋವಹೇದ್ವೇ, ತಯೋರ್ಮೂಲಂ ಕಟೀವೃಕ್ಕೌಚ, ತತ್ರ ವಿದ್ಧಸ್ಯ ಸ್ವೇದಾಗಮನಂ ಸ್ನಿಗ್ಧಾಂಗತಾ ತಾಲುಶೋಷಃ ಸ್ಥೂಲ ಶೋಫತಾ ಪಿಪಾಸಾಚ** ॥ (ಸು॥ ಶಾ॥ ಅ ೯ ಸೂ ೧೨)

**ಮೇದೋವಾಹೀ ಧಮನಿಗಳು** ( ೨ ) ಇರುತ್ತವೆ. ಅವುಗಳ ಮೂಲವು ಕಟೀ ಮತ್ತು ವೃಕ್ಕಗಳಾಗಿರುತ್ತವೆ. ಅಲ್ಲಿ ವೇಧವಾದರೆ **ಸ್ವೇದಾಗಮನ** (ಬೆವರುಬರೋಣ), **ಸ್ನಿಗ್ಧಾಂಗತಾ** (ಮೈಯಲ್ಲಿ ನವೆಯಾಗುವಿಕೆ), **ತಾಲುಶೋಷ** (ಅಂಗಳವು ಒಣಗೋಣ), **ಸ್ಥೂಲಶೋಫತಾ** (ದಪ್ಪವಾದ ಬಾವು ಬರೋಣ), **ಪಿಪಾಸಾ** (ನೀರಡಿಕೆಯಾಗೋಣ), ಮೊದಲಾದವು ಗಳುಂಟಾಗುತ್ತವೆ.

## [೮] ಮೂತ್ರವಹ ಸ್ರೋತಸ್ಸುಗಳು

**ಮೂತ್ರವಹೇದ್ವೇ, ತಯೋರ್ಮೂಲಂ ಬಸ್ತಿರ್ಮೇಢ್ರಂಚ, ತತ್ರವಿದ್ಧಸ್ಯಾನದ್ಧ ಬಸ್ತಿತಾ ಮೂತ್ರನಿರೋಧಃ ಸ್ತಬ್ಧಮೇಢ್ರತಾಚ** ॥ (ಸುಶ್ರುತ॥ ಶಾರೀರ॥ ಅ ೯ ಸೂ ೧೨)

**ಮೂತ್ರವಾಹೀ ಧಮನಿಗಳು** (೨) ಇರುತ್ತವೆ. ಅವುಗಳ ಮೂಲವು ಬಸ್ತಿ ಮತ್ತು ಮೇಢ್ರಗಳಾಗಿರುತ್ತವೆ. ಇಲ್ಲಿ ವಿದ್ಧವಾದರೆ **ಆನದ್ಧ ಬಸ್ತಿತಾ** (ಬಸ್ತಿಯು ಬಂದಾಗುವಿಕೆ), **ಮೂತ್ರನಿರೋಧ** (ಮೂತ್ರವು

ತಡೆಯೋಣ), ಸ್ತಬ್ಧಮೇಢ್ರತಾ (ಶಿಶ್ನವು ಸ್ತಬ್ಧವಾಗೋಣ), ಮೊದಲಾದವುಗಳುಂಟಾಗುತ್ತವೆ

## [೯] ಪುರೀಷವಹಸ್ರೋತಸ್ಸುಗಳು

**ಪುರೀಷವಹೇದ್ವೇ, ತಯೋರ್ಮೂಲಂಪಕ್ವಾಶಯೋಗುದಂಚ**
**ತತ್ರವಿದ್ಧಸ್ಯಾನಾಹೋದುರ್ಗಂಧತಾಗ್ರಥಿತಾಂತ್ರತಾಚ ॥**

(ಸು॥ ಶಾ॥ ಅ ೯ ಸೂ ೧೨)

ಪುರೀಷವಾಹೀ ಸ್ರೋತಸ್ಸುಗಳು (೨) ಇರುತ್ತವೆ. ಅವುಗಳ ಮೂಲವು ಮಲಾಶಯ ಮತ್ತು ಗುದಗಳಾಗಿರುತ್ತವೆ ಅಲ್ಲಿ ವೇಧವಾದರೆ ಆನಾಹ (ಮಲಬದ್ಧತೆ), ದುರ್ಗಂಧತಾ (ಬಾಯಲ್ಲಿ ದುರ್ಗಂಧ ಶ್ವಾಸ ಬರೋಣ), ಗ್ರಥಿತಾಂತ್ರತಾ (ಕರಳುಗಂಟಾಗೋಣ), ಮೊದಲಾದ ವಿಕಾರಗಳುಂಟಾಗುತ್ತವೆ.

## ಶುಕ್ರವಾಹೀ ಸ್ರೋತಸ್ಸುಗಳು

**ಶುಕ್ರವಹೇದ್ವೇ, ತಯೋರ್ಮೂಲಂ ಸ್ತನೌವೃಷಣೌಚ, ತತ್ರ**
**ವಿದ್ಧಸ್ಯಕ್ಲೀಬತಾಚಿರಾತ್‌ಪ್ರಸೇಕೋರಕ್ತಶುಕ್ರತಾಚ ॥**

(ಸು॥ ಶಾ॥ ಅ ೯ ಸೂ ೧೨)

ಶುಕ್ರವಾಹಿ ಸ್ರೋತಸ್ಸುಗಳು (೨) ಇರುತ್ತವೆ ಅವುಗಳಮೂಲವು ಸ್ತನ ಪ್ರದೇಶ ಮತ್ತು ವೃಷಣಗಳಾಗಿರುತ್ತವೆ. ಅಲ್ಲಿ ವೇಧವಾದರೆ ಕ್ಲೀಬತಾ (ನಪುಂಸಕತ್ವ), ಚಿರಾತ್ ಪ್ರಸೇಕ (ಬಹಳ ಹೊತ್ತಿನ ಮೇಲೆ ಶುಕ್ರ ಪ್ರಚ್ಯುತಿ), ರಕ್ತಶುಕ್ರತಾ (ರಕ್ತದಿಂದ ಕೂಡಿದ ಶುಕ್ರವಾಗೋಣ), ಮೊದಲಾದವುಗಳುಂಟಾಗುತ್ತವೆ

## (೧೧) ಆರ್ತವವಾಹೀ ಸ್ರೋತಸ್ಸುಗಳು

**ಆರ್ತವವಹೇದ್ವೇ, ತಯೋರ್ಮೂಲಂ ಗರ್ಭಾಶಯಆರ್ತವಾಹಿನ್ಯಶ್ಚಧಮನ್ಯಃ, ತತ್ರವಿದ್ಧಾಯಾವಂಧ್ಯಾತ್ವಂ ಮೈಥುನಾಸಹಿಷ್ಣುತ್ವಮಾರ್ತವನಾಶಶ್ಚ ॥** (ಸು॥ ಶಾ॥ ಅ ೯ ಸೂ ೧೨)

**ಆರ್ತವವಾಹಿ ಸ್ರೋತಸ್ಸುಗಳು** (೨) ಇರುತ್ತವೆ ಅವುಗಳ ಮೂಲವು ಗರ್ಭಾಶಯ ಮತ್ತು ಆರ್ತವವಾಹೀ ಧಮನಿಗಳಾಗಿರುತ್ತವೆ ಇಲ್ಲಿ ವೇಧವಾದವರಿಗೆ **ವಂಧ್ಯಾತ್ವ** (ಬಂಜೆತನ), **ಮೈಥುನಾಸಹಿಷ್ಣುತಾ** (ಸುರತ ಸಹಸೆಯಿಲ್ಲದಿರೋಣ), **ಆರ್ತವನಾಶ** (ರತಿಕಾಲದಲ್ಲಿಯು ಸ್ರಾವ ಮತ್ತು ಮಾಸಿಕ ರಜಸ್ಸುಬಂದಾಗೋಣ), ಮೊದಲಾದವುಗಳುಂಟಾಗುತ್ತವೆ.

### ಸೇವನೀಛೇದಲಕ್ಷಣ

**ಸೇವನೀಛೇದಾದ್ರುಜಾಪ್ರಾದುರ್ಭಾವಃ; ಬಸ್ತಿಗುದವಿದ್ಧಲಕ್ಷಣಂ ಪ್ರಾಗುಕ್ತಮಿತಿ ॥** (ಸುಶ್ರುತ॥ ಶಾರೀರ॥ ಅ ೯ ಸೂ ೧೨)

**ಸೇವನೀಗಳಲ್ಲಿ** ಛೇದಸಂಭವಿಸಿದರೆ ನೋವು ವೇದನೆಗಳುಂಟಾಗುತ್ತವೆ **ಬಸ್ತಿ ಮತ್ತು ಗುದಗಳಲ್ಲಿ** ವೇಧವಾದದ್ದರ ಲಕ್ಷಣವು ಹಿಂದೆ ಹೇಳಲ್ಪಟ್ಟಿರುತ್ತದೆ

### ಸ್ರೋತೋವಿದ್ಧಕ್ರಮ

**ಸ್ರೋತೋವಿದ್ಧಂತುಪ್ರತ್ಯಾಖ್ಯೇಯೋಪಚರೇತ್, ಉದ್ಧೃತಶಲ್ಯಂತುಕ್ಷತವಿಧಾನೇನೋಪಚರೇತ್ ॥**
(ಸುಶ್ರುತ॥ ಶಾರೀರ॥ ಅ ೯ ಸೂ ೧೨)

ಸ್ರೋತಸ್ಸುಗಳಲ್ಲಿ ಬಾಣ ಶಸ್ತ್ರಾದಿಗಳಿಂದವಿದ್ಧವಾದರೆ ಅಸಾಧ್ಯವೆಂದು **ತಿಳಿಸಿ ಚಿಕಿತ್ಸೆಯನ್ನುಮಾಡಬೇಕು** ಇಲ್ಲಿ ಒಂದುಆಕ್ಷೇಪಬರುತ್ತದೇನೆಂದರೆ:- ಅಸಾಧ್ಯವಾದ ಸ್ಥಿತಿಗೆ **ವಾಗ್ಭಟ ಮತದಂತೇ** ಅನುಪಕ್ರಮವೆಂದು ಹೇಳಿರು

ವದರಿಂದ ಚಿಕಿತ್ಸೆಮಾಡಬಾರದಂಥಾದ್ದು ಎಂಬ ಅರ್ಥವೂ ಸಹ ಆಗುತ್ತದೆ. ದೇಹದಲ್ಲಿಯ ಪರಮಸೂಕ್ಷ್ಮ ಸ್ಥಿತಿಯು ತಿಳಿಯುವದು ಬಹಳೇ ಕಠಿಣವಿರುವದರಿಂದ ಸಾಮಾನ್ಯತಃ ಅಸಾಧ್ಯವಿದ್ದರೂ ಒಮ್ಮೊಮ್ಮೆ ಬದುಕುವ ಸಂಭವ ವಿರುವದರಿಂದಲೂ ಚಿಕಿತ್ಸೆಯನ್ನು ಬಿಡಬಾರದು. ಆದರೆ ವೈದ್ಯರಿಗೆ ಅಪವಾದ ಬರಬಾರದೆಂದೂ ಪ್ರತ್ಯಾಖ್ಯೇಯ ಚಿಕಿತ್ಸೆಯಲ್ಲಿ ಸ್ಪಷ್ಟಪಡಿಸಿ ಆರಂಭಿಸಬೇಕು. ವೈದ್ಯ ನೈಪುಣ್ಯಾವಶ್ಯಕತೆಯಿಂದಲೇ ಕ್ವಚಿತ್ ಕಾರ್ಯಸಿದ್ಧಿಯೆಂದೂ ಧ್ವನಿತವಾಗುತ್ತದೆ **ಸುಶ್ರುತಾಚಾರ್ಯರು** ಅನುಪಕ್ರಮವೆಂದು ಹೇಳದೆ **ಪ್ರತ್ಯಾಖ್ಯೇಯ** ನಿಶ್ಚಿತವಲ್ಲವೆಂದು ಹೇಳಿ ಉಪಚಾರ ಮಾಡಬೇಕೆಂದು ಹೇಳಿದ್ದಾರೆ. ಆದ್ದರಿಂದಲೇ ಹಿಂದೆ ಮರ್ಮ ವಿವರಣೆಯಲ್ಲಿ ಕಾಲಾಂತರ ಪ್ರಾಣಹರಾದಿ ಮರ್ಮಾಘಾತವಾದರೆ ವೈದ್ಯನ ನೈಪುಣ್ಯದಿಂದ ಪ್ರಾಣಹರಣವಾಗದೇ ಊನತ್ವವುಂಟಾಗುತ್ತದೆಂದು ಹೇಳಿದ್ದಾರೆ. ವಿಶೇಷತಃ ಚಿಕಿತ್ಸೆಯಲ್ಲಿ ವೈದ್ಯನು ಲಕ್ಷ್ಯಕೊಡಲೆಂದೂ ವೈದ್ಯನಮೇಲೆ ಪರಿಣಾಮ ವಿಷಯದಲ್ಲಿ ಅಪವಾದ ಬರಬಾರದೆಂದೂ ಎರಡೊಂದು ದೃಷ್ಟಿಯಿಂದ "ಪ್ರತ್ಯಾಖ್ಯೇಯ"ವೆಂದೂ ಹೇಳಿದ್ದಾರೆಯೇ ವಿನಾ ಚಿಕಿತ್ಸೆ ಮಾಡತಕ್ಕದ್ದಲ್ಲವೆಂದು (ಅನುಪಕ್ರಮ) ಸುಶ್ರುತ ಮತವಿರುವದಿಲ್ಲ ಇದೇ ಅನುಪಕ್ರಮದ ಯೋಗ್ಯವಾದ ಅರ್ಥವಾಗುತ್ತದೆಯೇ ವಿನಾ, ಚಿಕಿತ್ಸಾ ಮಾಡಬಾರದೆಂಬ ಮತವು ಸಯುಕ್ತಿಕವೂ ಮಾನವತೆಯುಳ್ಳದ್ದೂ ಇರಲಾರದು.

## ಸ್ರೋತೋ ವಿಷಯದಲ್ಲಿ ವಿಶೇಷ

(೧) ಪ್ರಾಣ, (೨) ಅನ್ನ, (೩) ಉದಕ, (೪) ರಸ, (೫) ರಕ್ತ, (೬) ಮಾಂಸ, (೭) ಮೇದಸ್ಸು, (೮) ಮೂತ್ರ, (೯) ಮಲ, (೧೦) ಶುಕ್ರ, (೧೧) ಆರ್ತವ, ಇವುಗಳನ್ನು ಒಯ್ಯುವ ಸ್ರೋತಸ್ಸುಗಳು ಪ್ರತಿಯೊಂದೂ ಎರಡೆರಡರಂತೆ ಒಟ್ಟು ದೇಹದಲ್ಲಿ (೨೨) ಅಂತರ್ಮುಖ ಸ್ರೋತಸ್ಸುಗಳಿರುತ್ತವೆ ಇವುಗಳ ಮೂಲಗಳಲ್ಲಿ ವಿದ್ಧವಾದ ಲಕ್ಷಣಗಳಿಂದ ಸಾಧ್ಯಾಸಾಧ್ಯ ಸ್ಥಿತಿ ತಿಳಿಯುವದರಿಂದಲೂ ಇವಷ್ಟನ್ನೇ ಗ್ರಹಣಮಾಡಿದ್ದಾರೆ. ಸಾಮಾನ್ಯವಾಗಿ "ಅಸ್ಥಿಮಜ್ಜಾಸ್ವೇದೋವಹಸ್ರೋತಸ್ಸುಗಳು" ಇದ್ದರೂ

ಮೂಲವಿದ್ಧ ಲಕ್ಷಣದಿಂದ ಗೋಚರಿಸಿಲ್ಲವೆಂದು ಗ್ರಹಿಸಿಲ್ಲ. ಅಸ್ಥಿಸ್ವೇದವಾಹಿ ಸ್ರೋತಸ್ಸುಗಳಿಗೆ ಮೇದಸ್ಸೇ ಮೂಲವಾಗಿರುತ್ತದೆ. ಆದ್ದರಿಂದ ಅಸ್ಥಿಯು ಕೂಡ ಸ್ಥೂಲರೂಪ ಮತ್ತು ಸೂಕ್ಷ್ಮ (ದ್ರವರೂಪ), ಉಳ್ಳದ್ದಿರುತ್ತದಂದು ಸಿದ್ಧವಾಗುತ್ತದೆ. ಮಜ್ಜಾವಾಹಿ ಸ್ರೋತಸ್ಸುಗಳಿಗೆ ಅಸ್ಥಿಗಳೇ ಮೂಲವಾಗಿ ರುತ್ತವೆ ಅಸ್ಥಿವಾಹಿನ್ಯಾದಿ ಸ್ರೋತಸ್ಸುಗಳು ಸಮಗ್ರ ದೇಹವನ್ನು ವ್ಯಾಪಿಸಿ ರುವದರಿಂದ ಅಸಂಖ್ಯಾತವಾಗಿರುತ್ತವೆ. ಆದ್ದರಿಂದ ನಿರ್ದಿಷ್ಟ ಗಣನೆ ಮತ್ತು ಮೂಲವಿದ್ಧ ಲಕ್ಷಣಗಳಲ್ಲಿ ನಿಯತವಿಲ್ಲದ್ದರಿಂದ ಗ್ರಹಿಸಿರುವದಿಲ್ಲ. ಅನ್ಯತ್ರ ಶಾಸ್ತ್ರದ ದೃಷ್ಟಿಯಿಂದ ಇದ್ದೇ ಇರುತ್ತವೆಂದು ತಿಳಿಯಬೇಕು

**ವಾಗ್ಭಟ ಮತದಂತೇ** ದೇಹದಲ್ಲಿ ಅಂತರ್ಮುಖ ಸ್ರೋತಸ್ಸುಗಳು (೧೩) ಇರುತ್ತವೆಂದು ಹೇಳಿದ್ದಾರೆ

**ಚರಕ ಮತದಲ್ಲಿ** ಸ್ರೋತಸ್ಸುಗಳಲ್ಲಿಯೇ ಸಿರಾ ಧಮನೀಗಳನ್ನು ಅಂತರ್ಭಾವಮಾಡಿ ಹೇಳಿರುತ್ತಾರೆ. ಅರ್ಥಾತ್ ದೇಹದಲ್ಲಿಯ ಅಂತರ್ಮುಖ ಬಹಿರ್ಮುಖ ಸ್ಥೂಲ ಸೂಕ್ಷ್ಮವಾದ ರಸಾದಿ ಸ್ವೇದಪರ್ಯಂತವಾದ ಧಾತ್ವಾದಿವಾಹಿ ಸರ್ವ ವಿಭಾಗಗಳನ್ನು ಅಭಿನ್ನತೆಯಿಂದಲೇ ಹೇಳಿದ್ದಾರೆ. ಇಂಥ ಸ್ರೋತಸ್ಸುಗಳು ಅಸಂಖ್ಯಾತವಾಗಿರುತ್ತವೆಂದು ಹೇಳಿದ್ದಾರೆ.

ಹಿಂದೆ ಸ್ಥೂಲವಾಗಿ ಹೇಳಿದ ದೇಹದ ಪ್ರತಿಯೊಂದು ವಿಭಾಗಗಳೂ ಅಸ್ಥಿಯಿಂದಾರಂಭಿಸಿ ಸ್ರೋತಸ್ಸಿನ ಪರ್ಯಂತವಾಗಿ **"ಶಲ್ಯ ಶಾಸ್ತ್ರವಾದ ಸುಶ್ರುತ ತಂತ್ರಾನುರೋಧವಾಗಿ"** ಸ್ಥಾನ ಆಶ್ರಯ ಸ್ವರೂಪ ಕ್ರಿಯಾ ಸಂಖ್ಯಾದಿಗಳು ಬಹು ವಿಸ್ತಾರವಾಗಿಯೂ ವಿಶೇಷ ಪ್ರಯೋಜನವುಳ್ಳದ್ದಾಗಿಯೂ ವಿವರಿಸಲ್ಪಟ್ಟಿವೆ. ಅನ್ಯತಂತ್ರಗಳಲ್ಲಿಯ ಮತವನ್ನು ಸಾಮಾನ್ಯತಃ ದಿಗ್ದರ್ಶನಮಾಡಲಾಗಿದೆ **ಭಗವಾನ್ ಧನ್ವಂತರಿಯ** ಪ್ರಸಾದದಿಂದ ಆರಂಭಿಸಿದ ಕೃತಿಯು ಸುಗಮವಾಗಿ ಪೂರ್ಣವಾಗಿರುತ್ತದೆ.



## ನಿರೂಪಣಮ್

ಪೂಜ್ಯೈರ್ವೈದ್ಯಗುರುಶ್ರೇಷ್ಠೈಃ ಹಲಸೀಕರನಾಮಭಿಃ ॥
ವೆ ನಾ ಜೋಶೀತ್ಯುತಚ್ಛಿಷ್ಯೋಲೇಖಕರ್ಮಣಿಪ್ರೇರಿತಃ ॥
ಆರ್ಷಗ್ರಂಥಾಸುರೋಧೇನಶಾರೀರಪರಿವಿಸ್ತರಂ ॥
ಧನ್ವಂತರಿಪ್ರಸಾದಾದ್ಧಿ ಯಥಾಮತಿಪ್ರದರ್ಶಿತಂ ॥೧॥

### ಕೃತಿಪೂರ್ಣತಾಸಮಯಃ

ಅಷ್ಟಾದಶಶತೇವರ್ಷೇಷಟ್ಸಪ್ತತಿಸಮನ್ವಿತೇ ॥
ಧನ್ವಂತರಿಜಯಂತ್ಯಾಂಚ ಪರಿಪೂರ್ಣಾऽಭವತ್ಕೃತಿಃ ॥೨॥

ಓಂ ಶಾಂತಿಃ ಶಾಂತಿಃ ಶಾಂತಿಃ

ಸಂಪೂರ್ಣಂ